# ಪೂರ್ಣಕುಂಭ



ಸಂಪಾದಕ:

ಗುಂಡ್ಮಿ, ಚಂದ್ರಶೇಖರ ಐತಾಳ





೧೯೭೧

**POORNAKUMBHA:** Collection of articles about life and works of Prof. S. V. Parameshwara Bhatta, renowned Kannada writer; Edited by Gundmi, Chandrashekhara Aithal.

**1972**



PRICE

*Calico:*
*Ordinary:* **Rs. 50**



COPIES AVAILABLE AT:

1. Department of Kannada,
   Mangala Gangotri.
2. Geetha Book House, Mysore.
3. Samaj Book Depot, Dharwar.

*Printer:*

SHARADA PRESS, MANGALORE

ಸಲಹಾಮಂಡಳಿ

ಶ್ರೀ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ
ಶ್ರೀ ಏರ್ಯ ಲಕ್ಷ್ಮೀನಾರಾಯಣ ಆಳ್ವ
ಶ್ರೀ ಎಚ್. ಜೆ. ಲಕ್ಕಪ್ಪ ಗೌಡ

ಕಾರ್ಯದರ್ಶಿ

ಕೆ. ಸುಬ್ರಹ್ಮಣ್ಯ ಕೆದ್ಲಾಯ

## 'ಪೂರ್ಣಕುಂಭ'ದ ಅಂತರಂಗ

### ಕವನ ಕಾಣಿಕೆ



### ವ್ಯಕ್ತಿತ್ವ



### ಸ್ವತಂತ್ರ ಕೃತಿಗಳು



### ಅನುವಾದ ಕೃತಿಗಳು

ಇತರ



ಅನುಬಂಧ — ೧



ಅನುಬಂಧ — ೨



ಅನುಬಂಧ — ೩



ಅನುಬಂಧ — ೪



ಅನುಬಂಧ — ೫

# 'ಪೂರ್ಣಕುಂಭ'ದ ಕಥೆ

ಇಂದಿಗೆ ಒಂದು ವರ್ಷದ ಹಿಂದೆ 'ಪೂರ್ಣಕುಂಭ'ದ ಕಾರ್ಯದರ್ಶಿಗಳಾದ ಶ್ರೀ ಕೆ. ಸುಬ್ರಹ್ಮಣ್ಯ ಕೆದ್ಲಾಯರು ಒಂದು ದಿನ ಬೆಳಿಗ್ಗೆ ತಮ್ಮ ಸಂಕಲ್ಪವನ್ನು ನನ್ನೊಡನೆ ತೋಡಿಕೊಂಡರು. ಒಂದು ನೂರುಪುಟದ ಸಂಭಾವನಾಗ್ರಂಥವನ್ನು ನಾವೆಲ್ಲ ಸೇರಿ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರಿಗೆ ಅರ್ಪಿಸಬೇಕೆಂದಿದ್ದೇವೆ; ಅದಕ್ಕೆ ನಿಮ್ಮ ಮಾರ್ಗದರ್ಶನ ಬೇಕು, ಸರ್ ಎಂದರು. ಆಗಲಿ, ಬಹಳ ಒಳ್ಳೆಯ ಕೆಲಸ, ಮಾಡಿ; ನನ್ನಿಂದೇನಾಗಬೇಕು ಎಂದು ಕೇಳಿದೆ. ಆ ಒಳ್ಳೆಯ ಸಂಕಲ್ಪ ಬೆಳೆದು ಈ ಗ್ರಂಥ ಈಗ ಸಿದ್ಧವಾಗಿದೆ. ಅವರೂ ಅವರ ಸಹಪಾಠಿಗಳೂ ತಮ್ಮ ತಮ್ಮ ಕಾಣಿಕೆಗಳನ್ನು ಸಲ್ಲಿಸಿ ಸುಮಾರು ೧,೨೦೦ ರೂ.ಗಳನ್ನು ಸಂಗ್ರಹಿಸಿದರು. ಮಾಡುತ್ತ ಮಾಡುತ್ತ ಹೋದಂತೆ ಒಂದು ಪರಿಪೂರ್ಣ ಸಂಭಾವನಾಗ್ರಂಥವನ್ನೇ ಏಕೆ ಮಾಡಬಾರದೆಂದು ಮನಸ್ಸಿಗೆ ಹೊಳೆದು ಶ್ರೀ ಪರಮೇಶ್ವರ ಭಟ್ಟರ ಎಲ್ಲ ಕೃತಿಗಳ ಕುರಿತು ಲೇಖನಗಳನ್ನು ಅವರ ಶಿಷ್ಯರಿಂದಲೇ ಬರೆಯಿಸಲಾಯಿತು. ಅದು ೩೦೦ ಪುಟಗಳ ಈ ಗಾತ್ರಕ್ಕೆ ಬೆಳೆಯಿತು. ಹೀಗೆ 'ಪೂರ್ಣಕುಂಭ' ಸಂಪೂರ್ಣವಾಗಿ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ ಶಿಷ್ಯರೇ ಬರೆದು, ಸಂಪಾದಿಸಿ, ಪ್ರಕಟಿಸಿದ ಸಂಭಾವನಾಗ್ರಂಥ. ವಿದ್ಯಾರ್ಥಿಗಳು ಮನಸ್ಸು ಮಾಡಿದರೆ ಎಂಥ ಆದರ್ಶಕಾರ್ಯವನ್ನು ಮಾಡಬಲ್ಲರು ಎಂಬುದಕ್ಕೆ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ ವಿದ್ಯಾರ್ಥಿಗಳ ಈ ಕೃತಿ ಸಾಕ್ಷಿಯಾಗಿದೆ.

ಅನ್ನದಾನಕ್ಕೆ, ಧರ್ಮಕ್ಕೆ ಸರ್ವಧರ್ಮಸಮ್ಮೇಳನಕ್ಕೆ ಹೆಸರಾದ ಶ್ರೀ ಧರ್ಮಸ್ಥಳ ಕ್ಷೇತ್ರದ ಧರ್ಮದರ್ಶಿಗಳಾದ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರು ಈ ಸತ್ಕಾರ್ಯಕ್ಕೆ ಉದಾರವಾದ ಕೊಡುಗೆಯನ್ನು ಮಾಡಿದ್ದಾರೆ. ದಕ್ಷಿಣಕನ್ನಡಕ್ಕೆ ಭಾರತದ ಭೂಪಟದಲ್ಲಿ ಮುಖ್ಯಸ್ಥಾನ ಸಿಗಲು ಕಾರಣಕರ್ತರಾದವರಲ್ಲಿ ಒಬ್ಬರೆನಿಸಿದ ಮಣಿಪಾಲದ ಶಿಲ್ಪಿಗಳೂ, ಹಿರಿಯರೂ ಆದ ಪದ್ಮಶ್ರೀ ಡಾ. ಟಿ. ಎಂ. ಎ. ಪೈಯವರು ಉದಾರ ಸಹಾಯಧನ ನೀಡಿದ್ದಾರೆ. ಅಲ್ಲದೆ ಮಂಗಳೂರಿನ ಹಾಗೂ ಜಿಲ್ಲೆಯ ಇತರ ಮಹನೀಯರು ಉದಾರವಾಗಿ ಸಹಾಯ ಮಾಡಿರುವುದನ್ನು ನಾವು ಈ ಗ್ರಂಥದ ಕೊನೆಯಲ್ಲಿ ಸ್ಮರಿಸಿದ್ದೇವೆ. ಈ ಸತ್ಕಾರ್ಯವನ್ನು ಆಗುಮಾಡಲು ನೆರವಾದ ಈ ಮಹನೀಯರಿಗೆಲ್ಲ ನಾವು ಕೃತಜ್ಞರಾಗಿದ್ದೇವೆ.

ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾದ ಪ್ರೊ. ದೇ. ಜವರೇ ಗೌಡರೂ, ಮಾನಸ ಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರೂ, ಕನ್ನಡ ಪ್ರಾಧ್ಯಾಪಕರೂ ಆದ ಡಾ. ಹಾ. ಮಾ. ನಾಯಕ ಅವರೂ ಈ ಕೆಲಸಕ್ಕೆ ಅಗತ್ಯವಾದ ಪ್ರೋತ್ಸಾಹವನ್ನು ತುಂಬುತ್ತಲೇ ಬಂದಿದ್ದಾರೆ. ಈ ಮಹನೀಯರಿಗೆ ನಾವು ಸದಾ ಕೃತಜ್ಞರಾಗಿದ್ದೇವೆ.

ಇದಕ್ಕೊಂದು ಒಳ್ಳೆಯ ಹೆಸರನ್ನು ಇಡಬೇಕೆಂದು ನಾವು ನಾವೇ ಯೋಚಿಸುತ್ತಿದ್ದಾಗ ಶ್ರೀ ಕೆ. ಸುಬ್ರಹ್ಮಣ್ಯ ಭಟ್ಟ, ಅವರು 'ಪೂರ್ಣಕುಂಭ' ಎಂಬ ಹೆಸರನ್ನು ಸೂಚಿಸಿದರು. ಈ ಹೆಸರನ್ನು ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರು ತುಂಬ ಮೆಚ್ಚಿಕೊಂಡರು. ಹೆಸರು ಸೂಚಿಸಿದ ನಮ್ಮ ಮಿತ್ರರಿಗೆ ನಾವು ಕೃತಜ್ಞರಾಗಿದ್ದೇವೆ.

'ಪೂರ್ಣಕುಂಭ'ದ ಸಲಹಾಮಂಡಳಿಯ ಸದಸ್ಯರು ನಮಗೆ ಬಗೆಬಗೆಯಲ್ಲಿ ಸಹಾಯ ಸಹಕಾರಗಳನ್ನು ಕೊಟ್ಟಿದ್ದಾರೆ. ಅವರಿಗೆ ನಾವು ಆಭಾರಿಗಳು.

ಈ ಗ್ರಂಥದ ಮುದ್ರಣ ಹಾಗೂ ಇತರ ಖರ್ಚುಗಳು ಹೋಗಿ ಇದರ ಮಾರಾಟದಿಂದ ಬರುವ ಹಣವನ್ನು ಒಂದು ನಿಧಿಯನ್ನಾಗಿ ಇಟ್ಟು ಅದರಿಂದ ಬರುವ ವಾರ್ಷಿಕ ಬಡ್ಡಿಯನ್ನು ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ ಹೆಸರಿನಲ್ಲಿ ಮಂಗಳ ಗಂಗೋತ್ರಿಯ ವಿದ್ಯಾರ್ಥಿಗೆ ಶ್ರೀ ಭಟ್ಟರು ಸೂಚಿಸಿದ ವಿಷಯದಲ್ಲಿ ಸುವರ್ಣಪದಕವನ್ನೋ, ವಿದ್ಯಾರ್ಥಿವೇತನವನ್ನೋ ಕೊಡುವ ಯೋಜನೆಯನ್ನು ಮಾಡಲಾಗುವುದು.

ನಮ್ಮ ಈ ಕೆಲಸದಲ್ಲಿ ಹಲವು ವಿಧದಲ್ಲಿ ನಮಗೆ ನೆರವಾದ ಶ್ರೀ ಕೆ. ಸುಬ್ರಹ್ಮಣ್ಯ ಕಿಣ್ಣಾಯ, ಶ್ರೀ ಬಿ. ಪ್ರೇಮಾನಂದ ಕಿಶೋರ್, ಶ್ರೀ ಯಸ್. ಜಯರಾಮ ರೈ, ಶ್ರೀ ಪಿ. ಮುರಳೀಧರ ಉಪಾಧ್ಯ, ಶ್ರೀ ವಾಸುದೇವ ರಾವ್, ಶ್ರೀ ಬಿ. ಎನ್. ರಾಮಸ್ವಾಮಿ ಮೊದಲಾದ ನಮ್ಮ ತರುಣ ಮಿತ್ರರಿಗೆ ನಾವು ಆಭಾರಿಗಳಾಗಿದ್ದೇವೆ.

ಈ ಗ್ರಂಥವನ್ನು ಬಹಳ ಮುತುವರ್ಜಿಯಿಂದ ಸುಂದರವಾಗಿ ಮುದ್ರಿಸಿ ಕೊಟ್ಟ ಮಂಗಳೂರಿನ ಶಾರದಾ ಪ್ರೆಸ್ಸಿನ ಒಡೆಯರಿಗೆ, ನೌಕರರಿಗೆ ನಾವು ಋಣಿಗಳು.

ಈ ಗ್ರಂಥಕ್ಕೆ ಸೂಕ್ತವಾದ ಮುಖಚಿತ್ರವನ್ನು ಬರೆದುಕೊಟ್ಟ ಹಿರಿಯ ಕಲಾವಿದರಾದ ಶ್ರೀ ಕೆ. ಬಿ. ಕುಲಕರ್ಣಿಯವರಿಗೆ ನಮ್ಮ ನೆನಕೆ ಸಲ್ಲುತ್ತದೆ.

ಈ ಗ್ರಂಥ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರನ್ನು ತಿಳಿದವರಿಗೆ ಅವರ ನೆನಪನ್ನೂ, ತಿಳಿಯದವರಿಗೆ ಅವರ ಪರಿಚಯವನ್ನೂ ಮಾಡಿಕೊಡಲು ಸಮರ್ಥವಾಗಿದೆ ಎಂದು ನಾವು ನಂಬಿದ್ದೇವೆ. ಹಾಗೆ ಆದಲ್ಲಿ ನಮ್ಮ ಪ್ರಯತ್ನ ಸಾರ್ಥಕ ಎಂದು ತಿಳಿಯುತ್ತೇವೆ.

ಇಂತು ನಿಮ್ಮ ವಿಶ್ವಾಸಿ,

**ಗುಂಡ್ಮಿ, ಚಂದ್ರಶೇಖರ ಐತಾಳ**



ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರು ಎಂ. ಎ.. ಪದವಿಯನ್ನು ಸ್ವೀಕರಿಸಿದಾಗ



ಶ್ರೀಮತಿ ಎಸ್. ವಿ. ರಾಜಲಕ್ಷ್ಮಿ ಮತ್ತು ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರು



ಹಿರಿಯ ಮಗಳು ಶ್ರೀಮತಿ ನಾಗರತ್ನ, ಎಂ. ಎ., ಹಾಗೂ ಅವರ ಪತಿ ಡಾ. ಬಿ. ಎಸ್. ಶ್ರೀನಿವಾಸ
ಸ್ಪೇಸ್ ರಿಸರ್ಚ್ ಸೈಂಟಿಸ್ಟ್, ಲಾಸ್ ಏಂಜಲೀಸ್, ಕ್ಯಾಲಿಫೋರ್ನಿಯಾ.



ಜಿ. ಎಸ್. ಪಿ. ರಾಮಚಂದ್ರ
ಪ್ರೊ. ಎಸ್. ವಿ. ಪಿ. ಯವರ ಹಿರಿಯ ಮಗ



ಜಿ. ಎಸ್. ಪಿ. ಪ್ರಕಾಶ್
ಪ್ರೊ. ಎಸ್. ವಿ. ಪಿ. ಯವರ ಕಿರಿಯ ಮಗ



'ಉಪ್ಪು ಕಡಲು' ಕೃತಿಯನ್ನು ಕುಲಪತಿ ಪ್ರೊ. ದೇಜಗೌ ಅವರು ಉದ್ಘಾಟಿಸುತ್ತಿರುವುದು



ಕನ್ನಡ ಸಾಹಿತ್ಯ ಪರಿಷತ್ತಿನ ಚಿನ್ನದ ಹಬ್ಬದ ಸಂದರ್ಭದಲ್ಲಿ ಡಾ. ಮಾಸ್ತಿಯವರಿಂದ ಸನ್ಮಾನವನ್ನು ಸ್ವೀಕರಿಸುತ್ತಿರುವುದು



ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರು ಮೈಸೂರಿನ ಗವರ್ನರ್ ಶ್ರೀ ಧರ್ಮವೀರರಿಂದ
ರಾಜ್ಯಸಾಹಿತ್ಯ ಅಕ್ಯಾಡೆಮಿ ಪ್ರಶಸ್ತಿ ಸ್ವೀಕರಿಸುತ್ತಿರುವುದು



ದ. ಕ. ಜಿಲ್ಲೆಯ ಮಹಾಜನರು ಮಂಗಳೂರಿನಲ್ಲಿ ಸಲ್ಲಿಸಿದ ಸನ್ಮಾನ ಸಮಾರಂಭದಲ್ಲಿ ಡಾ. ಕೆ. ಶಿವರಾಮ ಕಾರಂತರು ಶಾಲು ಹೊದೆಯಿಸುತ್ತಿರುವುದು

ಓಂ ಪೂರ್ಣಮದಃ ಪೂರ್ಣಮಿದಂ
ಪೂರ್ಣಾತ್ಪೂರ್ಣಮುದಚ್ಯತೇ
ಪೂರ್ಣಸ್ಯ ಪೂರ್ಣಮಾದಾಯ
ಪೂರ್ಣಮೇವಾವಶಿಷ್ಯತೇ ॥



ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ
[illegible]
[illegible]
[illegible]

ಬೆಳಗುವ ಸೊಡರೊಳ್ ಸೊಡರಂ
ಬೆಳಗಿ ಪಲರ್ ಕೊಂಡುಪೋಗೆಯುಂ ಕುಂದದೆ ಪ
ಜ್ಜಳಿಸುವವೊಲ್ ಜಗಮೆಲ್ಲಂ
ಕೊಳಲುಂ ತವದಿತ್ತು ಪೊರೆವವರ್ ...

# ೧. ಉಪ್ಪುಕಡಲಿಗೆ ನನ್ನೊಂದು ಹಿಡಿಯುಪ್ಪು

ಗುಂಡ್ಮಿ, ಚಂದ್ರಶೇಖರ ಐತಾಳ

ಉಪ್ಪುಕಡಲಿಗೆ ಉಂಟೆ ಉಪ್ಪಿನ ಕೊರತೆ?
ಆದರೂ ಇರಲಿ, ನನ್ನೊಂದು ಹಿಡಿಯುಪ್ಪು !
ಓ ಪರಮೇಶ್ವರ ಗುರೂ,
ಉಪ್ಪತಿಯಾದರೆ ಅದು ಸಿಹಿಯಂತೆ
ದುಃಖ ಅತಿಯಾದರೆ ಅದು ಸುಖವಂತೆ
ನಿನ್ನ ಸರಸತೆ ವಿರಸತೆಯ ಅತೀತತೆ !
ಕಗ್ಗತ್ತಲನ್ನೆಲ್ಲ ಒಡಲಲ್ಲೆ ಬಚ್ಚಿಟ್ಟು,
ಬೆಳ್ಳಗೆ ಬೆಳಗಿದೆ ಅಡಿಯಿಂದ ಮುಡಿಗೆ,
ಅಮೃತದ ಗಡಿಗೆ !
ನಿನ್ನ ವಾಗ್ಲಹರಿ
ಜೋಗದ ಜಲಪಾತ ರೀ !
ನಿನ್ನ ಭಾಷಣವೋ
ಕನ್ನಡಕೇ ಭೂಷಣ;
ಒಮ್ಮೊಮ್ಮೆ ಅತ್ಯದ್ಭುತ,
ಪಂಪನಿಂದ ಕುವೆಂಪುವರೆಗೆ,
ವ್ಯಾಸ ಭಾಸ ಕಾಲಿದಾಸ ಷೇಕ್‌ಸ್ಪಿಯರ್ ಸಮುದ್ಭೂತ !
ಕಡಲಿನ ಬಿತ್ತರ, ಬಾನಿನ ಎತ್ತರ,
ತರ ತರ ತರ ಉತ್ತರ !
'ಅಂಚೆಪೆಟ್ಟಿಗೆ' ತುಂಬ ಮಿಂಚಿದೆ
'ಗಗನಚುಕ್ಕಿ'ಯಲಿ ಚಿಕ್ಕೆಯಾದೆ
'ಜಹಾನಾರಾ' ವಿಚಾರ ಏನೆನ್ನಲಿ?
ನಿನ್ನ 'ಮಾಚಯ್ಯ' ನಮ್ಮವನೇ ಎನ್ನಿ !
ಪ್ರಾಕೃತದ 'ಸಪ್ತಶತಿ'
ಪ್ರಕೃತಕ್ಕೆ ಬಂತು; ಏಳ್ನೂರು ಆಯ್ತು !
ಆ 'ಗೀತಗೋವಿಂದ'
ಆನಂದ ತಂತು !
ಅಮರ ಅಮರುವ ಶತಕ
'ಪ್ರೇಮಾರಾಧನ'ವಾಯ್ತು
ಕಾಲಿದಾಸನ ಕೃತಿಯುನೆಲ್ಲವನು ಕನ್ನಡಕೆ
ತಂದು ಮೊದಲಿಗನಾಗಿ
'ಅಭಿನವ ಕನ್ನಡ ಕಾಲಿದಾಸ'ನೆಂದು
ಅನ್ವರ್ಥವಾದೆ !
'ಇಂದ್ರಚಾಪ'ದ ಬಣ್ಣಬಣ್ಣಗಳ ಚೆಲ್ಲಿ
ಕನ್ನಡದ ಅಣ್ಣಗಳ ನಗಿರೆಂದೆ !
'ಚಂದ್ರವೀಥಿ'ಯನೇರಿ ಸಂಸಾರ ಸವಿತೋರಿ

ಸಾಂಗತ್ಯ ಸಂಗೀತ ಹಾಡಿದೆ
'ಸುರಗಿ-ಸುರಹೊನ್ನೆ'ಗಳ ಕಂಪನ್ನು ಹರಡಿದೆ
'ತುಂಬೆ ಹೂ'ವಿಟ್ಟು ಶರಣೆಂದೆ
'ಉಪ್ಪುಕಡಲ'ಲಿ ಅಬ್ಬ ಈಜಿದೆ!
'ಮಂಥಾನ'ದಿ ಮಥಿಸಿದೆ
ನವನೀತವ ಹೊಸೆದೆ
'ಕೃಷ್ಣಮೇಘ'ವ ಕರೆದು
'ಇಂದ್ರಗೋಪ'ವ ಮೆರೆದು
ಕ್ಷಣಕ್ಷಣವು ಕಣಕಣವು
ನವೋನವವಾದೆ!
ಕಾವ್ಯಮಾರ್ಗದಿ ದೇಸಿ ಸಂಚರಿಸಿದೆ!
ನಿನ್ನ ಬಗೆ,
ಸದಾ ಸದಾಶಿವನ ನಗೆ!
ನೀನೊಂದು ವಯಸಾದ ಬಿಳಿದಲೆಯ ಮಗು!
ಮಗುವಿನ ಅಳುವಿರಲಿ, ನಗುವಿರಲಿ, ತೊದಲಿರಲಿ
ಮಗುವ ಮುದ್ದಿಸದ ಮಾನವರುಂಟೇ?
ನಗಲಾರೆನೆಂದವರ ನಗಿಸಿದ ನಗೆಗಾರ
ಲೋಕವನೆ ಕಂಡು ನೀ ನಕ್ಕುಬಿಟ್ಟೆ!
ಅಧಿಕಾರ ವ್ಯಕ್ತಿಯನು ಹಾಳಿಸುವುದೆನ್ನುವರು
ಅಧಿಕಾರ ಹಾಳಾಯ್ತು ನಿನ್ನ ಸೇರಿ!
ಅಧಿಕಾರದಿಂದೊಳ್ಳೆತನ ಅಧಿಕತರವಾಯ್ತು
ಹಾರಕ್ಕೆ ದಾರವಾಯಿತು ನಿನ್ನ ಅಧಿಕಾರ
ಭಾರಕ್ಕೆ ಆಧಾರವಾಯ್ತು ನಿನ್ನಧಿಕಾರ,
ಹೂವಿಗೆ ಕಂಪಾಯ್ತು, ಹಾವಿಗೆ ತಂಪಾಯ್ತು
ನೋವಿಗೆ ಪೆಂಪಾಯ್ತು ನಿನ್ನ ಅಧಿಕಾರ
ಇತರ ಅಧಿಕಾರಿಗಳು ಇರಬಹುದು ಅಧಿಕ + ಅರಿ
ನೀನೋ ನಿರ್ವಿಕಾರಿ
ಅಲ್ಲ ನೀನು ಪಾತ್ರಧಾರಿ;
ಹೌದು, ಸೂತ್ರಧಾರಿ;
ಅಧ್ಯಾಪಕರನು ಗುರುವೆಂದೆ
ವಿದ್ಯಾರ್ಥಿಯ ಕೆಳೆಯೆಂದೆ
ಹೋದೆ, ಬಂದೆ
ಮೂಲೆ ಮೂಲೆಯ ಶಾಲೆಗಳ ಸಿರಿಯ ಮಿಂದು
ಹಳ್ಳಿ ಹಳ್ಳಿಯ ಗೆಳೆತನವ ತಂದು
ಮಾನಸಗಂಗೋತ್ರಿಯಿಂದ ಮಂಗಳಗಂಗೋತ್ರಿ ವರೆಗೆ
ಅಜಸ್ರಧಾರೆ;
ಆನಂದದ ಸೂರೆ!
ಅತ್ತಲೊಮ್ಮೆ ಹಾಸುತ್ತ
ಇತ್ತಲೊಮ್ಮೆ ಹೊಕ್ಕುತ್ತ

ಸ್ನೇಹದ ನಡೆಮುಡಿಯನು ಪಡೆದೆ ಇಂದು.
ಕರೆದಲ್ಲಿಗೆ, ಬರೆದಲ್ಲಿಗೆ
ಇವರೆನ್ನದೆ, ಅವರೆನ್ನದೆ
ಹಗಲೆನ್ನದೆ, ನಿಶೆಯೆನ್ನದೆ
ಗುಣು ಗುಣು ಗುಣು ಗೊಣಗಾಡದೆ
ಚೈತನ್ಯವ ಹಾಸಿದೆ
ಸಮ್ಮೋಹನ ಬೀಸಿದೆ!
ಬಗೆ ಬಗೆ ಬಗೆ ಬಗೆಬಿಚ್ಚುತ
ನಗೆ ನಗೆ ನಗೆ ನಗೆಹಚ್ಚುತ
ಸೃಷ್ಟಿಸಿದೆ ಸುಗ್ಗಿ
ತನಗೆ ತಾನೆ ಹಿಗ್ಗಿ!
'ಬಾಳೆಹಣ್ಣು ಬೇಕೇ?' ಎಂದರೆ
ಬಾಳೇಹಣ್ಣೆಂದೆ!
ವಿಶ್ವಾಸಬೇಕೆಂದವರಿಗೆ
ಶ್ವಾಸವಿರುವ ವರೆಗೂ
ವಿಶ್ವಾಸವಿರುವುದೆಂದೆ!
ಒಂದೆ, ಎರಡೆ ಇಂಥವು
ನೂರಾರಿವೆ ಸ್ವಂತವು!
ಹೂವು ಹಣ್ಣು ಕೊಟ್ಟೆ;
ಹೂವು ಹಣ್ಣು ಪಡೆದೆ!
ಪೂರ್ವಪುಣ್ಯ, ದೇವಮಾನ್ಯ
ಮಾತಾಪಿತೃಗುರುದಯೆ ಅಗಣ್ಯ
ಓ, ಅನನ್ಯ, ಅಸಾಮಾನ್ಯ
ಕರೆದುಕೊಳುವೆ ನೀ ನಿನ್ನನೆ ಶ್ರೀ ಸಾಮಾನ್ಯ!
ಬುದ್ಧ ಗೆದ್ದ ಈ ಜಗದುದ್ದವ
ತನ್ನ ತ್ಯಾಗದಿಂದೆ
ಗಾಂಧಿ ಗೆದ್ದ ಈ ಭಾರತ
ತನ್ನ ಸತ್ಯದಿಂದೆ
ನೀ ಗೆದ್ದೆ ಕನ್ನಡ ಜನಮನವ
ವಿನಯಶ್ರೀಯಿಂದೆ,
ವಚನಶ್ರೀಯಿಂದೆ,
ಅಧಿಕಾರಾಹಂಕಾರದ 'ಇತಿಶ್ರೀ'ಯಿಂದೆ!
ಆ ಶ್ರೀಪರಮೇಶ್ವರ
ಈ ಶ್ರೀ ಪರಮೇಶ್ವರನಿಗೆ
ನೀಡಲಿ, ಮಾಡಲಿ, ಹರಸಲಿ
ಆಯುರಾರೋಗ್ಯ ಐಶ್ವರ್ಯವನು;
ಕರುಣಿಸಲಿ, ವರವೀಯಲಿ
ಆನಂದದ ಕೀರ್ತಿಯನು!

## ೨. ಶ್ರೀ ಚಂದ್ರವೀಥೀ ಚರಃ

ಎಂ. ಮಂಜುನಾಥ ಭಟ್ಟ

ಶ್ರೀ ಕರ್ಣಾಟಕ ವಾಗ್ವಧೂ ವಿರಚಿತಾದ್ಗಾಢೋಪಗೂಢೋದ್ಯಮಾತ್
ಕ್ಲಿಶ್ಯಂತೀಂ ಸುರಭಾರತೀಮನುನಯನ್ ವ್ಯಕ್ತೋರ್ಜಿತ ಪ್ರಶ್ರಯಃ ।
ಯತ್ಸತ್ಯಂ ರಮತೇ ಹಿ ಯೋಷಿತಿ ಚಿದಾನಂದಾತ್ಮಿಕಾಯಾಂ ಸದಾ
ಸೋಽನ್ಯೋಯಃ ಪರಮೇಶ್ವರೋ ವಿಜಯತಾಂ ಶ್ರೀ ಚಂದ್ರವೀಥೀ ಚರಃ ॥

ಭರ್ತಾ ಭರ್ತೃಹರೇಃ ಕೃತೇರನುಪಮಂ ಕೃತ್ವಾಽನುವಾದಂ ಚ ನಃ
ಶ್ರದ್ಧಾ ಸ್ನೇಹ ಸಮನ್ವಿತಸ್ಯ ಸತತಂ ಪಾತ್ರಂ ಪ್ರಣಾಮಾಂಜಲೇಃ ।
ಜೀವೇದ್ವರ್ಷ ಶತಂ ಸುಖೇನ ಸುತರಾಂ ಚಿನ್ವನ್ ಯಶೋ ಭಾಸ್ವರಂ
ಶಾಸ್ತ್ರೋಪಾತ್ತ ಸಮಸ್ತ ಛಾತ್ರ ಹೃದಯ ವ್ಯಾಕೋಶ ಕಾರ್ಯೋದ್ಯತಃ ॥

ರತ್ನೈಃ ಸತ್ಕವಿ ಕಾಲಿದಾಸ ಕವಿತಾ ರತ್ನಾಕರಾದುದ್ಧೃತೈಃ
ಕೃತ್ವಾಽಽಪೀಡಮುದೂಢ ರಾಗ ಸುಭಗಂ ಭಾಗ್ಯಾದಿವೋಜ್ಜ್ವಲೈಃ ಸತಾಂ ।
ಯತ್ಕರ್ಣಾಟಕ ಭಾರತೀ ವರಮುಖೇ ನ್ಯಸ್ತಂ ತ್ವಯಾಽತ್ಯಾದರಾತ್
ತತ್ತೇ ಸ್ಯಾದಖಿಲಃ ಕಿಲೌಪನಿಷದಃ ಶ್ರೇಯೋಽನುಗಃ ಶೇವಧಿಃ ॥

ಗಾಥಾಸಪ್ತಶತೀಮನೂದ್ಯ ನನು ತೇ ಯಾತಾ ಮತಿಸ್ತಾವತೀ
ನ ಜ್ಞಾತೋ ಯದಯಂ ನಿಪಾತನಪಟುರ್ನೀಚೈರನಂಗಾಧಮಃ ।
ಚಂಚದ್ರಾಗಚಿತೇಂದ್ರಚಾಪ ಖಚಿತ ಪ್ರೋಚ್ಚಂದ್ರವೀಥೀ ಜುಷಃ
ಪ್ರೇಮಾರಾಧನ ಹೇಲಯಾ ಮರುಪಥೇ ಪಾತೋ ನು ತೇ ಸಾಂಪ್ರತಮ್ ॥

ವೃತ್ತಾಂತಂ ವೃಷಭಾನುಜಾ ಯದುವೃಷ ಪ್ರಕ್ರಾಂತ ಕೇಲೀಗತಂ
ನಿರ್ವಕ್ತುಂ ಜಯದೇವ ಏವ ನಿತರಾಂ ಶಕ್ತೋ ಮುನಿಶ್ಚಾಪರಃ ।
ತದ್ವಾಣೀಮನುವಕ್ತುಮುದ್ಯಮಭೃತಶ್ಚಿತ್ರಂ ಚರಿತ್ರಂ ಹಿ ತೇ
ಬಧ್ನೀಮೋ ವಯಮಂಜಲಿಂ ನನು ಜಯತ್ವೇತತ್ತ್ರಯಂ ಸೂರಿಣಾಂ ॥

## ೩. ಪುಷ್ಪಪತ್ರ

ಶಾರದಾ ವಾಣಾಯರ್

ನುಡಿದು ಹೋದವರುಂಟು ಗುರುಶಿಷ್ಯ ಮೈತ್ರಿಯ
ಕನಸ ಕಂಡವರಂತೂ ಬಹಳ
ನಡೆದು ತೋರ್ದವರಿಲ್ಲ ನಿಮ್ಮಂತೆ ಬಲುಮಂದಿ
ನೆನಸು ಮಾಡಿದುದೆಷ್ಟು ಸರಳ !

ಗುರುತನ ಹಿರಿತನ ಗೋಡೆಗಳೊಡೆಯುತ
ಬಯಲಿಗೆ ನೀವು ನಿಂತವರು
ಅಧಿಕಾರ ಗೌರವ ಪೀಠಗಳನು ಬಿಟ್ಟು
ನಮ್ಮ ಜೊತೆಗೆ ಕುಳಿತವರು

ಅಡಿಯಿಂದ ಮುಡಿವರೆಗೆ ಬಿಳುಪನ್ನೆ ಕಂಡರೆ
ಮಲ್ಲಿಗೆ ಎನ್ನುವರಂತೆ
ತೇದು ಹಾಕಿದ ಕೈಯ ತಂಪು ಮಾಡುವ ಗುಣ
ಶ್ರೀಗಂಧಕೇ ಇಹುದಂತೆ

ನಿಮ್ಮ ಕಂಡರೆ ಮಲ್ಲಿಗೆಯನ್ನೆ ಕಂಡಂತೆ
ಆಗುವುದೆಮಗಾಗ ಸಹಜ
ನಿಮ್ಮ ಸಹನೆಯ ಗುಣ ತೇದು ನೋಡಿದ ವಿಧಿ
ಶ್ರೀಗಂಧ ನೆನೆಸಿದ್ದೆ ಸಹಜ

ಅರೆ ಶತಮಾನದ ಚಳಿಮಳೆ ಉಂಡರು
ಸುಗ್ಗಿ ಚಿಗುರಿನ ತೆರದ ಮಾತು
ಬಲುಕಾಡು ಕಣಿವೆಯನಿಳಿದರು ತೊರೆ ತನ್ನ
ಕಲ ಕಲ ಬಿಡದಂಥ ರೀತಿ

ನಿಮ್ಮ ಸರಸ ಮಾತು ಮಲ್ಲಿಗೆ ಮನೆಯಲ್ಲಿ
ಎಳೆಗಾಳಿ ಸುತ್ತಿ ಸುಳಿದಂತೆ
ನಿಮ್ಮ ವ್ಯಂಗ್ಯದ ಮೊನೆ ಮುಳ್ಳು ನೆಟ್ಟಂತಲ್ಲ
ನೆಟ್ಟ ಮುಳ್ಳನು ಕೀಳುವಂತೆ

ನಿಮ್ಮ ಜೊತೆಗೆ ನಮ್ಮ ಕಂಡ ಜನರಿಗೆಲ್ಲ
ಪ್ರಾಚೀನ ಋಷಿಕುಲ ನೆನಪು
ನಿಮ್ಮ ಜೊತೆಗೆ ನಡೆದಾಡಿದ ನಮಗೆಲ್ಲ
ಗುಡಿಯ ಪ್ರಾಂಗಣ ಹೊಕ್ಕ ನೆನಪು

ಸಂತೆ ಗಲಭೆಯ ನಡುವೆ ಗುಡಿಯ ಗಂಟೆಯ ನಾದ
ಕೇಳಿದಂತಾಗಿದೆ ನಮಗೆ
ಯಂತ್ರ ನಗರಿಯ ಬಿಟ್ಟು ಹೊಲಬನಗಳ ನಡುವೆ
ತಿರುಗಿದಂತಾಗಿದೆ ನಮಗೆ

ಪೂಜೆಯ ಕಿಂಕಿಣಿ ನಾದ ಎಲ್ಲೋ ಎಲ್ಲೋ
ಕೇಳಿದಂತಾಗಿತ್ತು ಅಂದು
ಆರತಿ ತಟ್ಟೆಯ ನಮ್ಮ ಕೈಯಲೆ ಕೊಟ್ಟು
ಮಂತ್ರ ಹೇಳುವಿರಿ ನೀವಿಂದು

ಕಾಳಿದಾಸನ ಕಂಡು ಪಾಲರಾಜನ ಕಂಡು
ಪ್ರಾಚೀನ ಭಾರತ ಕಂಡು
ಮೈಸೂರ ಹೆಮ್ಮೆಯ ಹಿರಿಯ ಚೇತನರನ್ನು
ನಿಮ್ಮ ನಡೆನುಡಿಯಲ್ಲೆ ಕಂಡು

ಸಂಸ್ಕೃತರಾದೇವು ಕನ್ನಡರಾದೇವು
ಭಾರತೀಯರು ಆದೆವಾವು
ಗಂಧ ಅಳೆದ ಬಟ್ಟಲಾದರು ಆದೇವು
ಶಿಷ್ಯತನದ ಪುಣ್ಯದಿಂದ

ಕೃಷ್ಣಮೇಘಗಳೆಷ್ಟೆ ಇದ್ದರು ಬಾಳಲ್ಲಿ
ಇಂದ್ರಚಾಪವ ಕಾಂಬ ಕಲೆಯ
ನಿಮ್ಮಿಂದ ಕಲಿತರು ಎನಿತೆನಿತೊ ಮಂದಿಯು
ಇದಕಿಂತ ಮಿಗಿಲಾವ ಸೈಪು ?

'ಮಂಗಳ ಗಂಗೋತ್ರಿ' ಮುಡಿಗೆ ಹೂ ತನ್ನಿರಿ
ಹುಲ್ಲನೆಂದಿಗು ತರಬೇಡಿ
ಎಂಬ ಎಚ್ಚರವಿತ್ತ ನಿಮ್ಮ ಎಚ್ಚರ ಹರಕೆ
ನಮ್ಮ ಬಾಳಿಗೆ ಮುಂದೆ ಮುಂದೆ

ನಿಮ್ಮ ಅರಿವಿನ ಗಿರಿ ಕೋಡು ಕೋಡುಗಳನ್ನು
ಕರೆಕರೆದೆಮಗೆ ತೋರಿದಿರಿ
ದೃಷ್ಟಿಗೆ ನಿಲುಕುವಷ್ಟನ್ನೆ ಕಂಡುದು ನಾವು
ಅದನು ಬಣ್ಣಿಪುದೆಂಥ ಮಾತು

ಹೊಗಳಿಕೆ ಹೊನ್ನಿನ ಶೂಲವೆ ಬಲು ನಿಜ
ಅರಿತು ಬಳಸದಿರೆ ನಾವು
ಹೊಗಳಿಕೆಯೆನಿಸದು ನಿಮ್ಮ ನೆನಪು ಬಂದು
ಮನವುಬ್ಬಿ ಆಡಿದ ಮಾತು

ಸಾವಿರ ಸಂಖ್ಯೆಯ ಶಿಷ್ಯರ ಮನದಲ್ಲಿ
ಮನೆಯನ್ನು ಮಾಡುತ ಬಂದು
ಸ್ನೇಹ ವಾತ್ಸಲ್ಯದ ದೀಪ ಹಚ್ಚಿದ ಮಾತು
ಬರಿ ಹೊಗಳಿಕೆಯೆನಿಪುದೇನು ?

ಅಧ್ಯಾಪನದ ದೇವಮಂದಿರದಲಿ ಏನೊ
ಉತ್ಸವ ನಡೆದಿದೆ ಭಾರಿ
ನಿಮ್ಮ ಶಿಷ್ಯರೆ ಹೊರೆಗಾಣಿಕೆ ನಿಮಗಿಂದು
ಇದೂ ಒಂದು ಹೂವಿನ ಎಸಳು

## ೪. ನಾ ಕಂಡ ಪರಮೇಶ್ವರ

ಕೆ. ಗಣೇಶ ರಾವ್

ಜ್ಞಾನಗಂಗಾ ಸಲಿಲ ಧವಳರಾಶಿಯ ಧರಿಸಿ
ನಿಂದ ಗಂಗಾಧರನ ತೆರದೊಳಿಂದು
ಜ್ಞಾನಸುರಸಿಂಧು ಸುಧೆಯಿಂದ ತೃಷೆ ನೀಗಿಸಲು
ಬಂದ ಸಗರಾನ್ವಿತರ ಹರಸುತಿಹರಿಂದು

ಮೇರುಶಿಖರವನೇರಿ, ವಿಶ್ವರೂಪವ ತಾಳಿ
ಭಾವ ಗರಿಗಳ ಹರಡಿ ತಿಳಿವ ಹಕ್ಕಿ
ಹಾರುತಿರೆ ಸಾಹಿತ್ಯನಭದೊಳಗೆ ರಸಋಷಿಯ
ಕಾವ್ಯಾಂಗನೆಯ ಲಾಸ್ಯವೆಂಥ ಭಂಗಿ

ಜಯದೇವ ಹಾಲ ಅಮರುಕ ಕಾಳಿದಾಸರೇ
ಕನ್ನಡಾಂಬೆಯ ಪೂಜೆ ಮಾಡಬಯಸಿ
ಪರಮೇಶ್ವರಾವತಾರದಿ ಬಂದರೆಂಬಂತೆ
ನೋಟಕರ ಮನಸೆಳೆದು ನಿಂದರಲ್ತೇ ?

ಕನ್ನಡದ ದೇಗುಲದಿ ಹೊಡೆದ ಘಂಟಾರವವು
ಮೊಳಗಿ ಮಾರ್ದನಿಗೊಡುವುದೆನಿತು ಚೆಂದ
ಆ ಮಧುರರವದೊಡನೆ ಮನವುಬ್ಬಿ ಮಂತ್ರವನು
ಪಠಿಸುತಿಹ ಪರಮೇಶನೆನಿತು ಅಂದ

ಹಿರಿತನದ ಗಾಂಭೀರ್ಯ ರಸಿಕತೆಯ ಸರ್ವಸ್ವ
ಮಮತೆ ಮಧುರೋಕ್ತಿಗಳ ಪ್ರೇಮಮೂರ್ತಿ
ಸಾಹಿತ್ಯ ನಭದೊಳಗೆ ಬೆಳಗುತಿಹ ದಿನಮಣಿಯು
ಕವಿಕಮಲಗಳನು ತಾನರಳಿಸುವನು

ಎದೆಯ ವೀಣೆಗೆ ನರದ ತಂತಿಗಳು ಮೇಳವಿಸಿ
ಭಾವನಾದದ ಹೊನಲ ಹರಿಸುತಿರಲು
ಕಾವ್ಯ ದೇಗುಲದೊಳಗೆ ಶಾರದೆಯು ಮೈದೋರಿ
ಪರಮೇಶ್ವರನ ತಾನು ಹರಸುತಿಹಳು

ಹೃದಯ ಹಣತೆಗೆ ಪ್ರೇಮದಮಲ ತೈಲವನೆರೆದು
ಆತ್ಮಜ್ಯೋತಿಯ ಬೆಳಗಿ ಮೂಢತಿಮಿರವನು
ಕಳೆವ ನಂದಾದೀಪ ಪ್ರಜ್ವಲಿಸುತಿದೆ ನೋಡು
ಕನ್ನಡಮ್ಮನ ಭವ್ಯ ದೇಗುಲದಲಿ

## ೫. ಅರಿತಂತೆ ಬರೆದಿರುವೆ, ಗುರುವೆ

ಹರಿನಾರಾಯಣ, ಮಾಡಾವು

ನುಡಿಮುತ್ತು ಪೋಣಿಸಿದ ಸರಸ ಮಾತಿನ ಮಾಲೆ
ಸೊಗಸಾದ ಆಭರಣ ನಿಮಗೆ
ಮಾತಾಡತೊಡಗಿದರೆ ಮನವ ಸೆಳೆಯುವ ಲೀಲೆ
ಹರುಷವನೊದಗಿಪುದೆಮಗೆ

ಆವೇಶ ಬಂದಾಗ ಭಾಷಣದ ಆವೇಗ
ನಿಮ್ಮಯ ಮಾತಿನ ಠೀವಿ !
ವೇದಿಕೆಯೆಡೆಯಿಂದ ನುಡಿಕಿಡಿ ಸಿಡಿವಾಗ
ತನ್ಮಯರಾದಪರೋವಿ

ತರಗತಿ ಕೋಣೆಲಿ ತೆರ ತೆರದಲಿ ನೀವು
ಪಾಠವ ರಂಜಿಸುತಿಹಿರಿ
ಹಾಸ್ಯದ ಲಾಸ್ಯದಿ ಬೆರೆಯುತಲಿರೆ ನಾವು
ಹರಡುವುದಾನಂದ ಲಹರಿ

ಅನುವಾದಗಳ ಮಾಡಿ ಹೊತ್ತಗೆಗಳ ಕೂಡಿ
ಕವಿಯಾಗಿ ಕೃತಿಗಳ ಬರೆದು
ಕನ್ನಡ ಪಾಠವ ಶಿಷ್ಯರಿಗೊರೆದೂಡಿ
ನಲಿವಿರಿ ವಾಣಿಗೆ ಮಣಿದು

ಕಾಳಿದಾಸನ ನೀವು ಕನ್ನಡಕೆ ತಂದಿಹಿರಿ
ಅನುವಾದ ಸಾಧನೆಯಹುದು
ಸಾಹಿತ್ಯ ಸಂಪದವ ಬೆಳೆದಿರಿ ಬೆಳಗಿರಿ
ನಿರತವು ಸ್ವಾಗತವಿಹುದು

ಏಳೆಯ ಎಳೆಗಳು ತ್ರಿಪದಿಯ ಪದಗಳು
ವಿಕಸಿತ ಸಾಂಗತ್ಯದರಳು
ಗದ್ಯವು ಹೃದ್ಯವು ಗಾದೆಯ ನುಡಿಗಳು
ವಚನಗಳುಪ್ಪು ಕಡಲು

ಬಹುಬಗೆ ಕೃತಿಗಳು ಈ ರೀತಿಯೊಪ್ಪಲು
ತೋರಿದ ವೈವಿಧ್ಯ ನಿಮ್ಮದಾಗಿ
ಬರೆವಣಿಗೆ ಕ್ಷೇತ್ರದಿ ದುಡಿಮೆಯು ಸಾಗಲು
ನಿಂತಿರಿ ನಿರತವು 'ಸರಸಿ'ಯಾಗಿ

ಸರಸ ಸಾಹಸವೆಲ್ಲ ಸೇರಿರುವ ರಸಪಾಕ
ಸತ್ತ್ವಸಂಗತರಾಗಿ ಸತತ
ಸಾಹಿತ್ಯ ಕ್ಷೇತ್ರದಲಿ ಸೇವೆಯ ಗೈಯುತ
ಕುಂದದೆ ಉಳಿದಿದೆ ತವಕ !

ನಿಮ್ಮಯ ಕುರಿತಾಗಿ ಅರಿತಂತೆ ಬರೆದಿರುವ
ಬಾಲಿಶವೆನ್ನದೀ ಭಾಷೆ
ಕೊರತೆಗಳಿರಬಹುದು ಕ್ಷಮಿಸಿರಿ ಗುರುದೇವ
ಮೆಚ್ಚುವಿರೆಂಬಭಿಲಾಷೆ

# ೬. ನೋವುಂಡು ನಗೆಚೆಲ್ಲುವ ಅಜಾತಶತ್ರು

ಎಚ್. ಜೆ. ಲಕ್ಕಪ್ಪಗೌಡ

**ಕಾಣದ ಕಲ್ಪನೆ:**

೧೯೫೬ನೇ ಇಸವಿ. ನಾನು ಆಗ ತಾನೇ ಇಂಟರ್‌ಮೀಡಿಯಟ್ ಕಾಲೇಜಿಗೆ ಸೇರಿದ್ದೆ. ನನ್ನ ಹಿರಿಯ ತರಗತಿಯವರಿಗೆ 'ಕನ್ನಡ ಕುಮಾರ ಸಂಭವ' ಪಠ್ಯಪುಸ್ತಕವಾಗಿತ್ತು. ರಟ್ಟಿನ ಮೇಲೆ 'ಎಸ್. ವಿ. ಪರಮೇಶ್ವರ ಭಟ್ಟ, ಎಂ. ಎ.,' ಎಂಬ ಹೆಸರಿತ್ತು. ಒಳಪುಟ ತೆಗೆದಾಗ, ನಾನು ಹೈಸ್ಕೂಲಿನಲ್ಲಿ ಪ್ರಾಗಲೇ 'ಬೊಮ್ಮನ ಹಳ್ಳಿಯ ಕಿಂದರಿ ಜೋಗಿ' ಮತ್ತು 'ಕೊಳಲು'ಗಳ ಮೂಲಕ ನನಗೆ ಹುಚ್ಚು ಹಿಡಿಸಿದ್ದ ಮಹಾಕವಿ ಕುವೆಂಪು ಅವರ ಸುಂದರ ಆಕರ್ಷಕ ಭಾವಚಿತ್ರ ಮನಸ್ಸನ್ನು ಸೆರೆಹಿಡಿಯಿತು. ಅದನ್ನು ಸರಿಸಿದಾಗ, ನನ್ನ ಕುತೂಹಲಕ್ಕೆ ಕೋಡು ಮೂಡಿಸುವಂತೆ 'ನಿಮಗಿದೊ ಸಮರ್ಪಿಸುವೆನತಿ ಭಕ್ತಿಯಿಂ ತಂದು ರಸಋಷಿ ಕುವೆಂಪು, ಕೃತಿ ಕವಿಗೆ ಧನ್ಯನರ್ಪಿತಮೆನಲ್: ಹಗ್ಗಕೊದಗದೆ ಸಗ್ಗ ಪೆಂಪು!' ಎಂಬ ಮಾತಿನ ಮುಕ್ತಾಹಾರದಿಂದ ಆ ಕೃತಿಯನ್ನು ಕವಿಗುರುವಿಗೆ ಅರ್ಪಿಸಲಾಗಿದೆ. ಆಸಕ್ತಿ ಅರಳಿ ಗ್ರಂಥದ ಮೇಲೆ ಶ್ರದ್ಧೆಯಿಂದ ಕಣ್ಣೋಡಿಸಿದೆ. ಮೊದಲಿನ ಎರಡು ಪದ್ಯಗಳು ನನ್ನ ಮನಸ್ಸನ್ನು ಪೂರ್ಣವಾಗಿ ಸೆಳೆದುಕೊಂಡವು:

> ಅಲ್ಲಿ ಉತ್ತರ ದಿಶೆಯೊಳಿರುವನು ಹಿಮಾಲಯನು
> ದೇವತಾತ್ಮನು ತಾನು ಪರ್ವತೇಶ್ವರನು
> ಪೂರ್ವ ಪಶ್ಚಿಮ ಶರಧಿಗಡಿ ಚಾಚಿ ನಿಂದಿಹನು
> ಪೃಥ್ವಿಯ ಮಹಾಮಾನದಂಡದಂತಹನು
> ಧರೆಯು ಧೇನುವೊಲಾಗೆ ಹಿಮವಂತ ಕರುವಾಗೆ
> ಮೇರುಗಿರಿ ಪಾಲ್ಗರೆವ ನಿಪುಣನಾಗೆ
> ಗಿರಿಗಳೆಲ್ಲವು ಸೇರಿ ಕರೆದುಕೊಳುತಿಹವಲ್ಲಿ
> ಹೊಳೆಹೊಳೆವ ರತ್ನಗಳನೋಷಧಗಳ

ಈ ಪದ್ಯಗಳ ಸರಳತೆಗೆ ಸಹಜಪ್ರಾಸ ವಿನ್ಯಾಸಕ್ಕೆ ನಿರರ್ಗಳತೆಗೆ ಅರ್ಥ ಸೌಂದರ್ಯಕ್ಕೆ ಭಾವ ಬಂಧುರತೆಗೆ ನಾನು ಮಾರುಹೋದೆ. ಕಾಳಿದಾಸನ ಭವ್ಯ ಕಲ್ಪನೆಯೊಂದನ್ನು ಇಷ್ಟು ಸ್ಪಷ್ಟವಾಗಿ ಸಜೀವವಾಗಿ ಸ್ವಾಭಾವಿಕವಾಗಿ ಕನ್ನಡದಲ್ಲಿ ಪಡಿಮೂಡಿಸಿದ ಕವಿ ಪ್ರತಿಭೆಗೆ ನಾನು ಶರಣಾದೆ. ಇಡೀ ಗ್ರಂಥವನ್ನು ಓದಿ ಮುಗಿಸುವವರೆಗೆ ಮೇಲೇಳಲಿಲ್ಲ. ಇಂತಹ ಉತ್ತಮ ಕೃತಿಯನ್ನು ರಚಿಸಿದ ಕವಿಯ ಚಿತ್ರವನ್ನು ಮನಸ್ಸು ಕಲ್ಪಿಸಿಕೊಂಡಿತು: ದಪ್ಪನಾದ ತಲೆ, ದುಂಡಾದ ಮುಖ, ಅರ್ಧ ಕಲಾಯಿ ಮಾಡಿದ ಮುಂದಲೆ, ಹಿಂದುಗಡೆ ಒಂದು ಪಿಳ್ಳು ಜುಟ್ಟು; ಹಣೆಯಲ್ಲಿ ಮೂರು ಬಿಳಿಯ ರೈಲು ಕಂಬಿ. ಜುಬ್ಬದ ಮೇಲೆ ಹೊದ್ದ ಬಣ್ಣ ಮಾಸಿದ ಒಂದು ಶಾಲು, ಅರೆ ಮಡಿಯಾದ ಒಂದು ಕಚ್ಚೆ ಪಂಚೆ, ತೇಜಸ್ಸು ಮುಕ್ಕಳಿಸುವ ಕಣ್ಣುಗಳು! ಈ ರೀತಿಯ ಚಿತ್ರ ನನ್ನ ಕಲ್ಪನೆಗೆ ಹೇಗೆ ಬಂತೋ ತಿಳಿಯದು. ಬಹುಶಃ ನನ್ನ ಹಳ್ಳಿಯ ಪರಿಸರದಲ್ಲಿ ನಾನು ನೋಡಿದ್ದ ಸಂಸ್ಕೃತ ವಿದ್ವಾಂಸರ ಪ್ರಭಾವವಿರಬೇಕು. ಅನಂತರ ಅವರ 'ರಾಗಿಣಿ'ಯನ್ನು ಓದಿದೆ. ಅದರ ರಿಂಗಣಗುಣಿವ ಪದಮೈತ್ರಿ, ನಾಲಗೆಯಲ್ಲಿ ನಲಿಯುವ ಲಯವಿನ್ಯಾಸ, ಬಾಲಹೃದಯವನ್ನು ಸೆಳೆಯುವ ಕೋಮಲವಾದ ಸುಕುಮಾರವಾದ ಭಾವಗಳು, ಕಣ್ಣಿಗೆ ಕಟ್ಟುವ ಕಲ್ಪನೆಗಳು, ನವುರಾದ ಭಾವುಕ ಪ್ರಣಯದೆಳೆಗಳ ಮೋಹಕ ಹಾಸು ಬೀಸು, ಪ್ರಕೃತಿಯ ಸುಂದರ ಚಿತ್ರಗಳು ನನ್ನ ಮನಸ್ಸಿಗೆ ಮೋಡಿ ಹಾಕಿದಾಗ ಹಿಂದೆ ನನ್ನಲ್ಲಿ ಮೂಡಿದ್ದ ಕವಿಯ ಚಿತ್ರಕ್ಕೆ ವಿರುದ್ಧವಾದ ಚಿತ್ರ–'ಇಂಗ್ಲಿಷ್ ಗೀತ'ಗಳಲ್ಲಿರುವ ಷೆಲ್ಲಿಯ ಮಧುರ ಕಂಗಳ ಸುಂದರ ಶ್ರೀಮುಖ—ಕಣ್ಣೆದುರಿಗೆ ಬಂತು. 'ಕುಮಾರ ಸಂಭವ'ವನ್ನು ಕನ್ನಡಿಸಿದ ಕವಿಯ ವಯೋವೃದ್ಧ

ಸಂಪ್ರದಾಯಶೀಲ ಗಂಭೀರ ಚಿತ್ರ ಮತ್ತು 'ರಾಗಿಣಿ'ಯನ್ನು ಹಾಡಿದ ಎಳೆವರೆಯದ ಚೆಲುವ ಬಿಳಿಯ ಸರಸ ಕವಿಯ ಚಿತ್ರ–ಇವುಗಳ ನಡುವೆ ನಿಜವಾದ ಕವಿಯ ಚಿತ್ರವನ್ನು ಕಲ್ಪಿಸಿಕೊಳ್ಳಲಾಗದೆ ತೊಳಲುತ್ತಿದ್ದಾಗ ಮೈಸೂರಿನಲ್ಲಿ ಓದುತ್ತಿದ್ದ ಮಿತ್ರ ಮಹಾಶಯರೊಬ್ಬರು ನನ್ನ ಮೊದಲಿನ ಕಲ್ಪನೆಯ ಚಿತ್ರವೇ ನಿಜವಾದದ್ದೆಂದು ಹೇಳಿದಾಗ ನನ್ನ ಊಹೆ ಸತ್ಯವಾದುದಕ್ಕೆ ಎಷ್ಟು ಒಳಒಳಗೆ ಹಿಗ್ಗಿದ್ದೆ !

**ಮೊದಲ ನೋಟ:**

ಇಂಟರ್ ಮುಗಿಸಿದ ನಂತರ ಮುಂದೆ ಓದುವೆನೋ ಇಲ್ಲವೋ ಎಂಬ ಮುಂಗಾಣದ ಭವಿಷ್ಯದ ಚಿಂತನೆಯಲ್ಲಿರುವಾಗ ಅನಿರೀಕ್ಷಿತವಾಗಿ, ನನ್ನಂತೆಯೇ ಹಲವು ಹಳ್ಳಿಗರ ಕನಸಾಗಿದ್ದ, ಮೈಸೂರಿಗೆ ಹೋಗಿ ಓದುವ ಅವಕಾಶವೊದಗಿತು. ಎಂಜಿನಿಯರಿಂಗ್ ಕಾಲೇಜಿಗೆ ಸೇರಬೇಕಾಗಿದ್ದ ನಾನು ಕರ್ಮಧರ್ಮ ಸಂಯೋಗದಿಂದ, ದೈವಕೃಪೆಯಿಂದ, ಮನೆಯವರ ಬಂಧುಗಳ ಇಚ್ಛೆಗೆ ವಿರುದ್ಧವಾಗಿ ಮಹಾರಾಜಾ ಕಾಲೇಜಿನಲ್ಲಿ ಬಿ. ಎ.,ಗೆ ಸೇರಿದೆ. ಕನ್ನಡವನ್ನು ಐಚ್ಛಿಕಗಳಲ್ಲಿ ಒಂದಾಗಿ ತೆಗೆದುಕೊಂಡೆ. ನಾನು ಓದಿದ್ದ ಹಲವು ಕೃತಿಗಳ ಕರ್ತೃಗಳನ್ನು ವಾಸ್ತವ ರಾಜ್ಯದಲ್ಲಿ ಕಣ್ಣಾರೆ ಕಾಣುವ ಭಾಗ್ಯ ನನ್ನದಾಯಿತು.

ಒಂದು ಬೆಳಿಗ್ಗೆ ಸಾಹಿತ್ಯ ಚರಿತ್ರೆಯ ಮೊದಲ ತರಗತಿ. ವೇಳಾಪಟ್ಟಿಯಲ್ಲಿ 'ಎಸ್. ವಿ. ಪಿ.' ಎಂಬ ಅಂಕಿತವಿದ್ದುದನ್ನು ಕಂಡು ಆನಂದ ಆಸಕ್ತಿ ಕೂತೂಹಲಗಳ ಮುಮ್ಮೊನೆಯ ಮೇಲೆ ಬಾಗಿಲೆಡೆಗೆ ದಿಟ್ಟಿನೆಟ್ಟು ಮೈಯ್ಯೆಲ್ಲಾ ಕಣ್ಣಾಗಿ 'ಕುಮಾರ ಸಂಭವ' ಮತ್ತು 'ರಾಗಿಣಿ'ಗಳ ನನ್ನ ಕಲ್ಪನೆಯ ಕವಿಯ ಪ್ರವೇಶವನ್ನು ಕಾಯುತ್ತಾ ಕುಳಿತಿದ್ದೆ. ಬೂದು ಬಣ್ಣದ ಸ್ವಲ್ಪ ದೊಗಳೆ ಎನ್ನುವಂಥ ಪ್ಯಾಂಟು ಮತ್ತು ಅಂಥದೇ ಬಣ್ಣದ ಮುಚ್ಚುಕೋಟನ್ನು ಧರಿಸಿ, ಕೈಯ್ಯಲ್ಲಿ ಪುಸ್ತಕ ಹಿಡಿದು ಸಹೋದ್ಯೋಗಿಯೊಬ್ಬರೊಡನೆ ನಗುನಗುತ್ತಾ ಬಂದ ಮಟ್ಟಸಾಕೃತಿಯ ವ್ಯಕ್ತಿ ಕೊಠಡಿಯ ಬಾಗಿಲೆಡೆ ನಿಂತು ಅವರತ್ತ ತಲೆಯೊಗೆದು ಒಳಗೆ ಕಾಲಿಟ್ಟಾಗ ತರಗತಿಯ ಗುಸಪಿಸ ನಿಂತು ನಾವೆಲ್ಲಾ ದಢಕ್ಕನೆ ಎದ್ದು ನಿಂತೆವು. ಹಿಂಬದಿಯಲ್ಲಿದ್ದ ನನಗೆ ಒಂದು ಗಳಿಗೆ ಅವರ ಮೂರ್ತಿ ಕಾಣದಾಗಿ, ವೇದಿಕೆಯ ಬಳಿ ಬಂದು ಸ್ವಲ್ಪ ಪ್ರಯತ್ನ ಪೂರ್ವಕವಾಗಿಯೇ ಅದನ್ನು ಹತ್ತಿ ನಿಂತಾಗ ಅವರನ್ನು ಕಣ್ತುಂಬ ನೋಡಿದೆ. ಅವರು ಮೇಲಕ್ಕೂ ಕೆಳಕ್ಕೂ ತಲೆಯೊಲೆದು ನಗುನಗುತ್ತಲೇ "ಕುಳಿತುಕೊಳ್ಳಿ, ಕುಳಿತುಕೊಳ್ಳಿ" ಎಂದು ಹೇಳಿ, "ನನ್ನ ಹೆಸರು ಗೊತ್ತೋ? ನಾನೇ ಪರಮೇಶ್ವರ ಭಟ್ಟ !" ಎಂದು ಮತ್ತೊಮ್ಮೆ ಕೆನ್ನೆ ಗುಳಿ ಬೀಳುವಂತೆ ಬಾಯ್ತುಂಬಾ ನಕ್ಕರು. ನನ್ನ ಕಲ್ಪನೆ ಕುಸಿಯಿತು. ನಾನು ಊಹಿಸಿಕೊಂಡಿದ್ದ ವಯೋವೃದ್ಧರಾದ ಘನಗಂಭೀರ ಶಾಲು ಪಂಡಿತರೆಲ್ಲಿ, ನೋಡಿದ ಕೂಡಲೇ ನಗು ಹರಿಸಿ ಪಾದರಸದಂತೆ ಪುಟಿಯುವ ನಡು ವಯಸ್ಸಿನ ಈ ಸರಳ ಸೌಜನ್ಯದ ಸೂಟುಗವಿಯೆಲ್ಲಿ ! ಪೂರ್ಣ ಬಿಳಿದೂ ಅಲ್ಲದ ಪೂರ್ಣ ಕಪ್ಪೂ ಅಲ್ಲದ ಎಡಕ್ಕೆ ಬೈತಲೆ ತೆಗೆದ ನವಿರುದಲೆ; ಸಾತ್ವಿಕ ತೇಜಸ್ಸು ಮುಕ್ಕಳಿಸುವ ಕೆಂಪನೆಯ ಮುಖ; ಕಲ್ಪನಾಶಕ್ತಿಯ ಶಾಂತಿಯನ್ನು ಬಿಂಬಿಸುವ ನಯನದ್ವಯ; ಮುಖಕ್ಕೊಪ್ಪುವ ಮಾಟವಾದ ಚೂರು ಮೂಗು; ಸ್ಮಿತಾಭರಣಾಲಂಕೃತವಾದ ತುಟಿಗಳು; ಹತ್ತೆಂಟರ ಹರಯದವರನ್ನೂ ಮೀರಿಸುವ ಮಿಂಚಿನ ಲವಲವಿಕೆಯ, ಎತ್ತರವೂ ಅಲ್ಲದ ಕುಳ್ಳೂ ಅಲ್ಲದ ಮಟ್ಟಸಾಕೃತಿ. ನನ್ನ ಕಲ್ಪನೆಯ ಕಟ್ಟಳಿದು ಹೋದುದಕ್ಕೆ ತುಸು ನಾಚಿಕೆಯಾದರೂ ಮುಂದೆ ನಿಂತ ಈ ನಿಲವಿಗೆ ಮನಸ್ಸು ಸಂತಸಗೊಂಡಿತು. ಅನಂತರ ಹಾಜರಿ ಕರೆದರು. ಒಬ್ಬೊಬ್ಬರ ಹೆಸರು ಬಂದಾಗಲು ಕತ್ತೆತ್ತಿ ಕಣ್ಣರಳಿಸಿ ಹುಬ್ಬೇರಿಸಿ 'ನೀವು ಯಾವ ಊರು? ಎಲ್ಲಿಂದ ಬಂದದ್ದು?' ಮುಂತಾಗಿ ವಿಚಾರಿಸಿ ತಲೆಯನ್ನು ಅತ್ತಿತ್ತ ಒಲೆದಾಡಿಸಿ ನಿಸ್ಸಂಕೋಚವಾದ ಮುಗುಳು ನಗೆಯನ್ನು ಮುಖದ ತುಂಬ ಹರಿಸಿ ಮುಂದೆ ಹೋಗುತ್ತಿದ್ದರು. ಆ ಹಾಜರಿ ಕರೆಯುವ ಕ್ರಮವೂ ಕೇವಲ ಯಾಂತ್ರಿಕ ಕರ್ಮವಾಗದೆ ಆಕರ್ಷಕವಾದ ಆತ್ಮೀಯತೆಯ ಅನಾವರಣೋತ್ಸವವಾಗಿತ್ತು. ಮುಂದೆ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಕುರಿತು ಪ್ರಸ್ತಾಪಿಸಿದರು. ಅಸ್ಖಲಿತವಾಗಿ ಅನೂನವಾಗಿ ಸರಳವಾಗಿ ಸಹಜವಾಗಿ ವಿಷಯ ಪರಿಪ್ಲುತವಾಗಿ ಮಧುರವಾಗಿ ಹರಿದ ಆ ವಾಙ್ಮಧು ಧಾರೆಯಲ್ಲಿ ನಾನು ತೊಯ್ದು ಹೋದೆ: ಆ ಕರವಿನ್ಯಾಸ, ತಲೆಯೊಲೆತ, ಕಣ್ಣಿನ ಕುಣಿತ, ಹುಬ್ಬಿನ ಮಣಿತ, ಪದಗಳ ಸುಡಿತ, ಲಯದ ಮಿಡಿತ, ವಿಷಯದ

ಹಿಡಿತ ನನ್ನನ್ನು ನೂತನ ಲೋಕವೊಂದರ ಪ್ರಭಾ ಪರಿವೇಷಕ್ಕೆ ಒಳಗು ಮಾಡಿದವು. ದಂಗು ಬಡಿದವ ನಂತೆ ಕಣ್ಣರಳಿಸಿ ಕುಳಿತಿದ್ದೆ. ಕನ್ನಡವನ್ನು ತೆಗೆದುಕೊಂಡದ್ದು ಸಾರ್ಥಕವಾಯಿತೆಂಬ ಧನ್ಯತಾಭಾವ ಮೈಮನಗಳನ್ನು ವ್ಯಾಪಿಸಿತ್ತು.

**ಒಳನೋಟ: ಬವಣೆಯ ಬದುಕು**

ತಮ್ಮ ಅಸದೃಶ ಜ್ಞಾನಪ್ರಭೆಯಿಂದ ಲೋಕವನ್ನೇ ದಂಗುಬಡಿಸಿದ ಅದ್ವೈತ ಬ್ರಹ್ಮ ಶ್ರೀ ಶಂಕರಾ-ಚಾರ್ಯರು ನಿರ್ಮಿಸಿದ ಶೃಂಗೇರಿಯ ಪಾವನ ಭೂಮಿ ಪ್ರೊ. ಪರಮೇಶ್ವರ ಭಟ್ಟರ ತಂದೆಯೂರು. ಅವರ ಪೂರ್ವಜರು ದಕ್ಷಿಣ ಕನ್ನಡ ಜಿಲ್ಲೆಯವರು. ಕೆಳದಿಯ ಸದಾಶಿವ ನಾಯಕರು ಶೃಂಗೇರಿಯ ವಿದ್ಯಾರಣ್ಯ ಪುರದಲ್ಲಿ ಕಟ್ಟಿಸಿದ ಸದಾಶಿವ ದೇವಾಲಯದ ಅರ್ಚನೆಗಾಗಿ ಅವರು ಅಲ್ಲಿಗೆ ಬಂದರು, ನೆಲೆ ನಿಂತರು. ಅವರ ಮೊದಲಿಗರು ಶ್ರೀ ಲಕ್ಷ್ಮಣ ಭಟ್ಟರು. ಆ ಪೀಳಿಗೆಯ ಸದ್ಗುಣ ಸೌಶೀಲ್ಯ ಪಾಂಡಿತ್ಯ ಪ್ರತಿಭೆಗಳ ಸಾಕಾರ ಮೂರ್ತಿ ಶ್ರೀ ಸದಾಶಿವರಾಯರು, ಶ್ರೀ ಭಟ್ಟರ ಪೂಜ್ಯ ತಂದೆ. ಅವರು ಇಂಗ್ಲಿಷ್ ಕನ್ನಡಗಳನ್ನು ವ್ಯಾಸಂಗಿಸಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಮಾಳೂರಿನಲ್ಲಿ ಸರ್ಕಾರೀ ಶಾಲೆಯ ಶಿಕ್ಷಕ ಯೋಧರಾಗಿ ತಿಂಗಳಿಗೆ ಐದು ರೂಪಾಯಿನ ಸಂಬಳದ ಮೇಲೆ ಕೆಲಸಕ್ಕೆ ಸೇರಿದರು. ಅವರ ಮನೆ ಮನಗಳನ್ನು ತುಂಬಿ ಬಂದರು ಶ್ರೀಮತಿ ಲಕ್ಷ್ಮಮ್ಮನವರು. ಈ ಮಧುರ ಸಂಸಾರದ ಅಕ್ಕರೆಯ ಬಳ್ಳಿಯಲ್ಲಿ ಅರಳಿದ ಹೂಗಳು ಮೂರು: ಮೊದಲನೆಯ ಇಬ್ಬರು ಹೆಣ್ಣು ಮಕ್ಕಳು—ಕೃಷ್ಣವೇಣಿ ಮತ್ತು ತುಂಗಭದ್ರೆ; ಮೂರನೆಯ ಮುದ್ದುಗುವರ ಶ್ರೀ ಪರಮೇಶ್ವರ ಭಟ್ಟರು. ಪ್ರಥಮ ವಿಶ್ವಸಂಗ್ರಾಮದ ವರ್ಷ ಭಟ್ಟರ ಇಹಲೋಕ ಸಂದರ್ಶನ. ಹುಟ್ಟಿದ ವರ್ಷಕ್ಕೇ ತಾಯಿ ತೆರಳಿದರು ಮರಳಿ ಬಾರದ ಲೋಕಕ್ಕೆ. ಪ್ರೀತಿಯ ತಂದೆ ಮಮತೆಯ ತಾಯಿಯೂ ಆಗಿ ಮಾತೃವಾತ್ಸಲ್ಯದಿಂದ ವಂಚಿತರಾದ ಈ ಹತಭಾಗ್ಯ ಮಕ್ಕಳನ್ನು ಲಾಲಿಸಿ ಪಾಲಿಸಿ ವಿದ್ಯಾಬುದ್ಧಿ ಕಲಿಸಿದರು. ತಂದೆ ಸದಾಶಿವರಾಯರು ಅಸಾಧಾರಣ ಪ್ರತಿಭಾವಂತರು. ಸಾವಿರ ಸಾವಿರ ಶಿಷ್ಯರಿಗೆ ಅರಿವನ್ನು ತೋರಿಸಿದವರು, ಅವರ ಇಂದಿನ ಇರುವಿಕೆಗೆ ಓಂಕಾರ ಹಾಡಿದವರು, ಸುತ್ತಣ ಜನರ ಮನಸ್ಸನ್ನು ತಮ್ಮ ಮಾತುಕಥೆ ನಗೆ ನಡೆಗಳಿಂದ ಗೆದ್ದುಕೊಂಡವರು. ಅವರು ಹರಿಕಥೆ, ಸಂಗೀತ, ನಾಟಕ, ಕೋಲಾಟ, ತಾಳಮದ್ದಲೆ, ಬಯಲಾಟ, ಮಣ್ಣು ಮರಗಳಲ್ಲಿ ವಿವಿಧ ಆಟಿಕೆಗಳ ನಿರ್ಮಾಣ—ಹೀಗೆ ಹತ್ತಾರು ಲಲಿತ ಕಲೆಗಳಲ್ಲಿ ಅವರಿಗೆ ಆಸಕ್ತಿ, ಅಭಿರುಚಿ, ಪರಿಣತಿ; ಕಲಾ ಪ್ರಪಂಚದಲ್ಲಿ ತಂದೆಯೇ ಮಗನಿಗೆ ಮೊದಲ ಗುರು.

ಸಿರಿಪ್ರಕೃತಿಯ ಸುಂದರ ಲೀಲಾವಿಲಾಸದ ತವರಾದ ಮಲೆನಾಡಿನ ಚೆಲುವು ಒಲವುಗಳನ್ನು ಬಾಲಕ ಭಟ್ಟರು ಹೃದಯದಲ್ಲಿ ತುಂಬಿಕೊಂಡರು. ಪ್ರಥಮ ಮಧ್ಯಮ ತರಗತಿಯ ಪಾಠಗಳು ಮನೆಯಲ್ಲೇ ನಡೆದವು. ತಂದೆಯ ನೇತೃತ್ವದಲ್ಲಿ ಬಾಲಕೃಷ್ಣನ ವೇಷವನ್ನು ಧರಿಸಿ ಬಯಲಾಟದಲ್ಲಿ ಕುಣಿದರು; ತಂದೆಗೆ ಹಿಗ್ಗಿನ ಸುಗ್ಗಿಯನ್ನೂಡಿದರು. ಹಿರಿಯಕ್ಕ ಕೃಷ್ಣವೇಣಿಯವರು ತಮ್ಮನಿಗೆ ತಾಯಾದರು. ಆದರೆ ವಿಧಿ ಅದಕ್ಕೂ ಕಲ್ಲು ಹಾಕಿತು. ಅನಿರೀಕ್ಷಿತವಾಗಿ ಅವರನ್ನೂ ಆ ಚಿಕ್ಕ ವಯಸ್ಸಿನಲ್ಲೇ ವಿಧಿ ಕೊಂಡೊಯ್ದು ಮತ್ತೊಮ್ಮೆ ಭಟ್ಟರನ್ನು ದುಃಖದ ಮಡುವಿಗೆ ನೂಕಿತು. ಆ ಅಳೆಯಲಾಗದ ಅಳಲನ್ನೂ ಈ ಎಳೆ ವಯಸ್ಸಿನ ಬಾಲಕ ದುಃಖವುಂಡೂ ಸುಖದ ನಗೆ ಸೂಸುತ್ತಿದ್ದ ತಂದೆಯ ತಣ್ಣೆಳಲಾಶ್ರಯದಲ್ಲಿ ಮರೆತ. ಅವರ ಕಣ್ಣಮಣಿಯಾಗಿ ಭವಿಷ್ಯದ ಊರೆಗೋಲಾಗಿ ಓದಿದರು. ಮುಂದೆ ತೀರ್ಥಹಳ್ಳಿಯಲ್ಲಿ ಪ್ರೌಢಶಾಲೆಗೆ ಸೇರಿದರು. ಆ ವೇಳೆಗಾಗಲೇ ತಂದೆಗೆ ತೂದೂರಿಗೆ ವರ್ಗವಾಗಿತ್ತು, ಅರ್ಧ ಶತಮಾನ ತುಂಬಿತ್ತು. ಧರ್ಮಪತ್ನಿಯ ಸಾವು, ಹಿರಿಯ ಮುದ್ದಿನ ಮಗಳ ಸಾವು—ಒಂದಾದ ಮೇಲೊಂದರಂತೆ ಸಿಡಿಲಿನಂತೆರಗಿ ಸದಾಶಿವರಾಯರ ಆರೋಗ್ಯವನ್ನು ಕುಗ್ಗಿಸಿತು; ಚಿಕ್ಕ ಮಕ್ಕಳನ್ನು ಏಕಾಂಗಿಯಾಗಿ, ಅವರಿಗೆ ಯಾವ ನೋವೂ ಕಾಣದಂತೆ, ಕಣ್ಣಲ್ಲಿ ಕಣ್ಣಿಟ್ಟು ಸಲಹಿದ ನಿರಂತರ ದುಡಿಮೆಯ ಆಕ್ರಮಣವನ್ನು ಆ ಸ್ವಾರ್ಥರಹಿತ ಶರೀರ ತಡೆಯದಾಯಿತು; ಬೇನೆ ಬಲಿಯಿತು. ರಜೆ ಪಡೆದು ತೂದೂರು ಬಿಟ್ಟು ಅಣ್ಣ ಮಹಾಬಲ ಭಟ್ಟರಿದ್ದ ಕೆರೆಮನೆಗೆ ಬಂದರು. ಅಲ್ಲಿಂದ ಹವಾ

ಬದಲಾವಣೆಗಾಗಿ ಕುಂದಾಪುರಕ್ಕೆ ಬಂದರು. ಆಗ ಪ್ರಥಮವಾಗಿ ಬಾಲಕನಿಗೆ ಕಡಲ ದರ್ಶನ, ನೀಲ ಜಲ ಮುಗಿಲಿನ ಮೋಹದ ಚೆಲುವಿನ ಆಕರ್ಷಣೆ. ಆ ವೇಳೆಗೆ ಪ್ರೌಢಶಾಲೆಯ ಕೊನೆಯ ಪರೀಕ್ಷೆಯಲ್ಲಿ ಭಟ್ಟರಿಗೆ ಅರೆಬರೆ ತೇರ್ಗಡೆಯಾಯಿತು. ಮಗನ ಅಧ್ಯಯನಾಕಾಂಕ್ಷೆಯಿಂದಲೇ ಜೀವಿಸಿದ್ದ ತಂದೆ, ತಮ್ಮ ಕನಸೊಡೆದು ಬಟ್ಟೆಗೆ ಚೂರಾದದ್ದನ್ನು ಕಂಡು, ತುಂಬ ನೊಂದರು. ಆ ವೇಳೆಗೆ ಶ್ರೀ ರಾಯರ ಸ್ನೇಹಿತರೊಬ್ಬರು ಬಂದು ಭಟ್ಟರನ್ನು ಓದಿಸುವ ಭಾರವನ್ನು ತಾವು ಹೊತ್ತು ಬೆಂಗಳೂರಿಗೆ ಕರೆದೊಯ್ದರು. ಕೋಟೆಯ ಪ್ರೌಢಶಾಲೆ ಈ ದುರ್ದೈವಿ ಬಾಲಕನನ್ನು ಸ್ವಾಗತಿಸಿತು.

ಇತ್ತ ತಂದೆಯ ವ್ಯಾಧಿ ಉಲ್ಬಣಿಸಿತು. ರಜದ ಮುಂಜೂರಾತಿ ತುಂಬ ತಡವಾಯಿತು. ಸಂಬಳ ಬರದೆ ಆರು ತಿಂಗಳಾಯಿತು. ಜೀವನದುದ್ದಕ್ಕೂ ಅಭಿಮಾನಶಾಲಿಯಾಗಿ ಇತರರಿಗೆ ಆನಂದಪ್ರದ ಮಾರ್ಗದರ್ಶಕರಾಗಿ ಬಾಳಿದ್ದ ತಂದೆ ಕಂಗಾಲಾದರು, ಕಡು ಬಸವಳಿದರು, ಕಣ್ಣೀರಿಟ್ಟರು. ಮಗನಿಗೆ ಇಂತಹ ನಿಷ್ಕರುಣ ತಾಪೇದಾರಿಯ ಕೆಲಸ ಬೇಡವೆಂದು ಭಗವಂತನಲ್ಲಿ ಮೊರೆಯಿಟ್ಟರು. ಕೈಯಲ್ಲಿ ಹಣವಿಲ್ಲ, ಮೈಯ್ಯಲ್ಲಿ ಗುಣವಿಲ್ಲ, ಮನದಲ್ಲಿ ನೆಮ್ಮದಿಯಿಲ್ಲ. ಅವರ ನಿವೃತ್ತಿಯ ಇತ್ಯರ್ಥ ಸರಕಾರದಿಂದ ಬರುವ ಮುಂಚೆಯೇ, ಈ ಲೋಕದಿಂದಲೇ ಕಡ್ಡಾಯ ನಿವೃತ್ತಿಗೊಳಿಸಿದ ಮೃತ್ಯುದೇವ. ಹುಟ್ಟಿದ ಶೃಂಗೇರಿಯ ಪಾವನ ನೆಲದಲ್ಲೇ ಪರಲೋಕ ಪ್ರಯಾಣ. ಮಗನು ತೇರ್ಗಡೆಯಾದ ಸಂತಸ ವಾರ್ತೆಯನ್ನು ಕೇಳಲು ತಂದೆ ಇಲ್ಲವಾದರು.

ಪರಂಪರೆಯಾಗಿ ತಂದೆಯಿಂದ ಬಂದ ಪ್ರತಿಭೆ ಕಲಾಭಿರುಚಿ ಪ್ರೌಢಶಾಲೆಯಲ್ಲಿದ್ದಾಗಲೇ ಭಟ್ಟರಲ್ಲಿ ಮೊಳಕೆದೋರಲಾರಂಭಿಸಿತ್ತು. ತೀರ್ಥಹಳ್ಳಿಯ ಸುತ್ತಮುತ್ತಿನ ಪ್ರಕೃತಿಯ ಮನಮೋಹಕ ವಾತಾವರಣ, ಕನ್ನಡ ಗುರುಗಳಾದ ಶ್ರೀ ಕ. ನರಸಿಂಹಶಾಸ್ತ್ರಿಗಳವರ ರಸಭರಿತವಾದ ಸ್ಫೂರ್ತಿಯುತವಾದ ಆಕರ್ಷಕ ಅಧ್ಯಾಪನ ಬಾಲಕನ ಮನಸ್ಸಿನಾಳದಲ್ಲಿ ಹುದುಗಿದ್ದ ಸೃಜನ ಶಕ್ತಿಯನ್ನು ಮೆಲ್ಲಮೆಲ್ಲನೆ ಎಚ್ಚರಿಸಿದವು. ಅವರು ಕನ್ನಡದ ಶ್ರೇಷ್ಠ ಕವಿಗಳ ಕವಿತೆಗಳನ್ನು ತಂದು ತರಗತಿಯಲ್ಲಿ ಓದಿ ಹೇಳಿ ಅವುಗಳ ಸ್ವಾರಸ್ಯವನ್ನು ಮನಮುಟ್ಟುವಂತೆ ವರ್ಣಿಸುತ್ತಿದ್ದರು. ತಮ್ಮ ಜೊತೆಯಲ್ಲೇ ಅಧ್ಯಯನ ಮಾಡಿದ ಶ್ರೀ ಕುವೆಂಪು ಅವರ ನಿದರ್ಶನವನ್ನಿತ್ತು ಅವರಂತೆ ಸತತವಾಗಿ ಶ್ರದ್ಧೆಯಿಂದ ಸಾಧನೆ ಮಾಡಿದರೆ ಒಳ್ಳೆಯ ಬರಹಗಾರರಾಗಿ ಕೀರ್ತಿವಂತರಾಗಬಹುದೆಂದು ಮತ್ತೆ ಮತ್ತೆ ಒತ್ತಿ ಒತ್ತಿ ಹೇಳಿ ವಿದ್ಯಾರ್ಥಿಗಳಲ್ಲಿ ಆಸಕ್ತಿಯನ್ನು ಕಾರ್ಯಶಕ್ತಿಯನ್ನು ಕೆರಳಿಸುತ್ತಿದ್ದರು. ಆ ಸ್ಫೂರ್ತಿ ಒತ್ತಾಸೆಗಳಿಂದ ಈ ಬಾಲಕ ಕೆಲವು ಕವಿತೆಗಳನ್ನು ಬರೆದು ಓರಗೆಯವರೊಡನೆ ಓದುತ್ತಿದ್ದಾಗ, ಒಮ್ಮೆ, ಹಿಂದಿನಿಂದ ಅದನ್ನು ಕೇಳಿಸಿಕೊಂಡ ಶ್ರೀ ಶಾಸ್ತ್ರಿಗಳು ಆ ಕವಿತೆಯನ್ನು ತೆಗೆದುಕೊಂಡು ಓದಿ ಮೆಚ್ಚಿ ತಿದ್ದಿ 'ಚೆನ್ನಾಗಿ ಬರೆಯುತ್ತೀಯೆ, ಭೇಷ್ ಬರೆ, ಬರೆ' ಎಂದು ಬೆನ್ನು ತಟ್ಟಿದರು. ಇವರು ಬರೆದ ಪ್ರಬಂಧವೊಂದನ್ನು ತರಗತಿಯಲ್ಲಿ ಓದಿ ಹೇಳಿ 'ಈತ ತುಂಬಾ ಚೆನ್ನಾಗಿ ಬರೆಯುತ್ತಾನೆ' ಎಂದಾಗ ಆ ಹೊಗಳಿಕೆಯ ಮಾತು ಕೇಳಿ ಮೈಯುಬ್ಬಿತ್ತು. ಎಳೆತನದ ಈ ಪ್ರೋತ್ಸಾಹದ ದೋಹದ ಕ್ರಿಯೆ ಬಾಲಕನ ಮನಸ್ಸಿನಲ್ಲಿ ಒಂದು ವಿಧವಾದ ಆತ್ಮವಿಶ್ವಾಸವನ್ನೂ ಇನ್ನೂ ಚೆನ್ನಾಗಿ ಓದಿ ಇನ್ನೂ ಚೆನ್ನಾಗಿ ಬರೆಯಬೇಕೆಂಬ ಉತ್ಸಾಹಾಸಕ್ತಿಗಳನ್ನೂ ಮೂಡಿಸಿ ಆ ಪ್ರತಿಭೆಯ ಮೊಳಕೆ ಮೇಲೇಳುವಂತೆ ಮಾಡಿತು: ಇದು ಅವರ ಬಾಳಿಗೆ ಸಂಜೀವಿನಿಯಾಯಿತು.

ತಂದೆ ತೀರಿಕೊಂಡ ನಂತರ ಸುತ್ತಮುತ್ತಣ ಆಸರೆಯೆಲ್ಲವೂ ಕಡಿದಂತಾಗಿ ವಿಶಾಲ ಜಗತ್ತಿನ ಬಟ್ಟ ಬಯಲಿನಲ್ಲಿ ಏಕಾಂಗಿಯಾಗಿ ಬಿಟ್ಟಂತಾಗಿ ತಳಮಳಿಸುತ್ತಿದ್ದಾಗ ದೊಡ್ಡಪ್ಪ ಚಿಕ್ಕಪ್ಪಂದಿರು ಆಲೋಚಿಸಿ ಭಟ್ಟರನ್ನು ಬೆಂಗಳೂರಿನ ಇಂಟರ್ ಮೀಡಿಯಟ್ ಕಾಲೇಜಿಗೆ ಸೇರಿಸಿದರು. ತಂದೆಯನ್ನು ನುಂಗಿಕೊಂಡ ತಬ್ಬಲಿ ಕಂದ ಮಹಾನಗರದ ಗಂಧಗಾಳಿಯನ್ನು ಕುಡಿದು, ಸಂಸ್ಕಾರಜನಿತವಾದ ಸಾಹಿತ್ಯಾಭಿರುಚಿಯನ್ನು ವೃದ್ಧಿಸಿಕೊಂಡು ಆತ್ಮತುಷ್ಟಿಯನ್ನು ತಂದುಕೊಂಡು ತನ್ನಳಲನ್ನು ಮರೆಯಲೆತ್ನಿಸಿದ. ಅವರ ಪುಣ್ಯಕ್ಕೆ ಕೋಡು ಮೂಡಿದಂತೆ ಕನ್ನಡದ ಪ್ರಸಿದ್ಧ ವಿದ್ವಾಂಸರಲ್ಲಿ ವಿಮರ್ಶಕರಲ್ಲಿ ಒಬ್ಬರಾದ ವಿ. ಸೀ. ಯವರು ಗುರುಗಳಾಗಿ ದೊರೆತರು. ಅವರ ಪಾಠ ಎಂತಹ ಕನ್ನಡ ವಿರೋಧಿಗೂ ಕನ್ನಡದೊಲವು ಮೂಡುವಂತೆ ಮಾಡುವಷ್ಟು ಪ್ರಭಾವಕಾರಿಯಾಗಿತ್ತೆಂದ ಮೇಲೆ ಈ ಬಾಲಕವಿಯನ್ನು

ಪ್ರೋತ್ಸಾಹಿಸದಿರಲಿಲ್ಲ. ವಿ. ಸೀ. ಯವರು ರಸಜ್ಞರು ಮಾತ್ರವೇ ಅಲ್ಲದೆ ಬೆಳೆಯುವ ಚೇತನಗಳನ್ನು ಗುರುತಿಸಿ ಬೆಳಕಿಗೆ ತರುವ ಪ್ರೋತ್ಸಾಹಿಸುವ ವಿಶಾಲ ಹೃದಯದ ಶಿಷ್ಯವತ್ಸಲರೂ ಆಗಿರುವುದರಿಂದ ಇವರ ಸಾಹಿತ್ಯ ಸೃಜನೆಗೆ ಅಪಾರವಾದ ಪ್ರೋತ್ಸಾಹ ನೀಡಿದರು, ಆ ಮೂಲಕ ಕನ್ನಡದ ದೀಕ್ಷೆಯನ್ನಿತ್ತರು. ಸಾಂಪ್ರದಾಯಿಕ ಧಾಟಿಯಲ್ಲಿ ಬರೆದ ಆಗಿನ ಅನೇಕ ಕವಿತೆಗಳು ಸರಸ್ವತಿ, ಸುಬೋಧ-ಮುಂತಾದ ಮಾಸಿಕಗಳಲ್ಲಿ ಅಚ್ಚಾಗಿ ಕವಿಯ ಹೆಸರಿಗೆ ಉಸಿರು ತುಂಬಿದವು. ಇವರ ಮೇಲೆ ಆ ಕಾಲದಲ್ಲಿ ಪ್ರಭಾವ ಬೀರಿ ಇವರು ಭದ್ರವಾಗಿ ಕನ್ನಡಕ್ಕಂಟಿಕೊಳ್ಳುವ ಹಾಗೆ ಮಾಡಿದ ಇನ್ನೊಬ್ಬರು ಶ್ರೀ ಕೆ. ವೆಂಕಟ ರಾಮಪ್ಪನವರು. ಕನ್ನಡದ ಪ್ರಸಿದ್ಧ ವಾಗ್ಮಿಗಳಲ್ಲಿ ಹಾಸ್ಯಕೋವಿದರಲ್ಲಿ ಅವರು ಒಬ್ಬರು. ಅವರ ನಗೆ ಮಾತು, ಸಾಮಯಿಕವಾದ ಚಾತುರ್ಯ ಅಮೂಲ್ಯವಾದ ಸಲಹೆಗಳು ಇವರ ಅಂತಸ್ಸತ್ತ್ವವನ್ನು ವೃದ್ಧಿಸಿದವು. ಸತತವಾದ ಕಾವ್ಯಾಭ್ಯಾಸ, ಕವಿತಾಸೃಷ್ಟಿ ಮತ್ತು ಗುರುಹಿರಿಯರ ಸಮಯೋಚಿತ ಪ್ರೋತ್ಸಾಹಗಳಿಂದ ಇಂಟರಿನ ಬಾಗಿಲನ್ನು ನಿರಾಯಾಸವಾಗಿ ದಾಟಿ ಬಂದರು. ಈ ವೇಳೆಗೆ ಕನ್ನಡವೇ ತಮ್ಮ ಮೂಲಶಕ್ತಿ, ರಕ್ಷಾಶಕ್ತಿ, ಬಾಳನ್ನು ಬೆಳಗಿಸುವ ಶಕ್ತಿಯೆಂಬುದು ಅರಿವಾಗಿತ್ತು. ಮಲೆನಾಡಿನ ಈ ಕಿಶೋರ ಪ್ರತಿಭೆಯನ್ನು ಮಹಾರಾಜಾ ಕಾಲೇಜು ತೆರೆದ ತೋಳುಗಳಿಂದ ಬಳಸಿಕೊಂಡಿತು.

ಕನ್ನಡ ಆನರ್ಸ್ ತರಗತಿಗೆ ಸೇರಿದರು. ಅಲ್ಲಿ ಶ್ರೀ ಎಚ್. ಎಂ. ಶಂಕರನಾರಾಯಣ ರಾವ್ ಮತ್ತು ಜಿ. ವೆಂಕಟಸುಬ್ಬಯ್ಯನವರಂಥ ಸನ್ಮಿತ್ರರು ದೊರೆತು ಜೀವನದುಃಖಿಯಾದ ಈ ಕವಿಯನ್ನು ಸಂತೈಸಿ ತಮ್ಮ ಸ್ನೇಹದ ಸವಿಯುಣಿಸಿದರು. ಅನಾಥ ಪ್ರಜ್ಞೆ ಮತ್ತೆ ಮತ್ತೆ ಇಣಿಕಿ ಹಾಕುತ್ತಿದ್ದರೂ ಅದನ್ನು ಹಿಂತಳ್ಳಿ ಓದಿನಲ್ಲಿ ಬರೆಹದಲ್ಲಿ ಚರ್ಚೆಯಲ್ಲಿ ಮಹಾಮಹೋಪಾಧ್ಯಾಯರುಗಳ ಜ್ಞಾನಾಮೃತ ಸಲಿಲದ ಮೀಹದಲ್ಲಿ ಮಗ್ನರಾದರು. ಹೊಟ್ಟೆಬಟ್ಟೆಯ ಬವಣೆ ಬೆಟ್ಟವಾಗಿದ್ದರೂ ವಾರಾನ್ನದ ಏರ್ಪಾಟು ಮಾಡಿಕೊಂಡು ವಿದ್ಯಾರ್ಥಿ ವೇತನದ ನೆರವೊದಗಿಸಿಕೊಂಡು ತಮ್ಮ ಪ್ರತಿಭೆಯ ಪ್ರಭೆಯನ್ನುಜ್ವಲ ಗೊಳಿಸುವ ಕಾಯಕದಲ್ಲಿ ನಿರಂತರವೂ ನಿರತರಾದರು. ಕಸ್ತೂರಿಯವರಂಥ ತೀಕ್ಷ್ಣಮತಿಗಳೂ ಸಹೃದಯರೂ ಆದ ಶಿಕ್ಷಕವರೇಣ್ಯರು ಇದಕ್ಕೆ ಬೆಂಬಲವಾದರು, ನೋವನ್ನು ಆರಿಸಿ ನಲಿವನ್ನು ಏರಿಸಿ ದರು. ಒಬ್ಬರಿಗಿಂತ ಒಬ್ಬರು ಮಿಗಿಲಾದ ಗುರುವಿಭೂತಿಗಳಿದ್ದ ಸ್ವರ್ಣಯುಗ ಅದು. ನಯ, ವಿನಯ, ಮೆಲ್ಪು ಒಳ್ಪು ವಾತ್ಸಲ್ಯ ವಿದ್ವತ್ತು ಸೌಶೀಲ್ಯ ಸೌಜನ್ಯಗಳ ಸಾಕಾರವಾಗಿದ್ದ ಪೂಜ್ಯ ವೆಂಕಣ್ಣಯ್ಯ ನವರು ಈ ಭಟ್ಟರ ಪ್ರತಿಭೆಯನ್ನು ಗುರುತಿಸಿ ತಮಗೇ ವಿಶಿಷ್ಟವಾದ ಮಿದುವಾದ ನಡೆ ನುಡಿ ನಗೆ ಗಳಿಂದ ಇವರನ್ನು ತಿದ್ದಿ ತೀಡಿ ತಂದೆಯಂತೆ ಮೇಲೆ ತಂದರು. ಒಮ್ಮೆ ತಮ್ಮ ಕವಿತೆಯೊಂದಕ್ಕೆ ಬಹುಮಾನ ಬರಲಿಲ್ಲವೆಂಬ ಬಾಲಸಹಜವಾದ ಅಸಮಾಧಾನದಿಂದ ಇವರು ಚರ್ಚಾಗೋಷ್ಠಿಗಳಿಗೆ ಹಾಜರಾಗದಿದ್ದಾಗ ವಿದ್ಯಾರ್ಥಿಯೊಬ್ಬರಿಂದ ಕರೆಸಿ 'ಇಷ್ಟಕ್ಕೆಲ್ಲಾ ಬೇಸರಪಡುತ್ತಾರೆಯೇ? ಅವರು ಕೊಡದಿದ್ದರೆ ಚಿಂತೆಯಿಲ್ಲ, ನಾನು ಕೊಡುತ್ತೇನೆ' ಎಂದು ಬೆನ್ನು ಸವರಿ ಸಮಾಧಾನಪಡಿಸಿ ತಮ್ಮ–ಆಗ ತಾನೇ ಪ್ರಕಟವಾಗಿದ್ದ–'ಬಸವರಾಜ ದೇವರ ರಗಳೆ'ಯ ಪ್ರತಿಯೊಂದನ್ನು ತಮ್ಮ ಹಸ್ತಾಕ್ಷರದೊಡನೆ ನೀಡಿ ಸಂತೈಸಿದರಂತೆ! ಇಂತಹ ಕರುಣಾಳು ದೇವತಾ ಮಾನವರು, ತೀ. ನಂ. ಶ್ರೀ., ಡಿ. ಎಲ್. ಎನ್. ಅವರಂಥ ವಿದ್ವನ್ಮಣಿಗಳು ಇವರ ಬಗೆಯನ್ನು ವಿಸ್ತರಿಸಿದರು, ನಗೆಯನ್ನು ಎತ್ತರಿಸಿದರು. ರಸ ಋಷಿ ಕುವೆಂಪು ಅವರಿಂದ ತಮಗೆ ದೊರೆತ ಅಪರಿಮಿತ ಪ್ರೋತ್ಸಾಹವನ್ನು ತುಂಬಾ ಅಭಿಮಾನ ಗೌರವಗಳಿಂದ ಆಗಾಗ್ಗೆ ಭಟ್ಟರು ಸ್ಮರಿಸುತ್ತಾರೆ. ಅವರ ಕೃತಿಗಳನ್ನು ಓದಿ ಮೆಚ್ಚುನುಡಿಯಾಡಿ ತಿದ್ದಿ ಸಂತೋಷದಿಂದ ಸಲಹೆ ನೀಡುತ್ತಿದ್ದ ಅವರ ಔದಾರ್ಯವನ್ನು ಕೊಂಡಾಡುತ್ತಾರೆ. 'ರಾಗಿಣಿ'ಗೆ ಪದ್ಯ ರೂಪದ ಮುನ್ನುಡಿಯ ತಿಲಕವಿತ್ತು ಅಂದಿಗಾಗಲೇ ಪ್ರಸಿದ್ಧರಾಗಿದ್ದ ಆ ಹಿರಿಯ ಕವಿ ಹರಸಿದ್ದು ತಮ್ಮ ಕಾವ್ಯಜೀವನಕ್ಕೆ ಭದ್ರವಾದ ಭರವಸೆಯ ಬುನಾದಿ ಹಾಕಿದಂತಾಯಿತು. 'ಮಾಚಯ್ಯ'ನ ಅನುವಾದದ ಕಾಲದಲ್ಲಿ ಅವರು ನೀಡಿದ ನೆರವು ಮರೆಯುವಂಥದಲ್ಲ. ಮಹಾಕವಿ ಕಾಳಿದಾಸನ ಶ್ರೇಷ್ಠ ಕೃತಿರತ್ನಗಳಲ್ಲೊಂದಾದ 'ಕುಮಾರ ಸಂಭವ'ವನ್ನು ಕನ್ನಡಿಸುವಾಗ ಮೊದಲಿನ ಹಲವು ಸರ್ಗಗಳ ಪದ್ಯ ಪದ್ಯವನ್ನೂ–ಅವರ ಅಪಾರವಾದ ಕಾರ್ಯಗೌರವದ ನಡುವೆ–ಓದಿ ಸೂಕ್ತ ಸಲಹೆಗಳನ್ನು ನೀಡಿದ ರಂತೆ. ಐದನೆಯ ಸರ್ಗದ ಪ್ರಥಮ ಪದ್ಯದ ಅನುವಾದವನ್ನು ಅವರೇ ಮಾಡಿ ಅದೇ ಧಾಟಿಯಲ್ಲಿ

ಉಳಿದುದನ್ನು ಮಾಡಬೇಕೆಂದು ನಿರ್ದೇಶಿಸುತ್ತಾಗ, ಅದು ತಮಗೆ ಸಾಧ್ಯವಾಗದೆಂದು ಇವರು ಹೇಳಿದಾಗ, ಮುಗುಳು ನಗುತ್ತಾ 'ವೇಗವಾಗಿ ಧಾವಿಸುತ್ತಿರುವ ಚತುರಾಶ್ವದ ಬಗ್ಗೆ–ಇಳಿಯಲಾರದೆ ಸವಾರಿ ಮಾಡಲಾಗದೆ ನಿಲ್ಲಿಸಲಾರದೆ–ಬಲವಾಗಿ ಅಂಟಿಕೊಂಡು ಮುಂಗಿರುವ ಸವಾರನ ಹಾಗೆ ನೀವು ಕಾಳಿದಾಸನ ಶೈಲಿಗೆ ಬಲವಾಗಿ ಅಂಟಿಕೊಂಡಿದ್ದೀರಿ' ಎಂದು ಹೇಳಿದ್ದನ್ನು ಇಂದೂ ಕೃತಜ್ಞತಾ ಪೂರ್ವಕವಾಗಿ ಸ್ಮರಿಸಿ ಭಟ್ಟರು ಮೆಲುಕು ಹಾಕುತ್ತಾರೆ. ಅಂತೆಯೇ ಮಹಾವಿದ್ವಾಂಸರಾದ ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳವರ ಸಕಾಲಿಕವಾದ ಸಲಹೆ ಉತ್ತೇಜನಗಳೂ ಇವರ ಸಾಹಿತ್ಯಶಕ್ತಿಯ ಸಂವರ್ಧನೆಗೆ ವಿಶೇಷವಾಗಿ ನೆರವಾದವು.

ಹೀಗೆ ವೈಯಕ್ತಿಕ ಜೀವನದ ಕೊಂಬೆರೆಂಬೆಗಳು ಕತ್ತರಿಸಿ ಹೋಗಿದ್ದರೂ ಕಾಲೇಜಿನ ಜೀವನ ಬಹುಮಟ್ಟಿಗೆ ಗೆಲವು ನಲಿವುಗಳಿಂದ ತುಂಬಿತ್ತು. ನಾಟಕವಾಡಿದರು. ಕಾವ್ಯವಾಚನ ಮಾಡಿದರು. ಭಾಷಣ ಮಾಡಿದರು, ಚರ್ಚಾಕೂಟದಲ್ಲಿ ಸಕ್ರಿಯವಾಗಿ ಭಾಗವಹಿಸಿ ವಚಶ್ಶಕ್ತಿಯನ್ನು ವರ್ಧಿಸಿಕೊಂಡರು. ಕನ್ನಡ ನಾಡಿನ ಗತವೈಭವವನ್ನು ಕಂಡು ಕಣ್ಣೀರಿಟ್ಟು ಅನುಭವ ವಲಯವನ್ನು ವಿಸ್ತರಿಸಿಕೊಂಡರು. ಇದೆಲ್ಲಾ ಅವರ ಕವಿತೆಗಳಲ್ಲಿ ಹೊಸ ಬಣ್ಣ ಬೆರಗು ಬೆಡಗುಗಳಾಗಿ ಅಭಿವ್ಯಕ್ತಗೊಂಡಿತು. ಕನ್ನಡವನ್ನು ಓದುವುದೇ ಹೀನಾಯ ಎಂಬ ಮನೋಭಾವವಿದ್ದ ಆ ದಿನಗಳಲ್ಲಿ ಭಟ್ಟರು ಧೈರ್ಯದಿಂದ ಬಿ. ಎ. ತರಗತಿಯಲ್ಲಿ ಒಬ್ಬರೇ ಕುಳಿತು ಅಧ್ಯಯನ ಮಾಡಿದರು, ಗುರುಗಳಿಗೆ ತಮ್ಮ ಬುದ್ಧಿ ಪ್ರತಿಭೆಗಳಿಂದ ಅಚ್ಚುಮೆಚ್ಚಾದರು, ಪ್ರಪ್ರಥಮ ತರಗತಿಯಲ್ಲಿ ಉತ್ತೀರ್ಣರಾದರು. ಆ ವೇಳೆಗೆ ತಮ್ಮನ್ನು ಅಕ್ಕರೆ ಅಭಿಮಾನಗಳಿಂದ ಕಾಣುತ್ತಿದ್ದ ಕಾಯುತ್ತಿದ್ದ ದೊಡ್ಡಪ್ಪ ಪರಂಧಾಮವೈದಿದರು. ಸಂತೋಷದ ಕೊಡ ತುಂಬುವುದರಲ್ಲಿಯೇ ಸಂಕಟದ ಏಟಕ್ಕೆ ಹೊಯ್ದಾಡಿ ಚೆಲ್ಲಿ ಹೋಗುತ್ತಿತ್ತು. ಅಂದು ಎಸ್. ಎಸ್. ಎಲ್. ಸಿ. ತೇರ್ಗಡೆಯಾದ ಸವಿವಾರ್ತೆಯನ್ನು ಕೇಳಿ ಆನಂದಿಸಲು ತಂದೆಯಿರಲಿಲ್ಲ; ಇಂದು ಓದು ಮುಗಿದು ವಿದ್ವಾಂಸನಾಗಿ ಸ್ವತಂತ್ರನಾಗಿ ಹೊರಬಿದ್ದ ಮಗನನ್ನು ನೋಡಿ ಆನಂದಿಸಲು ದೊಡ್ಡಪ್ಪನಿಲ್ಲ. ಹಿಂದೆ ತಮ್ಮ 'ಮಾಚಯ್ಯ' ಅನುವಾದಿತ ಕವನಕ್ಕೆ 'ಶ್ರೀ'ಯವರ ಸ್ವರ್ಣಪದಕದ ಬಹುಮಾನ ಬಂದಾಗ ತಮ್ಮ ತಲೆಗೆ ಕೋಡು ಮೂಡಿದವೆಂಬಷ್ಟು ಅಧಿಕಾಧಿಕ ಸಂತೋಷದಿಂದ ಇದೇ ದೊಡ್ಡಪ್ಪ ಆ ಪದಕವನ್ನು ಮನೆಮನೆಗೆ ತೆಗೆದುಕೊಂಡು ಹೋಗಿ ತೋರಿಸಿ ತಮ್ಮ ಮಗನ ಬುದ್ಧಿಮತ್ತೆಯ ಮೆರವಣಿಗೆ ಮಾಡಿದ್ದುಂಟು. ಹೆಚ್ಚುಕಡಮೆ ಅದೇ ಕಾಲದಲ್ಲಿ ಕಿರಿಯಕ್ಕ ತುಂಗಮ್ಮನವರ ಪತಿ ಪರಲೋಕಗತರಾದ ದಾರುಣ ವಾರ್ತೆ ಬಂದು ಬಡಿಯಿತು–ತಮ್ಮ ಓದು ಮುಗಿವುದನ್ನು ಕಾದಿದ್ದ ದುಃಖದ ದಂಡು ಮತ್ತೆ ಮೇಲೆರಗಿ ಆಕ್ರಮಿಸಿತೆಂಬಂತೆ ಆ ಭಾವಂದಿರೊಡನೆ ಆಡಿದ ಹಾಡಿದ ನೋಡಿದ ನಲಿದ ದಿನಗಳು ಕಣ್ಣಮುಂದೆ ನಿಂತು ಚುಚ್ಚಿ ಅಳಲಿಸಲ್ಲದ್ದಿದವು. ಆ ದುರ್ಭರ ದುಃಖವನ್ನು ನುಂಗಿ ಕೆಲಕಾಲ ಡಾ. ನರಸಿಂಹಯ್ಯನವರ ಮಾರ್ಗದರ್ಶನದಲ್ಲಿ ಕನ್ನಡ ಭಾಷೆಯ ಬಗ್ಗೆ ಸಂಶೋಧನೆ ನಡೆಸಿದರು. ಕೆಲಸ ಫಲಕಾರಿಯಾಗಲಿಲ್ಲ, ತೃಪ್ತಿ ತರಲಿಲ್ಲ. ಮತ್ತೆ ದುಃಖದ ದೈತ್ಯ ಕುಣಿದ. ಕವಿಗಳ ಸಾಹಿತಿಗಳ ವಿದ್ವಾಂಸರ ವಿದ್ಯಾರ್ಥಿಗಳ ಬಂಧುವೂ ತಂದೆಯೂ ಮಾರ್ಗದರ್ಶಿಯೂ ಆಗಿದ್ದ ಪೂಜ್ಯ ವೆಂಕಣ್ಣಯ್ಯನವರು ಅಸ್ತಂಗತರಾದರು. ಕೆಲಕಾಲ ಕತ್ತಲು ಮತ್ತೆ ಬೆಳಕು. ತಮ್ಮ ಜೀವನದಲ್ಲಿ ಮೊತ್ತಮೊದಲನೆಯ ಬಾರಿಗೆ ಸ್ವತಂತ್ರ ಸಂಪಾದನೆ. ಕಾಲೇಜಿನಲ್ಲಿ ಕನ್ನಡ ಪಂಡಿತನಾಗಿ ತಿಂಗಳಿಗೆ ನಲವತ್ತು ರೂಪಾಯಿ ಸಂಬಳ.

ಶ್ರೀಮತಿ ರಾಜಲಕ್ಷ್ಮಿಯವರು ಮಡದಿಯಾಗಿ ಈ ನೋವುಂಡ ಜೀವಕ್ಕೆ ಆಸರೆಯಾಗಿ ಆಧಾರವಾಗಿ ಸ್ಫೂರ್ತಿಯ ಮೂಲವಾಗಿ ಸ್ನೇಹದ ಸೇತುವಾಗಿ ಹೃದಯದುಂಬಿದರು. ಖ್ಯಾತ ಎಚ್. ಕೆ. ರಂಗನಾಥ್ ಅವರ ಸೋದರಿಯವರು. ಮದುವೆಯಾಗಿ ಸಂಸಾರದ ಮಧುಪಥದಲ್ಲಿ ಕಾಲಿರಿಸುತ್ತಿದ್ದಂತೆಯೇ ಎರಡನೆ ವಿಶ್ವಸಂಗ್ರಾಮ ಸಿಡಿದೆದ್ದಿತು. ಆಗ ತುಮಕೂರಿಗೆ ವರ್ಗ. ಹೊಸ ಊರು, ಹೊಸ ಮನೆ, ಹೊಸ ಮಡದಿ, ಹೊಸ ಜೀವನ. ನಲ್ಮೆಯ ನೆಲಸು; ಕವಿತೆಯ ಹುಲುಸು. ಆಗಿನ ಒಂದು ಘಟನೆ ಭಟ್ಟರ ಬಾಳಿನ ಒಂದು ಅವಿಸ್ಮರಣೀಯ ಪವಾಡ. ಸ್ವಾತಂತ್ರ್ಯ ಚಳುವಳಿಯ ಕಾಲ. ತರಗತಿಯಲ್ಲಿ ಕನ್ನಡದ ಪಾಠ. ಎಂದಿನಂತೆ ಮೈ ನವಿರೇಳಿಸುವ ಹಾಸ್ಯದ ಊಟ ವಿದ್ಯಾರ್ಥಿಗಳಿಗೆ. ಕೊಠಡಿಯಲ್ಲಿ

ಕೈಚಾಚಿಬೊಂದು ಸಿಡಿಯಿತು. ಕೂದಲೆಳೆಯಷ್ಟರಲ್ಲಿ ಮೃತ್ಯು ಪಕ್ಕಕ್ಕೆ ಸರಿದುಹೋದ; ಈ ಅಸಾಧಾರಣ ಪ್ರತಿಭಾಚೇತನವನ್ನು ಕನ್ನಡಕ್ಕೆ ಮರುಗಾಣಿಕೆ ಕೊಟ್ಟು ಹೋದ. ಇದಕ್ಕೆ ಭಟ್ಟರ ಅಂಬೋಣ: 'ನನ್ನ ನಗೆ ಮಾತಿಗೆ ಮರುಳಾಗಿ ಮೃತ್ಯುವು ಕೂಡ ಮೈಮರೆಯಿತೊ ಹೇಗೆ'. ತುಮಕೂರಿನಿಂದ ಶಿವ ಮೊಗ್ಗೆಗೆ, ತೌರೂರಿನ ನೆಳೆಗೆ. ಪ್ರೇಮವಲ್ಲರಿಯಲ್ಲಿ ಪ್ರಥಮ ಪುಷ್ಪ: ನಾಗರತ್ನ. ಮನೆ ಮನಸ್ಸು ಹೊಸ ಜೀವದ ಆಗಮನದಿಂದ ಸಮೃದ್ಧವಾಯಿತು. ಮತ್ತೆ ಮೂರು ವರ್ಷಕ್ಕೆ ಮಗ ರಾಮಚಂದ್ರನ ಅವತಾರ. ತಂದೆತಾಯಿಗಳಿಗೆ ಹರ್ಷವರ್ಷ. ಸಹೃದಯೀ ಸ್ನೇಹಿತರು ಸಲ್ಲಾಪಕ್ಕೆ; ಅಭಿಮಾನಶಾಲೀ ಶ್ರೋತೃವೃಂದ ಭಾಷಣಕ್ಕೆ; ಓಲೈಸುವ ಶಿಷ್ಯ ಸಮುದಾಯ ಪಾಠ ಪ್ರವಚನಕ್ಕೆ. ಬದುಕು ನಂದನದ ತೋಟವೆನಿಸಿತ್ತು; ಅಮೃತದ ಊಟವೆನಿಸಿತ್ತು. ಆದರೆ? . . . ಕೊರೆದು ಹಾಕುತ್ತಿದ್ದ ದುಃಖೋರಗ ಹೆಡೆಯೆತ್ತಿ ಇದ್ದಕ್ಕಿದ್ದಂತೆ ಅಪ್ಪಳಿಸಿದ. ಶ್ರೀಮತಿ ಭಟ್ಟರ ಮಾನಸಿಕ ಆರೋಗ್ಯ ಅನಿರೀಕ್ಷಿತವಾಗಿ ಹದಗೆಟ್ಟಿತು. ಏನೋ ಅರಿಯಲಾಗದ ಅರ್ಥೈಸಲಾಗದ ಉದ್ವೇಗ, ನೋವು ಸಂಕಟ. ಚಿತ್ತ ಬೆಪ್ಪಾಯಿತು, ದುಃಖ ಹೆಚ್ಚಾಯಿತು. ಕೌಟುಂಬಿಕವಾಗಿ ಬಾಲ್ಯದಿಂದ ಕಣ್ಣೀರ ಕಡಲನ್ನೇ ಹಾಯ್ದು ಬಂದು ಈಗ ಲಾದರೂ ನೆಮ್ಮದಿಯ ನಿಲ್ದಾಣವನ್ನು ಸೇರಿದೆನೆನ್ನುವಾಗ ವಿಧಿ ವಂಚಿಸಿತು. ದಿಗ್ಭ್ರಾಂತರಾಗಿ ಮೈಸೂರಿಗೆ ಸಂಸಾರ ಸಾಗಿಸಿದರು. ಮೂರು ವರ್ಷದ ಮಗಳು; ಆರು ತಿಂಗಳ ಮಗ–ಜಗತ್ತಿನ ಕಷ್ಟಸುಖವನ್ನೇ ಕಂಡರಿಯದ ಹಾಲು ಹಸುಳೆಗಳು. ಅವುಗಳ ಆರೈಕೆಯಲ್ಲಿ ಮಡದಿಯ ಶುಶ್ರೂಷೆ ಯಲ್ಲಿ ಬೈಗು ಬೆಳಗು ಹಗಲು ಇರುಳು ಒಂದೇ ಸಮನೆ ದುಡಿತ, ತುಡಿತ. ಲೇಖಣಿ ಹಿಡಿಯುತ್ತಿದ್ದ ಕೈಗೆ ಸೌಟು; ಕಾಳಿದಾಸನನ್ನು ಪರಿಸುತ್ತಿದ್ದ ನಾಲಗೆಯಲ್ಲಿ ಜೋಗುಳ. ಆಗಿನ ಆ ಗೋಳು ಆ ಕಷ್ಟ ಆ ಯಾತನೆ ಭಗವಂತನಿಗೇ ಪ್ರೀತಿ. ಊಟೋಪಚಾರಗಳು ಸೊನ್ನೆಯಾಗುತ್ತಾ ಬಂದಿದ್ದವು; ನಿದ್ರೆ ಮಾಡಿ ಆರು ತಿಂಗಳಾಗಿತ್ತು. ಎಷ್ಟೋ ದಿನಗಳ ಔಷಧೋಪಚಾರಗಳ ಆರೈಕೆಯ ಬಳಿಕ ಕವಿದಿದ್ದ ಕಾರ್ಮೋಡದ ಹಿಂದೆಗೆತ; ಆರೋಗ್ಯದ ರವಿರಶ್ಮಿ; ಸಂತಸದ ಸುಗ್ಗಿ. ಮೂರನೆಯ ಮಗುವಿನ ಉದಯ, ಹರುಷದ ಹಾಲುಜೇನು. ಆ ತಿಳಿಯಾದ ವಾತಾವರಣದಲ್ಲಿ ಮತ್ತೆ ಕೃತಿ ನಿರ್ಮಾಣ – ಮುದ್ದಣನ ಕೃತಿಗಳ ಸಂಪಾದನೆ; ಕರೆಬಂದ ಕಡೆಯಲ್ಲಿ ಕನ್ನಡ ಡಿಂಡಿಮ. ಹಗಲು ಇರುಳು, ಈ ಮುಖಾ ಆ ಮುಖಾ— ಮತ್ತೆ ಮಡದಿಯ ಹಳೆಯ ಕಾಯಿಲೆಯ ಪುನರಾಗಮನ, ಇದುವರೆಗಿನ ಆನಂದದ ಬನಕೆ ಬೆಂಕಿ ಹುಯ್ಯುತ್ತಾ. ಸ್ಥಳ ಬದಲಾವಣೆ, ಹವಾ ಬದಲಾವಣೆಗಾಗಿ ಊರೂರು ಅಲೆತ; ಮನೆಯಲ್ಲಿ ಹೆಣ್ಣಾಗಿ ಹೊರಗಡೆ ಗಂಡಾಗಿ ವಿಶ್ರಾಂತಿ ಕಾಣದ ದುಡಿತ. ಮತ್ತೆ ಮಡದಿಯ ಚಿತ್ತದ ತಿಳಿವು. ಪ್ರೇಮವಲ್ಲರಿ ಯಲ್ಲಿ ನಾಲ್ಕನೆಯ ಕುಸುಮದ—ಪ್ರಕಾಶ—ಆವಿರ್ಭಾವ. ಹೊಸ ಮನೆ. ಸ್ನಾತಕೋತ್ತರ ತರಗತಿಯ ಅಧ್ಯಾಪಕ; ಮತ್ತಷ್ಟು ಸಾಹಿತ್ಯ ವ್ಯವಸಾಯ. ಹುಣ್ಣಿಮೆಯೆನುವಲ್ಲಿ ಮತ್ತೆ ಅಮಾವಾಸ್ಯೆ ಆಕಳಿಸಿತು, ನಗೆಯುರಿದು ಹೊಗೆಯಾಯಿತು, ಮತ್ತೆ ಪತ್ನಿಯ ಮಾನಸಿಕ ಆರೋಗ್ಯ ಹದಗೆಟ್ಟು ಯಥಾಸ್ಥಿತಿ ಯಾಯಿತು. 'ಮನೆಯೊಂದು ಮುರಿದರೆ ಮೊದಲಿಗಿಮ್ಮಡಿಯಾಗಿ ಮೆರೆವಂತೆ ಕಟ್ಟಿಸಬಹುದು; ಮನ ವೊಂದು ಮುರಿದರೆ ಮೊದಲಿನಂತೊಂದಾಗಿ ತೋರ್ಪಂತೆ ಬೆಸೆಯುವುದರಿದು'—ಎಂದು ಹಲುಬಿದರು ಭಟ್ಟರು. ವಿಧಿ ಅವರ ಬಾಳಿನೊಡನೆ ಕಣ್ಣುಮುಚ್ಚಾಲೆಯಾಟವಾಡಿತು. ಅದೊಂದು ಮುಗಿಯದ ವ್ಯಥೆ, ಕಥೆ. ಜೀವನ ಜಲಧಿಯಿಂದ ಬಾಳಬಟ್ಟಲಿನಲ್ಲಿ ಕಹಿಯನ್ನೇ ಮೊಗೆಮೊಗೆದು ಕುಡಿದರೂ ಸಿಹಿ ಕುಡಿದವರೆಂಬಂತೆ ವರ್ತಿಸಿದ ಅವರ ಆಗಿನ ಅನುಪಮ ಸಹನೆ ಶ್ರದ್ಧೆ ಸ್ಥಿತಮತಿ ಕಾರ್ಯಕಲಾಪ ಗಳನ್ನು ಸ್ಮರಿಸಿದಾಗ ಈ ಹಿರಿಯ ಜೀವದ ಹಿರಿಮೆ ಆದರ್ಶ ಕಣ್ಮುಂದೆ ನಿಲ್ಲುತ್ತದೆ; ಗೌರವ ಗರಿಗೆದರುತ್ತದೆ. ನೋವಿನಲ್ಲಿ ನಗೆ ಕಾಣುತ್ತಿದ್ದ ಆ ಬಗೆಗೆ ಒಂದು ನಿದರ್ಶನ ಸಾಕು. ಅದನ್ನು ನೆನೆದರೆ ಇಂದೂ ನನ್ನ ಕಣ್ಣು ತೇವಗೊಳ್ಳುತ್ತದೆ.

ನಮಗೆ ಎಂ. ಎ. ತರಗತಿಯಲ್ಲಿ 'ಭಾವಗೀತೆ'ಯನ್ನು ಒಂದು ಪ್ರಕಾರವಾಗಿ ಇಡಲಾಗಿತ್ತು. ಭರ್ತೃ ಹರಿಯ ಭಕ್ತಿ, ವೈರಾಗ್ಯ ಮತ್ತು ಶೃಂಗಾರ ಶತಕಗಳನ್ನೂ ಮತ್ತು ಅಮರುವಿನ ಶೃಂಗಾರ ಶತಕವನ್ನೂ ಶ್ರೀ ಭಟ್ಟರು ನಮಗೆ ಪಾಠ ಹೇಳುತ್ತಿದ್ದರು. ಆ ದಿನಗಳಲ್ಲಿ ಮನೆಯಾಕೆಯ ಆರೋಗ್ಯ ತೀವ್ರವಾಗಿ ವಿಷಮಿಸಿತ್ತು. ಮನೆಗೆಲಸವನ್ನೆಲ್ಲಾ ಮಾಡಿ ಅಡುಗೆ ಮಾಡಿ ಚಿಕ್ಕ ಮಗನಿಗೆ ಮೀಯಿಸಿ ಎಲ್ಲರಿಗೂ

ಉಣಬಡಿಸಿ ತಾವೂ ಉಂಡು ಕಾಲೇಜಿಗೆ ಬರುತ್ತಿದ್ದರು. ಉಳಿದ ಮಕ್ಕಳೆಲ್ಲ ಶಾಲೆಗೆ ಹೋಗುತ್ತಿದ್ದ ರಿಂದ ಮನೆಯಲ್ಲಿ ಚಿಕ್ಕ ಬಾಲಕನ ಯೋಗಕ್ಷೇಮ ನೋಡಿಕೊಳ್ಳುವವರಿಲ್ಲದ್ದರಿಂದ ಅವನನ್ನೂ ಕಾಲೇಜಿಗೆ ಕರೆದುಕೊಂಡು ಬರುತ್ತಿದ್ದರು. ತಮ್ಮ ಪಕ್ಕದಲ್ಲಿ ಒಂದು ಕುರ್ಚಿಯ ಮೇಲೆ ತಾಯಿಯ ಲಾಲನೆ ಪಾಲನೆ ಮುದ್ದುಗಳಿಂದ ವಂಚಿತನಾದ ಆ ನತದೃಷ್ಟ ಕಿಶೋರನನ್ನು ಕುಳ್ಳಿರಿಸಿಕೊಂಡು ಪಾಠ ಹೇಳಲು ತೊಡಗುತ್ತಿದ್ದರು. ಅಮರುವಿನ ಭಾವಬಂಧುರವಾದ ಮುಕ್ತಕಗಳ ಸವಿಯನ್ನು ಸೌಂದರ್ಯವನ್ನು ಸನ್ನಿವೇಶಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರವತ್ತಾಗಿ ವಿವರಿಸುತ್ತಾ ವಿದ್ಯಾರ್ಥಿಗಳ ಕಡೆಗೊಮ್ಮೆ ವಿದ್ಯಾರ್ಥಿನಿಯರ ಕಡೆಗೊಮ್ಮೆ ತಲೆಯೊಲೆಯುತ್ತಾ ನಗುತ್ತಾ ಇರುವಾಗ, ಆ ಎಳೆಯ ವಯಸ್ಸಿನ ಕಂದಮ್ಮ ಏನೂ ಅರ್ಥವಾಗದೆ ಕಕಮಕ ಹಿಡಿದಂತೆ ಕೂತು ಬೇಸರದಿಂದ ಚಡಪಡಿಸಿ 'ಅಣ್ಣ ಅಣ್ಣ' ಎಂದು ಮೆಲ್ಲನೆ ಕುಸುಕುತ್ತಾ ಮೊಗ್ಗಣ್ಣುಗಳಿಂದ ಕಂಬನಿಯ ಕಣಗಳನ್ನು ಜಾರಿಸುತ್ತಾ ಇರುವಾಗ 'ಅಳ ಬೇಡಮ್ಮ ಪ್ರಕಾಶೂ, ಇಲ್ಲಿ ನೋಡು ಎಷ್ಟು ಚೆನ್ನಾಗಿದೆ ಈ ಹಾಡು' ಎಂದು ಒಮ್ಮೆ ಗಟ್ಟಿಯಾಗಿ ರಾಗವಾಗಿ ಶ್ಲೋಕವನ್ನು ಓದಿ ನಗು ಬರದಿದ್ದರೂ ನಕ್ಕು ಬೆನ್ನು ತಟ್ಟುತ್ತಿದ್ದರು. ಒಂದು ಕಡೆ ಶೃಂಗಾರ, ಮತ್ತೊಂದು ಕಡೆ ಕರುಣೆ; ಒಂದು ಕಡೆ ನಗು, ಮತ್ತೊಂದು ಕಡೆ ಅಳು. ಇವೆರಡರ ಸಮನ್ವ ಯವನ್ನು ಅವರು ಸಾಧಿಸುತ್ತಿದ್ದ ರೀತಿ ಅದ್ಭುತವಾಗಿತ್ತು. ಅವರ ಒಳಗುಟ್ಟು ಗೊತ್ತಿದ್ದವರ ಮನಸ್ಸಿ ನಲ್ಲಿ ಕತ್ತರಿಯಾಡಿಸಿದಂತಾಗುತ್ತಿತ್ತು. ಮತ್ತೊಂದು ತರಗತಿಯಲ್ಲಿ ಭರ್ತೃಹರಿಯ ವೈರಾಗ್ಯ ಶತಕವನ್ನು ಪಾಠ ಹೇಳುತ್ತಾ 'ನಿನಗೆ ವೈರಾಗ್ಯದ ಪಾಠ ಹೇಳಬೇಕಾಗಿ ಬಂತಪ್ಪಾ !' ಎಂದರಂತೆ ಮಗನನ್ನು ಕುರಿತು.

ನಾನು ಮತ್ತು ನನ್ನೊಬ್ಬ ಮಿತ್ರರು ಆಗಾಗ ಅವರ ಮನೆಗೆ ಹೋಗುತ್ತಿದ್ದುದುಂಟು. ಸಮಯ ಪ್ರಜ್ಞೆಯಿಲ್ಲದೆ ಬೆಳಿಗ್ಗೆಯೋ ಸಂಜೆಯೋ ಮನಬಂದಾಗ ಹೋಗುತ್ತಿದ್ದೆವು. ಹೋದಾಗ ಎಂತಹ ಕೆಲಸಗಳ ನಡುವೆ ಮುಳುಗಿರುತ್ತಿದ್ದರೋ ! ಕಂಡ ಕೂಡಲೇ ಬಂದು ಕುಳ್ಳಿರಿಸಿ ನಗುನಗುತ್ತಾ ಮಾತಾಡಿಸಿ ಬಹಳ ಸಾರಿ ಕಾಫಿಕೊಟ್ಟು ಆತ್ಮೀಯತೆಯಿಂದ ಕಳುಹಿಸುತ್ತಿದ್ದರು. ಕೆಲವೊಮ್ಮೆ ಸ್ನಾನ ವನ್ನೇ ಮಾಡಿರುತ್ತಿರಲಿಲ್ಲ. ಬರಿಮೈಯಲ್ಲಿ ಬಂದು ಮಾತಾಡಿಸಿದ ದಿನಗಳೂ ಉಂಟು. ಒಮ್ಮೆ ನಾವು ಹೋದಾಗ ಒಳಬಾಗಿಲ ಪರದೆಯ ಅಡಿಯಿಂದ ಬಗ್ಗಿ ನೋಡಿ ಸೌಟು ಹಿಡಿದ ಕೈಯಿಂದಲೇ ಈಚೆಗೆ ಬಂದರು. ನಮ್ಮ ಆಗಿನ ಅಜ್ಞಾನದ ಬಗ್ಗೆ ನನಗೀಗ ವಿಷಾದವಾಗುತ್ತದೆ. ಸೌಟು ಹಿಡಿದೇ ಮಾತಿಗೆ ಕುಳಿತು ಮಧ್ಯೆ ಎದ್ದು, 'ಒಂದು ನಿಮಿಷ ಕೂತಿರಿ, ಸಾರಿಗೆ ಒಗ್ಗರಣೆ ಹಾಕಿ ಬಂದು ಬಿಡ್ತೀನಿ' ಎಂದು ಒಳಹೋಗಿ ಮತ್ತೆ ಬಂದು ಆ ಪಾಕಕಾರ್ಯ ಕ್ಲೇಶದ ಕಿಂಚಿತ್ತು ಬೇಸರವನ್ನೂ ಮುಖದಲ್ಲಿ ತೋರದೆ ಮಾತಾಡಿ ನಗಿಸುತ್ತಿದ್ದರು. 'ಸಾರಾಯ್ತು, ಅನ್ನ ಆಗುತ್ತಿದೆ', 'ತಿಂಡಿ ಆಯ್ತು, ಇನ್ನು ಊಟದ ಏರ್ಪಾಡು ಮಾಡಬೇಕು' ಮುಂತಾಗಿ ಮುಚ್ಚುಮರೆಯಿಲ್ಲದೆ ಹೇಳುತ್ತಿದ್ದ ಸರಳತೆ ಇಂದೂ ಅವರಲ್ಲಿ ಮಾಸದಿದೆ. ಅಂತಹ ವೇಳೆಯಲ್ಲೂ ಅವರು ಸಾಹಿತ್ಯ ಸೃಷ್ಟಿಯನ್ನು ಕಡೆಗಣಿಸಿರಲಿಲ್ಲ. ಲೋಕಜೀವನ ಮತ್ತು ಕಾವ್ಯ ಜೀವನಗಳೆರಡನ್ನೂ ಅವರು ಸಮಸಮವಾಗಿ ನಿರ್ವಹಿಸಿಕೊಂಡು ಹೋಗುತ್ತಿದ್ದರು. ಬೇರೊಬ್ಬರು ಅಷ್ಟು ಕಷ್ಟವನ್ನು ಕಂಡಿದ್ದರೆ ಅಷ್ಟು ನೋವನ್ನು ಉಂಡಿದ್ದರೆ ಅವರ ಸೃಜನಶಕ್ತಿಯ ಸೆಲೆಯೇ ಬತ್ತಿಹೋಗಬಹುದಿತ್ತು. ಆದರೆ ಅವರು ಮುಂದಿರಿಸಿಕೊಂಡ ಜೀವನಾದರ್ಶ ಬಾಳನ್ನು ಹೋಳು ಮಾಡದೆ ಕಾಳಾಗಿಸಿತು, ಕೃತಕೃತ್ಯವಾಗಿಸಿತು.

ಒಲೆಯ ಮುಂದಿರುವಾಗ ತಲೆಯೊಳು ಸುಳಿವುದು
    ಪಂಪನ ಪದ್ಯವದೊಂದು
ಮಕ್ಕಳಿಗೆರೆವಾಗ ಮನಮಡಿಗೊಳುವುದು
    ಕಾವ್ಯಗಂಗೆಯ ಬಿಂದುವಿಳಿದು
ಅಕ್ಕಿಯ ಕೈಕರ್ಚುತಿರುವಾಗ ಬಗೆಕರ್ಚು-
    ವುದು ಕಾಳಿದಾಸನ ಅಡಿಯ
ದುಡಿದು ಮೈಸೋತಿತೆಂದೆನುವಾಗ ಮನಪೆರ್ಚು-
    ವುದು ನೆನೆದಾತನ ನುಡಿಯ

ಲೋಕಸತ್ತೆಯಿಂದ ಕಾವ್ಯಸತ್ತೆಗೆ ನಿರಾಯಾಸವಾಗಿ ಪಯಣಿಸುವ ಈ ಮನೋಧರ್ಮ ರತ್ನಾಕರನ ಭರತೇಶನ ಸಮನ್ವಯಶೀಲವನ್ನು ನೆನಪಿಗೆ ತರುತ್ತದೆ. ಅವರಿಗೆ ಮನೆಯೇ ತಪೋವನವಾಯಿತು. ಗೃಹಕೃತ್ಯವೇ ಪೂಜೆಯಾಯಿತು. ಸತತ ಕಾವ್ಯಾನುಶೀಲನವೇ ನಿಯಮವಾಯಿತು. ಕಾವ್ಯಸೃಷ್ಟಿಯೇ ತಪಸ್ಸಾಯಿತು. ಇದೇ ನಿತ್ಯಾಪಘಾತದ ಅವರ ಬಾಳಿನ ಬಂಡಿಯನ್ನೆಳೆಯುವ ಬಲವನ್ನು ಛಲವನ್ನು ಒದಗಿಸಿತು.

### ಶಿಷ್ಯವತ್ಸಲ:

ಶ್ರೀ ಪರಮೇಶ್ವರ ಭಟ್ಟರಷ್ಟು ಪ್ರೀತಿಯಿಂದ ಶಿಷ್ಯರನ್ನು ಕಾಣುವವರು ವಿರಳ. ಅವರೆಲ್ಲಿ ಹೋದರೂ ಅವರ ಸುತ್ತಮುತ್ತ ವಿದ್ಯಾರ್ಥಿಗಳ ತಂಡವೇ ಇರುತ್ತದೆ. ಅವರು ಮೈಸೂರಿನಲ್ಲಿದ್ದಾಗ ಲಾಗಲೀ ಈಗ ಮಂಗಳೂರಿನಲ್ಲಿರುವಾಗಲಾಗಲೀ ಅವರ ಮನೆಗೆ ನಿರಾತಂಕವಾಗಿ ವಿದ್ಯಾರ್ಥಿಗಳು ಬರುತ್ತಿರುತ್ತಾರೆ, ಹೋಗುತ್ತಿರುತ್ತಾರೆ. ಮ್ಲಾನರಾಗಿ ಹೋದವರು ಮುಖದ ತುಂಬ ಹರ್ಷವನ್ನು ಹೊತ್ತು ಜಿಂಕೆಯಂತೆ ಜಿಗಿದು ಬರುತ್ತಾರೆ. ತಾವು ಪ್ರಾಧ್ಯಾಪಕರೆಂಬ ವಿದ್ವಾಂಸರೆಂಬ ಕವಿಗಳೆಂಬ ಯಾವ ಬಿಂಕ ಬಿಗುವುಮಾನಗಳಿಗೂ ಅವರು ವಿದೇಶೀಯರು. ಬಂದ ವಿದ್ಯಾರ್ಥಿಗಳನ್ನು ಮೊದಲು ಕುಳ್ಳಿರಿಸಿ ಅವರ ಕ್ಷೇಮಸಮಾಚಾರ ವಿಚಾರಿಸಿ ಅವರ ವೈಯಕ್ತಿಕ ತೊಂದರೆಗಳನ್ನೋ ತರಗತಿಯ ತೊಂದರೆಗಳನ್ನೋ ಸಾವಧಾನವಾಗಿ ಕೇಳಿ ಅವಕ್ಕೆಲ್ಲಾ ಸಮಾಧಾನ ಹೇಳಿ ಬೆನ್ನು ತಟ್ಟಿ ಕಳಿಸುತ್ತಾರೆ. ಯಾವ ವಿಚಾರವನ್ನಾದರೂ ಅವರೊಡನೆ ನಿಸ್ಸಂಕೋಚವಾಗಿ ಹೇಳಿಕೊಳ್ಳಬಹುದು. ಆಫೀಸಿನಲ್ಲಾ ದರೂ ಅಷ್ಟೇ. ಅವರು ತರಗತಿ ಬಿಟ್ಟ ಕೂಡಲೇ ಹುಡುಗರ ದಂಡು ಅವರ ಹಿಂದೆಯೇ ಧಾವಿಸುತ್ತದೆ. ಪ್ರತಿಯೊಬ್ಬರ ವಿಶಿಷ್ಟಗುಣಗಳನ್ನೂ ಸ್ವಲ್ಪ ಉತ್ಪ್ರೇಕ್ಷೆಮಾಡಿ 'ಓಹೋ ನೀವು ಭರ್ಜರಿಯಾಗಿ ಮಾತಾಡುತ್ತೀರಿ. ಭೇಷ್ ನೀವು ತುಂಬಾ ಸೊಗಸಾಗಿ ಓದುತ್ತೀರಿ, ನಿಮ್ಮ ಕವಿತೆ wonderful ಆಗಿದೆ, ನೀವು ಬಹಳ intelligent ಪ್ರಶ್ನೆ ಕೇಳುತ್ತೀರಿ, ನೀವು ರ್‍ಯಾಂಕ್ ಪಡೆಯುವುದು ತುಂಬಾ ಸುಲಭ, ಓ ನಿಮ್ಮ ವಿಚಾರ ಹೇಳಬೇಕಾದ ಅಗತ್ಯವೇ ಇಲ್ಲ, ನಿಮ್ಮಂಥವರು ಇಲ್ಲಿಗೆ ಓದಲು ಬರುವುದೇ ನಮಗೆ ಗೌರವ, ನಿಮ್ಮ ಶೈಲಿ ಮಾಸ್ತಿಯವರ ಶೈಲಿಯ ಹಾಗಿದೆ, ನಿಮ್ಮ ಯಕ್ಷಗಾನದ ವೇಷ ಏ ಒನ್ ಆಗಿತ್ತು' ಮುಂತಾಗಿ ಹೊಗಳಿದಾಗ ವಿದ್ಯಾರ್ಥಿಗಳು ಹಿಗ್ಗಿ ಹೀರೇಕಾಯಿ ಆಗುತ್ತಾರೆ. ಶಿಷ್ಯರು ಕೇಳುವ ಯಾವ ಸಹಾಯವನ್ನೂ ಅವರು ಇಲ್ಲವೆನ್ನುವುದು ಅಪರೂಪ. ಅವರು ಹಣಕೊಟ್ಟು ಕಳೆದುಕೊಂಡದ್ದಕ್ಕೆ ಲೆಕ್ಕವಿಲ್ಲ, ಪುಸ್ತಕಗಳನ್ನು ಕೊಟ್ಟು ಕಳೆದುಕೊಂಡದ್ದಕ್ಕೆ ಲೆಕ್ಕವಿಲ್ಲ. ಅವರು ಎಲ್ಲಿಯಾದರೂ ಭಾಷಣಕ್ಕೆ ಹೊರಟರೆಂದರೆ ಒಬ್ಬರೋ ಇಬ್ಬರೋ ಶಿಷ್ಯರು ಸನಿಹದಲ್ಲಿದ್ದೇ ಇರುತ್ತಾರೆ. ಕೆಲವೊಮ್ಮೆ ಈ ಶಿಷ್ಯರ ನಿರಂತರ ಪ್ರವಾಹದಿಂದ ತಿಂಡಿ ಊಟ ಮಾಡದೇ ಮಾತಿನ ಮಹಾಪೂರದಲ್ಲೇ ಕೊಚ್ಚಿಹೋಗುವುದೂ ಉಂಟು. ತಮ್ಮ ಹಿರಿಯ ಶಿಷ್ಯರ ಹಿರಿಮೆಯನ್ನು ಕುರಿತು ತರಗತಿಗಳಲ್ಲಿ ಅಭಿಮಾನದಿಂದ ಮುಕ್ತಕಂಠದಿಂದ ಪ್ರಶಂಸಿಸುವುದೂ ಇದೆ. ಅವರೊಡನಿರುವಾಗ ತಾವು ವಯೋ-ವೃದ್ಧರು ಜ್ಞಾನವೃದ್ಧರು ಎಂಬುದನ್ನು ಪೂರ್ಣವಾಗಿ ಮರೆತು ಎಳೆಯರಾಗುತ್ತಾರೆ. ಅಲ್ಲಿ ಗುರುಭಾವ ಕ್ಕಿಂತ ಪಿತೃಭಾವವೇ ಪ್ರಧಾನವಾಗಿ ಮೆರೆಯುತ್ತದೆ.

ಅವರ ಅಧ್ಯಾಪನ ಅನನ್ಯವಿಶಿಷ್ಟವಾದದ್ದು. ನಾಲ್ಕು ಜನರ ತರಗತಿಯೇ ಇರಲಿ. ನಲವತ್ತು ಜನರ ತರಗತಿಯೇ ಇರಲಿ, ಅದರಲ್ಲಿ ಭೇದವಿಲ್ಲ. ಸಾಹಿತ್ಯ ಚರಿತ್ರೆಯಾಗಲಿ, ಕಾವ್ಯಮೀಮಾಂಸೆಯಾಗಲಿ, ಛಂದಸ್ಸಾಗಲಿ, ಭಾವಗೀತೆಯಾಗಲಿ, ರಗಳೆಯಾಗಲಿ, ಮಹಾಕಾವ್ಯವಾಗಲಿ ಏಕರೀತಿಯ ನಿಷ್ಠೆಯಿಂದ ಸರಭಸವಾಗಿ ರಸಭರಿತವಾಗಿ ಹೃದಯಂಗಮ್ಯವಾಗಿ ಪಾಠಹೇಳುವ ಕಲೆ ಅವರಿಗೆ ಸಿದ್ಧಿಸಿದೆ. ಅವರ ಪಾಠ ಪುಸ್ತಕದ ಬದನೆಯ ಕಾಯಿಯಾಗದೆ ಕೇವಲ ವಿಷಯಗಳ ಉಗ್ರಾಣವಾಗದೆ ಮೈಮನಗಳನ್ನು ಪುಳಕಗೊಳಿಸುವ ಸ್ವೋಪಜ್ಞಶೀಲ ವಿಚಾರಲಹರಿಗಳ ಜೀವಂತ ಮಧುರನರ್ತನವಾಗುತ್ತದೆ. ಹೇಳುವ ವಿಷಯದಲ್ಲಿ ತಲ್ಲೀನರಾದಾಗ ಶಿಷ್ಯರ ಅನಾಸಕ್ತಿ ಅಳಿಸಿ ಕುತೂಹಲ ಕೊನರಿ ಮೈಮರೆತು ಬುದ್ಧಿ ಬೆರೆತು ಮನಸ್ಸು ಮಾರಿಹೋಗುತ್ತದೆ. ಅವರ ಅಂಗಭಂಗಿ, ಧ್ವನಿಯ ಏರಿಳಿತ, ಪದಗಳ ಪೋಂಥಾ

ವಸೆ, ಮುಖಭಾವದ ಮಾರ್ಪಾಟು ಚಿತ್ರವನ್ನು ಸೂರೆಗೊಂಡು ಹೇಳುತ್ತಿರುವ ವಿಷಯವನ್ನು ಕಣ್ಮುಂದೆ ನಿಲ್ಲಿಸುತ್ತವೆ. ಅಲ್ಲಿಂದ ಇಲ್ಲಿಂದ ಅವರು ಮಾಲೆಮಾಲೆಯಾಗಿ ತಂದು ಪೋಣಿಸುವ ಸೂಕ್ತಿಗಳು ಅವುಗಳಿಗೆ ತುಂಬುವ ಧ್ವನಿ ನೀಡುವ ವ್ಯಾಖ್ಯಾನ ಅನ್ಯಾದೃಶ ರಮಣೀಯ. ಮಧ್ಯೆ ಮಧ್ಯೆ ಹಾರಿಸುವ ಹಾಸ್ಯಚಟಾಕಿಗಳು ಊಟಕ್ಕೆ ಉಪ್ಪಿನಕಾಯಿ ಇದ್ದಂತೆ ರುಚಿಕಟ್ಟಾಗಿ ಅವಿಸ್ಮರಣೀಯವಾಗಿರುತ್ತವೆ. ಒಮ್ಮೊಮ್ಮೆ ವಿಷಯ ದಾರಿಬಿಟ್ಟು ಅತ್ತ ಇತ್ತ ಹರಿಯಬಹುದಾದರೂ ಅವರ ಅಪಾರವಾದ ಅಧ್ಯಯನ ಮತ್ತು ಲೋಕಾನುಭವದ ಸಾಂದ್ರತೆಯಿಂದಾಗಿ ಅದೆಂದೂ ನಿರುಪಯುಕ್ತ ಎನಿಸುವುದಿಲ್ಲ. ಅವರ ತರಗತಿಯೆಂದರೆ ಮರೆಯಲಾಗದ ಮಧುರಾನುಭವ.

**ವಿನಯವ್ರತಿ:**

ತುಂಬಿದ ಕೊಡ ತುಳುಕುವುದಿಲ್ಲ. ಬಾಳಿನಲ್ಲಿ ನೊಂದು ಬೆಂದು ಬಸವಳಿದು ಕಾವ್ಯಸಲ್ಲಾಪ ಮತ್ತು ಮಿತ್ರಸಲ್ಲಾಪಗಳನ್ನೇ ನೆಮ್ಮಿ ನಂಬಿ ಜೀವಹಿಡಿದಿರುವ ಶ್ರೀಭಟ್ಟರ ಐವತ್ತೇಳು ವರ್ಷದ ಈ ಶರೀರದ ಅಂಗುಲ ಅಂಗುಲದಲ್ಲೂ ವಿನಯದ ಚಿಲುಮೆ ಚಿಮ್ಮುತ್ತದೆ. ಸಾಂಸಾರಿಕವಾದ ನಿರಂತರ ಕ್ಲೇಶ ಕಾರ್ಪಣ್ಯಗಳಿಂದ ಮೈ ಹಣ್ಣಾಗುತ್ತಾ ನಡೆದಂತೆ ಜನದ ಬಗೆಗೆ ಜೀವನದ ಬಗೆಗೆ ಮನಸ್ಸು ಹುಣ್ಣಾಗಬಹುದಿತ್ತು. ಆದರೆ ಇವರ ಹೃದಯ ಹಣ್ಣಾಯಿತು. ರಸದುಂಬಿಕೊಂಡಿತು. ಅವರ ಬಳಿಗೆ ಬಂದವರಿಗೆಲ್ಲ ಇದರ ಪರಿಚಯ ಸ್ಪಷ್ಟವಾಗುತ್ತದೆ. ಅವರ ಸ್ಥಾನಮಾನಗಳು ಏರುತ್ತಾ ಬಂದಂತೆಲ್ಲ ಅವರ ವಿನಯವ್ರತ ತೀವ್ರವಾಗುತ್ತಾ ಬರುತ್ತಿದೆ. ಅವರು ಸಾಮಾನ್ಯ ಅಧ್ಯಾಪಕರಾಗಿದ್ದಾಗ ಹೇಗೆ ಸಾಮಾನ್ಯರಲ್ಲಿ ಸಾಮಾನ್ಯರಾಗಿ ವ್ಯವಹರಿಸುತ್ತಿದ್ದರೋ. ಇಂದು ಮಂಗಳ ಗಂಗೋತ್ರಿಯ ಪ್ರಾಚಾರ್ಯರಾಗಿ ಒಂದು ಸಂಸ್ಥೆಯ ಕರ್ಣಧಾರರಾಗಿರುವಾಗಲೂ ಹಾಗೆಯೇ, ಅಡಕ್ಕಿಂತಲೂ ಹೆಚ್ಚು. ಬಾಗುತ್ತಾರೆ. ಸದುವಿನಯವೇ ಸದಾಶಿವನ ಒಲುಮೆ ಎಂಬುದು ಅವರ ಬಾಳ ಮಂತ್ರವಾಗಿದೆ; ಕಿರಿಯರಲ್ಲಿ ಕಿರಿಯ ನಾನು ಎಂಬುದು ಅವರ ನಡೆಯ ಸೂತ್ರವಾಗಿದೆ. ಇದು ಅವರ ಮಿತ್ರಸಂಪತ್ತನ್ನು ಗೌರವ ಸಂಪತ್ತನ್ನು ವೃದ್ಧಿಸಿದೆ. ಹಿರಿಯರಲ್ಲಿ ಗೌರವ, ಕಿರಿಯರಲ್ಲಿ ಪ್ರೀತಿಯಿರುವುದು ಸಹಜ. ಆದರೆ ಹಿರಿಯ ಕಿರಿಯರಿಬ್ಬರಲ್ಲೂ ವಿನಯವನ್ನೇ ತೋರುವ ಈ ನಡೆ ಅತ್ಯಂತ ಅಪೂರ್ವ. ಇದನ್ನು ದುರುಪಯೋಗಪಡಿಸಿಕೊಳ್ಳುವವರೂ ಇಲ್ಲದಿಲ್ಲ.

ಯಾರು, ಎಂಥವರು, ಏನು ಕೆಲಸ ಹೇಳಿದರೂ ಇಲ್ಲವೆಂಬುದು ಅವರ ಜಾಯಮಾನಕ್ಕೇ ಸಲ್ಲ. ಒಂದುವೇಳೆ ಅನಿವಾರ್ಯವಾಗಿ ನಕಾರಾತ್ಮಕ ಉತ್ತರ ನೀಡಬೇಕಾದಾಗ ಅವರು ಪಡುವ ಮುಜುಗರ ಅನುಭವಿಸುವ ಅಸಂತೋಷ ಧ್ವನಿಕುಗ್ಗಿಸುವ ರೀತಿ ನೋಡಿದವರಿಗೇ ಗೊತ್ತು. ಮನೆಗಾಗಲೀ, ಆಫೀಸಿಗಾಗಲೀ ಯಾರಾದರೂ ಬಂದರೆ – ಅವರು ಚಿಕ್ಕವರಿರಲಿ, ದೊಡ್ಡವರಿರಲಿ – ತಮ್ಮ ನಿರ್ದೇಶಕ ಕುರ್ಚಿಯಿಂದೆದ್ದು ಮುಖವರಳಿಸಿ ನಗುಸೂಸಿ 'ಓ ಬನ್ನಿ ಬನ್ನಿ' ಎಂದು ಸ್ವಾಗತಿಸುತ್ತಾರೆ. ಇದಕ್ಕೆ ಪರಿಚಿತರು ಅಪರಿಚಿತರು ಎಂಬ ಭೇದವಿಲ್ಲ. ಕೆಲವೊಮ್ಮೆ ದೊಡ್ಡವರು ಬಂದಾಗ ಕೂರಲು ಸ್ಥಳ ಸಾಲದಾದಾಗ ತಮ್ಮ ಆಸನವನ್ನೇ ಯಾವ ಸಂಕೋಚವೂ ಇಲ್ಲದೆ ನೀಡುವುದೂ ಸರ್ವೇ ಸಾಮಾನ್ಯ. ವಿದ್ಯಾರ್ಥಿಯಾಗಿರಲಿ, ಮಿತ್ರರಾಗಿರಲಿ ಅವರು ಕೈಯೆತ್ತುವುದಕ್ಕೆ ಮುಂಚೆಯೇ ತಾವೇ ನಮಸ್ಕರಿಸಿ 'ನಮಸ್ಕಾರ ಸಾರ್, ಬನ್ನಿ, ಹೇಗಿದ್ದೀರಿ ? ಏನು ಸಮಾಚಾರ ? ' ಎಂದು ಆತ್ಮೀಯತೆಯ ಮಳೆ ಸೂಸಿ ನಮ್ಮನ್ನು ಮೂಕರಾಗಿಸುತ್ತಾರೆ. ಇವರು ತಮ್ಮ ಕುರ್ಚಿಬಿಟ್ಟು ಆಚೆ ಈಚೆ ಇರುವಾಗ ಕೆಲವೊಮ್ಮೆ ಹೊರಗಿನವರು ಬಂದು ಇವರ ಸರಳತೆಯನ್ನು ನೋಡಿ 'ಡೈರೆಕ್ಟರಿದ್ದಾರೆಯೇ ?' ಎಂದು ಇವರನ್ನೇ ವಿಚಾರಿಸುವುದೂ ಉಂಟು. ಆಗ 'ಇದ್ದಾರೆ, ಬನ್ನಿ' ಎಂದು ನಗುತ್ತಾ ತಮ್ಮ ಆಸನದಲ್ಲಿ ಮಂಡಿಸಿದಾಗ ಬಂದವರು ತಬ್ಬಿಬ್ಬಾಗುತ್ತಾರೆ. ಆಫೀಸಿನ ಜವಾನರನ್ನಾಗಲೀ ಗುಮಾಸ್ತರನ್ನಾಗಲೀ ಎಂದೂ ಜೋರಾಗಿ ಗದರಿದ್ದನ್ನು ನಾನು ಕಾಣೆ. ಕರೆಗಂಟೆ ಬಾರಿಸುವುದು ಅಪರೂಪ. 'ಮಹಾದೇವ, ಚೆನ್ನಯ್ಯ, ಯಾರಿದ್ದೀರಪ್ಪಾ' ಎಂದು ಮೃದುವಾಗಿ ಕರೆದು ಅವರು ಓಗೊಳ್ಳದಿದ್ದಾಗ ತಾವೇ ಎದ್ದು ಅವರ ಬಳಿಗೆ ನಡೆಯುವಂಥ ಸಂದರ್ಭಗಳೂ ವಿರಳವಲ್ಲ. ಕೆಲಸವಿದ್ದಾಗ ಗುಮಾಸ್ತರನ್ನು ತಮ್ಮ ಬಳಿ ಕರೆಯು

ವುದಕ್ಕಿಂತ ತಾವೇ ಅವರ ಮೇಜಿನ ಬಳಿ ನಿಲ್ಲುವುದು ಹೆಚ್ಚು. ಇದು ಅನುಚಿತವೆಂದು ಎಂದೂ ಅವರಿಗೆ ಅನ್ನಿಸಿಲ್ಲ. ಕಂತೆ ಕಂತೆ ಅಂಕಪಟ್ಟಿಗಳ ನಕಲುಗಳನ್ನು ಹಿಡಿದು ಬಂದವರನ್ನು ತಮ್ಮ ಮುಂದೆ ಕೂರಿಸಿ ಎಷ್ಟೇ ಕೆಲಸವಿದ್ದರೂ ಅಸಮಾಧಾನಗೊಳ್ಳದೆ ಸಾವಧಾನವಾಗಿ ಸಹಿಮಾಡಿ ಕಳುಹಿಸುತ್ತಾರೆ. ಜವಾನನ ಕೆಲಸ ಕೇಳಬಂದವರನ್ನೂ ಸರಿಸಮಾನರೆಂಬಂತೆ ಹತ್ತಿರ ಕುಳ್ಳಿರಿಸಿಕೊಂಡು ಅವರ ಮಾತನ್ನು ಸಹನೆಯಿಂದ ಕೇಳಿ ಸಮಾಧಾನಿಸಿ ಬೀಳ್ಕೊಡುತ್ತಾರೆ. ತಮ್ಮ ಕಛೇರಿಯಲ್ಲೇ ಕೆಲಸಕ್ಕೆ ಹಾಜರಾಗಲು ಬಂದ ಜವಾನರು ಅಟೆಂಡರುಗಳನ್ನು ಎದುರು ಕುಳ್ಳಿರಿಸಿ ಅವರ ಸೇವಾಪ್ರವೇಶದ ಅರ್ಜಿಗಳನ್ನು ಸ್ವೀಕರಿಸಿದ್ದೂ ಉಂಟು. ನಮ್ಮ ಕಾಲೇಜಿನ ಹಲವಾರು ಉತ್ಸವಗಳಿಗೆ ಬಂದ, ವಿದ್ಯೆಯಲ್ಲಿ ವಯಸ್ಸಿನಲ್ಲಿ ಅಧಿಕಾರದಲ್ಲಿ ಎಷ್ಟೋ ಚಿಕ್ಕವರಾದ ಅತಿಥಿಗಳನ್ನು ಅವರು ಉಪಚರಿಸುವ ರೀತಿ ಬಂದವರನ್ನೇ ಸಂಕೋಚಕ್ಕೀಡುಮಾಡುತ್ತದೆ. ಮನೆಯಲ್ಲಿ ರಾಶಿರಾಶಿ ಕೆಲಸವಿದ್ದಾಗಲೂ ಅದನ್ನು ಬದಿಗಿರಿಸಿ ನಿರಾತಂಕವಾಗಿ ಬಂದವರೊಡನೆ ಮಾತಾಡಿ, ತಾವೇ ಕಾಫಿ ತಯಾರಿಸಿ ಕೊಟ್ಟು ಉಪಚರಿಸಿ ಬೀಳ್ಕೊಟ್ಟು, ಅನಂತರ ಇಡೀ ರಾತ್ರಿ ನಿದ್ರೆಗೆಟ್ಟು ಉಳಿದ ಕೆಲಸವನ್ನು ಪೂರೈಸುವುದು ಅವರ ದಿನಚರಿಯಲ್ಲಿ ಸಾಮಾನ್ಯ. ಇದರಿಂದ ಹಲವಾರು ದಿನ ಊಟ ತಿಂಡಿಗಳಿಗೇ ಸೊನ್ನೆಯಾದುದೂ ಇದೆ. ಎರಡು ವರ್ಷದ ಹಿಂದೆ "ಮನೆ ಮನೆಗೆ ಸರಸ್ವತಿ" ಕಾರ್ಯಕ್ರಮವನ್ನು ಮಂಗಳೂರಿನಲ್ಲಿ ಇಟ್ಟುಕೊಂಡಿದ್ದಾಗ ಸುಡುವ ಬಿಸಿಲಿನಲ್ಲಿ ನಮ್ಮಂತೆಯೇ ಕೈಯಲ್ಲಿ ಕಂಕುಳಲ್ಲಿ ಚೀಲದಲ್ಲಿ ಪುಸ್ತಕಗಳನ್ನು ಹಿಡಿದು ನಡೆದಾಡಿದ್ದನ್ನು ಕಂಡವರು ಬೆರಳು ಕಚ್ಚುತ್ತಾರೆ. ಒಮ್ಮೆ ಬೇಂದ್ರೆಯವರು ನಮ್ಮ ಕಾಲೇಜಿಗೆ ಬಂದಿದ್ದಾಗ ನಾವೆಲ್ಲ ಕೈಯೆತ್ತಿ ನಮಸ್ಕರಿಸಿದರೆ ಅವರು ಕಾಲುಮುಟ್ಟಿ ನಮಸ್ಕರಿಸಿದರು. ಇಂತಹ ನಿದರ್ಶನಗಳು ನೂರಾರು. ಇವುಗಳನ್ನೆಲ್ಲಾ ಸ್ಮರಿಸುವಾಗ 'ಶರಣರ ಶರಣರ ಶರಣರ ಶರಣನೆಂದೆನಿಸಯ್ಯಾ' ಎಂದ ಬಸವಣ್ಣನವರ ಚಿತ್ರ ಕಣ್ಮುಂದೆ ನಿಲ್ಲುತ್ತದೆ. 'ನಾನು ಬಾಗಿದ್ದರಿಂದಲೇ ಬದುಕಿದ್ದೇನೆ' ಎಂಬುದು ಗುರುಗಳ ಅನುಭವದ ವೇದಾಂತ.

## ಸ್ಫೂರ್ತಿಯ ಸೆಲೆ:

ಭಟ್ಟರ ಬಳಿ ಅಳುತ್ತಾ ಬಂದವರು ನಗುತ್ತಾ ಮರಳುತ್ತಾರೆ. ನಿರಾಶೆ ತುಂಬಿ ನಿಂತವರು ಭರವಸೆಯ ಬೆಳಕನ್ನು ಪಡೆಯುತ್ತಾರೆ. ಅವರ ನಡೆನುಡಿ ಸಾನ್ನಿಧ್ಯ ಸದಾ ಸ್ಫೂರ್ತಿದಾಯಕ. ಅವರಿಂದ ಹಲವು ವಿಧದಲ್ಲಿ ಸಹಾಯ ಪಡೆದು ಬಾಳನ್ನು ಬೆಳಗಿಕೊಂಡವರು ನೂರಾರು ಜನ. ನಾನು ಓದುತ್ತಿರುವಾಗ ಹಲವು ಕವನಗಳನ್ನು ಲೇಖನಗಳನ್ನು ಅವರ ಬಳಿಗೊಯ್ದು ತೋರಿಸಿದಾಗ ಕೆಲವೆಡೆ ತಿದ್ದಿ 'ಚೆನ್ನಾಗಿ ಬರೆಯುತ್ತೀರಿ, ಬರೆಯಿರಿ. ನನ್ನ ಮೊದಲ ಪದ್ಯಗಳು ಇದಕ್ಕಿಂತ ಕೆಟ್ಟದಾಗಿದ್ದವು. ಈಗ ದೊಡ್ಡ ಲೇಖಕರಾಗಿರುವವರೆಲ್ಲ ಮೊದಮೊದಲು ತೀರಾ ಸಾಮಾನ್ಯವಾಗಿ ಬರೆಯುತ್ತಿದ್ದರು. ಅಭ್ಯಾಸ ಮಾಡಿದರೆ ಯಾವುದೂ ಕಷ್ಟವಲ್ಲ. ನಿರಾಶೆ ಪಡಬೇಡಿ' ಎಂದು ಹೇಳಿದರು. ಈಗಲೂ ಅದೇ ಮನೋಧರ್ಮ. ವಿದ್ಯಾರ್ಥಿಗಳಿಗೆ ಅವರಿವರ ನಿದರ್ಶನ ಕೊಟ್ಟು ಹತ್ತಾರು ವಸ್ತುಗಳನ್ನು ಹೇಳಿ, ಅದು ಬರೆಯಿರಿ, ಇದು ಬರೆಯಿರಿ, ಹಾಗೆ ಬರೆಯಿರಿ ಹೀಗೆ ಬರೆಯಿರಿ ಎಂದು ಸದಾ ಬೆನ್ನು ತಟ್ಟುತ್ತಲೇ ಇರುತ್ತಾರೆ. ಅವರೊಡನಿದ್ದಾಗಲೆಲ್ಲ ಸದಾ ಅದು ಮಾಡಬೇಕು ಇದು ಮಾಡಬೇಕು—ಎಂಬ ಮಾತೇ. ಸಾಧ್ಯವಿಲ್ಲ ಎಂಬ ಪದವೇ ಅವರ ಕೋಶದಲ್ಲಿಲ್ಲ. ನಮ್ಮ ಸಂದೇಹ ಪ್ರಕೃತಿಯನ್ನು ಕಂಡು ನಮಗೇ ನಾಚಿಕೆಯಾಗುತ್ತದೆ. ಈ ಪ್ರಾಯದಲ್ಲೂ ಅವರು ಹತ್ತೆಂಟರ ಹರಯದವರಂತೆ ಪಾದರಸವಾಗಿ ಹರಿದಾಡುತ್ತಾರೆ. ಸಭೆ ಸಮಾರಂಭಗಳಾಗುವಾಗ ಹತ್ತಾರು ಸಲ ಆಯಾಸವನ್ನೂ ಲೆಕ್ಕಿಸದೆ ಯುವಕರನ್ನೂ ನಾಚಿಸುವಂತೆ ಹರ್ಷಚಿತ್ತರಾಗಿ ಮನೆಗೂ ಕಾಲೇಜಿಗೂ ಓಡಾಡುತ್ತಾರೆ. ಬೆಂಚು ಕುರ್ಚಿಗಳನ್ನು ಎತ್ತಿಡುವ ಮಟ್ಟಿಗೂ ಅವರ ಉತ್ಸಾಹ ಹಬ್ಬುವುದುಂಟು. ವಿದ್ಯಾರ್ಥಿಗಳ ಕವಿಗೋಷ್ಠಿ ವಿಚಾರಗೋಷ್ಠಿಗಳನ್ನು ಏರ್ಪಡಿಸಿ ಅವರ ಪ್ರತಿಭೆಯನ್ನು ಕಂಡು ಹೊಗಳುವುದೆಂದರೆ ಅವರಿಗೆ ನಾಲ್ಕು ನಾಲಗೆ. ವಿದ್ವಾಂಸರನ್ನು ಕರೆದು ಸತ್ಕರಿಸುವುದು ಸನ್ಮಾನಿಸುವುದು ಅವರಿಗೆ ಅಂಟಿದ ಆನಂದದಾಯಕ ಚಟ. ಇದರಿಂದ ಹಲವು ಬಾರಿ ಅವರ ಕಿಸೆಗೇ ಕತ್ತರಿಯಾದರೂ ಅದರ ಬಗ್ಗೆ ಧೀರ

ನಿರ್ಲಕ್ಷ್ಯ. ದಿನನಿತ್ಯ ನಾನು ಕಾಲೇಜಿಗೆ ಹೋಗುವಾಗ ಒಂದಲ್ಲ ಒಂದು ಅವರ ಯೋಜನೆ ಸಿದ್ಧ ವಾಗಿರುತ್ತದೆ. ಅದರ ಸಾಧಕ ಬಾಧಕಗಳನ್ನು ಅವರು ಹೆಚ್ಚು ಗಮನಿಸುವುದಿಲ್ಲ. 'ಹೇಗಾದ್ರೂ ಮಾಡೋಣ' ಎಂಬುದೇ ಅವರ ಪಲ್ಲವಿ. 'ತ್ರಿಪದಿಯ ಮೇಲೊಂದು ಪುಸ್ತಕ ತರೋಣ, ಸಾಂಗತ್ಯದ ಬಗ್ಗೆ ಈ ಕೂಡಲೇ ಏನಾದರೂ ಮಾಡಿ ಪುಸ್ತಕ ತರಲೇ ಬೇಕು, ಪಂಪ ಕುವೆಂಪು ಅವರನ್ನು ಕುರಿತು ಈ ವರ್ಷ ಸಂಘದಿಂದ ಎರಡು ಪುಸ್ತಕ ಹೊರಡಿಸಿಯೇ ಬಿಡೋಣ. ಲಕ್ಕಪ್ಪ ಗೌಡರೇ ನೀವು ಅದು ಬರೆಯಿರಿ, ಐತಾಳರೇ ನೀವು ಇದು ಬರೆಯಿರಿ, ರೈಗಳೇ ನೀವು ಹೀಗೆ ಮಾಡಿ'–ಹೀಗೆ ಏನಾದರೊಂದು ಮಾತು ನಡೆದೇ ಇರುತ್ತದೆ. 'ಹಲಬಂಪಿ ಪ್ರಕಾಶನ' ಅವರ ಈ ಸ್ಫೂರ್ತಿಯ ಫಲ. ದಕ್ಷಿಣ ಕನ್ನಡ ಜಿಲ್ಲೆಗೆ ಪ್ರಾತಿನಿಧಿಕವಾದ ಒಂದು ಭಾರೀ ಪ್ರಕಾಶನ ಸಂಸ್ಥೆಯಾಗಬೇಕೆಂಬುದು ಅವರ ಹಂಬಲ. 'ಮನೋರಮಾ ಪ್ರಕಾಶನ' ಎಂಬ ಸಂಸ್ಥೆ ಸ್ಥಾಪಿಸಿ ಅದರ ಆಶ್ರಯದಲ್ಲಿ ಒಂದೇ ಬಾರಿಗೆ ಹತ್ತು ಪುಸ್ತಕ ಗಳನ್ನಾದರೂ ಪ್ರಕಟಿಸಬೇಕು; ಅದಕ್ಕೆ ಒಂದು ಮುದ್ರಣಾಲಯವಿರಬೇಕು, ಪ್ರತ್ಯೇಕ ಭವನವಿರಬೇಕು, ಮಾರಾಟದ ವಿಭಾಗ ಪ್ರಕಾಶನ ವಿಭಾಗ ಮುಂತಾಗಿ ಆಗಬೇಕು–ಎಂಬ ಭಾರಿ ಭಾರಿ ಯೋಜನೆ ಅವರದ್ದು. ಸಣ್ಣ ಪುಟ್ಟ ವಿಚಾರಗಳು ಅವರ ಬಳಿ ಸುಳಿಯುವುದೇ ಇಲ್ಲ. ಬರಿಗೈಯಲ್ಲಿ ಮೊಳ ಹಾಕಿದಂತಾದೀತೇನೋ ಎಂಬ ಶಂಕೆಯ ಬೇರನ್ನೇ ಅವರ ಉತ್ಸಾಹ ಹುರುಪು ಮಹತ್ವಾಕಾಂಕ್ಷೆಗಳು ಅಳಿಸಿ ಹಾಕಿ, ನಾವೂ 'ಏನಾದರೂ ಮಾಡಲೇ ಬೇಕು' ಎಂದು ಅವರೊಡನೆ ದನಿಗೂಡಿಸುವಂತೆ ಮಾಡುತ್ತವೆ. ಅವರು ಮೈಸೂರಿನಲ್ಲಿದ್ದಾಗ 'ಸರಸ ಸಾಹಿತ್ಯ ಪ್ರಕಾಶನ'ವನ್ನು ಆರಂಭಿಸಿ ಹಲವು ಕಿರಿಯರ ಹಿರಿಯರ ಪುಸ್ತಕಗಳನ್ನು ಪ್ರಕಟಿಸಿ ಹತ್ತಾರು ಸಾವಿರ ಸಾಲಮಾಡಿ ಕೈ ಸುಟ್ಟುಕೊಂಡಿರುವುದುಂಟು. ಇಂದೂ ಸಾಲ ಮಾಡಿಯಾದರೂ ಪುಸ್ತಕ ಅಚ್ಚಿಸುವ ಅವರ ಪ್ರವೃತ್ತಿ ಮಾಸಿಲ್ಲ.

ಅವರ ಮುನ್ನುಡಿಯನ್ನು ಬೇಡಿ ಬರುವ ಪುಸ್ತಕಗಳು ಹತ್ತಾರು. ಅವುಗಳಲ್ಲಿ ಪೂರ್ತಿ ಬೆಂದ ಅರೆ ಬೆಂದ ಏನೂ ಬೇಯದ ಕೃತಿಗಳೂ ಉಂಟು. ಯಾವ ಮುನ್ನುಡಿಯ ಬೇಡಿಕೆಯನ್ನೂ ಅವರು ನಿರಾಕರಿಸುವುದಿಲ್ಲ. ಎತ್ತಿ ಹೇಳಲು ಒಂದು ಸಾಲೂ ಇಲ್ಲದ ಕೃತಿಗಳು ಬಂದಾಗ ಅವರ ಮನಸ್ಸಿನ ವ್ಯಥೆ ಹತ್ತಿರವಿದ್ದವರಿಗೆ ಗೊತ್ತು. ಹಾಗೆಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಡುವ ಪ್ರವೃತ್ತಿಯೂ ಅವರದಲ್ಲ. ಅದನ್ನು ನಾಲ್ಕಾರು ಬಾರಿ ತಿರುವಿ ಹಾಕಿ ಎರಡು ಸಾಲನ್ನಾದರೂ ಕಷ್ಟಪಟ್ಟು ಹುಡುಕಿ ಉದ್ಧರಿಸಿ ಮೆಚ್ಚುನುಡಿಯಾಡುವುದು ಅವರ ಸ್ವಭಾವ. ಇದರಿಂದ ಎಷ್ಟೋ ಬಾರಿ ಪತ್ರಿಕಾ ವಿಮರ್ಶ ಕರ ದಾಳಿ ಇವರ ಮುನ್ನುಡಿಯ ಮೇಲೆಯೇ ಎರಗುವುದುಂಟು. ಆಗ ತುಂಬ ನೊಂದುಕೊಳ್ಳು ವುದೂ ಉಂಟು. ಒಳ್ಳೆಯ ಕೃತಿಗಳು ಬಂದಾಗ ಅದರ ಅಂಶಗಳನ್ನು ಮೆಚ್ಚಿ ಚಪ್ಪರಿಸಿ ಹತ್ತಿರವಿದ್ದ ವರಿಗೆ ತಮ್ಮದೇ ಕೃತಿಯೆನ್ನುವಷ್ಟು ಅಭಿಮಾನದಿಂದ ಎತ್ತಿ ಹೇಳುವಾಗ ಅವರ ಮನಸ್ಸಿನ ನಿರ್ಮತ್ಸರ ಶೀಲವಾದ ಆನಂದವನ್ನು ನೋಡಬೇಕು. ಎಷ್ಟೋ ಲೇಖಕರ ಚೊಚ್ಚಲು ಕೃತಿಗಳನ್ನು ತಾವೇ ಪ್ರಕಟಿಸಿದ್ದು ಮಾತ್ರವಲ್ಲದೆ ಬೇರೆ ಪ್ರಕಾಶಕರಿಗೂ ಶಿಫಾರಸ್ ಮಾಡಿ ಪ್ರಕಟಿಸುವಂತೆ ಮಾಡಿದ್ದಾರೆ. ಇಂದು ಪ್ರಸಿದ್ಧರಾಗಿರುವ ಹಲವು ಹೆಸರುಗಳೂ ಇದರಲ್ಲಿ ಸೇರಿವೆ. ಏನೂ ಬರೆಯದಿದ್ದವರನ್ನೂ ಬರೆಯುವಂತೆ ಮಾಡುವ ಪ್ರಚೋದನೆ ಅವರದು. ಅವರ ಈ ಒತ್ತಾಯ ಸಹಾಯಗಳಿಂದಲೇ ತಮ್ಮ ಪ್ರತಿಭೆಯನ್ನು ಕಂಡುಕೊಂಡವರೂ ಇದ್ದಾರೆ. ಈ ಇಳಿ ವಯಸ್ಸಿನಲ್ಲೂ ಹೆಣವನ್ನೂ ಕಚಗುಳಿ ಯಿಟ್ಟು ಎಬ್ಬಿಸುವಂಥ ಅವರ ಸ್ಫೂರ್ತಿದಾಯಕ ವ್ಯಕ್ತಿತ್ವ ಮಸುಳಿಸಿಲ್ಲ.

**ವಾಕ್ಕಲಾ ವಿಶಾರದ:**

ಪ್ರೊ. ಪರಮೇಶ್ವರ ಭಟ್ಟರ ಯಶಸ್ಸಿಗೆ ಕಾರಣವಾದ ಬಹುದೊಡ್ಡ ಶಕ್ತಿಗಳಲ್ಲೊಂದು ಅವರ ಅನನ್ಯ ಸದೃಶವಾದ ಮಾಂತ್ರಿಕ ವಾಕ್ಕಲೆ. ಪರಿಮಿತ ಸಂಖ್ಯೆಯ ತರಗತಿಯ ಕೊಠಡಿಯಲ್ಲಿ ಕುಳಿತಾಗ ಒಂದು ಭಂಗಿ, ಸಹಸ್ರಾರು ಸಭಿಕರೆದುರು ಭಾಷಣಕ್ಕೆ ನಿಂತಾಗ ಮತ್ತೊಂದು ಭಂಗಿ. ವಿಷಯ ವೈಜ್ಞಾನಿಕವಾಗಿರಲಿ, ವೇದಾಂತವಾಗಿರಲಿ, ತಾಂತ್ರಿಕವಾಗಿರಲಿ, ಸಾಂಗೀತಿಕವಾಗಿರಲಿ, ಧಾರ್ಮಿಕ ವಾಗಿರಲಿ, ಶೈಕ್ಷಣಿಕವಾಗಿರಲಿ ಅವರ ಹೃದಯವನ್ನು ಹೊಕ್ಕು ಬರುವಾಗ ಪರಮೇಶ್ವರೀಕರಣವಾಗಿ

ಬಿಡುತ್ತವೆ: ಅಪಾರವಾದ ಓದಿನ ಅಗಾಧವಾದ ಲೋಕಾನುಭವದ ಅಂತರಂಗದಿಂದ ಸಹಜಸ್ಫೂರ್ತಿ ವಾಗಿ ಹೊರಹೊಮ್ಮಿ ನಿರ್ಜೀವ ವಾತಾವರಣದಲ್ಲೂ ಚೇತನವನ್ನು ಚಿಲುಮಿಸುತ್ತದೆ. ಅವರು ನಿಂತರೆ ಸಾಕು, ಸಭಿಕ ವೃಂದದ ಮೈ ಕಣ್ಣಾಗುತ್ತದೆ ಕಿವಿಯಾಗುತ್ತದೆ. ಅವರು ಬಾಯಿ ತೆರೆದರೆ ಸಾಕು. ನಯವಾಗಿ ನವುರಾಗಿ ಎಳೆಎಳೆಯಾಗಿ ಸರಸರವಾಗಿ ಸುರುಳಿ ಸುರುಳಿಯಾಗಿ ವರ್ಣ ವರ್ಣವಾಗಿ ಪ್ರಚಂಡ ಪ್ರವಾಹ ಸ್ವರೂಪಿಯಾಗಿ ಮಾತಿನ ಮಹಾನದಿ ನಾಟುನುಡಿ ಚಾಟುನುಡಿ ಚಾಟಿನುಡಿ ನಿದರ್ಶನ ಉಪಮೆ ರೂಪಕ ಗಾದೆ ಗೀತ ಚುಟುಕ ಒಗಟುಗಳನ್ನೊಳಗೊಂಡು ಏರಿ ಇಳಿದು ಸುತ್ತಿ ಸುಳಿದು ಬಾಗಿ ಬಳುಕಿ ಸವೇಗವಾಗಿ ಸಶಕ್ತವಾಗಿ ಹರಿಯತೊಡಗುತ್ತದೆ. ಆ ಗತ್ತು, ಆ ಒತ್ತು, ಆಗಮ್ಮತ್ತು, ಆ ಓಘ, ಆ ಓಟ, ಆ ಮಾಟ, ಆ ಪ್ರಾಸ, ಆ ವಿನ್ಯಾಸ ಕೇಳುಗರ ಚಿತ್ತವನ್ನು ಸೆರೆ ಹಿಡಿಯುತ್ತವೆ. ಹುಬ್ಬುಗಳ ಏರಿಳಿತ, ತಲೆಯ ಒಲೆತ, ಕಣ್ಣಿನ ಕುಣಿತ, ದೇಹದ ಬಾಗು. ಕೈಗಳ ಬಗೆಬಗೆಯ ವಿನ್ಯಾಸ ಈ ಮಾತಿನ ಮಹಾಸಂಗೀತಕ್ಕೆ ಪಕ್ಕವಾದ್ಯ ನುಡಿಸುತ್ತವೆ. ಈ ಕಾರಣದಿಂದಲೇ ಶಿಶುವಿಹಾರದಿಂದ ಹಿಡಿದು ಸ್ನಾತಕೋತ್ತರ ಕಾಲೇಜುಗಳ ವರೆಗೆ, ಸಣ್ಣ ಪತ್ರಿಕೆಯೊಂದರ ಉದ್ಘಾಟನೆ ಯಿಂದ ಹಿಡಿದು ಧರ್ಮ ಸಮ್ಮೇಳನದ ಉದ್ಘಾಟನೆಯವರೆಗೆ ಅವರಿಗೆ ಭಾಷಣಗಳಿಗಾಗಿ ಅಸಂಖ್ಯಾತ ವಾದ ಕರೆಗಳು ಬರುತ್ತವೆ. ಹೆಚ್ಚಿನವುಗಳನ್ನು ಅವರು ಒಪ್ಪಿಕೊಳ್ಳುತ್ತಾರೆ. ಅದು ಪ್ರಾಥಮಿಕ ಶಾಲೆಯೆಂಬ ತಾತ್ಸಾರವಿಲ್ಲ, ವಿದ್ವತ್ಸಭೆಯೆಂಬ ವಿಶೇಷ ಅತ್ಯುತ್ಸಾಹವಿಲ್ಲ. ಅದ್ದರಿಂದ ಅವರು ಎಲ್ಲಿ ಹೋದರೂ ಮಕ್ಕಳಿಂದ ಹಿಡಿದು ಮಲಗಿದಲ್ಲಿಂದ ಏಳಲಾರದ ಮುದುಕರವರೆಗೆ ಅವರನ್ನು ಆದರಿಸುತ್ತಾರೆ, ಗೌರವಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಹಳ್ಳಿ ಹಳ್ಳಿಯಲ್ಲಿಯೂ ಬಹುಮಟ್ಟಿಗೆ ಭಾಷಣ ಮಾಡಿದ್ದಾರೆ; ಅವರಾಡುವ ಯಕ್ಷಗಾನಗಳನ್ನು ಬೆಳಗಿನ ವರೆಗೂ ನಿದ್ರೆಗೆಟ್ಟು ಅವರೊಡನೆ ನೋಡಿ ಆನಂದಿಸಿ ಆನಂದ ನೀಡಿದ್ದಾರೆ. ಈ ಆದರ ಈ ಗೌರವ ಅವರ ಬಾಳನ್ನು ನಡೆಯಿಸುವ ದೊಡ್ಡ ಪ್ರೇರಣೆಯಾಗಿದೆ. ಹಲವೆಡೆ ಮಾತನಾಡುವ ವಸ್ತು ಒಂದೇ ಆಗಿರಬಹುದು; ಆದರೆ ರೀತಿ ಮಾತ್ರ ಸಲಸಲಕ್ಕೂ ಭಿನ್ನ, ಆಕರ್ಷಣ ಸಂಪನ್ನ. ಇದು ಇವರ ಅತ್ಯಮೂಲ್ಯ ಆಸ್ತಿ.

### ಪ್ರಯೋಗ ಪಟು:

ಪ್ರಯೋಗಗಳಿಗೆ ಮತ್ತೊಂದು ಹೆಸರು ಪರಮೇಶ್ವರ ಭಟ್ಟರು. ಹಿರಿಯರ ಹಿರಿಯ ಆದರ್ಶವನ್ನು ಪಾಲಿಸಿದರೂ ಏನಾದರೂ ಸ್ವವಿಶಿಷ್ಟವಾದುದನ್ನು ಸಾಧಿಸುವ ಬಯಕೆ ಅವರಿಗೆ. ಅವರ ಈ ಬಯಕೆಯ ಫಲವೇ ಅವರ ವಿವಿಧ ಕೃತಿಗಳು. ಕಾಳಿದಾಸನ ಒಂದೊಂದು ಕೃತಿಯನ್ನು ಯಾರೋ ಒಬ್ಬೊಬ್ಬರು ಕನ್ನಡಿಸಿದ್ದುಂಟು. ಆದರೆ ಮನೆಯ ಕ್ಲೇಶದ ವಾತಾವರಣದಲ್ಲೂ, ಮನಸ್ಸಿನ ಅಶಾಂತಿಯನ್ನು ಕಳೆಯುವ ಮದ್ದು ಕಾವ್ಯಾಭ್ಯಾಸ ಮತ್ತು ಕಾವ್ಯರಚನೆಯೆಂದು ಬಗೆದು, ಅವಿರಾಮದಲ್ಲೂ ವಿರಾಮ ವನ್ನು ಪಡೆದುಕೊಂಡು ಕಾಳಿದಾಸನ ಮಹಾಕಾವ್ಯ ಖಂಡಕಾವ್ಯ ನಾಟಕಗಳೆಲ್ಲವನ್ನೂ ವಿವಿಧ ಛಂದಸ್ಸು ಗಳಲ್ಲಿ ಸಮಗ್ರವಾಗಿ ಅನುವಾದಿಸಿ ಕಾಳಿದಾಸ ಮಹಾಸಂಪುಟವನ್ನು ಹೊರತಂದ ಅದ್ಭುತ ಸಾಧನೆ ಅವರದ್ದು. ಯಾವುದೇ ಭಾಷೆಯಲ್ಲೂ ಒಬ್ಬನೇ ಲೇಖಕ ಕಾಳಿದಾಸನ ಕೃತಿ ಸಮುದಾಯವನ್ನು ಅಖಂಡವಾಗಿ ಅನುವಾದಿಸಿದ ನಿದರ್ಶನವಿಲ್ಲ. ಇದು ಅವರ ಅವಿರತ ಸಾಧನೆಯ ಅಪಾರ ಪಾಂಡಿತ್ಯದ ಅಮೃತ ಫಲ; ಒಂದು ವಯೋಮಾನದ ಸಾಹಿತ್ಯ ಸಾಹಸ. ಹೀಗೆಯೇ 'ಭಾಸ ಮಹಾ ಸಂಪುಟ' ವನ್ನೂ ತರುವ ಯೋಜನೆ ಅವರದು. ಜಯದೇವನ ಲೋಕಪ್ರಿಯವಾದ ಗೀತಗೋವಿಂದದ ಭಕ್ತಿ ಶೃಂಗಾರಗಳ ರಸಸ್ರೋತ ಕನ್ನಡ ರಸಿಕರ ಹೃದಯದಲ್ಲಿ ಹರಿದದ್ದು ಭಟ್ಟರ ಕೃಪೆಯಿಂದ. ಹಾಲರಾಜನ ಪ್ರಾಕೃತದ 'ಗಾಥಾ ಸಪ್ತಶತಿ' ಕನ್ನಡದಲ್ಲೇ ಮೊದಲು ಸೃಷ್ಟಿಯಾಯಿತೇನೋ ಎಂಬಂಥ ಭ್ರಮೆ ಬರುವಷ್ಟು ಸ್ವಾಭಾವಿಕವಾಗಿ ಸಹಜ ಬಂಧುರವಾಗಿ ಕನ್ನಡೀಕರಣಗೊಂಡದ್ದು ಅವರ ಭಾಷಾಂತರ ಸಿದ್ಧಿಗೊಂದು ಹೆಗ್ಗುರುತು. ಭರ್ತೃಹರಿಯ ಭಕ್ತಿ-ವೈರಾಗ್ಯ-ಶೃಂಗಾರಗಳ ಶತಕ ತ್ರಿವೇಣಿಗೆ ಕನ್ನಡ ಶರೀರ ಧಾರಣೆ ಮಾಡಿಸಿದ್ದು, ರಸಿಕರಾಜ ಅಮರುವಿನ ಲೋಕೋತ್ತರವಾದ ಶೃಂಗಾರ ಕವಿತಾ ಮಂಜರಿಯನ್ನು ಕನ್ನಡ ಸರಸ್ವತಿಯ ಮುಡಿಗೆ ಮುಡಿಸಿದ್ದು ಇವರ ನಿಷ್ಠಾವಂತ ಪ್ರಯತ್ನಕ್ಕೆ ಸಾಕ್ಷಿ.

ಅವರ 'ಭಾವಗೀತೆ', 'ಅಕ್ಕ ಮಹಾದೇವಿ', '[illegible]', '[illegible]' ಮುಂತಾದ ಕೃತಿಗಳಲ್ಲಿ ಅವರದೇ ಆದ ವಿಶಿಷ್ಟತೆಯನ್ನು ಗುರುತಿಸಬಹುದು. ಎಲ್ಲಕ್ಕೂ ಮಿಗಿಲಾಗಿ ಅವರ ಪ್ರತಿಭೆಗೊಂದು ವ್ಯಕ್ತವಾಗಿರುವುದು, ಶತಶತಮಾನಗಳ ಪೂರ್ವದಿಂದಲೂ ಜಾನಪದ ರಸಗಂಗೆ ಹರಿದ [illegible] ಕನ್ನಡದ ಸೃಷ್ಟಿ ಸರಳ ಜನಪ್ರಿಯ ಛಂದಸ್ಸುಗಳಾದ ಪದ, ತ್ರಿಪದಿ, ಸಾಂಗತ್ಯಗಳನ್ನು ಪುನರ್‌ಸೃಷ್ಟಿಸಿ, ಬದುಕಿನ ನೂರು ಮುಖಗಳ ಅನುಭವ ಸಾರವನ್ನು ತುಂಬಿ ಸಹಸ್ರಾರು ಸಂಖ್ಯೆಯ ಸತ್ತ್ವಯುಕ್ತ ಪದ್ಯಗಳನ್ನು ರಚಿಸಿ ಹೊಸಗನ್ನಡ ಸಾಹಿತ್ಯದಲ್ಲಿ ಒಂದು ನವೀನ ದಾಖಲೆಯನ್ನು ಸೃಜಿಸಿರುವುದರಲ್ಲಿ. ಅಕ್ಕ ಮತ್ತು ಬಸವಣ್ಣನವರ ವಚನಗಳನ್ನೇ ಸ್ವರೂಪದಲ್ಲಿ ಸತ್ತ್ವದಲ್ಲಿ ಸ್ಮರಣೆಗೆ ತರುವ ಕಲಾಪೂರ್ಣವಾದ ವಚನಗಳನ್ನು ರಚಿಸಿದ್ದು ಅವರ ಮತ್ತೊಂದು ಹಿರಿಮೆ. ಪ್ರಾಚೀನ ಜನಪದದ ಸಾಮೂಹಿಕ ಸೃಷ್ಟಿಯಾದ ಗಾದೆಗಳು ವೈಯಕ್ತಿಕ ಸೃಷ್ಟಿಯಲ್ಲೂ ಮೂಡಿ ಬರಬಹುದೆಂದು ಸಾಧಿಸಿದ ಶ್ರೇಯಸ್ಸು ಅವರದು. ಜನಪದ ಸಾಹಿತ್ಯದಲ್ಲಿ ಅತ್ಯಂತ ಕ್ಲಿಷ್ಟವೂ ಚಾತುರ್ಯ ಪೂರ್ಣವೂ ಆದ ಪ್ರಕಾರವಾದ ಒಗಟುಗಳನ್ನು ಆಧುನಿಕ ಕವಿಯೂ ರಚಿಸಬಲ್ಲ ಎಂದು ತೋರಿಸಿದ್ದು ಅವರ ಪ್ರಯೋಗಪಟುತ್ವಕ್ಕೆ ಮತ್ತೊಂದು ಕೋಡು. ಯಾವ ಛಂದಸ್ಸಿಗೂ ಒಳಪಡದ ಚಿಂತನೆಯ ಹರಳುಗಳಿಂದ ತುಂಬಿದ 'ಹಾಮರ' ಅವರ ಮತ್ತೊಂದು ವಿಶಿಷ್ಟ ಪ್ರಯೋಗ. ಹೀಗೆ ಅನವರತವೂ ಏನಾದರೊಂದು ಹೊಸ ಬಗೆಯನ್ನು ಚಿಂತಿಸಿ ಅದನ್ನು ಕಾರ್ಯರೂಪಕ್ಕೆ ತರುವ ಶ್ರೇಷ್ಠ ಪ್ರತಿಭೆ ಅವರದು.

### ಕನ್ನಡ ಭಕ್ತ:

ಪ್ರೊ. ಭಟ್ಟರ ಕನ್ನಡ ಭಕ್ತಿ ಪ್ರಶ್ನಾತೀತವಾದದ್ದು. ತರಗತಿಯಾಗಿರಲಿ ಸಾರ್ವಜನಿಕ ಸಭೆಯಾಗಿರಲಿ ವೈಯಕ್ತಿಕ ಮಾತುಕತೆಯಾಗಿರಲಿ ಪ್ರಾಸಂಗಿಕವಾಗಿ ಒಮ್ಮೆಯಾದರೂ ಅದರಲ್ಲಿ ಕನ್ನಡದ ಹಿರಿಮೆ ಗರಿಮೆಗಳನ್ನು ಪ್ರಸ್ತಾಪಿಸಿಯೇ ತೀರುತ್ತಾರೆ. ಪರಭಾಷೆಯ ಹಾವಳಿಯಿಂದ ಅತಿ ವ್ಯಾಮೋಹದಿಂದ ಕನ್ನಡ ಮಕ್ಕಳ ಬುದ್ಧಿಗೆ ಪ್ರತಿಭೆಗೆ ಲಕ್ಷ್ಯ ಹೊಡೆದಿರುವುದನ್ನು ಅವರ ಆಯುಸ್ಸು ವ್ಯರ್ಥವಾಗುತ್ತಿರುವುದನ್ನು ನಾಡಿನ ಹಣದ ದುರ್ವ್ಯಯವಾಗುವುದನ್ನು ನಿದರ್ಶನಗಳ ಮೂಲಕ ಸಾಧಾರವಾಗಿ ಕಣ್ಣಿಗೆ ಕಟ್ಟುವಂತೆ ಮನಸ್ಸಿಗೆ ಮುಟ್ಟುವಂತೆ ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಶಕ್ತಿವತ್ತಾಗಿ ನಿರೂಪಿಸುತ್ತಾರೆ. ಹೆಚ್ಚು ಭಾಷಣಗಳಿಗೆ ಅವರು ಒಪ್ಪಿಕೊಳ್ಳುವುದು ಕನ್ನಡದ ಬಗೆಗೆ ಏನನ್ನಾದರೂ ಹೇಳಬಹುದಲ್ಲಾ ಎಂಬುದು ಒಂದು ಕಾರಣವಾದರೆ, ಕನ್ನಡ ವಿರೋಧಿಗಳು ಕನ್ನಡಕ್ಕೆ ಕೀಟಪ್ರಾಯರಾಗಿ ಸಲ್ಲದ್ದನ್ನು ಹೇಳಿಬಿಟ್ಟಾರು ಎಂಬ ಸಾತ್ವಿಕ ಭೀತಿ ಮತ್ತೊಂದು ಕಾರಣ. ಎಲ್ಲ ವೇದಿಕೆಗಳಲ್ಲೂ ಕನ್ನಡಕ್ಕೆ ದುಡಿದ ದುಡಿಯುತ್ತಿರುವ ಮಹನೀಯರ ಆದರ್ಶಗಳನ್ನು ಒತ್ತಿ ಹೇಳಿ ವಿದ್ಯಾರ್ಥಿಗಳಲ್ಲಿ ವಿದ್ವಾಂಸರಲ್ಲಿ ಕನ್ನಡದ ಪ್ರಜ್ಞೆಯನ್ನು ಜಾಗೃತಗೊಳಿಸಲು ಶಕ್ತಿಮೀರಿ ಯತ್ನಿಸುತ್ತಾರೆ. ತಮ್ಮ ಭಾಷಣಗಳನ್ನು ಕೇಳಿ ಸಂತೃಪ್ತರಾಗಿ ಚಪ್ಪಾಳೆ ಹೊಡೆದು ಹೋದ ಜನ ತಮ್ಮ ಮಾತಿನ ಮುಖ್ಯಾಂಶಗಳನ್ನೇ ಮರೆತು ಬಿಡುತ್ತಾರೆ ಎಂದು ಅವರು ಹಿಂದಿನಿಂದ ಹಳಹಳಿಸುವುದೂ ಉಂಟು. ಅವರಿಗೆ ಕೋಪ ಬರುವುದು ಬಹಳ ಅಪರೂಪ. ಆದರೆ ಕನ್ನಡ ಸಾಹಿತಿಗಳ ಬಗ್ಗೆ ಕನ್ನಡದ ಬಗ್ಗೆ ಏನಾದರೂ ವ್ಯಂಗ್ಯದ ಒಡಕು ನುಡಿಯನ್ನು ಯಾರಿಂದಾದರೂ ಕೇಳಿದ ಕೂಡಲೇ ನಗು ನಲಿಯುತ್ತಿದ್ದ ಅವರ ಮುಖದಲ್ಲಿ ರೋಷ ತಾಂಡವವಾಡತೊಡಗುತ್ತದೆ. ಹಾಗೆ ಹೇಳಿದವರ ಸ್ಥಾನ ಮಾನ ವಯಸ್ಸು ವಿದ್ವತ್ತು ಒಂದನ್ನೂ ಲೆಕ್ಕಿಸದೆ ಅವರ ಮೇಲೆ ಹರಿಹಾಯ್ದು ಬಿಡುತ್ತಾರೆ. ಒಮ್ಮೆ ಪಂಡಿತರೊಬ್ಬರು ಕನ್ನಡದ ಉತ್ತಮ ಕೃತಿಯೊಂದನ್ನು 'ಅದರಲ್ಲೇನಿದೆ?' ಎಂದು ಟೀಕಿಸಿದಾಗ ಅದುವರೆಗೆ ಸರಸವಾಗಿ ಆತ್ಮೀಯವಾಗಿ ಗೌರವ ಪೂರ್ವಕವಾಗಿ ಮಾತನಾಡುತ್ತಿದ್ದ ಭಟ್ಟರು ಕೆರಳಿದ ಹುಲಿಯಾದರು, ಕಣ್ಣು ಕೆಂಡವಾದವು. "ನಿಮ್ಮಂತಹ ಪಂಡಿತರಿಂದಲೇ ಕನ್ನಡ ಹಾಳಾಗುವುದು. ಕೃತಿಯನ್ನು ಸರಿಯಾಗಿ ಓದದೆ ಕೇವಲ ವ್ಯಾಕರಣದ ತಪ್ಪನ್ನು ಹಿಡಿದು ಅದರಲ್ಲೇನಿದೆ, ಇದರಲ್ಲೇನಿದೆ ಅಂತ ಛಿದ್ರಾನ್ವೇಷಣೆ ಮಾಡಿ ಜರಿಯುವುದರಲ್ಲೇ ನಿಮ್ಮ ಬುದ್ಧಿಯೆಲ್ಲಾ ಖರ್ಚಾಗುತ್ತದೆ. ನಿಮ್ಮಂಥವರೇ ಕನ್ನಡ ಸಂಸ್ಕೃತದಿಂದಲೇ ಹುಟ್ಟಿದ್ದು ಅಂತ ಹಿಜೀರಾಯನ ಕಾಲದ ಅಭಿಪ್ರಾಯವನ್ನು ಆ ಚಿಕ್ಕ ಹುಡುಗರಿ

ಗೆಲ್ಲಿ ಹೇಳಿ ಬುದ್ಧೀನೆಲ್ಲ ಕೆಡಿಸಿ ಹಾಳು ಮಾಡಿಬಿಟ್ಟೀರಿ. ಮುಳಿಯ ತಿಮ್ಮಪ್ಪಯ್ಯನವರಂಥ, ಕಾನಕಾನ ಹಳ್ಳಿ ವರದಾಚಾರ್ಯರಂಥ ಮಹಾ ಪಂಡಿತರಿಗೆ ನಾನು ಶರಣಾಗ್ತೀನಿ. ಅವರಿಗೆ ರಸಿಕತೆ ಇತ್ತು. ನಿಮಗೇನಿದೆ ಮಣ್ಣು. ನಿಮಗೆ ಕಾಣೋದೆಲ್ಲಾ ಬರೀ ದೋಷ. ನೀವು ಇಂಥ ಒಂದು ಪುಸ್ತಕ ಬರೀರಿ ನೋಡೋಣ, ಶಕ್ತಿಯಿದ್ದರೆ!" ಎಂದು ಮುಖಕ್ಕೆ ರಾಚಿದಂತೆ ಹೇಳಿಬಿಟ್ಟರು. ಪಾಪ, ಆ ಪಂಡಿತರು ಇಂಥ ಅನಿರೀಕ್ಷಿತವಾದ ಕೋಪಕ್ಕೆ ದಿಗ್ಭ್ರಾಂತರಾಗಿ ಮುಖ ಕೆಳಗೆ ಹಾಕಿದರು. ಇಂಥ ಸಂದರ್ಭಗಳು ಹಲವಾರು. ಇದು ಅವರ ಕನ್ನಡ ನಿಷ್ಠೆಯನ್ನು ಎತ್ತಿ ತೋರಿಸುತ್ತದೆ. ಕನ್ನಡ ನಾಡಿನ ಮಕ್ಕಳಿಗೆ ಅವರ ಸಂದೇಶ ಇದೇ:

ಕನ್ನಡ ತಾಯಿಯ ಜಯ ವೈಜಯಂತಿಯ
ಏರಿಸು ಹಾರಿಸು ಎಳೆಯ
ಕನ್ನಡ ತಾಯಿಯ ಸಿರಿನುಡಿ ಭೇರಿಯ
ಬಾರಿಸು ಮೊಳಗಿಸು ಗೆಳೆಯ

* * * * *

ಪ್ರೊ. ಭಟ್ಟರು ಯಾರನ್ನೂ ದ್ವೇಷಿಸುವುದಿಲ್ಲ, ಹೀಗಳೆಯುವುದಿಲ್ಲ. ಆದ್ದರಿಂದ ಅವರಿಗೆ ಶತ್ರುಗಳೇ ಇಲ್ಲ. ಮಿತ್ರರೇ ಎಲ್ಲ. ಅವರು ಅಜಾತ ಶತ್ರು. ಅವರಿಗೆ ಸದಾ ಕಾಣುವುದು ಗುಣ, ಗುಣ, ಗುಣ.

ಇಷ್ಟೆಲ್ಲಾ ಕೃತಿಗಳ ಕರ್ತರಾಗಿದ್ದರೂ ಗುಣಗಣ ವಿಭೂಷಿತರಾಗಿದ್ದರೂ ವಯಸ್ಕರಾಗಿದ್ದರೂ ಅವರಲ್ಲಿ ಮಗುವಿನ ಮುಗ್ಧತೆ, ಸ್ಥಿತಪ್ರಜ್ಞನ ನಗು, ಪರಂಪರೆಯ ಸಂಸ್ಕೃತಿ, ಹರೆಯದ ಹುರುಪು, ಎಳೆಯನ ಆಸಕ್ತಿ, ಶ್ರೀಮಂತನ ಔದಾರ್ಯ ಮನೆ ಮಾಡಿವೆ. ಪ್ರತಿಭಾವಂತರೂ ವಿನಯ ನಿಧಿಗಳೂ ಆದ ಇಬ್ಬರು ಹೆಣ್ಣು ಮಕ್ಕಳು ಇಬ್ಬರು ಗಂಡು ಮಕ್ಕಳು ಭಟ್ಟರ ಮನೆಯನ್ನು ಮನವನ್ನು ತುಂಬಿದ್ದಾರೆ; ತಂದೆಗೆ ತಕ್ಕ ಮಕ್ಕಳಾಗಿ ತೃಪ್ತಿ ತಂದಿದ್ದಾರೆ. ಇಂದು ಮಂಗಳೂರಿನ ಸ್ನಾತಕೋತ್ತರ ಶಿಕ್ಷಣ ಕೇಂದ್ರದ ಪ್ರಮುಖರಾಗಿರುವ ಅವರು ಇಲ್ಲಿನ ಮನೋಹರ ನಿಸರ್ಗದಿಂದ ಸ್ಫೂರ್ತಿಗೊಂಡು ಮತ್ತಷ್ಟು ಚಿರಕಾಲಿಕ ಮೌಲ್ಯದ ಅನರ್ಘ್ಯ ಕೃತಿರತ್ನಗಳನ್ನು ಕನ್ನಡ ಸರಸ್ವತಿಗೆ ಕಾಣಿಕೆ ನೀಡಲಿ; ರಾಜ್ಯಸಾಹಿತ್ಯ ಅಕಾಡೆಮಿಯಿಂದ ಪುರಸ್ಕೃತರಾಗಿರುವ ಅವರಿಗೆ ರಾಷ್ಟ್ರಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಬೇಗ ಸಿಗಲಿ; ಕುಂದದ ಆರೋಗ್ಯದಿಂದ ನಗುನಗುತ್ತಾ ನೂರ್ಕಾಲ ನಮ್ಮೊಡನಿದ್ದು ಹರಸಲಿ ಎಂದು ಹಾರೈಸುತ್ತೇನೆ.

# ೭. ಪ್ರೊ. ಭಟ್ಟರ ಅಂತರಂಗ ದರ್ಶನ

ಕುಂಜಿಬೆಟ್ಟು ಸುಬ್ರಹ್ಮಣ್ಯ ಕೆದ್ಲಾಯ ಮತ್ತು ಹರಿನಾರಾಯಣ, ಮಾಡಾವು

ಸರಸ ಮಾತುಗಾರಿಕೆ, ಸ್ವಾರಸ್ಯಪೂರ್ಣ ಸಂಭಾಷಣೆಗಳು ಸದಾ ಸಂತೋಷದಾಯಕ; ಸವಿದಷ್ಟೂ ಸವಿಯುವ ರಸಪಾಕ. ಸರಸಿಗಳ ಸಂವಾದ, ಸಂಸರ್ಗಗಳು ಸಿಕ್ಕುವುದು ಅಪೂರ್ವವಾದ ಸುಯೋಗ, ಮರೆಯಲಾಗದ ಮಹಾಭಾಗ್ಯ. ಸ್ವಭಾವತಃ ಸರಸಿಗಳಾದ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ ಮಾತು ಮಿನುಗುವ ಮುತ್ತು, ಮನಸೆಳೆಯುವ ಮೋಡಿ. ನುಡಿಗಳ ನವುರು ಗತ್ತು, ಸ್ವಂತ ಸೊತ್ತು! ಆ ಮಾತುಗಳಲ್ಲಿ ಸತ್ತ್ವವಿದೆ, ಸ್ವಾರಸ್ಯವಿದೆ, ಸೊಗಸಾದ ಸಂಗೀತವಿದೆ, ಬೆಳಗುವ ಕಳೆಯುಂಟು. ಅವರ ಮನಸ್ಸು ಆತ್ಮೀಯತೆಯ ಆಗರ, ರಸಿಕತೆಯ ಸಾಗರ.

ಶ್ರೀಯುತರ ಕುರಿತಾಗಿ ಒಂದು 'ಸಂದರ್ಶನ ಲೇಖನ' ಸಿದ್ಧಪಡಿಸಬೇಕೆಂಬ ಯೋಜನೆ ಸೂಕ್ತ ಸೂಚನೆಯಾಗಿ ದೊರೆತು ನಮ್ಮನ್ನು ಉತ್ಸಾಹಿಸಿ, ಪ್ರೇರೇಪಿಸಿತು. ಪ್ರಸ್ತಾಪಿಸಿದೊಡನೆ ಸಿಕ್ಕಿದ ಗುರುಗಳ ಸಮ್ಮತಿ ಶಿಷ್ಯರಾದ ನಮಗೆ ಪ್ರಚೋದಕ ಶಕ್ತಿಯಾಗಿ ಸಹಕಾರಿಯಾಯಿತು. ಕಳೆದ ದಶಂಬರ ತಿಂಗಳ ೧೭ನೆಯ ದಿನಾಂಕದ ಗುರುವಾರ. ಸಂಜೆಯ ಹೊತ್ತು ಏಳು ಗಂಟೆಗೆ ನಮ್ಮ ಸಂದರ್ಶನ ನಿಗದಿಯಾಗಿತ್ತು. ಬಂದವರೇ ನಮ್ಮೆದುರಿಗೆ ತಮ್ಮ ಸ್ಥಾನದಲ್ಲಿ ಕುಳಿತರು.

ನಿತ್ಯವೂ ನೋಡಿ, ಮಾತನಾಡಿ, ಪಾಠಕೇಳಿ ಪೂರ್ಣ ಪರಿಚಿತರಾಗಿರುವ ಪ್ರೊಫೆಸರರನ್ನು ವಿಶೇಷವೆಂಬಂತೆ 'ಸಂದರ್ಶನ' ಮಾಡುವುದೆಂದಾಗ ಏಕೋ ಅಂಜಿಕೆ, ಒಂದು ರೀತಿಯ ಅಳುಕು ಮನದಲ್ಲಿ ಮೂಡಿದ್ದವು. "ಇದು ನನಗೆ ಪ್ರಥಮ ಅನುಭವ" — ಎಂದು ಮಾತಿಗೆ ಅವರು ಹಾಕಿದ ಪೀಠಿಕೆ ನಮಗೆ ಉತ್ತೇಜಕವಾಯಿತು. ನೇರವಾಗಿ ಸಂಭಾಷಣೆಗೆ ತೊಡಗಿದೆವು.

*** "ಬರೆವಣಿಗೆಯ ಕ್ಷೇತ್ರಕ್ಕೆ ನೀವು ಎಂದು ಇಳಿದಿರಿ? ಅಚ್ಚಾದ ಮೊದಲ ಕೃತಿ ಯಾವುದು?"**

"ಬಹಳ ಹಿಂದೆ, ೧೯೩೧ – '೩೩ ರ ಅವಧಿಯಲ್ಲಿ 'ಇಂಟರ್ ಮೀಡಿಯೇಟ್'ನಲ್ಲಿದ್ದಾಗಲೇ ಬರೆಯುತ್ತಿದ್ದೆ. ಆಗಿನ ಬರೆವಣಿಗೆಯಲ್ಲೆಲ್ಲ ಷಟ್ಪದಿಗಳೇ ಜಾಸ್ತಿಯೆನ್ನಬೇಕು. "ಸುಬೋಧ", "ಕಲಾ", "ಸರಸ್ವತಿ"—ಮಾಸಪತ್ರಿಕೆಗಳಲ್ಲಿ ಅಚ್ಚಾಗಿದ್ದವು. 'ನೋಡಿ,... ನಿಮಗೊಂದು ಮಾತು ಹೇಳಬೇಕು. ಏನು ಬರೆದರೂ ಹರಿದು ಹಾಳುಮಾಡಬೇಡಿ. ಹಾಗೇ ಇಟ್ಟುಕೊಂಡಿರಿ. ಅವಶ್ಯವೆನಿಸಿದಾಗ ತಿದ್ದಿ ಬರೆಯಬೇಕು, ಎಂದಾದರೊಮ್ಮೆ ಉಪಯೋಗಕ್ಕೆ ಬಂದೀತು' — ಇದು ಪ್ರಾಸಂಗಿಕವಾಗಿ ಹೊಮ್ಮಿದ ಹಿತವಚನ. ಪ್ರಶ್ನೆಯ ಉತ್ತರಾರ್ಧವನ್ನು ಪುನಃ ಕೇಳಿದಾಗ "'ರಾಗಿಣಿ' ಕವನ ಸಂಕಲನ" ಎಂದರು.

*** ನಿಮ್ಮ ಬರೆವಣಿಗೆಗೆ ಪ್ರೇರಣೆ ಏನು, ಯಾರು?"**

"ವೈಯಕ್ತಿಕ ವಿಚಾರಗಳನ್ನು ಹೇಳಿಕೊಳ್ಳಬೇಕೆಂಬುದೇ ಪ್ರೇರಣೆ ನೀಡಿತೆನ್ನಬೇಕು. S. S. L. C. ಯಲ್ಲಿದ್ದಾಗ ತಂದೆಯವರು ತೀರಿಕೊಂಡರು. ಊರು ಬಿಟ್ಟು ಇಂಟರ್ ಮೀಡಿಯೇಟ್ ಓದಿದೆ. ಈ ಸ್ವಂತ ವಿಚಾರಗಳನ್ನೆಲ್ಲ 'ಇಂದ್ರಚಾಪ'ದಲ್ಲಿ ತೋಡಿಕೊಂಡಿದ್ದೇನಲ್ಲ? ನನ್ನ ಪ್ರಬಂಧ, ಕವಿತೆಗಳಿಗೆ ಮೊದಲಲ್ಲಿ ಪ್ರೋತ್ಸಾಹ ನೀಡಿದವರು ಶ್ರೀ ಕೆ. ನರಸಿಂಹ ಶಾಸ್ತ್ರಿಗಳು. ಅಲ್ಲದೆ ಶ್ರೀ ಟಿ. ಎಸ್. ವೆಂಕಣ್ಣಯ್ಯ, ಶ್ರೀ ವಿ. ಸೀ. ಮುಂತಾದವರಿಂದಲೂ ಸ್ಫೂರ್ತಿ ಪಡೆದಿದ್ದೇನೆ. ಗಿಳಿವಿಂಡು, ಕೊಳಲು, ಇಂಗ್ಲಿಷ್ ಗೀತಗಳು, ನಲ್ಮೆ ಇತ್ಯಾದಿಗಳು ನಾನು ಇಂಟರ್ ಮೀಡಿಯೇಟ್‌ನಲ್ಲಿದ್ದಾಗ ಮೊದಲು ಓದಿದ ಸಾಹಿತ್ಯ ಕೃತಿಗಳು."

*** "ಅನುವಾದ ಸಾಹಿತ್ಯದೆಡೆಗೆ ನಿಮ್ಮ ಒಲವು ಉದಿಸಲು ಕಾರಣವೇನಿರಬಹುದು?"**

"ಅನುವಾದ ಸಾಹಿತ್ಯಕ್ಕೆ ಕೈ ಇಟ್ಟದ್ದು ತಡವಾಗಿ ಆನರ್ಸ್‌ನಲ್ಲಿದ್ದಾಗ. ಶ್ರೀ ಪುಟ್ಟಪ್ಪ, ಶ್ರೀ ಮಾಸ್ತಿಯವರ

ಮಿಶ್ರ ಶೈಲಿಯಿತ್ತು; ಹಾಗೆಂದು ಶ್ರೀ ಮುಗಳಿಯವರೇ ಒಮ್ಮೆ ತಿಳಿಸಿದ್ದರು. ವೈಯಕ್ತಿಕ ವಿಶಿಷ್ಟತೆಗಾಗಿ ೧೯೪೦ರಲ್ಲಿ 'ಮೇಘದೂತ'ವನ್ನು ಅನುವಾದಿಸಿದೆ. ಶ್ರೀ ಬಿ. ಎಂ. ಶ್ರೀ. ಅವರ 'ಇಂಗ್ಲಿಷ್ ಗೀತಗಳು' ಶ್ರೀ ಮಾಸ್ತಿಯವರ ಉಪನ್ಯಾಸ, ಅನುವಾದ ಕಾರ್ಯದಲ್ಲಿ ಆಸೆಯನ್ನೂ, ನೆಚ್ಚನ್ನೂ ಉಂಟುಮಾಡಿದವು. ಅಧ್ಯಾಪಕನಾದ ಮೇಲೆ ಅಧ್ಯಾಪನದೊಡನೆ ಈ ಕಾರ್ಯವನ್ನು ಮುಂದುವರಿಸಿದೆ. ಶ್ರೀ ಮಾಸ್ತಿ, ಶ್ರೀ ಕೃಷ್ಣಶಾಸ್ತ್ರಿ, ಶ್ರೀ ಪುಟ್ಟಪ್ಪ ಮುಂತಾದವರ ಮೆಚ್ಚುಗೆಯ ಮಾತುಗಳು ನನ್ನನ್ನು ಉತ್ತೇಜಿಸಿದವು. ಕಾಳಿದಾಸನ ಸಮಗ್ರ ಕೃತಿಗಳ ಅನುವಾದ ಸಾಧ್ಯವಾಯಿತು. 'ಗಾಥಾ ಸಪ್ತಶತಿ'ಯ ಸ್ವಾರಸ್ಯದಿಂದ ಆಕರ್ಷಿತನಾಗಿ ಅವುಗಳನ್ನೂ ಅನುವಾದಿಸಿದೆ. ಭರ್ತೃಹರಿ, ಅಮರುಕ ಇವರ ಕೃತಿಗಳು 'ಭಾವಗೀತೆ'ಗೆ ಪಾತ್ರವಾಗಿದ್ದವು. ಪಾಠ ಹೇಳಬೇಕಾಗಿ ಬಂತು, ಅನುವಾದ ಕಾರ್ಯವೂ ಜತೆಯಲ್ಲೇ ಸಾಧಿತವಾಯಿತು. ಇವಕ್ಕೆಲ್ಲ ಇಂಗ್ಲಿಷ್ ಅನುವಾದಗಳು ಸಹಾಯಕ."

*** "ಆಂಗ್ಲ ಸಾಹಿತ್ಯದಲ್ಲಿ ನಿಮ್ಮ ಒಲವಿನ ಕವಿ ಯಾರು?"**

"ಆಳವಾದ ಅಧ್ಯಯನ ಮಾಡಿಲ್ಲ; Golden Treasury ಓದಿದ್ದೆ. ವರ್ಡ್ಸ್‌ವರ್ತ್ ಕವಿಯನ್ನು ಮೆಚ್ಚಿಕೊಂಡಿದ್ದೇನೆ. ಅವನ 'ಮೈಕೆಲ್' ಕವನವನ್ನು ಕನ್ನಡಕ್ಕೆ ಮಾಡಿದ್ದೇನೆ".

*** "ಕನ್ನಡದಲ್ಲಿ ನಿಮ್ಮ ಮೆಚ್ಚಿನ ಬರಹಗಾರರು ಯಾರು?"**

"ಉತ್ತರಿಸುವುದು ಕಷ್ಟಪ್ಪಾ...(ನಕ್ಕರು). ಹೆಚ್ಚಿನ ಎಲ್ಲ ನವೋದಯ ಕವಿಗಳು. ನವ್ಯದವರಲ್ಲಿ ಅರ್ಥವಾದುದೆಲ್ಲ ಚೆನ್ನಾಗಿರುತ್ತದೆ."

*** "ನಿಮ್ಮ ಶಿಷ್ಯರಲ್ಲಿ ಇಂದು ಎಷ್ಟು ಮಂದಿ ಖ್ಯಾತ ಬರಹಗಾರರಾಗಿದ್ದಾರೆ?"**

"ತ. ರಾ. ಸು. ತುಮಕೂರಿನಲ್ಲಿ ನನ್ನ ಶಿಷ್ಯ ವೃಂದದಲ್ಲಿದ್ದರು. ಎಚ್. ಎಸ್. ಬಿಳಿಗಿರಿ, ಚಿದಾನಂದ ಮೂರ್ತಿ, ತಿಪ್ಪೇರುದ್ರ ಸ್ವಾಮಿ, ಹಂಪ. ನಾ, ಸುಜನಾ, ವೃಷಭೇಂದ್ರ ಸ್ವಾಮಿ, ಟಿ. ವಿ. ವೆಂಕಟಾಚಲ ಶಾಸ್ತ್ರಿ, ಲಕ್ಕಪ್ಪ ಗೌಡ, ಗುಂಡ್ಮಿ, ಚಂದ್ರಶೇಖರ ಐತಾಳ ಇವರು ಇಲ್ಲೇ ಇದ್ದಾರಲ್ಲ?...ರಾಮದಾಸ್, ಹೌದು. ಹೀಗೆ ಯೋಚನೆ ಮಾಡಿ ಹೇಳಬಹುದು. ಒಟ್ಟಿನಲ್ಲಿ ಹೇಳುವುದಾದರೆ — ಬೆಂಗಳೂರು, ಮೈಸೂರು, ಧಾರವಾಡಗಳಲ್ಲಿರುವ ಕನ್ನಡ ಅಧ್ಯಾಪಕರಲ್ಲಿ ೧೯೫೦ ರಿಂದ ಆನರ್ಸ್, ಕಳೆದ ಇಪ್ಪತ್ತು ವರ್ಷಗಳಿಂದ ಎಂ. ಎ. ಕಲಿತವರು ಬಹಳ ಮಂದಿ ನನ್ನ ಶಿಷ್ಯರೇ."

*** "ಸಾಹಿತ್ಯ ಕ್ಷೇತ್ರದಲ್ಲಿ ದುಡಿಯುವಾಗ ನಿಮಗಾದ ಸಿಹಿ, ಕಹಿ ಅನುಭವಗಳನ್ನು ತಿಳಿಸುತ್ತೀರಾ?"**

"ಪುಸ್ತಕ ಪ್ರಕಾಶನ, ಮಾರಾಟಗಳ ವಿಚಾರದಲ್ಲಿ ಬಹಳ ಕಷ್ಟ. ಸಾಹಿತ್ಯವೇ ಜೀವನೋಪಾಯ ವಾಗಿ ಉಳ್ಳವರಿಗೆ ಕಹಿ ಅನುಭವಗಳು ಬರುವುದು ಹೆಚ್ಚು. ಒಂದು ಪಂಥವನ್ನು ಹಿಡಿಯಹೋದರೆ ಆರೋಪಗಳು ಬರುತ್ತವೆ. ನಾನು (ಶ್ರೀ ಲಂಕೇಶ್ ಹೇಳಿದಂತೆ) 'ಪಾಪದ ಭಟ್ಟರು', ಯಾವ ಪಂಥಕ್ಕೂ ಸೇರಿದವನಲ್ಲ! ಮಾರಾಟದ ವ್ಯವಸ್ಥೆ ಸರಿಯಾಗಿಲ್ಲದಿರುವುದೇ ಗಮನೀಯ ಕೊರತೆ. ಒಂದು ಕೃತಿ ಅಚ್ಚಾದೊಡನೆ, ಮಾರಾಟಗಾರರಲ್ಲಿ ಐದು Copies ಆದರೂ ಮಾರಾಟಕ್ಕೆ ಸಿದ್ಧವಾಗಿ ದೊರೆಯುವಂತಿರಬೇಕು."

*** "ಕವಿಗೆ ಜಾಹೀರಾತು ಬೇಕೆನ್ನುತ್ತೀರಿ; ಕಾರಣ?"**

"ಹ್ಞಾ... ಅದಕ್ಕೆ ಅನೇಕರು ಅನೇಕ ರೀತಿ ಅರ್ಥ ಮಾಡುತ್ತಾರೆ. Advertisement ಬೇಕು ಎಂಬುದೇ ನನ್ನ ದೃಷ್ಟಿಯಲ್ಲಿ ಅದಕ್ಕೆ ಅರ್ಥ. ಕವಿಗಳ ಒಂದು Circle ಅಗತ್ಯ. ಹಿಂದೆ ರಾಜರ ಆಸ್ಥಾನಗಳಲ್ಲಿ ಆಶ್ರಯ, ಪ್ರೋತ್ಸಾಹಗಳ ಮೂಲಕ ಸಾಕಷ್ಟು ಪ್ರಚಾರ ಸಾಧ್ಯವಾಗುತ್ತಿತ್ತು. ಈಗ ಹಾಗಿಲ್ಲ. 'ಒಳ್ಳೆಯದಿದೆ' ಎನ್ನುವ ವಿಮರ್ಶಕರು ಬೇಕು; ಒಳ್ಳೆಯದಿದ್ದರೆ ಪ್ರಚಾರವಾಗಬೇಕು.

ಶ್ರೀರಾಜರತ್ನಂ ತಮ್ಮ ಕವನಗಳನ್ನು ತಾವೇ ಪತ್ರಿಕೆಗಳಲ್ಲಿ ಓದಿದರು, ಪ್ರಚಾರಕ್ಕೆ ಬಂದರು. ಶ್ರೀ ಬೇಂದ್ರೆಯವರು ಕಾವ್ಯವಾಚನದಿಂದಲೇ ಜನಪ್ರಿಯರಾದರು. ಶ್ರೀ ದೇವಂಗಿ ಹೊಸ್ಕೇರಿರ್ ಎಂಬವರು 'ಮೈಸೂರು ಮಲ್ಲಿಗೆ'ಯ ಕವನಗಳನ್ನು ಹಾಡಿದ್ದಾರೆ. ಹೀಗೆ, ಪ್ರಚಾರದಿಂದ ಅನುಕೂಲ ವಿದೆ. ಶ್ರೀ ಅ. ನ. ಕೃ. ಜನಪ್ರಿಯರಾಗುವುದಕ್ಕೆ ನಾಡಿನ ಉದ್ದಗಲಕ್ಕೂ ಸಂಚರಿಸಿದ್ದು, ಭಾಷಣಗಳನ್ನು ಮಾಡಿದ್ದೇ ಮುಖ್ಯ ಕಾರಣ. ಶ್ರೀ ಪು. ತಿ. ನ.—ಇವತ್ತಿಗೂ ಜನಕ್ಕೆ ಅಷ್ಟಾಗಿ ಗೊತ್ತಿಲ್ಲ. ಜನತೆಗೆ ಕವಿಗಳು ಅಪರಿಚಿತರಾಗಿರಬಾರದು, ಎನ್ನುವುದೇ ನನ್ನ ಅಭಿಪ್ರಾಯ".

* "ಕವಿಯು ಅಧಿಕಾರಾರೂಢನಾದರೆ ಹೇಗೆ? ಸ್ವಾನುಭವಗಳ ಆಧಾರದಿಂದ ತಿಳಿಸು ತ್ತೀರಾ?"

"ಎಲ್ಲರೂ ಹೇಳುವಂತೆ; ಬರೆವಣಿಗೆ ಕಡಮೆಯಾಗುತ್ತದೆ. ಶ್ರೀ ಕುವೆಂಪು, ಶ್ರೀ ಗೋಕಾಕ್, ಶ್ರೀ ದೇಜಗೌ ಎಲ್ಲ ಅದನ್ನೇ ಹೇಳಿದ್ದಾರೆ. ನನ್ನ ಸಣ್ಣ ಉದಾಹರಣೆ ಹೇಳುವುದಾದರೆ ಕವಿತೆಗಳ ಸೃಜನೆಗೆ ತೊಡಕು ಉಂಟಾಗುತ್ತದೆ; ಆದರೆ ನಾನು ಅಷ್ಟೇನೂ ಭಾವಜೀವಿಯಲ್ಲ. ಇಪ್ಪತ್ತನಾಲ್ಕು ಗಂಟೆ ಕವಿಯೂ ಅಲ್ಲ. ಶ್ರೀ ಪು. ತಿ. ನ. ರಂತಹವರಿಗೆ ಮನೋಧರ್ಮಕ್ಕೆ ಒಗ್ಗದ ವೃತ್ತಿ ಬಂದಾಗ ತೊಂದರೆಯಾಯಿತು. ನನ್ನ ಕಾರ್ಯಕ್ಷೇತ್ರದಲ್ಲಿ ವೈವಿಧ್ಯವಿರುವುದರಿಂದ ಹೆಚ್ಚಿನ ತೊಂದರೆ ಇಲ್ಲ."

* "ನೀವು ಕೈಕೊಂಡ ವೃತ್ತಿ ಮತ್ತು ಮಾನಸಿಕ ಆಸಕ್ತಿಗಳ ಒಳಗೆ ವಿಸಂಗತಿ ಉಂಟಾದುದು ಇದೆಯೆ?"

"ವಿಸಂಗತಿಯಾಗಿಲ್ಲ. ನಾನು ಮುಕ್ತಕಗಳನ್ನೇ ವಿಶೇಷವಾಗಿ ಬರೆಯಲು ಕಾರಣವನ್ನೀಗ ಹೇಳ ಬೇಕು. ಬಿಡುವು ದೊರೆತಾಗಲೆಲ್ಲ ಮುಕ್ತಕಗಳ ರಚನೆ ಸಾಧ್ಯ. ಪೇಟೆಯಲ್ಲಿ ವಾಕಿಂಗ್ ಹೋದಾಗ, ತರಕಾರಿ ತರುವಾಗ, ಹೂ ಮಾರುವವಳೊಡನೆ ಚರ್ಚೆ ನಡೆಸಿದಾಗ, ಬಸ್‌ಸ್ಟೇಂಡಿನಲ್ಲಿ ಕಾಯುತ್ತಿರು ವಾಗಲೆಲ್ಲ ವಸ್ತುಗಳು ಬೇಕಷ್ಟು ಸಿಗುತ್ತವೆ. ಚಿಕ್ಕ ಘಟನೆಗಳು ಸಾಕಾಗುತ್ತವೆ. ಬಿಂದು ಮಾತ್ರ ವಾಗಿರುತ್ತವೆ. ಸಿಂಧು ಮಾಡುವುದಕ್ಕೆ ಆಗುವುದಿಲ್ಲ. ಸಾಂಗತ್ಯ, ತ್ರಿಪದಿ, ಏಳೆ, ಗಾದೆ, ವಚನಗಳ ಸೃಷ್ಟಿ ಎಲ್ಲ ಹೀಗೆಯೇ ಆದವು. ನನ್ನ ವೈಶಿಷ್ಟ್ಯವನ್ನು ಕಾಯ್ದುಕೊಳ್ಳಬೇಕೆಂಬ ಬಯಕೆಯೂ ಇತ್ತು. ಸ್ನಾತಕೋತ್ತರ ಅಧ್ಯಾಪನ, ಅಧ್ಯಯನಗಳು ಈ ರಚನೆಗಳಿಗೆ ಪ್ರೇರಕ; ಒದಗಿದ ಪರಿಕರ ಗಳೇ ಸಹಾಯಕವಾದವು. ದೊಡ್ಡದು ಬರೆಯುವುದಕ್ಕೆ ವೇಳೆಯಿಲ್ಲ. ಚಿಕ್ಕದರ ಸೃಜನೆಗೆ ಹುದ್ದೆ ತಡೆಯಾಗುವುದಿಲ್ಲ...ಟ್ರಂಕಾಲ್ ಬುಕ್ ಮಾಡಿ ಬರೆಯಬಹುದು!"

* "ಅಧ್ಯಾಪಕರಿಗೆ ನಿಮ್ಮ ಸಂದೇಶವೇನು?"

"ಇಪ್ಪತ್ತನಾಲ್ಕು ಗಂಟೆಯೂ ಅಧ್ಯಾಪಕನಾಗಿಯೇ ಇರಬೇಕು. ತಿಳಿಯದ್ದನ್ನು 'ತಿಳಿಯದು' ಎಂದೇ ಹೇಳಬೇಕು; ಸುಳ್ಳು ಅರ್ಥ ಹೇಳಬಾರದು. ಪ್ರಾಮಾಣಿಕನಾಗಿ ವಿದ್ಯಾರ್ಥಿಗಳೊಡನೆ ವರ್ತಿಸಬೇಕು. ಸೂಕ್ತ ಮಾರ್ಗದರ್ಶನ ನೀಡಬೇಕು, ಆದೇಶಿಸಬೇಕು. ನನ್ನ ಮೊದಲ Batch ಗೆ ನಾನು ಇದನ್ನೇ ಹೇಳಿದ್ದು, ನಾಳೆ ನಿಮಗೂ ಇದನ್ನೇ ಹೇಳೋದು. Period ನ್ನು ಪೂರ್ಣವಾಗಿ ತೆಗೆದುಕೊಳ್ಳಬೇಕು. ವಿದ್ಯಾರ್ಥಿಗಳ ಮನಸ್ಸನ್ನು ಒಲಿಸಬೇಕು. ನನ್ನ ಪ್ರಾಮಾಣಿಕ ನಿಲುವೇ ವಿದ್ಯಾರ್ಥಿಗಳು ನನ್ನನ್ನು ಮೆಚ್ಚಿಕೊಳ್ಳುವುದಕ್ಕೆ ಕಾರಣ. ಅನ್ಯರ ಅಭಿಪ್ರಾಯವನ್ನು ಅಧ್ಯಾಪಕ ತನ್ನದೆಂದು ಹೇಳಬಾರದು. ಅಧ್ಯಾಪಕ ವೃತ್ತಿ ಒಳ್ಳೆಯ ವೃತ್ತಿ."

* "ಕನ್ನಡವನ್ನು ಸ್ನಾತಕೋತ್ತರ ಮಟ್ಟದಲ್ಲಿ ಕಲಿತ ವಿದ್ಯಾರ್ಥಿಗಳು ಭವಿಷ್ಯದಲ್ಲಿ ಯಾವ ಕಾರ್ಯಗಳನ್ನು ಕೈಕೊಳ್ಳಬೇಕೆಂದು ಬಯಸುತ್ತೀರಿ?"

"ಕತೆ, ಕಾದಂಬರಿ ಮುಂತಾದುವುಗಳ ಸೃಷ್ಟಿಶಕ್ತಿ ಉಳ್ಳವರು, ಮಾಡಲಿ. ಜತೆಯಲ್ಲಿ ಸ್ನಾತಕೋತ್ತರ ವಿದ್ಯಾರ್ಥಿಗಳೇ ಮಾಡಬೇಕಾದ ಕೆಲಸಗಳಿವೆ. ಬೇರಾರೂ ಮಾಡದುದನ್ನು ಮಾಡಬೇಕು. ತುಲನಾತ್ಮಕ

ಅಧ್ಯಯನ, ಪ್ರಾಚೀನ ಕಾವ್ಯಗಳ ಸಂಪಾದನೆ ಆಗಬೇಕಾಗಿದೆ. ಇದು ಸಾಮಾನ್ಯ ಜನತೆಯಿಂದ ಆಗುವ ಕೆಲಸವಲ್ಲ. Balanced Judgement ಬೇಕು; ತಾರತಮ್ಯ ಜ್ಞಾನವುಳ್ಳ ವಿಮರ್ಶಾತ್ಮಕ ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕು. ಸಂಶೋಧನ ಸಾಹಿತ್ಯದತ್ತ ಗಮನ ಹರಿಸಬೇಕು."

* "ಕನ್ನಡ ಸಾಹಿತ್ಯದ ಭವಿಷ್ಯದ ಬಗೆಗೆ ನೀವೇನು ಹೇಳುತ್ತೀರಿ?"

"ಆಶಾದಾಯಕವಾಗಿದೆ, ನಾಡಿಗೇ ಉಜ್ಜ್ವಲ ಭವಿಷ್ಯವಿದೆ. ಪ್ರಕಟವಾಗುತ್ತಿರುವ ಪುಸ್ತಕಗಳು, ವಿಶ್ವವಿದ್ಯಾನಿಲಯಗಳ ಕೆಲಸಗಳನ್ನು ನೋಡುವಾಗ ಕನ್ನಡ ಸಾಹಿತ್ಯ ಬಹಳ ವೈಭವವನ್ನು ಕಾಣುವ ದಿವಸಗಳು ಸಮೀಪದಲ್ಲೇ ಇವೆ, ಎನಿಸುತ್ತದೆ. ನಮ್ಮ ಹಿಂದಿನವರ ಸಾಧನೆ ಬಹಳ ದೊಡ್ಡದು. ಅವರ ಕೃತಿಗಳ ಪ್ರಚಾರ, ಅನ್ಯಭಾಷೆಗಳಲ್ಲಿ ಅನುವಾದ ಇತ್ಯಾದಿಗಳು ಆಗಬೇಕಾಗಿವೆ. ಭೂಮಿಗೀತ, ಸಮುದ್ರಗೀತ, ಮಂಕುತಿಮ್ಮನ ಕಗ್ಗ, ಶ್ರೀ ರಾಮಾಯಣ ದರ್ಶನಂ, ಗೊಲ್ಗೊಥಾ-ವೈಶಾಖಿ, ನವರಾತ್ರಿ ಕಥೆಗಳು ಮುಂತಾದುವು ಕನ್ನಡದ ವಿಶಿಷ್ಟ ಕೃತಿಗಳು. ಸೋದರ ಭಾಷೆಗಳಿಗೂ ಇವು ಹೋಗಬೇಕು. ಕಾದಂಬರಿಗಳಲ್ಲೂ ಹಾಗೆಯೇ—ಶ್ರೀ ಕಾರಂತ, ಶ್ರೀ ಭೈರಪ್ಪ, ಶ್ರೀ ಕುವೆಂಪು ಮೊದಲಾದವರ ಕಾದಂಬರಿಗಳು ಶ್ರೀ ಪು. ತಿ. ನ. ರ ಪ್ರಬಂಧಗಳು ಜಗತ್ತಿನ ಶ್ರೇಷ್ಠ ಕೃತಿಗಳೊಡನೆ ಸರಿ ತೂಗ ತಕ್ಕವು. ಸಾಹಿತ್ಯ ವೃಕ್ಷಕ್ಕೆ 'ದೋಹದ ಕ್ರಿಯೆ' ಆಗಬೇಕು. ಆಗಾಗ್ಗೆ ಕೊಂಬೆ ಕತ್ತರಿಸಿ, ಕಸಿಮಾಡಿ, ಕೃಷಿ ಮಾಡಬೇಕು. ಸಾಹಿತಿಗಳ ಕುರಿತೂ ಹೇಳತಕ್ಕದ್ದಿದೆ. ಸಹನೆ, ಸೌಜನ್ಯ, ಸೌಮನಸ್ಯ ಈ ಗುಣ ಗಳನ್ನು ನಮ್ಮ ಕವಿಗಳು ತೋರಬೇಕು. ಅನ್ಯರ ಪ್ರವೃತ್ತಿ ಹಿಡಿಸದಿದ್ದರೂ ಖಂಡತುಂಡವಾಗಿ ಹೇಳ ಕೂಡದು. ವಾರ ಪತ್ರಿಕೆಗಳಲ್ಲಿ ಬರತಕ್ಕ ವಿಮರ್ಶೆ ಪರಿಚಯಾತ್ಮಕವಾಗಿರಬೇಕು. ಎಳೆ ಕವಿಗಳಿಗೆ ಉತ್ಸಾಹಗೊಡಬೇಕು. ಎಂತಹವರಿಗಾದರೂ ಪ್ರೋತ್ಸಾಹ ಬೇಕು."

* "ಕನ್ನಡದಲ್ಲಿ ಮೂಡಿ ಬರುತ್ತಿರುವ ನವ್ಯಪಂಥದ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?"

"ಓ... ಪ್ರಶ್ನೆ ಬಹಳ ಕಷ್ಟವಾಯಿತು. (ಮುಗುಳು ನಗು) ಪಂಥ ಎನ್ನುವುದು ಕಷ್ಟ. ಶ್ರೀ ಲಂಕೇಶರ 'ಅವ್ವ' ಕವನ, ಶ್ರೀ ನಿಸಾರ್ ಅಹಮದ್, ಶ್ರೀ ಕಣವಿ, ಶ್ರೀ ಕೆ. ಎಸ್. ನರಸಿಂಹ ಸ್ವಾಮಿ ಇವರ ಕವನಗಳನ್ನು ಮೆಚ್ಚುತ್ತೇನೆ. ಶ್ರೀ ಅಡಿಗರ ಕವನಗಳು ಅರ್ಥವಾಗುವುದಿಲ್ಲ; ಯಾವುದೋ ಒಂದು ಅರ್ಥ ಬರುತ್ತದೆ, ಇಂಥದೇ ಎಂದು ಧೈರ್ಯವಾಗಿ ಹೇಳುವಂತಿಲ್ಲ. ಅಕ್ಕನ ವಚನಗಳಲ್ಲಿ ಕ್ಲಿಷ್ಟವಾದವುಗಳ ಬಗೆಗೆ ಹೇಳುವಂತೆಯೇ ನವ್ಯ ಕವನಗಳ ಕುರಿತು ಹೇಳಬೇಕು. ಶ್ರೀ ಅಡಿಗರ ಕಟ್ಟು ವೆವು ನಾವು, ನಡೆದುಬಂದ ದಾರಿ, ಭೂಮಿಗೀತ ಪದ್ಯಗಳು ಹಿಡಿಸಿವೆ. ನವ್ಯ ಕವಿಗಳ ಕಾವ್ಯಸೃಷ್ಟಿ ಚೆನ್ನಾಗಿದೆ. ಆದರೆ ವಿಮರ್ಶಕರು ಮಾಡತಕ್ಕ ವ್ಯಾಖ್ಯಾನಗಳೇ ಗೊಂದಲಕ್ಕೀಡು ಮಾಡುತ್ತವೆ. ನವ್ಯ ಕವಿಗಳು ತೀವ್ರವಾಗಿ ಅನುಭವಿಸುತ್ತಾರೆ, ಅನಿಸಿಕೆಗಳನ್ನು ಪ್ರಾಮಾಣಿಕವಾಗಿ ಹೊರಗೆಡಹುತ್ತಾರೆ. ಅವು ಅರ್ಥವಾಗುವಂತೆ ಇರಬೇಕು, ಅಷ್ಟೆ. ಹೀಗೆಯೇ ಬೆಳೆದರೆ ಏನೂ ತೊಂದರೆ ಇಲ್ಲ. ಸಾಹಿತ್ಯ ದಲ್ಲಿ ನವ್ಯ, ರಮ್ಯ, ದಿವ್ಯ, ಭವ್ಯ ಎಲ್ಲವೂ ಬೇಕು; ಎಲ್ಲವನ್ನು ಮೆಚ್ಚಬೇಕು. ಹಳತು, ಹೊಸತಿನ ಚರ್ಚೆ ಹಿಂದೆಯೂ ಆಗಿದೆ. ಭರ್ತೃಹರಿ, ಹಾಲರ ಕಲ್ಪನೆ, ಚಿಂತನೆ ಅದ್ಭುತ. ಹಾಗೆಯೇ ಇನ್ನಾರಾದರೂ ಬರೆದರೆ ಬೇಡವೆನ್ನಲಾಗುವುದಿಲ್ಲ. ಪ್ರಕೃತಿ ವೈವಿಧ್ಯಮಯವಾಗಿದೆ; ಕಾವ್ಯವೂ ಹಾಗೆಯೇ ಇರಬೇಕು. Model house ಕಟ್ಟಿದಂತೆ ಕಟ್ಟಿದರೆ ಪ್ರಯೋಜನವಿಲ್ಲ."

* "ರಮ್ಯ ಪಂಥದ ಭವಿಷ್ಯದ ಬಗೆಗೆ ನಿಮ್ಮ ಅಭಿಪ್ರಾಯ?"

"ಬಹುಶಃ ಇನ್ನು ಮುಂದೆ ಬರೆಯುವವರು ರಮ್ಯ ಪಂಥವನ್ನು ಹಿಡಿಯುವುದಿಲ್ಲ, ಎನಿಸುತ್ತದೆ. ನವೀನ ದೃಷ್ಟಿ ಜೀವನದ ಸರ್ವಕ್ಷೇತ್ರದಲ್ಲೂ ಎಲ್ಲ ಜನಾಂಗದಲ್ಲೂ ಕಾಣಿಸುತ್ತದೆ... ತೀರಾ ಹಳೆಯದು ಪುನಃ ಬಂದರೂ ಬರಬಹುದು. ಈಗ ವಚನಗಳು, ಚುಟುಕಗಳು ಬರುತ್ತಿವೆಯಲ್ಲ! ಅಭಿರುಚಿ ಬದಲಾದಂತೆ ಸಾಹಿತ್ಯ ಸೃಷ್ಟಿಯೂ ಬದಲಾಗಬಹುದು."

* "ಸಾಹಿತ್ಯ ಜನಜೀವನದ ಮೇಲೆ ಪ್ರಭಾವ ಬೀರುತ್ತದೆಂಬುದನ್ನು ನೀವು ಒಪ್ಪುತ್ತೀರಾ?"

"ಜನಜೀವನದಿಂದ ಸಾಹಿತ್ಯ ಪ್ರಭಾವಿತವಾಗುತ್ತದೆ. ಹಾಗಾದುದು ಚೆನ್ನಾಗಿ ಕಾಣಿಸುತ್ತದೆ. ಪಾಶ್ಚಾತ್ಯರಲ್ಲಿ ಎರಡು ಯುದ್ಧಗಳಾದ ಮೇಲೆ ಕಂಡುಬರುವ ಜೀವನದೃಷ್ಟಿ ಸಾಹಿತ್ಯದಲ್ಲಿ ಪ್ರಭಾವ ಬೀರಿತು. ಹೊರಗೆ ಜೋರಾಗಿ ಮಳೆ ಸುರಿಯುತ್ತಿದ್ದರೆ ಒಳಗೆ ಕುಳಿತಿದ್ದವನ ಒಳಿಯು ಬಿಸಿ ಆರುತ್ತದೆ. ಮಾಡಿನಿಂದ ನೀರು ಸೋರುತ್ತದೆ–ಅಲ್ಲವೆ? ಜೀವನ ಚೆನ್ನಾಗಿದ್ದಾಗ ಸಾಹಿತ್ಯವೂ ಚೆನ್ನಾಗಿ ಬರುವುದುಂಟು. ನಮ್ಮಲ್ಲಿ ಹತ್ತನೆಯ ಶತಮಾನ ಸುವರ್ಣಯುಗವಾದುದು. ಷೇಕ್ಸ್ಪಿಯರ್ ಯುಗ ಸಾಹಿತ್ಯ ಸಂಪತ್ತಿನಿಂದ ತುಂಬಿದ್ದುದು ಎಲ್ಲ ಇದಕ್ಕೆ ಆಧಾರ."

* "ಇಂದಿನ ವಿದ್ಯಾರ್ಥಿಗಳಲ್ಲಿ ಕಂಡುಬರುವ ಸಾರ್ವತ್ರಿಕ ಅಶಾಂತಿಗೆ ಕಾರಣ ಮತ್ತು ಪರಿಹಾರ ಮಾರ್ಗಗಳನ್ನು ಸೂಚಿಸುತ್ತೀರಾ?"

"ಅನೇಕ ವಿಷಯಗಳಿರುತ್ತವೆ. ಪಠ್ಯ ವಿಷಯಗಳು, ಮಾಧ್ಯಮ, ನಿರುದ್ಯೋಗ, ಅಧ್ಯಾಪಕರ ಅನರ್ಹತೆ, ಪೋಷಕರ ನಿರ್ಲಕ್ಷ್ಯ ಇವೆಲ್ಲ ಕಾರಣವಾಗುತ್ತವೆ. ವಿದ್ಯಾರ್ಥಿಗಳು ವೈಯಕ್ತಿಕವಾಗಿ ಯಾವಾಗಲೂ ಒಳ್ಳೆಯವರೆ. ರಾಜಕೀಯದ ಪ್ರಭಾವಕ್ಕೆ, ಘರ್ಷಣೆಗೆ, ದೊಂಬಿಗೆ ವಶರಾಗುತ್ತಾರೆ.

ವಿದ್ಯಾರ್ಥಿಗಳನ್ನು ಬೇರೆ ಬೇರೆ ಕಾರಣಕ್ಕಾಗಿ ಬಳಸುತ್ತಾರೆ. ಸರಿಯಾದ ನಾಯಕತ್ವ, ಮಾರ್ಗದರ್ಶನ ಇಲ್ಲದ್ದರಿಂದ ಧ್ಯೇಯದಿಂದ ಬೇರೆಡೆಗೆ ವಾಲುವುದು ಸಾಧ್ಯ. ಹಾಗೇ ಪರೀಕ್ಷಾಕ್ರಮ, ದೂರದಲ್ಲಿ ವ್ಯಾಸಂಗ, ಗುರುಶಿಷ್ಯ ಬಾಂಧವ್ಯ ಕಡಮೆಯಾದುದು, ರಜಾಪದ್ಧತಿ ಇವೂ ಕಾರಣಗಳಾಗಬಹುದು. ಪರಿಹಾರ ಹೇಳುವುದು ಕಷ್ಟ. ಇದು ಶಿಕ್ಷಣತಜ್ಞರಿಗೆ ಸಂಬಂಧಿಸಿದ ವಿಚಾರ. ಬಡ ಸಾಹಿತಿಯಾದ ನನ್ನಂಥವನು ಹೇಳಿದರೆ, 'ಭಟ್ಟರಿಗೆ ಇವೆಲ್ಲ ಏಕೆ?' ಎಂದು ಉಳಿದವರು ನಕ್ಕಾರು!"

* "ಶಿಕ್ಷಣ ಮಾಧ್ಯಮದ ಕುರಿತು ನಿಮ್ಮ ನಿಲುವು?"

"ಶಿಕ್ಷಣ ಮಾಧ್ಯಮ ಆಯಾ ಪ್ರಾಂತಭಾಷೆಯೇ ಆಗಬೇಕು. ಈಗ ಅದೊಂದು ಪ್ರಶ್ನೆಯೇ ಅಲ್ಲ; ಎರಡು ಭಾಷೆ ಕಲಿಯಬೇಕು. ಶಿಕ್ಷಣ ಮಾಧ್ಯಮ ಪ್ರಾಂತಭಾಷೆಯಾದರೆ ಅದರ ಕೊರತೆಗಳ ಬಗ್ಗೆ ಹೇಳುತ್ತಾ 'ಉದ್ಯೋಗ ಸಮಸ್ಯೆ'ಯನ್ನು ಎತ್ತುತ್ತಾರೆ. ಆ ಬಗ್ಗೆ ಬೇಕಷ್ಟು ಹೇಳಬಹುದು. ವ್ಯಕ್ತಿಯ ಕೆಲಸದ Skill ಬಗ್ಗೆ ಜನ ಕರೆಯುತ್ತಾರೆಯೇ ವಿನಾ ಅವನ English knowledgeನ ಮೇಲಲ್ಲ. ನನಗೆ ಒಬ್ಬ ಅಡಿಗೆಯವ ಬೇಕಾದರೆ, ಅವನ ವೃತ್ತಿಯ ಪರಿಣತಿ ನನಗೆ ಮುಖ್ಯವೆನಿಸುವುದೇ ವಿನಾ ಅವನ ಮಾತೃಭಾಷೆ ಅಲ್ಲ! ಇಂಗ್ಲಿಷ್ ಸಾಹಿತ್ಯಜ್ಞಾನ ಸಾಮಾನ್ಯ ವ್ಯವಹಾರಕ್ಕೆ (ಅರ್ಜಿ ಬರೆಯುವುದಕ್ಕೆ, ಕೋರ್ಟು ವ್ಯವಹಾರಕ್ಕೆ) ಅಗತ್ಯವಿಲ್ಲ. Engineering ವಿದ್ಯಾರ್ಥಿಗೆ Hamlet ಏಕೆ? ಬಡಗಿ ಕೆಲಸ ಕಲಿಯುವವನಿಗೆ ಶ್ರೀ ಕುವೆಂಪು ರಾಮಾಯಣ ಯಾಕೆ? ಮಗ ಮತ್ತು ಅಳಿಯ (Son-in-law) ಇಬ್ಬರೂ ಒಂದೆ, ಇಬ್ಬರ ಮೇಲೂ ಪ್ರೀತಿ, ವಿಶ್ವಾಸಗಳು ಇವೆ. ಆದರೆ ತಂದೆಯ ಆಸ್ತಿ ಮಗನಿಗೇ ವಿನಾ ಅಳಿಯನಿಗಲ್ಲ."

* "ದಕ್ಷಿಣ ಕನ್ನಡ ಜಿಲ್ಲೆಯ ಬರಹಗಾರರ ಬಗೆಗೆ ನಿಮ್ಮ ಅಭಿಪ್ರಾಯವೇನು?"

"ದಕ್ಷಿಣ ಕನ್ನಡದಲ್ಲಿ ಒಳ್ಳೆಯ ಬರಹಗಾರರಿದ್ದಾರೆ. ಶುದ್ಧ ಶೈಲಿಯಲ್ಲಿ, ವ್ಯಾಕರಣಬದ್ಧವಾಗಿ ಬರೆಯುತ್ತಾರೆ. ಮುದ್ದಣನ ಸಂಪ್ರದಾಯವನ್ನೇ ಅನುಸರಿಸಿದ್ದಾರೆ; ನಿರಹಂಕಾರಿಗಳು. ಬರೆದಿದ್ದಾರೆ–ಪ್ರಕಾಶಿಸಿಲ್ಲ. ಅವರ ಬರಹಗಳೆಲ್ಲ ಹೊರ ಬರಬೇಕೆಂಬುದೇ ನನ್ನ ಅಪೇಕ್ಷೆ. ಸಂಸ್ಕೃತ, ಪಾಶ್ಚಾತ್ಯ ಸಾಹಿತ್ಯಗಳ ಪರಿಚಯ, ಜ್ಞಾನವಿದೆ. ರಂಗದ ಮೇಲೆ ಒಳ್ಳೆಯ ನಾಟಕಗಳನ್ನಾಡುತ್ತಾರೆ. ದ. ಕ. ಜಿಲ್ಲೆಗೆ ಒಳ್ಳೆ ಪ್ರಕಾಶನ ಸಂಸ್ಥೆ ಬೇಕೆನಿಸುತ್ತದೆ."

* "ಕವಿಯಾಗಿ ವಿಮರ್ಶಕರ ಕುರಿತು ನೀವು ಹೇಳುವುದೇನು? ಕನ್ನಡದಲ್ಲಿ ಬರುತ್ತಿರುವ ವಿಮರ್ಶೆಗಳ ಬಗೆಗೆ ನಿಮ್ಮ ಅಭಿಪ್ರಾಯ ತಿಳಿಸುವಿರಾ?"

"ಗುಂಪು. ಗುಂಪಾಗಿ ವಿಮರ್ಶೆ ಮಾಡುತ್ತಿರುವಂತಿದೆ. ಪರಸ್ಪರ ಔದಾರ್ಯದಿಂದ ಕಾಣುತ್ತಿಲ್ಲ. ಕವಿ, ವಿಮರ್ಶಕನಿಗಿಂತ ದೊಡ್ಡ ಸ್ಥಾನದಲ್ಲಿ ಇರುತ್ತಾನೆ. ಕವಿಯ ಮಟ್ಟಕ್ಕೆ ವಿಮರ್ಶಕ ಏರುವುದು ಬಹಳ ಕಷ್ಟ. ಶ್ರೀ ನಾರಾಯಣ ಸಂಗಮರ 'ಅಕ್ಕ ತಂಗಿ' (ಅನುವಾದ ಕೃತಿ) ಯನ್ನು ನಾನೇ ಎಳವೆಯಲ್ಲಿ ವಿಮರ್ಶೆ ಮಾಡಬೇಕಾಯ್ತು. ಅವರು ತುಂಬ ಹಿರಿಯರು, ನಾನು ಕಿರಿಯ; ಆ ಕೃತಿಯ ಮೂಲದ ಬಗೆಗೆ ನಾನೇನೂ ಅರಿಯೆ! ಆ ಸ್ಥಿತಿಯಲ್ಲಿ ನಾನೆಂಥ ವಿಮರ್ಶೆ ಮಾಡಬಲ್ಲೆ? ವಯಸ್ಸಿನಲ್ಲಾದರೂ ಸಾಮ್ಯ ಬೇಕು. ಶ್ರೀ ಬೇಂದ್ರೆಯವರ ಪುಸ್ತಕಗಳನ್ನು ಶ್ರೀ ಪು. ತಿ. ನ. ಅಂಥವರೇ ಮಾಡಬೇಕು."

* "ನೀವು ತುಂಬ ಜನಪ್ರಿಯರಾಗಿದ್ದೀರಿ. ನಿಮ್ಮ ದೃಷ್ಟಿಯಲ್ಲಿ ಅದಕ್ಕೆ ಕಾರಣಗಳೇನು?"

"ವಿನಯ. (ಎಲ್ಲರೂ ಹಾಗೆ ಹೇಳುತ್ತಾರೆ), ಜನರಲ್ಲಿ ಬೆರೆಯುವ ಸ್ನೇಹಶೀಲತೆ, ವೈಯಕ್ತಿಕ ಕಷ್ಟ ನಷ್ಟಗಳನ್ನು ಗಮನಿಸದೆ ಎಲ್ಲರೊಡನೆ ಬೆರೆಯುತ್ತೇನೆ. ನಾನು ಜನರಿಂದ ಏನನ್ನು ನಿರೀಕ್ಷಿಸುತ್ತೇನೋ ಅದನ್ನೇ ಅವರಿಗೆ ನೀಡುತ್ತೇನೆ ಎಂದುಕೊಂಡಿದ್ದೇನೆ. ನಾನು ಗುಂಪು ಕಟ್ಟಿಕೊಳ್ಳುವುದಿಲ್ಲ. ಜನರ ಗುಣಗಳನ್ನು ಹೇಳುತ್ತೇನೆ. ದೋಷಗಳೂ ಗೊತ್ತಾಗುತ್ತವೆ, ಆದರೆ ಹೇಳುವುದಿಲ್ಲ."

* "ನಿಮ್ಮ ಜೀವನ ದರ್ಶನವೇನು?"

"ಬಹಳ ದೊಡ್ಡ ಮಾತು! 'ಸುರಗಿ–ಸುರಹೊನ್ನೆ'ಯಲ್ಲಿ ಎಲ್ಲ ಹೇಳಿದ್ದೇನೆ. ಕಿರಿಯದಾಗಿ ಹೇಳುವುದಾದರೆ–ದೇವರಲ್ಲಿ ನಂಬಿಕೆ ಇಟ್ಟವನು. ಗುರುಹಿರಿಯರಲ್ಲಿ ವಿಶ್ವಾಸ, ಅನೂಚಾನವಾಗಿ ಬಂದ ಪರಂಪರೆಗಳಲ್ಲಿ ಸತ್ತ್ವ ಇದೆ ಎಂದು ನಂಬಿದ್ದೇನೆ. ಇತರರು ಅಂಧಶ್ರದ್ಧೆ ಎನ್ನಬಹುದು. ವೈಜ್ಞಾನಿಕ ದೃಷ್ಟಿ ಇಲ್ಲದವನನ್ನು ಈ ಅಂಧಶ್ರದ್ಧೆಯೇ ಕಾಪಾಡುತ್ತದೆ. ಹಳೆಯದು ಹೋಗಿ, ಹೊಸತೂ ಸಿಗದಿದ್ದರೆ ಕಷ್ಟ. ದೇವರ ಕೃಪೆಯ ಬಗೆಗೆ ಜೀವನದಲ್ಲಿ ಬೇಕಷ್ಟು ನಿದರ್ಶನಗಳು ಸಿಕ್ಕಿವೆ; ಈಚೆಗೆ ಮಗಳ ಮದುವೆಯೂ ಹಾಗೆಯೇ ಆಯಿತು. ತರಗತಿಯಲ್ಲಿ ಪಾಠ ಹೇಳುತ್ತಿದ್ದಂತೆ Time bomb ಸಿಡಿದಾಗಲೂ ಬಚಾವಾದೆ! ('ಇಂದ್ರ ಚಾಪ'ದಲ್ಲಿ ಹೇಳಿದ್ದೇನೆ). ಆಗ ಬಚಾವಾಗದೆ ಇದ್ದಿದ್ದರೆ ನಿಮ್ಮ ಈ ಪ್ರಶ್ನೆಗಳಿಗೆ ಉತ್ತರ ಹೇಳಲು ನಾನೇ ಇರುತ್ತಿರಲಿಲ್ಲ."

* "ಕನ್ನಡ ಸಾಹಿತ್ಯಕ್ಕೆ ನಿಮ್ಮದೇ ಆದ ಕೊಡುಗೆ ಏನೆಂದು ನೀವು ನಿರ್ಧರಿಸುತ್ತೀರಿ?"

"ಮುಕ್ತಕಗಳ ಸೃಷ್ಟಿ. ಸ್ವಂತ ಮುಕ್ತಕಗಳನ್ನು ಸಹಸ್ರಗಟ್ಟಲೆ ಮಾಡಿದ್ದೇನೆ; ಸುಮಾರು ಎರಡೂವರೆ ಸಾವಿರಕ್ಕೂ ಮಿಕ್ಕಿ ಅನುವಾದಿಸಿದ ಮುಕ್ತಕಗಳನ್ನು ನೀಡಿದ್ದೇನೆ. ಈ ಪ್ರಮಾಣದಲ್ಲಿ ಬಹುಶಃ ಯಾರೂ ಕೊಟ್ಟಿಲ್ಲ. ಕಾಳಿದಾಸನ ಸಮಗ್ರ ಕೃತಿಗಳ ಅನುವಾದ, ಅನುವಾದ ಕಾರ್ಯದಲ್ಲೇ ಒಂದು ಹೆಚ್ಚುಗಾರಿಕೆ."

* "ಕನ್ನಡ ಸಾಹಿತ್ಯದಲ್ಲಿ ಒಳ್ಳೆಯ ಅನುವಾದಕರು ಯಾರೆಂದು ನಿಮಗೆನಿಸುತ್ತದೆ?"

"ಮೊದಲು ಶ್ರೀ ಬಿ. ಎಂ. ಶ್ರೀಕಂಠಯ್ಯ ಅವರೇ. ಅನುವಾದ ಸಾಹಿತ್ಯ ಅವರಿಂದಲೇ ಆರಂಭ. ಅವರು Ideal. 'ಅಶ್ವತ್ಥಾಮನ್' ನಾಟಕ, ಅನುವಾದ ಎಂದು ಗೊತ್ತಾಗುವುದೇ ಇಲ್ಲ; ಅಷ್ಟು Wonderful! ಅನುವಾದ ಯಾವಾಗಲೂ ಒಂದು ಹೊಸ ಸೃಷ್ಟಿ ಇದ್ದ ಹಾಗೆ ಇರಬೇಕು. ಈಗ ಇರುವವರಲ್ಲಿ, ಯಾರೂ ಇಲ್ಲ ಎಂದು ಬಿಡಿ, ಅಷ್ಟೆ."

"ನಿಮ್ಮನ್ನು ಬಿಟ್ಟು ಬೇರಾರೂ ಇಲ್ಲ ಎನ್ನಬಹುದು, ಅಲ್ಲವೇ ಸಾರ್?" ಎಂಬ ಉಪಪ್ರಶ್ನೆಯನ್ನು ಕೇಳಿದಾಗ ಜೋರಾಗಿ ನಕ್ಕರು. ಬಳಿಕ ಸೀರಿಯಸ್ಸಾಗಿ, "ಅವರು ಡಾ. ಕೆ. ಕೃಷ್ಣಮೂರ್ತಿ ಇದ್ದಾರೆ, ಲಕ್ಷಣ ಗ್ರಂಥಗಳನ್ನು ನೀಡಿದ್ದಾರೆ."

* "ಕನ್ನಡ ಸಾಹಿತ್ಯ ಭಂಡಾರಕ್ಕೆ ಮುಂದೆ ಏನನ್ನು ನೀಡಬೇಕೆಂದು ಯೋಚಿಸುತ್ತಿದ್ದೀರಿ?"

"ಮುಂದೆ. 'ಕಾಳಿದಾಸ–ಒಂದು ಅಧ್ಯಯನ' ಎಂದು ಮಾಡಬೇಕೆಂದಿದ್ದೇನೆ. 'ಭಾಸ ನಾಟಕಚಕ್ರ' ಕಾಳಿದಾಸ ಸಂಪುಟದ ಹಾಗೆ ಮಾಡಬೇಕೆಂದಿದ್ದೇನೆ."

* "ಇನ್ನೂ ಅಚ್ಚಿನ ಮನೆಯನ್ನು ಕಾಣದಿರುವ ನಿಮ್ಮ ಕೃತಿಗಳು ಇವೆಯೆ? ಇದ್ದರೆ, ಅವುಗಳನ್ನು ಜನತೆ ಪಡೆಯುವಂತಾಗುವುದೆಂದು ಆಶಿಸಲಿ?"

"ಪಡೆಯಬಹುದು. ಇನ್ನೊಂದು ಮೂರು–ನಾಲ್ಕು ವರ್ಷಗಳಲ್ಲಿ ಹೊರಬರುತ್ತವೆ. 'ಪಾಮರ' 200 ಸೂಕ್ತಿಗಳ ಒಂದು ವಿಶಿಷ್ಟ ಸಂಕಲನ; 'ಯುಗಪುರುಷ'ದಲ್ಲಿ ಕೆಲವು ಅಚ್ಚಾಗಿವೆ. ಬರಬೇಕು. ಹಾಗೆಯೇ ಏಳುನೂರು ಸ್ವತಂತ್ರ ಒಗಟುಗಳು ಬರಲಿವೆ. ನನ್ನ ಕೃತಿಗಳ ಎಲ್ಲ ಪ್ರಕಾರಗಳಿಂದ ಉತ್ತಮವಾದ ಅರುವತ್ತನ್ನು ಆಯ್ದು 'ಅರುವತ್ತರ ಅರಳು' ಎಂದು ಪ್ರಕಟಿಸಬೇಕೆಂದಿದ್ದೇನೆ. ಇನ್ನೇನಾದರೂ ಬಿಡಿ... ಚಿಲ್ರೆ, ಪಲ್ರೆ... ಅಷ್ಟೆ..."

* "ಜನಜೀವನದ ಮೇಲೆ ಭಾಷಣಗಳ ಪ್ರಭಾವವೇನು?"

"ಒಳ್ಳೆಯ ಪ್ರಭಾವ! ಶ್ರೀ ಸಿ. ಕೆ. ವೆಂಕಟರಾಮಯ್ಯನವರ ಭಾಷಣವೇ 'ಮೇಘದೂತ'ದ ಅನುವಾದಕ್ಕೆ ನನಗೆ ಪ್ರೇರಕವಾಯಿತು. ಶ್ರೀ ಬಿ. ಎಂ. ಶ್ರೀ. ಶ್ರೀ ಶಾಸ್ತ್ರಿ ಮುಂತಾದವರ ಭಾಷಣಗಳು ಜನಪ್ರಿಯ. ಶ್ರೀ ಅ. ನ. ಕೃ. ಶ್ರೀ ಮುದಗಲ್ ಕೃಷ್ಣರಾವ್ ಇವರ ಭಾಷಣಗಳೇ ಕರ್ನಾಟಕ ಏಕೀಕರಣದ ಜಾಗೃತಿಗೆ ಗಮನೀಯ ಕಾರಣಗಳಾದವು."

* "ಮಂಗಳೂರಿನ ಜೀವನದಲ್ಲಿ ನಿಮಗಾದ ಅನುಭವಗಳು ಮತ್ತು ಒಟ್ಟಿನಲ್ಲಿ ನಿಮ್ಮ ಅನಿಸಿಕೆಗಳನ್ನು ಹೇಳುತ್ತೀರಾ?"

"ಬಹಳ ಒಳ್ಳೆಯದು. ನನಗೆ ಇಲ್ಲಿಯ ಹವಾ ಕೂಡ ಒಗ್ಗಿದೆ. ಇಲ್ಲಿಯ ಮಿತ್ರರ ಸ್ನೇಹ– Air conditioned room ನಲ್ಲಿಟ್ಟಂತೆ ತಂಪು ಮಾಡಿದೆ; ಮೈಸೂರನ್ನು ಬಿಟ್ಟುಬಂದ ತಾಪವನ್ನು ಮರೆಮಾಡಿದೆ. ಸಂಸಾರದಿಂದ ದೂರದಲ್ಲಿದ್ದರೂ ನೆಮ್ಮದಿಯಾಗಿರುವೆ. ಇಲ್ಲಿಯ ಸಮುದ್ರ, ತೆಂಗು, ಕಂಗು, ಪ್ರಕೃತಿಯ ಸೌಂದರ್ಯ ಮನಸ್ಸನ್ನು ಸೆರೆಹಿಡಿದಿದೆ; ಸಾಹಿತ್ಯಸೃಷ್ಟಿಗೆ ಪ್ರೇರಕವಾಗಿದೆ. 'ಉಪ್ಪು ಕಡಲಿ'ನ ನೂರು ವಚನಗಳು ಇಲ್ಲಿಗೆ ಬಂದ ಮೇಲೆಯೇ ರಚಿತವಾದವು. ಪಂಜೆ, ಹುರುಳಿ, ಬೆನಗಲ್, ಮುಳಿಯ–ಹೀಗೆ ಮುಖ್ಯವಾಗಿ ಆಗಿಹೋದವರು ಮತ್ತು ಈಗಿನ ಹಿರಿಯರ ಕುರಿತು, ಜೀವನ ಚರಿತ್ರೆಯ ಹಾಗೆ, "ಕರಾವಳಿಯ ಶಾರದೆ" ಎಂಬ ಕೃತಿಯೊಂದನ್ನು ಹೊರತರಬೇಕೆಂದು ಇದ್ದೇನೆ. ಮಂಗಳಾಂಬೆ ಎಷ್ಟು ಮಾಡಿಸುತ್ತಾಳೊ ಅಷ್ಟು ಮಾಡಬೇಕು, ಆಯ್ತು... ನಮಸ್ಕಾರ" ಎನ್ನುತ್ತಾ ಮುಗಿಸಿ ಮೇಲೆದ್ದರು.

ನಾವು ಕೇಳಬೇಕೆಂದಿದ್ದ ಪ್ರಶ್ನೆಗಳೂ ಮುಗಿದಿದ್ದವು. ಎದ್ದುನಿಂತು ಕೈಗಡಿಯಾರಗಳನ್ನು ನೋಡಿಕೊಂಡಾಗ ಗಂಟೆ ೯-೪೫ ಆಗಿದ್ದುದು ಗಮನಕ್ಕೆ ಬಂತು. ಅವರ ಸ್ವಾರಸ್ಯಕರವಾದ ಸಂಭಾಷಣೆಯಲ್ಲಿ ಸಮಯ ಸರಿದುದೇ ಗೊತ್ತಾಗಿರಲಿಲ್ಲ. "ತುಂಬ ಉಪಕಾರವಾಯಿತು, ಬರ್ತೇವೆ... ಸಾರ್" ಎನ್ನುತ್ತಾ ಹೊರಟೆವು. ಅವರು ಬೀಳ್ಕೊಡುತ್ತಾ, "ಒಂದು ಅಂತರಂಗ ನಿರೀಕ್ಷಣೆಗೆ ಅವಕಾಶ ಮಾಡಿಕೊಟ್ಟಿರಿ. ತುಂಬಾ ವಂದನೆಗಳು. ಅಂತರಂಗದ ಗರ್ಭಗುಡಿಗೆ ನಾನೇ ಇಣುಕಿ ನೋಡಲು ಸಂದರ್ಭ ಸಿಕ್ಕಿದ ಹಾಗಾಯ್ತು. ನನ್ನ ಬಗೆಗೆ ನಾನೇ ಆಲೋಚಿಸುವ, ಅರಿತುಕೊಳ್ಳುವ ಅವಕಾಶ ಒದಗಿತು. ತುಂಬ ಸಂತೋಷ, ನಮಸ್ಕಾರ" ಎನ್ನುತ್ತಾ ಹೊರಜಗಲಿಯ ತನಕ ಜತೆಯಲ್ಲಿ ಬಂದು, ನಿಂತರು. ನಾವು ವಂದಿಸಿ, ಬೀಳ್ಕೊಂಡು ಹೊರಟೆವು. ಕೃತಕೃತ್ಯತೆಯ ತೃಪ್ತಿ, ಆತ್ಮೀಯ ಸಂವಾದದ ಸಂತಸ ಮನಸ್ಸುಗಳನ್ನಾವರಿಸಿ, ಎದೆ ತುಂಬಿ ನಿಂತಿದ್ದವು.

# ೮. ವಾಗ್ಮಿ—ಶ್ರೀ ಎಸ್. ವಿ. ಪರಮೇಶ್ವರ ಭಟ್ಟರು

**ರೆ। ಫಾ। ಮಾರ್ಕ್ ವಾಲ್ಡಾರ್**

ಕವಿಯಾಗಿರುವವನು ಒಳ್ಳೆಯ ವಾಗ್ಮಿಯೂ ಆಗಿರುವುದು ಅಪೂರ್ವವೆನ್ನುತ್ತಾರೆ. ಒಂದು ವೇಳೆ ಯಾರಾದರೂ ಕವಿಯೊಬ್ಬನು ವಾಗ್ಮಿಯೂ ಆಗಿದ್ದರೆ ಸ್ಫೂರ್ತಿಗೊಂಡು ಆವೇಶದಿಂದ ಆತನು ಭಾಷಣ ಮಾಡುವಾಗ ಕವಿತೆಯೇ ಆತನ ಬಾಯಿಂದ ಹೊರಹೊಮ್ಮಬಹುದೇನೊ. ಕೆಲವು ದಿನಗಳ ಹಿಂದೆ ನನ್ನ ಗುರುಗಳ ಭಾಷಣವೊಂದನ್ನು ಕೇಳಿದ ನನ್ನ ಮಿತ್ರರೊಬ್ಬರು "ನಿಮ್ಮ ಪ್ರಾಧ್ಯಾಪಕರು ಒಬ್ಬ ಶ್ರೇಷ್ಠ ವಾಗ್ಮಿಯೆಂದು ಮಾತ್ರ ನನಗೆ ತಿಳಿದಿತ್ತು. ಅವರು ನಿಜವಾಗಿಯೂ ಉತ್ತಮ ಕವಿಗಳೂ ಆಗಿದ್ದಾರೆ. ಅವರ ಇಂದಿನ ಭಾಷಣದ ಪ್ರತಿಯೊಂದು ವಾಕ್ಯವೂ ಉತ್ತಮವಾದೊಂದು ಕವಿತೆಯ ಸಾಲು ಆಗ ಬಲ್ಲುದು" ಎಂದು ಉದ್ಗಾರವೆತ್ತಿದರು. ಎರಡು ವರ್ಷಗಳ ಹಿಂದೆ ಅವರ ಭಾಷಣವನ್ನು ಮೊತ್ತ ಮೊದಲು ಕೇಳಿದಾಗ ನನಗೂ ಹೀಗೆಯೇ ಎನ್ನಿಸಿತ್ತು.

ಶ್ರೀಮಾನ್ ಎಸ್. ವಿ. ಪರಮೇಶ್ವರ ಭಟ್ಟರು ಒಬ್ಬ ಉತ್ತಮ ಕವಿ ಎಂಬುದರಲ್ಲಿ ಎಳ್ಳಷ್ಟೂ ಸಂದೇಹ ವಿಲ್ಲ. ಆದರೆ ಜನಸಾಮಾನ್ಯರಲ್ಲಿ ಎಷ್ಟು ಜನರಿಗೆ ಈ ವಿಷಯ ತಿಳಿದಿರುವುದೊ ನಾನರಿಯೆ. ದಕ್ಷಿಣ ಕನ್ನಡ ಜಿಲ್ಲೆಯವರಿಗೆ ಅವರೊಬ್ಬ ಶ್ರೇಷ್ಠ ವಾಗ್ಮಿಗಳೆಂದೇ ಪರಿಚಯ. ಅವರು ಮಂಗಳೂರಿಗೆ ಬಂದು ಕೇವಲ ಮೂರೇ ವರ್ಷಗಳು ಕಳೆಯಿತಾದರೂ ಇಷ್ಟರಲ್ಲೇ ಅವರು ಇಲ್ಲಿನ ನೂರಾರು ಶೈಕ್ಷಣಿಕ ಸಂಸ್ಥೆಗಳ ವಾರ್ಷಿಕೋತ್ಸವದ ಅಧ್ಯಕ್ಷಸ್ಥಾನದಿಂದಲೋ, ಇನ್ನಿತರ ಸಂಘಸಂಸ್ಥೆಗಳ ಕಾರ್ಯಕ್ರಮಗಳ ಉದ್ಘಾಟಕ ರಾಗಿಯೊ, ವಿವಿಧ ಸಮಾರಂಭಗಳಲ್ಲಿ ಮುಖ್ಯ ಅತಿಥಿಯಾಗಿಯೊ ಭಾಷಣಗಳನ್ನು ಮಾಡಿ ಜನಪ್ರಿಯ ರಾಗಿದ್ದಾರೆ, ಅತ್ಯುತ್ತಮ ವಾಗ್ಮಿಗಳೆಂದು ಪ್ರಖ್ಯಾತರಾಗಿದ್ದಾರೆ, ಅವರು ಒಂದಲ್ಲದಿದ್ದರೊಂದು ಸಮಾ ರಂಭದಲ್ಲಿ ಭಾಗವಹಿಸದ ಸಂಘಸಂಸ್ಥೆಗಳು ದಕ್ಷಿಣ ಕನ್ನಡದಲ್ಲಿ ಹೆಚ್ಚು ಇರಲಿಕ್ಕಿಲ್ಲವೆಂದರೆ ಅದು ಖಂಡಿತ ವಾಗಿಯೂ ಅತಿಶಯೋಕ್ತಿಯಾಗಲಾರದು.

ನಾನು ಕನ್ನಡ ಎಮ್. ಎ., ಸೇರಲು ನಿಶ್ಚಯಿಸಿದುದೂ ಅವರ ಭಾಷಣ ಕೇಳಿಯೇ. ಅದು ೧೯೭೦ನೇ ವರ್ಷದ ದಶಂಬರ ತಿಂಗಳ ೨೫ನೇ ತಾರೀಕು, ಕ್ರಿಸ್ತ ಜಯಂತಿಯ ದಿನವಾಗಿತ್ತು. ಆಗ ನಾನು ಅವರ ವಿದ್ಯಾರ್ಥಿಯಾಗಿರಲಿಲ್ಲ. ಅವರನ್ನು ಕಂಡು ಕೇಳಿಯೂ ಇರಲಿಲ್ಲ. ಮಂಗಳೂರಿನ ಪುರಭವನದಲ್ಲಿ ಎಲ್ಲ ಮತದವರೂ ಕೂಡಿ ಕ್ರಿಸ್ತ ಜಯಂತಿಯ ಆಚರಣೆಯ ಸಲುವಾಗಿ ಒಂದು ಸಾಂಸ್ಕೃತಿಕ ಕಾರ್ಯಕ್ರಮವನ್ನು ಏರ್ಪಡಿಸಿದ್ದರು. ಅದರ ಅಧ್ಯಕ್ಷಸ್ಥಾನವನ್ನು ಎಸ್. ವಿ. ಪರಮೇಶ್ವರ ಭಟ್ಟರು ವಹಿಸಿಕೊಳ್ಳುತ್ತಾರೆಂದು ಕೇಳಿ ನಾನು ಬಾರ್ಕೂರಿನಿಂದ ಆ ಸಮಾರಂಭಕ್ಕೆ ಬಂದಿದ್ದೆ. ಅಂದು ಅವರು ಮಾಡಿದ ಆ ಅದ್ಭುತ ಭಾಷಣ ನನ್ನನ್ನು ಆನಂದಪರವಶನನ್ನಾಗಿ ಮಾಡಿತ್ತು. ಶ್ರೀ ಯೇಸುಕ್ರಿಸ್ತನ ಜೀವನ ಜಗತ್ತಿನ ಅಜ್ಞಾನ ಹಾಗೂ ಅಂಧಕಾರವನ್ನು ಹೊಡೆದೋಡಿಸುವ ಜಗಜ್ಜ್ಯೋತಿಯಂತಿದೆ ಎಂಬುದನ್ನು ಅವರು ಸೊಗಸಾದ ಅಚ್ಚ ತಿಳಿಗನ್ನಡದಲ್ಲಿ ಸ್ವಾರಸ್ಯವಾಗಿ ಮತ್ತು ಭಾವಾವೇಶದಿಂದ ವಿವರಿಸಿದ್ದರು. ಶ್ರೀ ಯೇಸುಕ್ರಿಸ್ತನ ಜೀವನ ಹಾಗೂ ಸಂದೇಶಗಳ ಕುರಿತು ನಾನು ಆ ಮೊದಲೇ ನೂರಾರು ಭಾಷಣಗಳನ್ನೂ, ಪ್ರಸಂಗಗಳನ್ನೂ ಕೇಳಿದ್ದೇನಾದರೂ ಇಂಥ ಭಾಷಣ ಕೇಳಿರಲಿಲ್ಲ. ಭಟ್ಟರಷ್ಟು ತನ್ಮಯತೆಯಿಂದ ಕಾವ್ಯಾತ್ಮಕವಾಗಿ ಕ್ರಿಸ್ತನ ಕುರಿತು ಮಾತಾಡಬಲ್ಲವರು ಬೇರೆ ಯಾರನ್ನೂ ನಾನು ಕಾಣೆ. ಅವರ ಈ ಭಾಷಣವನ್ನು ಕೇಳಿಯೇ ನಾನು ಅವರ ವಿದ್ಯಾರ್ಥಿಯಾಗಲು ನಿಶ್ಚಯಿಸಿದ್ದು.

ಇದಾದ ಮೇಲೆ ನಾನು ಅವರ ಹಲವಾರು ಭಾಷಣಗಳನ್ನು ಕೇಳಿದ್ದೇನೆ. ಪ್ರತಿಯೊಂದೂ ಒಂದಕ್ಕಿಂತ ಒಂದು ಮಿಗಿಲೆಂದೇ ನನಗೆನ್ನಿಸಿದೆ. ಅವರ ಭಾಷಣಗಳನ್ನು ಕೇಳಿದ ಇತರರೂ ಮೆಚ್ಚಿಕೆಯಿಂದ ತಲೆ ದೂಗಿದುದನ್ನು ಕೇಳಿದ್ದೇನೆ, ನೋಡಿದ್ದೇನೆ. ಮಂಗಳೂರಿನ ಕೆಥೋಲಿಕ್ ಕ್ಲಬ್‌ನಲ್ಲಿ 'ಕನ್ನಡ ಸಾಹಿತ್ಯಕ್ಕೆ ದಕ್ಷಿಣ ಕನ್ನಡದ ಕೊಡುಗೆ' ಎಂಬ ವಿಷಯದ ಮೇಲೆ ಅವರು ಮಾಡಿದ ಭಾಷಣ ಇನ್ನೂ ನನ್ನ ಮನಸ್ಸಿ ನಲ್ಲಿ ಅಚ್ಚಳಿಯದೆ ನಿಂತಿದೆ. ನಡುಗನ್ನಡ ಕಾಲದಲ್ಲಿ ರತ್ನಾಕರ ವರ್ಣಿಯಂತಹ ಮಹಾಕವಿಗೆ ಜನ್ಮಕೊಟ್ಟ

ದಕ್ಷಿಣ ಕನ್ನಡ ಜಿಲ್ಲೆ. ನವೋದಯದ ಮುಂಬೆಳಕಿನಲ್ಲಿ ಮುದ್ದಣ, ಮುಳಿಯ ತಿಮ್ಮಪ್ಪಯ್ಯ, ಪಂಜೆ ಮಂಗೇಶರಾಯರು, ಗೋವಿಂದ ಪೈ, ಕಡೆಂಗೋಡ್ಲು ಶಂಕರ ಭಟ್ಟರು, ಎಮ್. ಎನ್. ಕಾಮತ್ ಮುಂತಾದ ಉತ್ತಮ ಕವಿಗಳನ್ನೂ, ಕನ್ನಡದ ಏಳ್ಗೆಗಾಗಿ ಅಹೋರಾತ್ರಿ ದುಡಿದ ಧೀರ ವೀರ ಸಾಹಿತ್ಯ ಗಳನ್ನೂ ಕೊಟ್ಟಿತು. ಇವರೆಲ್ಲರ ಕನ್ನಡ ಸಾಹಿತ್ಯ ಸೇವೆಯೊಂದಿಗೆ ಬಾಸೆಲ್ ಮಿಶನ್ ಅಚ್ಚುಕೂಟದವರು ಪತ್ರಿಕೆ ಹೊರಡಿಸಿಯೊ, ಪಠ್ಯಪುಸ್ತಕಗಳನ್ನು ಪ್ರಕಟಿಸಿಯೊ, ಕನ್ನಡದ ಅಕ್ಷರಗಳ ಮೊಳೆಗಳನ್ನು ತಯಾರಿ ಸಿಯೊ ಗೈದ ಸೇವೆಯನ್ನೂ ಗಣನೆಗೆ ತೆಗೆದುಕೊಂಡು, ಅದರೊಂದಿಗೆ ಇಲ್ಲಿನ ವಿಶಿಷ್ಟ ಜಾನಪದ ಕಲೆ ಯಾದ ಯಕ್ಷಗಾನವನ್ನೂ ಕೂಡಿಸಿದರೆ ಈ ಜಿಲ್ಲೆಯವರ ಕೊಡುಗೆ ಅದ್ವಿತೀಯವೆಂಬುದನ್ನು ಒಪ್ಪಲೇ ಬೇಕಾದೀತು ಎಂದು ಅಂದು ಅವರು ನುಡಿದಿದ್ದರು. ತರುವಾಯ ನಡೆದ ಚರ್ಚೆಯ ವೇಳೆ ಸಭಿಕರೊಬ್ಬರು ಆಧುನಿಕ ಕನ್ನಡ ಬರಹಗಾರರು ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯವನ್ನು ಒದಗಿಸಿಕೊಟ್ಟು ಇಂದಿನ ಪೀಳಿಗೆಗೆ ಸಮರ್ಪಕವಾದ ಒಳ್ಳೆಯ ಮಾರ್ಗದರ್ಶನವನ್ನೀಯುವುದರಲ್ಲಿ ಸೋತಿದ್ದಾರೆಂಬ ಅರ್ಥದ ಅಭಿಪ್ರಾಯ ವನ್ನು ವ್ಯಕ್ತಪಡಿಸಿದಾಗ ಭಟ್ಟರು ಉದ್ವೇಗಗೊಂಡು ಅದನ್ನು ಸಕಾರಣವಾಗಿ ರಭಸದಿಂದ ವಿರೋಧಿಸಿ ಅವರ ಬಾಯಿಮುಚ್ಚಿಸಿದುದನ್ನು ನಾನೆಂದೂ ಮರೆಯಲಾರೆ.

ಶ್ರೀಮಾನ್ ಪರಮೇಶ್ವರ ಭಟ್ಟರ ಹಲವಾರು ಒಳ್ಳೆಯ ಭಾಷಣಗಳನ್ನು ಕೇಳುವ ಸುಯೋಗ ಲಭಿಸಿದ ನಮಗೆ ಅವರು ಬರೆದು ಪ್ರಕಟಿಸಿದ ಕೆಲವು ಭಾಷಣಗಳನ್ನೂ ಓದಿ ಆನಂದಿಸುವ ಭಾಗ್ಯ ಲಭಿಸಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆಯ ವತಿಯಿಂದ ಪ್ರಕಟವಾದ 'ಅಕ್ಕಮಹಾ ದೇವಿ' ಮತ್ತು 'ಭಾವಗೀತೆ'ಗಳಂಥ ಭಾಷಣ ಸಂಕಲನಗಳು ಇಷ್ಟರಲ್ಲೇ ನಾಲ್ಕೈದು ಬಾರಿ ಪುನರ್ ಮುದ್ರಣಗೊಂಡು ಜನಪ್ರಿಯತೆಯನ್ನು ಪಡೆದಿವೆ. ಅದರಲ್ಲೂ 'ಅಕ್ಕಮಹಾದೇವಿ' ಎಂಬ ಹೊತ್ತಗೆ 'ಅಕ್ಕನವರ ಆಧ್ಯಾತ್ಮಿಕ ಜೀವನ' ಮತ್ತು ಆಕೆಯ 'ವಚನಗಳಲ್ಲಿ ಕಾವ್ಯ ಮತ್ತು ನೀತಿ' ಎಂಬ ಅವರ ಎರಡು ಉಪನ್ಯಾಸಗಳನ್ನು ಒಳಗೊಂಡಿದೆ. ಇದು ೧೯೪೧ರಲ್ಲಿ ಮೊತ್ತಮೊದಲು ಪ್ರಕಟವಾಗಿತ್ತು. ಈಗ ಐದನೆಯ ಪುನರ್ ಮುದ್ರಣವನ್ನು ಕಂಡ ಈ ಕೃತಿಯನ್ನು ಓದಿದಾಗ ಆಗಲೇ ಅವರೆಷ್ಟು ಉತ್ತಮ ಭಾಷಣಕರ್ತರಾಗಿದ್ದರೆಂಬ ವಿಷಯವು ಮನದಟ್ಟಾಗುವುದು. ಅಕ್ಕನವರ ವ್ಯಕ್ತಿತ್ವ, ಸಾಧನೆ ಮತ್ತು ವಚನ ಸಾಹಿತ್ಯಕ್ಕೆ ಆಕೆಯ ಕೊಡುಗೆಯನ್ನು ಚಿಕ್ಕದಾಗಿಯಾದರೂ ಚೊಕ್ಕದಾಗಿ ಸರಳವಾದ ಸ್ಪಷ್ಟವಾದ ಶೈಲಿಯಲ್ಲಿ ನಿರೂಪಿಸಿದ್ದಾರೆ. ಅಕ್ಕನವರ ಪರಿಚಯ ಮಾಡಿಕೊಳ್ಳಬಯಸುವ ಜನಸಾಮಾನ್ಯರಿಂದ ಹಿಡಿದು ವಚನ ಸಾಹಿತ್ಯ ಪ್ರಕಾರವನ್ನು ವಿಶೇಷ ವಿಷಯವನ್ನಾಗಿ ಆರಿಸಿಕೊಂಡು ಓದುವ ಸ್ನಾತಕೋತ್ತರ ವಿದ್ಯಾರ್ಥಿಗಳಿಗೂ ಇದೊಂದು ಉಪಯುಕ್ತ ಗ್ರಂಥವಾಗಿದೆ.

ಇವರ ಮೊದಲನೆಯ ಉಪನ್ಯಾಸದಲ್ಲಿ ಅಕ್ಕನವರ ಆಧ್ಯಾತ್ಮಿಕ ಬೆಳವಣಿಗೆಯ ಪಥವನ್ನು ಆಕೆಯ ವಚನಗಳ ಆಧಾರದಿಂದಲೂ, ಹರಿಹರನ ರಗಳೆಗಳ ಆಧಾರದಿಂದಲೂ ಗುರುತಿಸಲು ಪ್ರಯತ್ನಿಸಿದ್ದಾರೆ. ಈ ಬೆಳವಣಿಗೆಯಲ್ಲಿ ಐದು ಘಟ್ಟಗಳನ್ನು ಗುರುತಿಸಿದ ಅವರು ಅಕ್ಕನ ಆತ್ಮ ಆಧ್ಯಾತ್ಮಿಕ ಸಿದ್ಧಿಯ ಸೋಪಾನಗಳನ್ನೇರಿದ ಬಗೆಯನ್ನು ಸುಂದರವಾಗಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ.

'ಭಾವಗೀತೆ' ಮಂಡ್ಯದಲ್ಲಿಯೂ ಬಳ್ಳಾರಿಯಲ್ಲಿಯೂ ಅವರು ಮಾಡಿದ ಪ್ರಚಾರೋಪನ್ಯಾಸಗಳ ಪುಸ್ತಕ ರೂಪ. ಈ ಉಪನ್ಯಾಸಗಳಲ್ಲಿ 'ಭಾವಗೀತೆ' ಪದದರ್ಥ ಭಾವಗೀತೆಗೂ ಇತರ ಸಾಹಿತ್ಯ ಪ್ರಕಾರ ಗಳಿಗೂ ಇರುವ ಸಂಬಂಧ, ಭಾವಗೀತೆಯ ವಿಶಿಷ್ಟ ಲಕ್ಷಣಗಳಾದ ಗೇಯತೆ, ಸಂಕ್ಷಿಪ್ತತೆ, ಸ್ವಾಂತತೆ, ಚಿರಂತನತೆ ಮತ್ತು ಭಾವದೀಪ್ತತೆ ಇವುಗಳನ್ನೂ ಭಾವಗೀತೆಯ ಉಗಮವನ್ನೂ ಸುಂದರವಾಗಿ ಸ್ಪಷ್ಟವಾಗಿ ಅಚ್ಚುಕಟ್ಟಾಗಿ ವಿವರಿಸಿದ್ದಾರೆ. ಈ ಪುಸ್ತಿಕೆಯನ್ನು ಓದಿ ಮುಗಿಸಿದಾಗ ಉಪನ್ಯಾಸ ಮಾಡಿದರೆ ಹೀಗಿರ ಬೇಕೆಂದೆನಿಸಿತು. ಭಾವಗೀತೆಯ ಕುರಿತು ತಿಳಿದುಕೊಳ್ಳಬೇಕಾದ ಎಲ್ಲ ವಿಷಯಗಳೂ ಇಲ್ಲಿವೆ. ಪ್ರಖ್ಯಾತ ಕವಿಗಳ ಉದಾಹರಣೆಗಳೊಂದಿಗೆ ವಿಷಯ ಮಂಡನೆ ಹಾಗೂ ಪ್ರತಿಪಾದನೆ ಸರ್ವಾಂಗ ಸುಂದರವಾಗಿದೆ.

ಭಟ್ಟರು ನೂರಾರು ಅತ್ಯುತ್ತಮ ಭಾಷಣಗಳನ್ನು ಮಾಡಿದ್ದರೂ ಅವುಗಳಲ್ಲಿ ಹೆಚ್ಚಿನವು ಇನ್ನೂ ಪ್ರಕಟ ವಾಗಿಲ್ಲ. ಅವನ್ನು ಕೇಳಿದವರಿಗೆ ಅವುಗಳು ಪ್ರಕಟವಾಗಿದ್ದರೆ ಪುನಃ ಸಾವಕಾಶವಾಗಿ ಓದಬಹುದಿತ್ತು, ಇನ್ನೂ ಹೆಚ್ಚಿನ ಆನಂದವನ್ನೂ ಪ್ರಯೋಜನವನ್ನೂ ಪಡೆಯಬಹುದಾಗಿತ್ತು ಎಂದು ಎನ್ನಿಸುತ್ತದೆ.

ಅದಲ್ಲದೆ ಅವರು ಭಾಷಣ ಮಾಡಲಿರುವ ಕಾರ್ಯಕ್ರಮಕ್ಕೆ ಆಹ್ವಾನ ಇಲ್ಲದವರಿಗೆ ಹೋಗಲು ಸಾಧ್ಯವಾಗುವುದಿಲ್ಲ. ಇದರಿಂದಾಗಿ ಅವರ ಭಾಷಣ ಕೇಳುವ ಸುಯೋಗ ಅನೇಕರಿಗೆ ಲಭಿಸುವುದಿಲ್ಲ. ಆದರೂ ಯಾಕೋ ಏನೋ ಅವರು ತಮ್ಮ ಭಾಷಣಗಳನ್ನು ಪ್ರಕಟಿಸುವುದಕ್ಕೆ ಮನಸ್ಸು ಮಾಡಿಲ್ಲ. ಬಹುಶಃ ಇದಕ್ಕೆ ಕಾರಣ, ಅವರ ಹೆಚ್ಚಿನ ಭಾಷಣಗಳು ಮನೆಯಲ್ಲಿ ಕೂತು ಬರೆದು, ಆಮೇಲೆ ಸಭೆಗೆ ಹೋಗಿ ಓದಿದ ಉಪನ್ಯಾಸಗಳಾಗಿರದೆ, ಉಪನ್ಯಾಸದ ವಿಷಯವನ್ನು ಚೆನ್ನಾಗಿ ಅಭ್ಯಾಸಮಾಡಿ ತಮ್ಮ ವಾಕ್ಪಟುತ್ವದಿಂದ ಮಾಡಿದ ಆಶು ಭಾಷಣಗಳೇ ಆಗಿರುವುವು. ನಾನು ಇಷ್ಟರ ವರೆಗೆ ಕೇಳಿದ ಅವರ ಭಾಷಣಗಳೆಲ್ಲವೂ ಇದೇ ತೆರನಾಗಿದ್ದುವು. ತಮ್ಮ ಭಾಷಣಗಳನ್ನು ಮುಂಚಿತವಾಗಿ ಬರೆಯದೆ ಇದ್ದುದರಿಂದ, ಆ ಭಾಷಣಗಳನ್ನು ಕೇಳುವವರಿಗೆ ಅವು ಹೆಚ್ಚು ರುಚಿಸುವಂತೆ ಆಗುವುದಾದರೂ, ಸಭೆಗೆ ಬರಲಾಗದವರಿಗೆ ಅವುಗಳನ್ನು ಓದಿ ಆನಂದಿಸುವ ಭಾಗ್ಯ ತಪ್ಪುತ್ತದೆ.

ಇತ್ತೀಚೆಗೆ ಅಂದರೆ ೧೯೭೦ರಲ್ಲಿ ಉಷಾ ಸಾಹಿತ್ಯಮಾಲೆ, ಮೈಸೂರು, ಇವರು ಭಟ್ಟರ ಆಯ್ದ ಆರು ಭಾಷಣಗಳ ಸಂಕಲನವೊಂದನ್ನು ಬೆಳಕಿಗೆ ತಂದಿದ್ದಾರೆ. ಹಿನ್ನುಡಿಯಲ್ಲಿ ಭಾಷಣಕರ್ತರೇ ಹೇಳಿರುವಂತೆ ಇವುಗಳಲ್ಲಿ 'ಮುದ್ದಣ ಕವಿಯನ್ನು ಕುರಿತು' ಎಂಬುದನ್ನು ಬಿಟ್ಟರೆ ಉಳಿದವೆಲ್ಲವೂ ಬರೆದು ಓದಿದ ಪ್ರಬಂಧಗಳು. ಬಹುಶಃ ಅವರು ಬರೆದು ಓದಿದ ಪ್ರಬಂಧಗಳ ಸಂಖ್ಯೆ ಇಷ್ಟೇ ಆಗಿರಬೇಕು. ಈ ಸಂಕಲನದ ಮೊತ್ತಮೊದಲಿನ ಭಾಷಣ 'ಶಾಸ್ತ್ರ ಶ್ರೀರೋಹಣಾರೋಹಣಕ್ಕೆ ಕರೆ' ಎಂಬುದು 'ಶ್ರವಣಬೆಳ್ಗೊಳದಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ನಡೆದ ಕವಿಗೋಷ್ಠಿಯ ಅಧ್ಯಕ್ಷಸ್ಥಾನದಿಂದ ಮಾಡಿದ ಭಾಷಣ. ಕವಿ, ಸಹೃದಯ ವಿಭೂತಿಗಳ ನಮನದಿಂದಾರಂಭವಾಗುವ ಈ ಭಾಷಣದಲ್ಲಿ ಕಾವ್ಯ ಏಕೆ ಹುಟ್ಟುತ್ತದೆ, ಹೇಗೆ ಹುಟ್ಟುತ್ತದೆ, ಕವಿತೆಯ ರಚನೆಯಲ್ಲಿ ಪ್ರತಿಭೆಯ ಕಾರ್ಯವೆಷ್ಟು, ವಿಭಾವನೆಯ ಪಾತ್ರವೇನು, ವ್ಯುತ್ಪತ್ತಿಯ ಅಗತ್ಯವೆಷ್ಟು ಎಂಬಿತ್ಯಾದಿ ಪ್ರಶ್ನೆಗಳನ್ನು ಕೇಳಿ ಅವುಗಳಿಗೆ ಸಮರ್ಪಕ ಉತ್ತರಗಳನ್ನು ಒದಗಿಸುವುದರ ಮೂಲಕ ಕಾವ್ಯಮೀಮಾಂಸೆಯ ಮಹಾ ಸಮಸ್ಯೆಗಳ ಕುರಿತು ತಮ್ಮ ಅಭಿಪ್ರಾಯವನ್ನು ಸುಂದರವಾಗಿ ಸ್ಪಷ್ಟವಾಗಿ ಸಂಕ್ಷಿಪ್ತವಾಗಿ ಮಂಡಿಸಿದ್ದಾರೆ. ಕಾವ್ಯದ ಭಾಷೆ ಮತ್ತು ಛಂದಸ್ಸಿನ ಕುರಿತೂ ಇಲ್ಲಿ ಉಲ್ಲೇಖವಿದೆ. ನವೋದಯ ಕಾವ್ಯ, ಜಾನಪದ ಸಾಹಿತ್ಯ, ನವ್ಯಕಾವ್ಯಗಳ ಕುರಿತಾದ ವಿಮರ್ಶಾತ್ಮಕ ನುಡಿಮುತ್ತುಗಳೂ ಇಲ್ಲಿ ಬೆರೆತಿವೆ. ಕಾವ್ಯದ ಉಗಮ ಹಾಗೂ ಲಕ್ಷಣಗಳ ಕುರಿತಾದ ಭಟ್ಟರ ಒಲವು ನಿಲವುಗಳ ಪಾದಚಿಹ್ನೆಗಳನ್ನು ಇಲ್ಲಿ ಗುರುತಿಸಬಹುದು.

'ಶ್ರೀ ರಾಮಾಶ್ವಮೇಧದ ಗದ್ಯ' ಎಂಬುದು ಈ ಸಂಕಲನದಲ್ಲಿರುವ ಎರಡನೆಯ ಭಾಷಣ. ಮೈಸೂರು ವಿಶ್ವವಿದ್ಯಾನಿಲಯದ ಮಂಗಳೂರು ಸ್ನಾತಕೋತ್ತರ ಕೇಂದ್ರದವರು ನಡೆಸಿದ ಮುದ್ದಣ ಕವಿಯ ನೂರನೆಯ ಹುಟ್ಟುಹಬ್ಬದ ಉತ್ಸವದಲ್ಲಿ ಇದನ್ನು ಅವರು ಓದಿದ್ದರು. ಮುದ್ದಣ ಕವಿಯ ಗದ್ಯ ಶೈಲಿಯನ್ನು ಕುರಿತು ನಾಲ್ಕು ಮಾತು ಹೇಳುವುದು ಈ ಭಾಷಣದ ಉದ್ದೇಶವೆಂದು ಅವರೇ ಹೇಳಿಕೊಂಡಿದ್ದಾರೆ. ಈ ಉಪನ್ಯಾಸದಲ್ಲಿ ಮುದ್ದಣನ ಗದ್ಯದ ಹೃದ್ಯತೆಯನ್ನೂ, ವಿಶೇಷ ಲಕ್ಷಣಗಳಾದ ತದ್ಭವ ಪ್ರಾಚುರ್ಯ ಪ್ರಾಸಪ್ರಿಯತೆ, ನಾದಮಾಧುರ್ಯ ಮುಂತಾದುವುಗಳನ್ನೂ ಸೊಗಸಾಗಿ ವಿವರಿಸಿದ್ದಾರೆ.

ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯವರು ನಡೆಸಿದ ಮುಮ್ಮಡಿ ಕೃಷ್ಣರಾಜ ಒಡೆಯರ ನೂರನೆಯ ಪುಣ್ಯ ತಿಥಿಯ ಉತ್ಸವಾಚರಣೆಯ ಸಭೆಯಲ್ಲಿ ಓದಿದ 'ಶಾಕುಂತಲ ನಾಟಕ ನವೀನ ಟೀಕೆ' ಎಂಬ ಉಪನ್ಯಾಸ 'ಶಾಕುಂತಲ ನಾಟಕ ನವೀನ ಟೀಕೆ'ಯ ನವೀನ ಟೀಕೆಯಾಗಿದೆ.

'ಬಸವಣ್ಣನವರ ವಚನಗಳಲ್ಲಿ ರೂಪಾಂಶ'ವೆಂಬ ಅವರ ನಾಲ್ಕನೆಯ ಉಪನ್ಯಾಸವೇ ಇಲ್ಲಿರುವ ಉಳಿದ ಎಲ್ಲ ಉಪನ್ಯಾಸಗಳಿಗಿಂತಲೂ ಉತ್ತಮವಾದುದೆಂದು ನನ್ನೆಣಿಕೆ. ಬಸವಣ್ಣನವರ ವಚನಗಳ ಸಂಕ್ಷಿಪ್ತ ಸ್ವರೂಪ ಅದಕ್ಕೆ ಕಾರಣಗಳಾದ ಅಕೃತಕ ಶೀಘ್ರ ಸ್ಫುರಣ, ರೂಪಕಗಳ ಬಾಹುಳ್ಯ, ಪ್ರಾಸಭರಿತ ಪಾದಗಳು ಮುಂತಾದುವನ್ನು ಬಿಡಿ ಬಿಡಿಯಾಗಿ ನಿರೂಪಿಸಿ, ವಚನವಾಕ್ಯ ವಿನ್ಯಾಸ ಕ್ರಮವನ್ನೂ ಲಯ ವಿನ್ಯಾಸವನ್ನೂ ಸೂಕ್ಷ್ಮವಾಗಿ ಪದರು ಪದರುಗಳಾಗಿ ವಿಂಗಡಿಸಿ ವಿಶ್ಲೇಷಿಸಿದ್ದಾರೆ. ವಚನಗಳ ಬಾಹ್ಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಇದೊಂದು ಅತ್ಯುತ್ತಮ ಪ್ರಬಂಧ.

'ಮುದ್ದಣ ಕವಿಯನ್ನು ಕುರಿತು' ಎಂಬ ಐದನೆಯ ಭಾಷಣ 'ಮುದ್ದಣ ಕವಿಯ ಶತಮಾನೋತ್ಸವದ ಸಮಾರಂಭಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬೇರೆ ಬೇರೆ ಕಡೆಗಳಲ್ಲಿ ಮಾಡಿದ ಭಾಷಣಗಳ ತುಣುಕು ಮಿಣುಕುಗಳ ಸಂಗ್ರಹ' ಮುದ್ದಣನ ಬರಹಗಳ ಕುರಿತಾದ ಭಟ್ಟರ ಮೆಚ್ಚುಗೆಯ ನುಡಿಗಳನ್ನೊಳಗೊಂಡಿದೆ. ಮುದ್ದಣನ ಗದ್ಯಶೈಲಿಯನ್ನೂ ಅವರು ಇಲ್ಲಿ ಸ್ವಲ್ಪ ಮಟ್ಟಿಗೆ ವಿಶ್ಲೇಷಿಸಿದ್ದಾರೆ. 'ಏಕ–ತ್ರಿಪದಿ-ಗಾದೆ ಇವುಗಳ ರೂಪಸಾದೃಶ್ಯ' ಭಾಷಣ ಸಂಕಲನದಲ್ಲಿರುವ ಕೊನೆಯ ಉಪನ್ಯಾಸ ಜಾನಪದ ಸಾಹಿತ್ಯದ ಈ ಪ್ರಮುಖ ಪ್ರಕಾರಗಳೊಳಗಿರುವ ಸಂಬಂಧ. ಸಾದೃಶ್ಯಗಳನ್ನು ದೃಷ್ಟಾಂತಗಳ ಮೂಲಕ ವಿಶದಪಡಿಸುವುದೇ ಇವರ ಉದ್ದೇಶ. ಇವುಗಳ ಉಗಮ ವಿಕಾಸಗಳಲ್ಲಿ ಒಂದು ಇನ್ನೊಂದರ ಮೇಲೆ ಬೀರಬಹುದಾಗಿರುವ ಪ್ರಭಾವವನ್ನೂ ಅವರು ಗುರುತಿಸಲು ಯತ್ನಿಸಿದ್ದಾರೆ.

ಈ ಪುಟ್ಟ ಲೇಖನವನ್ನು ಕೊನೆಗೊಳಿಸುವ ಮುನ್ನ ಭಟ್ಟರ ಭಾಷಣಗಳ ಪ್ರಮುಖ ಲಕ್ಷಣಗಳ ಕುರಿತು ಒಂದೆರಡು ಮಾತುಗಳನ್ನು ಹೇಳಲೇಬೇಕು. ಅವರ ಭಾಷಣಗಳನ್ನು ಸಭೆಗೆ ಹೋಗಿ ಕೇಳಿದಾಗಲೂ, ಅಚ್ಚಾದುದನ್ನು ಓದಿದಾಗಲೂ ನಮ್ಮ ಗಮನಕ್ಕೆ ಬರುವ ಮೊತ್ತಮೊದಲಿನ ಲಕ್ಷಣವೆಂದರೆ ಸ್ಪಷ್ಟತೆ. ಅವರು ತಮ್ಮ ಭಾಷಣದಲ್ಲಿ ಏನು ಹೇಳಬೇಕೆಂದಿರುವರೊ ಅದನ್ನು ಸರಳವಾದ ಶೈಲಿಯಲ್ಲಿ, ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಸ್ಪಷ್ಟವಾಗಿ ಕೇಳುವವರ ಮನಸ್ಸಿಗೆ ನಾಟುವಂತೆ ಹೇಳುತ್ತಾರೆ. ಭಾಷಣದ ವಿಷಯವನ್ನು ಅನೇಕ ಭಾಗಗಳಾಗಿ ವಿಂಗಡಿಸಿ ಅದನ್ನು ಬೇರೆ ಬೇರೆ ದೃಷ್ಟಿಗಳಲ್ಲಿ ಪರಿಶೀಲಿಸಿ ಅದರ ಪ್ರತಿಯೊಂದು ಮುಖವನ್ನೂ ಸಭಿಕರ ಮುಂದಿಡಲು ಅವರು ಪ್ರಯತ್ನಿಸುತ್ತಾರೆ. ಇದೇ ಅವರ ಭಾಷಣಗಳ ಸ್ಪಷ್ಟತೆಗೆ ಕಾರಣ. ಈ ದಿಶೆಯಲ್ಲಿ ಅವರ ವಿಶ್ಲೇಷಣಾಶಕ್ತಿ ಅವರಿಗೆ ತುಂಬಾ ನೆರವಾಗುತ್ತದೆ. ಇದಕ್ಕೆ ಉದಾಹರಣೆಯಾಗಿ ನಾನು ಈ ಮೊದಲೇ ಉಲ್ಲೇಖಿಸಿದ 'ಕನ್ನಡ ಸಾಹಿತ್ಯಕ್ಕೆ ದಕ್ಷಿಣ ಕನ್ನಡದ ಕೊಡುಗೆ' ಎಂಬ ಭಾಷಣವನ್ನು ತೆಗೆದುಕೊಳ್ಳಬಹುದು. ಈ ಕೊಡುಗೆಯ ವೈಶಿಷ್ಟ್ಯವನ್ನೂ, ಗಾತ್ರವನ್ನೂ, ಮೌಲ್ಯವನ್ನೂ ನಿರ್ಧರಿಸಲು ಮೊತ್ತಮೊದಲು ಅವರು ಪ್ರಾಚೀನ ಮತ್ತು ಅರ್ವಾಚೀನ ದ. ಕನ್ನಡದ ಕವಿಗಳ ಕೃತಿಗಳ ಪರಿಚಯವನ್ನು ಸಭೆಗೆ ಮಾಡಿಕೊಟ್ಟರು. ಬಳಿಕ ರತ್ನಾಕರವರ್ಣಿಯ ಭರತೇಶ ವೈಭವದಲ್ಲಿ ವರ್ಣಿಸಲ್ಪಟ್ಟಿರುವ ಒಬ್ಬ ಚಕ್ರವರ್ತಿಯ ಆದರ್ಶ ದಾಂಪತ್ಯ ಜೀವನ ಮುದ್ದಣನ ರಾಮಾಶ್ವಮೇಧದಲ್ಲಿನ ಮುದ್ದಣ ಮನೋರಮೆಯವರ ಸಂವಾದ, ಪಂಜೆಯವರು ಶಿಶು ಸಾಹಿತ್ಯದಲ್ಲೂ, ಸಣ್ಣ ಕಥೆ, ಹರಟೆ, ಆಧುನಿಕ ಭಾವಗೀತೆ ಮುಂತಾದ ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಪ್ರಯೋಗ ನಡೆಸಿ ಈ ಪ್ರಕಾರಗಳ ಆದ್ಯಪ್ರವರ್ತಕರಾಗಿ ದುಡಿದ ಹಿರಿಮೆ, ಪ್ರಾಸ ಬಿಟ್ಟು ಕವಿತೆ ರಚಿಸಿ ಕನ್ನಡ ಸಾಹಿತ್ಯದ ಕ್ರಾಂತಿಕಾರಕ ಮುನ್ನಡೆಗೆ ದಾರಿ ಮಾಡಿಕೊಟ್ಟ ಗೋವಿಂದ ಪೈಗಳ ಧೈರ್ಯ ಸ್ಥೈರ್ಯ ಮುಂತಾದುವುಗಳನ್ನು ವರ್ಣಿಸಿದರು. ಜಾನಪದ ಸಾಹಿತ್ಯದಲ್ಲೂ ದಕ್ಷಿಣ ಕನ್ನಡದ ಕೊಡುಗೆ ಉಳಿದ ಜಿಲ್ಲೆಗಳ ಕೊಡುಗೆಗಳಿಗಿಂತ ಹೇಗೆ ಭಿನ್ನವಾಗಿ ವಿಶಿಷ್ಟವಾಗಿದೆ ಎಂಬುದನ್ನು ತೋರಿಸಿಕೊಡಲು ಇಲ್ಲಿನ ಯಕ್ಷಗಾನ ಬಯಲಾಟಗಳನ್ನು ಪ್ರಸ್ತಾವಿಸಿದರು. ಬಾಸೆಲ್ ಮಿಶನಿನವರು ಅಚ್ಚುಕೂಟವನ್ನಾರಂಭಿಸಿ ಕಿಟ್ಟೆಲ್ ಕೋಶವನ್ನೂ ಇನ್ನಿತರ ಅನೇಕ ಪುಸ್ತಕಗಳನ್ನೂ ಅಚ್ಚು ಹಾಕಿಸಿ ಸಾಹಿತ್ಯ ಪ್ರಸಾರದ ಕ್ಷೇತ್ರದಲ್ಲಿ ಮಾಡಿದ ಸೇವೆಯನ್ನು ಕೊಂಡಾಡಿದರು. ಮುಳಿಯ ತಿಮ್ಮಪ್ಪಯ್ಯನವರು ಪಂಪನ ಕುರಿತಾಗಿ ಮಾಡಿದ ಸಂಶೋಧನೆಯನ್ನು ಪ್ರಸ್ತಾವಿಸಿ ವಿಮರ್ಶೆಗೆ ಹಾಗೂ ಸಂಶೋಧನೆಯ ಕ್ಷೇತ್ರದಲ್ಲೂ ದಕ್ಷಿಣ ಕನ್ನಡ ಜಿಲ್ಲೆಯವರೇ ನವೋದಯದ ಪ್ರಾರಂಭದಲ್ಲಿ ಮಾರ್ಗದರ್ಶನ ಮಾಡಿ ಉಜ್ಜ್ವಲ ಪರಂಪರೆಯನ್ನು ಸ್ಥಾಪಿಸಿದ ಬಗೆಯನ್ನು ವಿವರಿಸಿದರು.

ಬರೆದು ಓದಿದ ಭಾಷಣಗಳಿಂದ ಇದಕ್ಕೊಂದು ದೃಷ್ಟಾಂತವನ್ನು ಕೊಡುವುದಾದರೆ 'ಭಾವಗೀತೆ' ಎಂಬ ಪುಸ್ತಿಕೆಯನ್ನು ನೋಡಬಹುದು. ಭಾವಗೀತೆಯ ಹುಟ್ಟು, ಪದದರ್ಥ, ವಿವಿಧ ಲಕ್ಷಣಗಳು, ಅದರ ವ್ಯಾಪ್ತಿ ಮುಂತಾದುವುಗಳನ್ನು ಎಷ್ಟು ಸರಳವಾಗಿ ಸ್ಪಷ್ಟವಾಗಿ, ಜನಸಾಮಾನ್ಯರೂ ಅರ್ಥಮಾಡಿಕೊಳ್ಳುವಂತೆ, ಪಂಡಿತರೂ ತಲೆದೂಗುವಂತೆ ವಿವರಿಸಿದ್ದಾರೆಂಬುದನ್ನು ಇದನ್ನು ಓದಿಯೇ ಮನವಟ್ಟು ಮಾಡಿಕೊಳ್ಳಬೇಕು.

ಒಬ್ಬನು ಉತ್ತಮ ಭಾಷಣಗಾರನೆಂದೆನಿಸಿಕೊಳ್ಳಬೇಕಾದರೆ ಆತನು ತನ್ನ ಸ್ವಂತ ಅನುಭವ ಹಾಗೂ ಅಧ್ಯಯನದ ಮೂಲಕ ತಾನು ಮಾತನಾಡಲಿರುವ ವಿಷಯದ ಮೇಲೆ ಪ್ರಭುತ್ವವನ್ನು ಸಂಪಾದಿಸಿ

ಕೊಂಡಿರಬೇಕು. ವಿಷಯದ ಕುರಿತು ಭಾವಪರವಶನಾಗಿ ತನ್ನ ಜ್ಞಾನವನ್ನೂ, ಅನುಭವವನ್ನೂ ಶ್ರೋತೃಗಳೊಡನೆ ಹಂಚಿಕೊಳ್ಳಲು ಆತನು ಆತುರನಾಗಿರಬೇಕು. ಒಟ್ಟಿನಲ್ಲಿ ತಾನು ಈ ಪದವಿಯನ್ನು ಅಥವಾ ಆಹ್ವಾನವನ್ನು ಸ್ವೀಕರಿಸಿದುದಕ್ಕಾಗಿ ಏನನ್ನಾದರೂ ಹೇಳಬೇಕು ಎಂಬ ಮನೋಭಾವ ಹೊಂದಿರದೆ. ತನಗೆ ಈ ವಿಷಯದ ಕುರಿತು ತುಂಬಾ ಹೇಳಲಿದೆ, ಇದನ್ನು ಇತರರಿಗೆ ಹೇಳಲೇಬೇಕೆಂದೆನಿಸುತ್ತದೆ ಎಂದು ಅಂದುಕೊಂಡಿರಬೇಕು. ಇಂತಹ ಭಾಷಣಗಾರನು ಉತ್ಸಾಹದಿಂದ. ಮಾತುಗಳಲ್ಲಿ ಜೀವಕಳೆ ತುಂಬಿ ಮಾತನಾಡಲು ಶಕ್ತನಾಗುತ್ತಾನೆ. ಪದಗಳಲ್ಲಿ ತನ್ನ ಹೃದಯವನ್ನಿಟ್ಟು ಮಾತನಾಡುತ್ತಾನೆ.

ಶ್ರೀ ಪರಮೇಶ್ವರ ಭಟ್ಟರ ಭಾಷಣಗಳಲ್ಲಿ ಮೇಲಿನ ಗುಣಗಳಿವೆ. ಭಾವಾವೇಶ ಮತ್ತು ತನ್ಮಯತೆ ಭಾಷಣಗಳ ವೈಶಿಷ್ಟ್ಯವೆನ್ನಬಹುದು. ಅವರೊಬ್ಬ ಕವಿಗಳಾಗಿರುವುದೇ ಇದಕ್ಕೆ ಕಾರಣವಾಗಿರಬಹುದು. ಕವಿಗಳಾಗಿರುವವರು ಸಾಮಾನ್ಯವಾಗಿ ಭಾವಜೀವಿಗಳಾಗಿರುತ್ತಾರೆ. ಅವರು ಭಾಷಣವನ್ನಾರಂಭಿಸಿ ಆವೇಶದಿಂದ ಸ್ಫೂರ್ತಿಗೊಂಡು ಮುಂದುವರಿದಾಗ ಕಾವ್ಯವಾಹಿನಿಯೇ ಅವರ ಬಾಯಿಂದ ಹೊರಡುವಂತೆ ಭಾಸವಾಗುತ್ತದೆ. ಪ್ರಾಸಬದ್ಧವಾದ ಪದಗಳು, ನಾದಭರಿತ ಲಯದಿಂದ ಕೂಡಿದ ಮಾತುಗಳು ನಿರರ್ಗಳವಾಗಿ ಮೇಲಿಂದ ಮೇಲೆ ಬರುತ್ತವೆ. ಅವರ ಭಾಷಣಗಳಲ್ಲಿ ಹೆಚ್ಚಿನವು ಆಶುಭಾಷಣಗಳಾಗಿರುವುದರಿಂದ ಮಾತುಗಳು ಹೃದಯದಿಂದ ಹೊರಡುತ್ತವೆ ಮತ್ತು ನೇರವಾಗಿ ಸಭಿಕರ ಹೃದಯವನ್ನೇ ಹೊಗುತ್ತವೆ. ಅಧ್ಯಕ್ಷಸ್ಥಾನವನ್ನಲಂಕರಿಸಿದ ಸಂದರ್ಭಗಳಲ್ಲಿ ಅವರು ಕೊನೆಗೆ ಮಾತನಾಡಬೇಕಾಗುತ್ತದೆ. ಆದರೂ ಪ್ರಸ್ತುತ ವಿಷಯದ ಮೇಲೆ ಎಷ್ಟೇ ಜನರು ಮೊದಲು ಭಾಷಣ ಬಿಗಿದಿದ್ದರೂ ಅವರಿಗೆ ಹೇಳಬೇಕೆಂದು ತೋರುವ ಎಷ್ಟೋ ವಿಷಯಗಳಿರುತ್ತವೆ. ಅವನ್ನು ಕೇಳಲು ಸಭಿಕರು ಹಾತೊರೆದಿರುತ್ತಾರೆ. ಸಾಹಿತ್ಯಕ್ಕೆ ಸಂಬಂಧಿಸಿದ ವಿಷಯಗಳ ಮೇಲೆ ಅವರಿಗೆ ಪ್ರಭುತ್ವವಿದ್ದಂತೆಯೇ ಸಂಸ್ಕೃತಿ ಶೈಕ್ಷಣಿಕ ಸಮಸ್ಯೆಗಳು ಮತ್ತಿತರ ಕಲೆಗಳಿಗೆ ಸಂಬಂಧಿಸಿದ ವಿಷಯಗಳ ಮೇಲೂ ಪ್ರಭುತ್ವವಿದೆ. ಅವರ ಪ್ರತಿಯೊಂದು ಭಾಷಣವೂ ಅವರ ವಿಶಾಲವಾದ ಓದಿಗೂ ಆಳವಾದ ಪಾಂಡಿತ್ಯಕ್ಕೂ ಜೀವಂತ ಸಾಕ್ಷಿಯಾಗಿ ಮೆರೆಯುತ್ತದೆ. ತನ್ನ ಸ್ವಂತ ಅನುಭವ ಹಾಗೂ ಅಧ್ಯಯನದ ಫಲವಾಗಿ ಕಂಡುಕೊಂಡ ಹೊಸ ವಿಷಯವನ್ನು ಸ್ವಾರಸ್ಯವಾಗಿ, ಚೆನ್ನಾಗಿ, ನೇರವಾಗಿ, ಸರಳವಾಗಿ ಅಂತರಾಳದಿಂದ ಹೇಳಲು ಪ್ರಯತ್ನಿಸಿದವನೇ ಉತ್ತಮ ವಾಗ್ಮಿಯಾಗುವನು. ಶ್ರೀ ಪರಮೇಶ್ವರ ಭಟ್ಟರ ಭಾಷಣಗಳು ಹೀಗೆಯೇ ಇರುತ್ತವೆ.

## ೯. ನಾ ಕಂಡಂತೆ

ಎಂ. ರಾಮಕೃಷ್ಣ, ಮೈಸೂರು

ಮಾರ್ಗಶಿರ ಮಾಸದ ಏಕಾದಶಿ. ಮಂಗಳೂರಿನ ಶ್ರೀರಾಮಕೃಷ್ಣ ಆಶ್ರಮದ ಆವರಣದಲ್ಲಿ ಯಾವ ಯಾವುದೋ ಮಾತುಕತೆಗಳಲ್ಲಿ ತೊಡಗಿದ್ದಾಗ ಅಲ್ಲಿಯ ಸ್ವಾಮೀಜಿಗಳೊಬ್ಬರು ಇದ್ದಕ್ಕಿದಂತೆ "ನಿಮ್ಮ ಪ್ರೊಫೆಸರರು ಹೇಗಿದ್ದಾರೆ?" ಎಂದರು.

"ಅದನ್ನು ಕೇಳಬೇಕಾದ ಪ್ರಮೇಯವೇ ಇಲ್ಲ" ಎಂದೆ.

"ಅಂದರೆ"

"ಪತ್ತೆಮಾಡುವುದು ಕಷ್ಟ."

"ಏನನ್ನು?"

"ಅದೇ. ಹೇಗಿದ್ದಾರೆ ಎಂದಿರಲ್ಲ. ಅದನ್ನೇ ನೂರೆಂಟು ತಾಪತ್ರಯಗಳಿದ್ದರೂ ನೋಡಿದವರಿಗೆ ಕಾಣಿಸುವುದು ತೃಪ್ತಿ, ಆನಂದದ ಲಕ್ಷಣಗಳೇ" ಎಂದಾಗ ಕುಳಿತವರು ಅತ್ತ ಇತ್ತ ನೋಡಿ ಮೆಲ್ಲನೆ ನುಡಿದರು.

"ನೋಡಿ ತಮ್ಮ ಪ್ರೊಫೆಸರರನ್ನು ನೋಡಿದಾಗಲೆಲ್ಲ ನನಗೆ ಹೀಗೆ ಎನ್ನಿಸುತ್ತಪ್ಪ" ಎಂದು ತಡೆದರು; ತಲೆ ತುರಿಸಿದರು.

"ಹೇಗೆ ಸ್ವಾಮಿಜೀ?" ಎಂದು ಕುತೂಹಲನಾದೆ.

"ತಪ್ಪಾಗಿ ತಿಳಿಯಬಾರದು" ಸ್ನಿಗ್ಧಭಾವದಿಂದ.

"ಇಲ್ಲ ಹೇಳಿ ಹೇಳಿ" ಎಂದು ಸರಿದೆ.

"ಅವರು ಬಿಳಿಯ ಕೂದಲಿನ ಟೋಫನ್ ಹಾಕಿಕೊಳ್ಳುವರೇನೊ ಎನ್ನಿಸುತ್ತಪ್ಪ" ಎಂದು ಜೋರಾಗಿ ನಕ್ಕರು. ಇಂತಹ ಅಪೂರ್ವ ಕಲ್ಪನೆಗೆ, ವಿಚಿತ್ರಕ್ಕೆ ಏನು ಹೇಳಬೇಕೊ ತಿಳಿಯದೆ ಕೊಂಚ ಮೌನವಾದೆ. ಯಾರಾದರೂ ಕರಿಯ ಕೂದಲಿನ ಟೋಫನ್ ಹಾಕಿಕೊಂಡಿದ್ದಾರೆಂದರೆ ಲೋಕಸಹಜವೆನ್ನಬಹುದಾಗಿತ್ತು. ಆದರೆ ಇಂತಹ ನುಡಿ ವಿರೋಧಾಭಾಸವಾಗಿತ್ತು. ಅನಂತರ ಅವರೇ ಅದನ್ನು ಬಿಡಿಸಿ ಹೇಳಿದಾಗ ಆಶ್ಚರ್ಯ ಕಾದಿತ್ತು.

"ಅವರ ಮುಖವನ್ನು ನೋಡಿದರೆ ಇನ್ನೂ ಕಿರಿಯರಂತೆ ಕಾಣುವುದರಿಂದ ಅದಕ್ಕೆ ಒಪ್ಪುವ ಕಪ್ಪು ಕೂದಲೇ ಇರಬೇಕೆಂದೂ, ಒಗ್ಗದ ಈ ಬಿಳಿ ಕೂದಲು ಕೃತಕವಿರಬೇಕೆಂದೂ ಮನಸ್ಸಿಗೆ ಎನ್ನಿಸಿದಾಗ ಇಂತಹ ವಿಚಿತ್ರ ಕಲ್ಪನೆ ಬಂದಿತು" ಎಂದು ಗಟ್ಟಿಯಾಗಿ ನಕ್ಕಾಗ ಹಲಕೆಲವು ಭಕ್ತಾದಿಗಳು ತಿರುಗಿ ನೋಡಿ ಮತ್ತೆ ಪ್ರಾರ್ಥನಾ ಮಂದಿರದ ಕಡೆ ತೆರಳಿದರು. ಒಳಗಿನ ಕೋಣೆಯಲ್ಲಿ ಹಾರ್ಮೋನಿಯಂ ಸರಿಪಡಿಸುವ ತಬಲ ತಿದ್ದುವ ದನಿ ಕೇಳಿ ಬರುತ್ತಿತ್ತು. ವಾತಾವರಣದಲ್ಲಿ ಇದ್ದಕ್ಕಿದ್ದಂತೆ ಬೇರೊಂದು ಲಹರಿ ಎದ್ದಿತ್ತು. ಅಂದಿನಿಂದಲೂ ಆಗಾಗ್ಗೆ ಅವರ ಆಮಾತು ನೆನಪಿಗೆ ಬಂದು ಅದರಲ್ಲಿ ವಿಚಿತ್ರವೇನೂ ಇಲ್ಲವೆಂದೆನಿಸಿ, ಕೊನೆ ಕೊನೆಗೆ ಅವರು ಹೇಳಿದ್ದೇ ಸರಿ ಎನಿಸಿದಾಗ ಸಂಕೋಚವೂ ಆಗುವಂತಾಗಿತ್ತು. ಇದಕ್ಕೆ ಕಾರಣ ವೇನು ಎಂದಾಗ ಮನಸ್ಸು ತನಗೊಪ್ಪುವ ಸಮಾಧಾನ ನೀಡಲು ಯತ್ನಿಸಿತ್ತು. ಕಾಲಪುರುಷನ ಪ್ರಭಾವ ಎಲ್ಲರ ಮೇಲೂ ಬೀಳುವಂತೆ ದೇಹದ ಮೇಲೆ ತನ್ನ ಪ್ರಭಾವ ಬೀರಿದ್ದರೂ ಅವರ ಮನಸ್ಸು ಅವನಿಗೆ ದಕ್ಕದೆ ತನ್ನದೇ ಆದ ವೈಶಿಷ್ಟ್ಯಗಳನ್ನು ರಕ್ಷಿಸಿಕೊಂಡಿದೆ. ಆದ್ದರಿಂದಲೇ ದೇಹ ಮನಸ್ಸುಗಳೆರಡೂ ಹೀಗೆ ಬೇರೆ ಬೇರೆ ಪ್ರಭಾವಕ್ಕೆ ಸಿಕ್ಕಿವೆ ಎನ್ನಿಸಿ, ಒಂದು ತೆರನ ಕುತೂಹಲಕಾರಕ ನಿರ್ಧಾರಕ್ಕೆ ತಲುಪಿದ್ದೆ.

ಪ್ರೊ. ಎಸ್. ವಿ. ಪ. ಭಟ್ಟರ ವಿಚಾರವಾಗಿ ಕೇಳಿದ್ದೆನೇ ಹೊರತು ಅವರನ್ನು ನೋಡಿದ್ದು ಮೊದಲ ಬಾರಿಗೆ ೧೯೬೪ರಲ್ಲಿ; ಅದೂ ಕೇವಲ ಒಂದೆರಡು ಗಂಟೆಯವರೆಗೆ ವೇದಿಕೆಯ ಮೇಲೆ. ಬೆಂಗಳೂರಿನ ಶ್ರೀರಾಮಕೃಷ್ಣಾಶ್ರಮದವರು ನಡೆಸುವ ವಾರ್ಷಿಕ ಉತ್ಸವಗಳಲ್ಲಿ ಒಂದು ದಿನ ಅವರ ಭಾಷಣ ಏರ್ಪಾಡಾಗಿತ್ತು. ಅಲ್ಲಿಯೂ ಅವರು ನಗೆಯೆಬ್ಬಿಸುವುದೆ! ಆಶ್ರಮದ ಗಂಭೀರ ವಾತಾವರಣದಲ್ಲಿ ಎಲ್ಲರೂ

ತಾತ್ತ್ವಿಕ ಜಿಜ್ಞಾಸೆಯಲ್ಲಿ ಒಣಗಿ ಸುಸ್ತಾಗಿರುವಾಗ ಎಸ್. ವಿ. ಪಿ. ಅವರ ಭಾಷಣ ಚೇತೋಹಾರಿಯಾಗಿತ್ತು. ಆಗಲೇ ತಿಳಿದದ್ದು ಅವರು ಬಾಲಕರಾಗಿದ್ದಾಗ ಆಶ್ರಮದ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರೆಂದು.

ಅನಂತರ ಅವರನ್ನು ಕಂಡದ್ದು ಮಂಗಳೂರಿನ ಸ್ನಾತಕೋತ್ತರ ವಿಭಾಗದ ಮುಖ್ಯಾಧಿಕಾರಿಗಳಾಗಿ ಆಗಮಿಸಿದಾಗ. ಅವರು ಆ ಹುದ್ದೆಯನ್ನು ವಹಿಸಿಕೊಂಡು ಮಂಗಳೂರಿಗೆ ಹೋಗುವರೆಂಬ ಸುದ್ದಿಯನ್ನು ಕೇಳಿದವರಲ್ಲಿ ನಮ್ಮ ತಂಡದ ವಿದ್ಯಾರ್ಥಿಗಳ ಪೈಕಿ ನಾನೇ ಮೊದಲಿಗನಿರಬೇಕೆಂದು ಭಾವಿಸಿದ್ದೇನೆ. ಏಕೆಂದರೆ ಕೇಂದ್ರ ಸ್ಥಾಪನೆಯಾಗುವುದೆಂದು ಸುದ್ದಿ ಕೇಳಿದಾಗಲೇ ಅಲ್ಲಿಗೆ ಯಾರು ಹೋಗುವರೆಂದು ವಿಚಾರಿಸುತ್ತಿದ್ದೆ. ಹಾಗೆ ವಿಚಾರಿಸುವಾಗ ಅಧಿಕೃತ ವಲಯಗಳಿಂದಲೇ ತಿಳಿಯಿತು, ಶ್ರೀ ಪ. ಭಟ್ಟರು ವಹಿಸಿಕೊಳ್ಳುವರೆಂದು ಅದೊಂದು ಸಂತಸದಾಯಕ ಸುದ್ದಿಯಾಗಿತ್ತು.

ಹೊಸ ಅಧಿಕಾರವಹಿಸಿಕೊಂಡು ಮಂಗಳೂರಿಗೆ ತೆರಳಿದ ಅವರು ಮೊದಲು ಪ್ರಮುಖ ಹೋಟೆಲೊಂದರಲ್ಲಿ ಇಳಿದುಕೊಂಡಿದ್ದರು. ಅವರನ್ನು ನೋಡಲು ಹೋದಾಗ ಅತೀವ ಆಶ್ಚರ್ಯ ಕಾದಿತ್ತು. ಬಹುಸರಳವಾದ ಉಡುಪಿನ, ನಗೆಮೊಗದ, ಆತ್ಮೀಯ ನುಡಿಯ ವ್ಯಕ್ತಿಯನ್ನು ನೋಡಿ ಚಳಿ ಬಿಟ್ಟಿತಾದರೂ ಒಂದು ಅನುಮಾನ ಏಕೋ ಮೂಡಿಬಂತು, ಇವರು ಅಧಿಕಾರದ ದರ್ಪವನ್ನೇ ಕಾಣದವರು ಪೇಚಿಗೆ ಸಿಕ್ಕಬಹುದೇಸೋ" ಎಂದು. ಆದರೆ ಅಂತಹ ಅನುಮಾನ ಅನಂತವೇನಲ್ಲ. ಕೆಲಸಕಾರ್ಯಗಳನ್ನು ಮಾಡಿಸುವುದರಲ್ಲಿ ಎರಡು ಮಾರ್ಗಗಳುಂಟು. ಒಂದೋ ದರ್ಪದಿಂದ ಜೋರುಮಾಡಿ ಅಂಜಿಸಿ ವ್ಯವಹಾರ ನಡೆಸುವುದು. ಇಲ್ಲಾ ಪ್ರೇಮದಿಂದ ಸಿಬ್ಬಂದಿಯನ್ನು ಒಲಿಸಿ ಕೆಲಸ ತೆಗೆದುಕೊಳ್ಳುವುದು. ಯಾರಾದರೂ ಹೇಳಬಹುದು ಯಾವುದು ಉತ್ತಮವೆಂದು; ಅದನ್ನೇ ಅವರು ಆರಿಸಿಕೊಂಡಿದ್ದರು. ಬೇರೆ ಮಾರ್ಗವೂ ಇರಲಿಲ್ಲ. ಏಕೆ? ಅವರ ಜೀವನದರ್ಶನವೇ ಹಾಗಿರುವಾಗ ಬದಲಾಗಲು ಸಾಧ್ಯವೇ? ಅಂಥಲ್ಲಿ ದುರುಪಯೋಗಪಡಿಸಿಕೊಳ್ಳುವವರೂ ಇಲ್ಲದಿಲ್ಲ, ಅದೂ ಸದಾ ಸಾಧ್ಯವೂ ಅಲ್ಲ. ಅವರ ಮಾರ್ಗವೇ ಸರಿ ಎನ್ನುವುದಕ್ಕೆ ಅವರು ತಮ್ಮ ಹಾದಿಯಲ್ಲೇ ಸಾಗಿ ಕೇಂದ್ರದ ನಿರ್ದೇಶಕರಾಗಿ ನೇಮಕವಾಗಿರುವುದೇ ಸಾಕ್ಷಿ.

ಲೋಕದಲ್ಲಿ ಎರಡು ತೆರನ ವ್ಯಕ್ತಿಗಳು ಕಾಣಸಿಗುತ್ತಾರೆ. ಒಂದು ಪಂಗಡದವರು ಏನೇನೋ ಆಸೆಗಳನ್ನಿಟ್ಟುಕೊಂಡಿದ್ದರೂ ಅವು ಏನೇ ಆಗಿರಲಿ ಪರಿಸ್ಥಿತಿಯನ್ನು ಎದುರಿಸಲಾರದೆ ಪ್ರಾರಂಭದಲ್ಲಿಯೇ ಸೋತು "ಮನುಷ್ಯ ವಾತಾವರಣದ ಶಿಶು" ಎಂದು ಹೇಳಿಕೊಂಡು ಸಮರ್ಥಿಸಿ ಮರೆಯಾಗಿ ಬಿಡುವವರು. ಇಂತಹ ಹೇಳಿಕೆಗಳನ್ನು ಕೊಟ್ಟು ರಕ್ಷಣೆಯ ಯವನಿಕೆಯ ಮರೆಯಲ್ಲಿ ತೂಕಡಿಸಿ, ಆತ್ಮಪ್ರತ್ಯಯ ಶೂನ್ಯರಾಗಿ ಗಾಳಿ ಬೀಸಿದತ್ತ ತೂರಿ ನಡೆಯುವುದು ಕಷ್ಟವಲ್ಲ. ಲೋಕದಲ್ಲಿ ಇಂಥವರೇ ಹೆಚ್ಚು ಎಂದರೂ ನಡೆದೀತು. ಏನಾದರೂ ಒಂದು ಆದರ್ಶವಿಲ್ಲದ, ಗುರಿಯಿಲ್ಲದ, ಶಕ್ತಿಸಾಹಸಗಳಿಲ್ಲದ ವ್ಯಕ್ತಿಗಳು ಮಾಡುವುದಾದರೂ ಮತ್ತೇನು? ಇನ್ನೊಂದು ಗುಂಪಿಗೆ ಸೇರಿದವರು, ಬಹು ಕಡಮೆ. ಪರಿಸ್ಥಿತಿಯನ್ನು ಎದುರಿಸಿ ಅದನ್ನೇ ಒತ್ತಿ ಅದೇ ಆಧಾರದಿಂದ ಮೇಲೇರಿ ವ್ಯಕ್ತಿತ್ವವನ್ನು ಪ್ರಕಾಶಪಡಿಸುವರು. ನೂರಾರು ವಿಧದ ನೂರೆಂಟು ವಿಘ್ನಗಳು ಬಂದರೂ ಅವುಗಳನ್ನೆದುರಿಸಿ ನಿಲ್ಲಬೇಕಾದರೆ ಬೇಕಾದ ಆಯುಧಗಳಾದರೂ ಏನು. ಆತ್ಮಪ್ರತ್ಯಯ, ಸಹಿಷ್ಣುತೆ, ದೂರದೃಷ್ಟಿ, ಶಾಶ್ವತಮೌಲ್ಯಗಳತ್ತ ಮನಸ್ಸು ಪ್ರೊ. ಪ. ಭಟ್ಟರ ಜೀವನವನ್ನು ಅರಿತವರಿಗೆ ಮಾತ್ರ ತಿಳಿದೀತು ಇದು. ಪ್ರಾರಂಭದಿಂದಲೂ ತೊಂದರೆಗಳನ್ನು ತಿಂದೇ ಬದುಕಬೇಕೆಂದರೆ ಯಾವ ಚೇತನಕ್ಕೆ ಸಾಧ್ಯ? ಅಂತಹ ಕಷ್ಟಗಳ ಮೂಸೆಯಲ್ಲಿ ಬೆಂದುದರಿಂದಲೇ ಇರಬೇಕು. ಇಷ್ಟು ಮೃದು ಮಧುರ ಸ್ವಭಾವ ಮೈಗೂಡಿರುವುದು. ಕಪಟವರಿಯದ ಅವರು ಇತರರ ವಂಚನೆಗೆ ಈಡಾದರೂ ಅದೇ ಸರಳತನದಿಂದ ಪಾರಾಗಿ ಬರುವುದೂ ಸೋಜಿಗವೇ. ಅವರ ಕಾರ್ಯಕಲಾಪಗಳನ್ನು ನೋಡಿದಾಗ ಒಂದು ಕತೆ ನೆನಪಾಗುತ್ತದೆ.

"ಓರ್ವ ಭಕ್ತ ಏನು ಮಾಡಿದರೂ, ನುಡಿದರೂ, 'ರಾಮನ ಇಚ್ಛೆಯೆಂದು ನಂಬಿದವನು. ಒಮ್ಮೆ ಕಳ್ಳರು ಲೂಟಿ ಮಾಡಿ ಭಕ್ತನ ಮೇಲೆ ಕಳ್ಳತನ ಹೊರಿಸಿ ಪಾರಾದರು. ಸಿಪಾಯಿಗಳು ನ್ಯಾಯಾಧೀಶರ ಬಳಿ ಎಳೆದೊಯ್ದಾಗ ಗದರಿಸಿದಾಗ ಆತ ಹೇಳಿದ ಹೌದು. ರಾಮನ ಇಚ್ಛೆಯಂತೆ ಕಳ್ಳರು ಕದ್ದರು. ರಾಮನ ಇಚ್ಛೆಯಂತೆ ನನ್ನ ಮೇಲೆ ಹೊರಿಸಿದರು. ರಾಮನ ಇಚ್ಛೆಯಂತೆ ಸಿಪಾಯಿಗಳು ಎಳೆದು ತಂದರು. ರಾಮನ ಇಚ್ಛೆಯಂತೆ ನ್ಯಾಯಾಧೀಶರೆದುರು ನಿಲ್ಲಿಸಿದ್ದಾರೆ'. ಈ ಪ್ರಸಂಗವನ್ನು ಸಾದ್ಯಂತ ಕೇಳಿದ

ನ್ಯಾಯಾಧೀಶರು ಆತ ನಿರಪರಾಧಿಯೆಂದು ಬಿಟ್ಟು ಬಿಟ್ಟರು. ಭಕ್ತ ಹೋಗುವಾಗ ಹೇಳಿದ, "ರಾಮನ ಇಚ್ಛೆಯಂತೆ ನ್ಯಾಯಾಧೀಶರು ಬಿಟ್ಟು ಬಿಟ್ಟರು ಎಂದು". ಅಂತೆಯೇ ಪ. ಭಟ್ಟರೂ ನಂಬಿದ ದಾರಿ. ಅವರು ಆಗಾಗ ಹೇಳುತ್ತಿದ್ದರು. "ಬಂದದ್ದನ್ನು ಸ್ವೀಕರಿಸಬೇಕು. ಬಾರದುದನ್ನು ಹುಡುಕಿಕೊಂಡು ಹೋಗಬಾರದು" ಎಂದು. ಉತ್ತಮ ಪದವಿ ದೊರೆಯಿತೇ ಸಂತೋಷ. ದೊರೆಯಲಿಲ್ಲ ಅದಕ್ಕಾಗಿ ಮಾಡಬಾರದ್ದನ್ನೆಲ್ಲಾ ಮಾಡುವುದು, ಕಾಡುವುದು, ಬೇಕಾಗಿಲ್ಲವೆನ್ನುವುದು ಅವರ ತತ್ತ್ವ.

ಪ್ರೊ. ಪ. ಭಟ್ಟರು ನಗೆಗಾರರು. ಭಾಷಣದಲ್ಲಾಗಲೀ ತರಗತಿಗಳಲ್ಲಾಗಲೀ ಅಲ್ಲೋಲಕಲ್ಲೋಲವಾಗುತ್ತಿದ್ದುದು ಕಟ್ಟಿಟ್ಟದ್ದು. ಜನರಂಜನೆಯಾಗುವ ರೀತಿಯಲ್ಲಿ ಭಾಷಣ, ಮನೋರಂಜನೆಯಾಗುವಂತೆ ಪಾಠ ಇವು ಎಲ್ಲರಿಗೂ ಸಾಧ್ಯವಿಲ್ಲವೆನ್ನುವುದು ಅನುಭವದ ಮಾತು. ಅಧ್ಯಾಪಕನಾದವನು ತರಗತಿಯನ್ನು ಹಿಡಿತದಲ್ಲಿಡಬೇಕಾದರೆ ಹಾಸ್ಯ ಚಟಾಕಿಗಳನ್ನು ಹಾರಿಸಬೇಕು ದಿಟ. ಆದರೆ ಇಡೀ ವಿದ್ಯಾರ್ಥಿಗಳ ಮನಸ್ಸನ್ನೇ ಅಪಹರಿಸಿ ನಗೆಗಡಲಲ್ಲಿ ತೇಲಿಸುವುದು ಅತ್ಯಂತ ಕಠಿಣ ಕಾರ್ಯ. ಅದಕ್ಕೆ ಹುಟ್ಟುಗುಣವೂ ಬೇಕೆಂಬುದು ಶತಸ್ಸಿದ್ಧ. ಇಲ್ಲವಾದಲ್ಲಿ ಹಾಸ್ಯಮಯವಾಗುವ ಬದಲು ಹಾಸ್ಯಾಸ್ಪದವಾದೀತು. ಅದ್ದರಿಂದಲೇ "ಸ್ವಧರ್ಮೇ ನಿಧನಂ ಶ್ರೇಯಃ" ಎನ್ನುವ ಆರ್ಯೋಕ್ತಿ. ಅವರ ಸ್ವಭಾವಕ್ಕೆ ಒಗ್ಗುವಂತೆ ಇಲ್ಲವಾದರೆ ಅಪಾಯ. ಪ್ರೊ. ಪ. ಭಟ್ಟರಂತೆಯೇ ಮಾಡೋಣವೆನ್ನುವ ಮೊದಲು ಅವರ ಸಾಧ್ಯಾಸಾಧ್ಯತೆಗಳನ್ನು ವಿಚಾರಿಸಬೇಕು. ಸಾಮಾನ್ಯವಾಗಿ ಸಭೆಯಲ್ಲಿ ಕುವೆಂಪು ಅವರು ಗಂಭೀರರಾಗಿ ಕುಳಿತಿರುವುದು ಸ್ವಭಾವಸಿದ್ಧವಾದರೂ ಪ್ರೊ. ಭಟ್ಟರ ಭಾಷಣವಿದ್ದಾಗ ಅದು ತಿರುಗಮುರುಗಾಗಬೇಕಾಗುತ್ತಿತ್ತು.

ಒಮ್ಮೊಮ್ಮೆ ಪ. ಭಟ್ಟರು ಹೇಳುತ್ತಿದ್ದರು ಸುತ್ತ ನೋಡಿ "ಈ ರಾಮಕೃಷ್ಣನನ್ನು ನಗಿಸಬೇಕಲ್ಲ" ಎಂದು. ಕಾರಣವಿಷ್ಟೆ. ಅನಾರೋಗ್ಯದಿಂದ, ನರದೌರ್ಬಲ್ಯದಿಂದಾಗಿ ಸತತ ತಲೆನೋವಿನಿಂದಲೂ, ಮನೆಯ ಪರಿಸ್ಥಿತಿಯಿಂದಲೂ ನಾನು ಸದಾಯೋಚನೆಯಲ್ಲಿರುತ್ತಿದ್ದುದನ್ನು ಕಂಡ ಪ್ರೊಫೆಸರರು ಹಾಗೆನ್ನುತ್ತಿದ್ದರು. ಏನಾದರೂ ಅವರ ಚಟಾಕಿಯೆದುರು ಯೋಚನೆ ಗೀಚನೆಗಳೆಲ್ಲಾ ದೌಡು ಹಾಕಬೇಕಾಗುತ್ತಿತ್ತು. ಅಂತೂ ಒಂದು ಗಂಟೆಯ ಅವಧಿ ಕಳೆಯುತ್ತಿದ್ದದ್ದೂ ಅನಿರೀಕ್ಷಿತ ವೇಗದಲ್ಲಿ. ಅವರ ಮುಂದೆ ಗಣಿತ ಏಕೋ ದಿಕ್ಕೆಟ್ಟು ನಿಲ್ಲುತ್ತಿತ್ತು. "ಪ್ರೊ–ವಿದ್ಯಾರ್ಥಿಗಳ ನಡುವೆ ಇರುತ್ತಿದ್ದ, ಇರುವ, ದೂರ ಅಳಿದು ಸಲಿಗೆಯೇ ತುಂಬಿರುತ್ತಿತ್ತು. ಮೊದಮೊದಲು ಅಂಜಿಕೆಯಾದರೂ ಕ್ರಮೇಣ ವಿದ್ಯಾರ್ಥಿಗಳು ಅವರನ್ನು ಅರಿತುಕೊಂಡು ಅನುಸರಿಸುತ್ತಿದ್ದರು. ಆದರೆ ಒಂದೊಂದು ಪ್ರಸಂಗ ಬಂದಾಗ ಕೊಂಚ ಬಿಗಿಯಾಗಿ ವರ್ತಿಸಿದರೇ ಒಳ್ಳೆಯದೇನೋ ಎನಿಸುತ್ತಿತ್ತು. ಸಲಿಗೆಯನ್ನು ಸುಲಿಗೆಯೆಂದು ತಿಳಿಯಬಾರದು ತಾನೆ. ಬಹುಶಃ ಅವರ ಕೋಟಿನ ಜೇಬಿಗೆ ಕೈ ಹಾಕಲೂ ಅಂಜುವಂತಿರಲಿಲ್ಲ. ಅವರೇ ಹೇಳುತ್ತಿದ್ದರು:

"ಪ್ರೊ–ವಿದ್ಯಾರ್ಥಿಕಂದರದಿಂದ ಲಾಭವಿಲ್ಲ"ಎಂದು. ಅದು ದಿಟ. ಪರಸ್ಪರ ಜವಾಬ್ದಾರಿಯನ್ನರಿತವರ ನಡುವೆ ಅದು ಬೇಕಾಗಿಲ್ಲ. ಮನೆಯ ಜನಗಳೇ "ಕದ್ದೇವು" ಎಂದು ಕೋಳತೊಟ್ಟಿರಬೇಕೆ?

ಅವರ ನಿರಾಡಂಬರ ಯೋಚನೆಗಳಿಗೂ ನಮ್ಮ ಅರ್ಥವಿಲ್ಲದ ಕಟ್ಟುಪಾಡುಗಳಿಗೂ ತಾಳ ಮೇಳವಿರುತ್ತಿರಲಿಲ್ಲ. ತಾನು ಪ್ರೊಫೆಸರ್ ಎಂಬ ಭಾವನೆಯೇ ಬರುತ್ತಿರಲಿಲ್ಲ. ಒಂದು ಸಲ ಅವರು ಹೋಟೆಲಿನಲ್ಲಿ ಊಟಮಾಡಿ ಬರುತ್ತಿದ್ದರು. ಎದುರಾಗಿ ಭೇಟಿಯಾದಾಗ "ಬನ್ನಿ ಬನ್ನಿ ಈ ಕಡೆ ಎಲ್ಲಿ"? ಎಂದರು.

"ನಿಮ್ಮನ್ನೇ ಹುಡುಕಿಕೊಂಡು ಬಂದೆ ಸಾರ್" ಎಂದೆ.

"ಬನ್ನಿ ಬಾಳೆಹಣ್ಣು ತೆಗೆದುಕೊಳ್ಳೋಣ" ಎಂದು ತಾವೇ ಮುಂದೆ ನಡೆದು ಕೆಲವು ಹಣ್ಣು ಪಡೆದು ಅಂಗಡಿಯವನ ಅಷ್ಟು ದೊಡ್ಡ ಗಾಯ ಹೇಗಾಯಿತು ಎಂದು ನಿಂತು ವಿಚಾರಿಸತೊಡಗಿದರು. ಸೀಮೆ ಎಣ್ಣೆಸ್ಟೌವ್ ಸಿಡಿದು ಅವನ ಎರಡೂ ತೊಡೆಗಳೂ ಸುಟ್ಟು ಬಿಳಿಯ ಬಣ್ಣಕ್ಕೆ ತಿರುಗಿದ್ದವು. ಎಲ್ಲವನ್ನು ಕೇಳಿ ನೊಂದು ನಿಧಾನವಾಗಿ ರಸ್ತೆಗೆ ಬಂದು "ತಿನ್ನಿ" ಎಂದು ಕೆಲವು ಹಣ್ಣನ್ನು ಕೊಟ್ಟು, ಹೇಳುತ್ತಿದ್ದಂತೆ ಸುಲಿಯತೊಡಗಿದರು. ಸುತ್ತ ನೋಡಿದೆ ಏಕೋ ಹೆದ್ದಾರಿಯಲ್ಲಿ ಬಾಳೆಹಣ್ಣು ತಿನ್ನುತ್ತಾ ಬರುವುದು ನನಗೆ ತೋರಲಿಲ್ಲ. ಮೆಲ್ಲನೆ ಹೇಳಿದೆ "ಕಾಂಪೌಂಡಿನ ಒಳಗೆ ಹೋದ ಮೇಲೆ ತಿನ್ನೋಣ" ಎಂದು. ಪ್ರೊಫೆಸರೊಬ್ಬರು ಬಾರುಬೀದಿಯಲ್ಲಿ ಬಾಳೆಹಣ್ಣು ತಿನ್ನುತ್ತಾ ಬರುವುದು ಏಕೋ ನನಗೆ ಸರಿತೋರ

ಲಿಲ್ಲ. ಆದರೆ ಅವರ ಸ್ವಭಾವದಲ್ಲಿ ಅಂತಹ ಸಹಜತೆ ಇದ್ದಿತಲ್ಲ. ಯಾವುದೇ ತೆರನ ಕೃತಕ ರೀತಿಗಳಿಗೆ ಅವರ ಬಳಿ ಜಾಗವಿರಲಿಲ್ಲವೆಂದರೆ ಅತಿಶಯೋಕ್ತಿಯಲ್ಲ.

ಪ್ರೋತ್ಸಾಹ ನೀಡುವ ವಿಚಾರದಲ್ಲಂತೂ ಅದ್ವಿತೀಯರು. ಎಲ್ಲಿಯಾದರೂ ರಚನಾಶಕ್ತಿ ಹುದುಗಿದೆ ಎಂದು ತಿಳಿದರೆ ಸಾಕು. ಇರುವ ಶಕ್ತಿಯ ಜತೆಗೆ ಇಲ್ಲದ್ದನ್ನು ಸೇರಿಸಿ ಹುಮ್ಮಸ್ಸನ್ನು ಕೊಡುವುದು. "ಬರೆಯಿರಿ, ಅಚ್ಚುಮಾಡಿಸೋಣ, ಸಂಘ ಸ್ಥಾಪಿಸೋಣ, ಮಾರಾಟಕ್ಕೂ ಏರ್ಪಾಡು ಮಾಡುವ, ಮೊದಲು ರಚನೆ ಮಾಡಿರಿ. ಅದೇಕೆ ಅಲ್ಲಿಗೇ ನಿಲ್ಲಿಸಿದಿರಿ, ಇರುವ ಶಕ್ತಿಯನ್ನೇಕೆ ಗೆದ್ದಲು ಹಿಡಿಯಲು ಬಿಡುವಿರಿ" ಎಂದು ಮುಂತಾಗಿ ಎಬ್ಬಿಸದೆ ಬಿಡುತ್ತಿರಲಿಲ್ಲ. ಅವರೇ ಹೇಳುತ್ತಿದ್ದರು:

"ಏನು ಮಾಡುವುದು, ಸುಮ್ಮನೆ ಕುಳಿತಿರುವವರನ್ನು ಕೂಗಿ ಹೋ ಎಂದು ನೂಕಿ ವಾದ್ಯ ಗೀದ್ಯ ಬಡಿದು ಮುಂದಕ್ಕೆ ಎಳೆಯಬೇಕಾಗಿದೆ."

ಅವರ ಪ್ರೋತ್ಸಾಹದಿಂದಲೇ ಕೆಲವು ಸಾಹಿತಿಗಳ ಕೃತಿಗಳು ಬೆಳಕುಕಂಡಿವೆಯೆನ್ನುವುದು ಹಗಲಿನಷ್ಟೇ ನಿಚ್ಚಳ.

ವಿದ್ಯಾರ್ಥಿಗಳಿಗೂ ಅಷ್ಟೇ, ಅವರ ಉತ್ತೇಜನ ಎಂದೆಂದೂ ಆವೇಶ ನೀಡುವಂತಹುದು. "ನಾವು ಪ್ರಾರಂಭದಲ್ಲಿ ಪ್ರೋತ್ಸಾಹ ಕೊಡದಿದ್ದರೆ ಕುಡಿಗಳು ನಂದಿಹೋಗುತ್ತವೆ. ಅದು ಹೇಗಾದರಿರಲಿ ಬೆನ್ನು ತಟ್ಟಿ ಪ್ರೋತ್ಸಾಹ ಕೊಟ್ಟರೆ ಮುಂದಾದರೂ ಉತ್ತಮ ಕೃತಿಯೊಂದು ಬಂದೇ ಬರುತ್ತದೆ. ಸುಮ್ಮನೆ ಕುಳಿತಿದ್ದರೆ ಬರುವುದೇನು. ಕೊಂಚ ಜಾಹೀರಾತು ಬೇಕಪ್ಪ ಈ ಕಾಲದಲ್ಲಿ. ಬರಿದೇ ಜೊಳ್ಳನ್ನು ಕಾಳೆಂದು ಹೇಳಬೇಕೆಂದಲ್ಲ. ಕಾಳಿದೆ ಎಂದಾದರೂ ತಿಳಿಸಬಾರದೆ. ಹಾಗೆ ತಿಳಿಸಿದರೆ ತಾನೆ ನಾಲ್ಕು ಜನ ನೋಡುವುದು; ಗುಟ್ಟಾಗಿದ್ದರೆ ಯಾರು ತಿಳಿಯಬಹುದು. ಅದಕ್ಕಾಗಿ ಒಂದು ಕಾರ್ಯಕ್ರಮವನ್ನೇರ್ಪಡಿಸಿ ಕೃತಿಯ ಪರಿಚಯ ಮಾಡಿಸಿ ಆ ವಿಚಾರ ಪತ್ರಿಕೆಯಲ್ಲಿ ಬಂದರೆ ಹಲವಾರು ಜನ ಅದೇನೆಂದು ನೋಡಿ ತಿಳಿಯಲು ಯತ್ನಿಸುತ್ತಾರೆ. ಇದು ಬೂಟಾಟಿಕೆಯೆನ್ನಬಹುದೆ. ಹೆಣ್ಣು ಹೆತ್ತವರು ಅವಳನ್ನು ಬಚ್ಚಿಟ್ಟರೆ ಲಗ್ನವಾಗುವುದು ಹೇಗೆ ಎಂದು ಬೆನ್ನು ತಟ್ಟುತ್ತಿದ್ದರು. ಅದೇ ರೀತಿ ಅವರು ನಡೆಸುತ್ತಿರುವುದೂ ಎಲ್ಲರಿಗೂ ತಿಳಿದ ವಿಷಯ.

ಉತ್ತಮ ಭಾಷಣಕಾರರೆಂದು ಹೆಸರು ಪಡೆದ ಅವರಿಗೆ ಬಿಡುವಿಲ್ಲದಷ್ಟು ಕಾರ್ಯಕ್ರಮಗಳಿರುತ್ತಿದ್ದವು. ಕೆಲವು ತಿಂಗಳುಗಳಲ್ಲಂತೂ ಪ್ರತಿದಿನ ಮೂರು ನಾಲ್ಕು ಕಡೆ ಭಾಷಣ ಮಾಡಬೇಕಾಗಿ ಬರುತ್ತಿತ್ತು. ಏಕೆ ಇಷ್ಟೊಂದು ಕಡೆ ಒಪ್ಪಿಕೊಳ್ಳುತ್ತೀರಿ ಎಂದರೆ "ನೋಡಿ ನನ್ನದು ಸರಸ್ವತಿಯ ಕಾರ್ಯ. ಹೋದೆಡೆಯಲ್ಲೆಲ್ಲಾ ಸಾಹಿತ್ಯ ಪ್ರಚಾರ ಮಾಡಿ ಬರುತ್ತೇನೆ. ಬೇರೆಯವರಾರಾದರೂ ಹೋಗಿ ಕಾರ್ಯಕ್ರಮವನ್ನೇ ಕೆಡಿಸಿಬಿಡುವರೆಂಬ ಭಯವೂ ಉಂಟು" ಎನ್ನುತ್ತಿದ್ದರು. ಯಾರ ಕಾರ್ಯಕ್ರಮ ಕೆಟ್ಟರೆ ನನಗೇನಂತೆ ಎನ್ನುವ ಸಂಕುಚಿತ ಭಾವನೆಯಿರಲಿಲ್ಲ. ಅದರಲ್ಲಿ ಪ್ರಜಾಪ್ರಭುತ್ವಯುಗದಲ್ಲಿ ಪ್ರತಿಯೊಬ್ಬನೂ ಪ್ರಮುಖ ಪಾತ್ರ ವಹಿಸಬೇಕೆಂದು ಹೇಳುತ್ತಿದ್ದರು. ಅಂತೆಯೇ ಹೋದ ಕಡೆಯಲ್ಲೆಲ್ಲ ಅಲ್ಲಲ್ಲಿಯ ಸ್ಥಳೀಯ ಲಲಿತ ಕಲೆಗಳ ಬಗ್ಗೆ, ಯಕ್ಷಗಾನಗಳ, ಬಯಲಾಟಗಳ, ಸ್ಥಳ ಪುರಾಣಗಳ, ದೇವಸ್ಥಾನಗಳ, ಪುರಾತನ ವೈಶಿಷ್ಟ್ಯ, ಭಾರತೀಯ ಆಚಾರ ವಿಚಾರಗಳ ಬಗ್ಗೆ ಜನತೆಯಲ್ಲಿ ಎಚ್ಚರ ಮೂಡಿಸುವುದೇ ಅವರ ಉದ್ದೇಶವಾಗಿತ್ತು. ಉತ್ತಮ ಅಂಶಗಳನ್ನು ಬಯಲಿಗೆಳೆದು ಮುಂದಿನ ದಾರಿ ತೋರಿಸಿಯೇ ಬರುತ್ತಿದ್ದರು. ಇದೇ ಅವರ ಜನಪ್ರಿಯತೆಗೆ ಕಾರಣವಾಗಿದ್ದಿತು. ಆದರೆ ಜನಪ್ರಿಯರಾಗಲು ಮಾಡಿದ ಕೆಲಸ ಅದಲ್ಲ.

ವಿಶ್ವವಿದ್ಯಾನಿಲಯಕ್ಕೂ ಜನತೆಗೂ ನೇರವಾದ ಸಂಪರ್ಕವಿರಬೇಕೆನ್ನುವುದು ಅವರ ಮಹೋದ್ದೇಶವಾಗಿತ್ತು. ಮಡಿವಂತಿಕೆಯ ಭಾವನೆ ಎಂದೋ ದೂರವಾಗಿ ಹೋಗಿತ್ತು. ವಿಶ್ವವಿದ್ಯಾನಿಲಯದ ಕಾರ್ಯಕಲಾಪಗಳಲ್ಲಿ ಜನರು ಭಾಗವಹಿಸಿ ಆಸಕ್ತಿ ತೋರಬೇಕೆಂದು ಆಶಿಸುತ್ತಿದ್ದರು. ಆದ್ದರಿಂದಲೇ ಅವರ ಕಛೇರಿಯ ಕೊಠಡಿಯಲ್ಲಿ ಯಾವಾಗಲೂ ಸಾರ್ವಜನಿಕರು ತುಂಬಿರುವುದು ಸಾಮಾನ್ಯ ಸಂಗತಿ. ಬಂದವರಿಗೆಲ್ಲಾ ಸಲಹೆ, ಪ್ರೋತ್ಸಾಹ, ನಕ್ಷೆ ಸಿದ್ಧವಿರುತ್ತಿತ್ತು. ಯಾರಾದರೂ ಹೊಸ ಸಲಹೆ ಕೊಟ್ಟರೆ ಕೂಡಲೆ ಸ್ವೀಕರಿಸುತ್ತಿದ್ದರು. "ಹೋ ಹೋ ಮಾಡುವ" ಎಂದು ಹೇಳುವುದು ರೂಢಿಯೇ ಆಗಿಹೋಗಿತ್ತು. ಎಷ್ಟೋ ಸಾರಿ ಇಂತಹ ವಿಚಾರಗಳಿಂದಾಗಿ ಕೈಕಚ್ಚಿದರೂ ಅಂಜುತ್ತಿರಲಿಲ್ಲ. "ಯಾರಿಗೆ ತಿಳಿಯದಿದ್ದರೂ

ನನಗಂತೂ ಸಾಲದ ಅನುಭವ ಭರ್ಜರಿಯಾಗಿದೆ" ಎನ್ನುವ ಅವರ ನಗೆಯ ಹಿಂದೆ ಇರಬಹುದಾದ ನೋವಿನ ಮಡು ಕಾಣಿಸುತ್ತಲೇ ಇರಲಿಲ್ಲ. ಹಿಂದೊಮ್ಮೆ ಪ್ರಕಾಶನ ಸಂಸ್ಥೆಯನ್ನು ಸ್ಥಾಪಿಸಿ ಅಪಾರ ನಷ್ಟ ಮೈಮೇಲೆ ಬಂದು ನಿಲ್ಲಿಸಿದ್ದರೂ ಅದರ ಝಳ ಸಂಪೂರ್ಣ ಇಳಿದಿರಲಿಲ್ಲ. ಅದರೂ ಅಂಜುವ ವ್ಯಕ್ತಿ ಅವರಲ್ಲ. ಯಾವ ವಿಷಯದಲ್ಲಾದರೂ ಸಮಸ್ಯೆಯನ್ನು ಒಯ್ಯಾರಿ, ತಾಪತ್ರಯಗಳನ್ನು ವರ್ಣಿಸಿ, ಏನಾಗಬಹುದೆಂದು ಚಿಂತಾಗ್ರಸ್ತರಾಗಿ, ಕೂಡಲೆ ಹೇಳುತ್ತಿದ್ದರು. "ದೇವರಿದ್ದಾನೆ". ಹಾಗೆಂದು ಕೈ ಕಟ್ಟಿ ಕೂಡುತ್ತಿರಲಿಲ್ಲ. ಇದೇ ಅವರ ಯಶಸ್ಸಿನ ಗುರುತು. ಅದ್ದರಿಂದಲೇ ಅವರನ್ನು ನೋಡಿದಾಗಲೆಲ್ಲ ಎನಿಸುತ್ತದೆ. ಏನು ಇವರಿಗೆ ಯಾವಚಿಂತೆ, ತಾಪತ್ರಯಗಳೂ ಇಲ್ಲವೋ ಎಂದು. ನಗೆಯ ಹಿಂದೆ ಹೊಗೆ ಇರುವುದು ತಿಳಿಯದು. ಇದ್ದರೂ ಆ ಹೊಗೆಯ ಕಪ್ಪು ಕಣ್ಣಿಗೆ ತಂಪನ್ನೀಯುವ ಅಂಜನವಾಗಿ ಬಿಡುವುದೋ ಏನೋ. ಅಂತಹ ಪರಿವರ್ತನೆಗೆ ಬೇಕಾದ ಶಕ್ತಿ ಯುಕ್ತಿಗಳು ಅವರಲ್ಲಿದ್ದುದೇ ಒಂದು ಚೆಂದ. ಯಾರಾದರೂ ಸುಮ್ಮನೆ "ನಾವೂ ಸಮಸ್ಯೆಗಳ ಮಧ್ಯೆ ನಗುತ್ತ ನಿಲ್ಲಬಲ್ಲೆವು" ಎಂದು ಅನುಕರಿಸಲು ಯತ್ನಿಸಿದರೆ ಸಿಗುವ ಪ್ರತಿಫಲ ಮತ್ತಷ್ಟು ಸಮಸ್ಯೆಗಳೇ. ಆದ್ದರಿಂದಲೇ ಅದನ್ನು ವೈಯಕ್ತಿಕ ವೈಶಿಷ್ಟ್ಯವೆನ್ನಬೇಕಾದದ್ದು. ಸಮಯಸ್ಫೂರ್ತಿ ಪ್ರೊ. ಭಟ್ಟರಿಗೆ ವರವಾಗಿ ಬಂದಂತೆ ಕಾಣುತ್ತಿತ್ತು. ಏನಾದರೊಂದು ಉದಾಹರಣೆ, ಉಪಮೆ. ರೂಪಕಗಳು ತಟ್ಟನೆ ಅವರ ಮಾತಿನಲ್ಲಿ ಕಾಣಿಸಿಕೊಂಡು ಚಕಿತಗೊಳಿಸುತ್ತಿದ್ದವು. ಅಂತಹ ಭಾವಗಳನ್ನು ಕೇಳಿದವರು ಉಪಯೋಗಿಸಿಕೊಳ್ಳಬಹುದಾಗಿತ್ತು. ಹಾಗೆಂದು ಅವರು ಮೌನ ತಾಳುತ್ತಿರಲಿಲ್ಲ. ಕೆಲವರು ಮಾತನಾಡುವಾಗ ಎಚ್ಚರಿಕೆಯಿಂದ ಅಂತಹ ಸಾಹಿತ್ಯಕ ಅಂಶಗಳನ್ನು ಮುಚ್ಚಿಡುವರೆಂದು ಕೇಳಿದ್ದೆ. ಅದು ಭಟ್ಟರಲ್ಲಿ ಇರಲಿಲ್ಲವೆನ್ನುವುದು ಸಾಮಾನ್ಯ ಸಂಗತಿಯಾಗಿತ್ತು.

ರೋಗಿಯ ನೋವನ್ನು ಅರಿಯಬೇಕಾದರೆ ಒಂದಲ್ಲ ಒಂದು ಸಾರಿ ರೋಗದಿಂದ ನರಳಿದ್ದರೇ ಸಾಧ್ಯ. ಬಡತನದಲ್ಲಿ ಬಹುಕಾಲ ಕಳೆದ ಪ್ರೊ. ಭಟ್ಟರು ಬಡತನದ ಸಮಸ್ಯೆಗಳನ್ನು ಅರಿತು ವಿದ್ಯಾರ್ಥಿಗಳಿಗೆ ಸಹಾಯ ಮಾಡಲು ಸದಾ ಯತ್ನಿಸುತ್ತಿದ್ದರು. ಸ್ಥಳೀಯ ವ್ಯಕ್ತಿಗಳಿಗೂ ಅವರು ಪುಸ್ತಕಗಳನ್ನು ಕೊಟ್ಟು ಅನೇಕ ಉತ್ತಮ ಗ್ರಂಥಗಳನ್ನು ಕಳೆದುಕೊಂಡುದೂ ಅವರ ಉದಾರ ಗುಣಕ್ಕೆ ಸಾಕ್ಷಿ. ಔದಾರ್ಯವನ್ನು ದುರುಪಯೋಗ ಪಡಿಸಿಕೊಳ್ಳುವ ಜನರಿರುವಾಗ ಕಿರುಕುಳ ತಪ್ಪುವುದು ಹೇಗೆ? ಲೋಕದಲ್ಲಿ ಜೀವ ತನ್ನ ಆಯುಸ್ಸನ್ನು ಕಳೆದಂತೆಲ್ಲ, ಅನುಭವ ನಾನಾರೂಪದಲ್ಲಿ ಬಂದಂತೆಲ್ಲ ಒಂದು ತೆರನ ಕರಟುತನ. ಚಿಪ್ಪುಮೂಡಿದಂತೆ ಆವರಿಸಿ, ಯಾರಿಗೂ ಏನೂ ಮಾಡಬಾರದು ಎಂಬ ಆದರ್ಶವೇ ತುಂಬಿ ಬಂದು ವ್ಯಕ್ತಿ ಪ್ರಪಂಚವನ್ನು ದೂಷಿಸುತ್ತ ದೂರವಾಗಿ ನಿಂತು ತಾನಾಯಿತು ಮೂರು ಲೋಕವಾಯಿತು ಎನ್ನುವುದು ವ್ಯಾಪಕವಾದ ವಿಚಾರ. ಆದರೆ ಪ್ರೊ. ಭಟ್ಟರು ಇದಕ್ಕೆ ಅಪವಾದವಾಗಿ (exception) ನಿಂತಿದ್ದಾರೆ. ಅವರು ದಿನೇ ದಿನೇ ಮಧುರ ವೃದ್ಧಾಪ್ಯದತ್ತ ನಡೆಯುತ್ತಿದ್ದಾರೆ. ಅವರೇ ಹೇಳುವ ಸೊಗಸಾದ ಮಾತುಂಟು.

"ನಾನೀಗ ವೃದ್ಧಾಪ್ಯದ ತಾರುಣ್ಯದಲ್ಲಿದ್ದೇನೆ". ಅರ್ಥವನ್ನು ಪರಿಭಾವಿಸಿದಂತೆಲ್ಲ ವಿಶಾಲವಾಗುತ್ತ ಹೋಗುವುದಲ್ಲದೆ ಕೇಳಿದೊಡನೆಯೇ ನಗೆಯನ್ನು ಉಕ್ಕಿಸುತ್ತದೆ. ಅವರಂತೂ ವಿಶ್ರಾಂತ ನೌಕರರ ದಿನಚರಿಯನ್ನು ಕುರಿತು ಹಾಸ್ಯ ಮಾಡುವವರೇ. ಅದನ್ನು ಅವರೇ ಹೇಳಬೇಕು. ಆಗಲೇ ಸ್ವಾರಸ್ಯ.

ಒಮ್ಮೆ ಹೇಳಿದರು "ಕೇಳಿದ್ದೀರೊ, ನೋಡಿದ್ದೀರೊ".

"ಏನನ್ನು ಸಾರ್"

"ವಿಶ್ರಾಂತಿ ವೇತನ ಪಡೆದವರನ್ನು"

"ಅಲ್ಲಲ್ಲಿ ಪಾರ್ಕುಗಳ ಬೆಂಚುಗಳ ಮೇಲೆ ಕುಳಿತಿರುವುದನ್ನು ನೋಡಿದ್ದೇನೆ ಸಾರ್" "ಬೆಳಿಗ್ಗೆ ಎದ್ದು ಕಾಫಿ ಕುಡಿದು ಕೆಮ್ಮುತ್ತ ತಲೆಗೆ ಮಫ್ಲರ್ ಸುತ್ತಿ ಕುಳಿತರೆಂದರೆ ಮುಗಿಯಿತು. ಓಬೀರಾಯನ ಕಾಲದ ಮಾತುಗಳೇ ಮಾತುಗಳು. ಮುಗಿಯಿತು. ಜೀವನದ ಕೊನೆಯಲ್ಲಿ ಬಂದು ನಿಂತೆವೋ ಎನ್ನುವಂತೆ ಅವರ ವರ್ತನೆ. ಸದ್ಯ ನಾನು ನಿವೃತ್ತನಾಗಿದ್ದರೆ ಹಾಗೆ ಆಗುತ್ತಿದ್ದೆನೋ ಏನೋ" ಎಂದು ಸಾಭಿನಯ ಪೂರ್ವಕ ಹೇಳುವಾಗ ಕೇಳುವವರು ಪಕ್ಕ ಹಿಡಿದು ನಗಬೇಕಾಗುತ್ತಿತ್ತು. ಅವರ ಚಟುವಟಿಕೆಗಳನ್ನು ಕಂಡವರಿಗೆ ಅವರ ಮಾತಿನ ಯಥಾರ್ಥ ಸ್ಪಷ್ಟವಾಗುತ್ತದೆ. ತರಗತಿಯ ಪಾಠ, ಪ್ರಯಾಣ. ಭಾಷಣ, ರಾತ್ರೋರಾತ್ರಿ ವಾಪಸು. ನಿದ್ರೆಯ ಮುನಿಸು ಯಾವುದಿದ್ದರೂ ಅಂಜದೆ ನಿರ್ವಹಿಸುವ ಅವರ ಆರೋಗ್ಯ ದೈವ

ವಿತ್ತವೇನಿಸುತ್ತದೆ. ಅಂತಹ ಚಟುವಟಿಕೆ, ಕಾರ್ಯಕ್ರಮಗಳು ತುಂಬಿದ ವೇಳೆಯಲ್ಲಿಯೂ ಸಾಹಿತ್ಯರಚನೆ ಸ್ಥಗಿತಗೊಂಡಿರುವುದಿಲ್ಲ. ಹೋದಗೆ ಹೋದಂತೆಲ್ಲ ಹೊಸ ಅನುಭವ, ಉದಾಹರಣೆಗಳನ್ನು ತಂದು ಸೇರಿಸುತ್ತಿದ್ದರು.

ಪ್ರೊ. ಭಟ್ಟರ ಮತ್ತೊಂದು ಅಪೂರ್ವ ಗುಣವೆಂದರೆ ಎಲ್ಲೇ ಇರಲಿ, ಸ್ಥಳೀಯ ವ್ಯಕ್ತಿಗಳ ಪ್ರೇಮ ಸಂಪಾದನೆ. ಆ ವಿಷಯದಲ್ಲಿ ಅವರ ನಿಷ್ಕಪಟ ವರ್ತನೆ ಒಂದು ಪಾಲು ಕಾರಣವಾದರೆ ಮತ್ತೊಂದು ಪ್ರಜ್ಞಾಪೂರ್ವಕ ಯತ್ನವೂ ಕಾರಣವಾಗಿರುತ್ತದೆ. ಎದುರು ಕುಳಿತವರಲ್ಲಿ ಅವರು ಕಾಣುವುದು ಕೇವಲ ಗುಣವನ್ನೇ ವಿನಾ ದೋಷವನ್ನಲ್ಲ. ಅವರ ಶಕ್ತಿ ಸಾಧ್ಯತೆಗಳನ್ನು ಅವರಿಗೆ ಹೇಳಿ "ನನ್ನದು ಕನ್ನಡಿಯ ಕಾರ್ಯ, ಭೂತಗನ್ನಡಿಯ ಕೆಲಸ" ಎಂದು ಆಗಾಗ್ಗೆ ಹೇಳುವ ರೂಢಿ. ಅವರು ಹೇಗೆ ಅಂತಹ ಸ್ನೇಹ ಸಂಪಾದನೆ ಮಾಡುತ್ತಾರೋ ಎಂದು ಆಲೋಚಿಸುವಾಗ ನನಗೆ ಸ್ವಾಮಿ ರಾಮತೀರ್ಥರಿಗೆ ಒದಗಿದ ಘಟನೆಯ ನೆನಪು ಆಗುತ್ತದೆ.

ಒಮ್ಮೆ ವಿದೇಶ ಪ್ರಯಾಣ ಮಾಡುತ್ತಿದ್ದ ಸ್ವಾಮಿ ರಾಮತೀರ್ಥರನ್ನು ಸಹಪ್ರಯಾಣಿಕ ಕೇಳಿದ:

"ತಾವು ಭಾರತೀಯರಂತೆ ಕಾಣುತ್ತೀರಿ."

"ಹೌದು ಜಪಾನಿಗೆ ಅಂದರೆ ನಿಮ್ಮ ದೇಶಕ್ಕೆ ಪ್ರಯಾಣ ಮಾಡುತ್ತಿದ್ದೇನೆ"

"ತಾವು ಮೊದಲೇ ಕಾಗದ ಬರೆದು ತಿಳಿಸಿದ್ದೀರಾ."

"ಹಾಗೇನೂ ಮಾಡಿಲ್ಲ"

"ಯಾರಾದರೂ ಸ್ನೇಹಿತರು ಇದ್ದಾರೆಯೇ?"

"ಇದ್ದಾರೆ"

"ಯಾರು, ಕೇಳಬಹುದೆ," ಕುತೂಹಲದಿಂದ ಪ್ರಶ್ನಿಸಿದ ಸಹಪ್ರಯಾಣಿಕ.

"ನಿಮ್ಮ ಊರಿನಲ್ಲೇ ಇದ್ದಾರೆ" ಎಂದು ತಡೆದರು.

"ನಮ್ಮ ಊರಿನಲ್ಲಿ, ಹಾಗಾದರೆ ಆತನ ಹೆಸರು ವಿಳಾಸ ತಿಳಿಸಬಲ್ಲಿರಾ?" ಆತುರದಿಂದ ಕೇಳಿದ.

"ಅದೇಕೆ ಆತುರ, ಅವರು ಇಲ್ಲೇ ಇದ್ದಾರೆ. ನನ್ನ ಹತ್ತಿರವೇ" ನಸುನಕ್ಕರು.

"ಇಲ್ಲೇ? ಅದಾರು ನಾನು ಕಾಣೆನಲ್ಲಾ" ಆತ ತಲೆಕೆರೆದು ಸುತ್ತ ನೋಡಿದ ಹುಡುಕುನೋಟದಿಂದ.

"ಅದೇಕೆ ಹುಡುಕುವೆ ಮಿತ್ರಾ, ನಾನು ಹೇಳಿದ ಗೆಳೆಯ ನೀನೇ, ಏಕೆ ಒಪ್ಪಿಗೆಯಿಲ್ಲವೇ?" ಎಂದು ನಗೆ ಬೀರಿದಾಗ ಮುಗ್ಧನಾದ ಸಹಪ್ರಯಾಣಿಕ ಅತ್ಯಂತ ಆಸ್ಥೆಯಿಂದ,ಆನಂದದಿಂದ "ಹು, ಹು, ಏಕಾಗದು ನೀವು ಖಂಡಿತವಾಗಿ, ಇರುವಷ್ಟು ದಿನವೂ ನನ್ನಲ್ಲೇ ಉಳಿಯಬೇಕು" ಎಂದು ಆಗ್ರಹಪಡಿಸಿ ಕರೆದೊಯ್ದನಂತೆ.

ಪ್ರೊ. ಭಟ್ಟರು ಇನ್ನು ಚೆಲುವಾಗಿ ಸ್ನೇಹಸಂಪಾದನೆ ಮಾಡುವವರೆಂದು ಯಾರಾದರೂ ನೇರ ಅನುಭವ ದಿಂದಲೇ ತಿಳಿಯಬಹುದು. ಅವರ ಬಗ್ಗೆ ಬರೆಯುವಾಗ ನಮ್ಮ ಅರಿವೆಷ್ಟು; ಎರಡು ವರ್ಷಗಳ ಪರಿಚಯ ಅವರ ವ್ಯಕ್ತಿತ್ವದ ಎಲ್ಲಾ ಸ್ತರಗಳನ್ನೂ ಕಾಣಿಸಬಲ್ಲುದೆಂದು ಎನಿಸುವುದಿಲ್ಲ. ಏಕೆಂದರೆ ಚೇತನ ಬೆಳೆಯು ತ್ತಲೇ ಇರುತ್ತದೆ. ಅನಂತಮುಖಿಯಾದ ಅದನ್ನು ಸಾಂತಲೇಖನದಲ್ಲಿ ಮಾಡಿಕೊಡುವುದು ಸಾಹಸವೇ ಸರಿ,

ನಮಗೆ ಹೆಮ್ಮೆಯ ವಿಷಯವೆಂದರೆ, ಯಾವ ಸಂಪ್ರದಾಯದಲ್ಲಿ ಅವರು ಬೆಳೆದು ಬಂದರೋ ಅದೇ ಸಂಪ್ರದಾಯದಲ್ಲಿ ನಾವು ಸ್ವೀಕರಿಸಿದ್ದೇವೆನ್ನುವುದು, ಗುರುಶಿಷ್ಯಸಂಬಂಧ ಮಹತ್ತ್ವಪೂರ್ಣವಾದದ್ದು, 'ಶ್ರೀಯವರ, ವೆಂಕಣ್ಣಯ್ಯನವರ, ಕುವೆಂಪು ಅವರ ಮುಖಾಂತರ ಬಂದ ಕನ್ನಡದ ಶಕ್ತಿಭಕ್ತಿ ಪ್ರೊ. ಪರಮೇಶ್ವರ ಭಟ್ಟರ ಮುಖಾಂತರ ಅವರ ಶಿಷ್ಯರಿಗೂ ಬಂದಿದೆಯೆಂದರೆ ಹೇಗೆ ಆ ಅದ್ಭುತ ಪರಂಪರೆ ಕಡಿಯದೆ ಉಳಿದಿದೆಯೆಂಬ ವಿಷಯ ನೆಮ್ಮದಿ, ಆನಂದ ತರುತ್ತದೆ. ಅದಕ್ಕೆ ಅರ್ಹರಾಗುವುದು ಶಿಷ್ಯ ರಾದವರ ಕರ್ತವ್ಯ.

ಹಿಂದೆ ಪರಮೇಶ್ವರ ಗಂಗೆಯನ್ನು ನಾಡಿನಲ್ಲಿ ಹರಿಯುವಂತೆ ಮಾಡಿದಂತೆ ಪರಮೇಶ್ವರ ಭಟ್ಟರು ಜ್ಞಾನಗಂಗೆ ಹರಿಯುವಂತೆ ಮಾಡಲು ಮಂಗಳ ಗಂಗೆಯಲ್ಲಿ ವಿಶಾಲ ನೀಲಸಾಗರ, ಉನ್ನತ ಸಹ್ಯಾದ್ರಿ ಇವೆರಡರ ಮಧ್ಯೆ ನಿಂತು ವೈಶಾಲ್ಯ ಔನ್ನತ್ಯಗಳೆರಡನ್ನೂ ಹೊಂದಿರುವ ಕನ್ನಡ ಚೇತನಕ್ಕೆ, ಪುರೋಹಿತರಾಗಿ ಕುಳಿತಿರುವ ದೃಶ್ಯಕ್ಕೆ ಕೈಮುಗಿದು ಮತ್ತೊಮ್ಮೆ ಬರಲು ಸಮೃದ್ಧಿಯನ್ನು ಕಾಣಲು ಆಶಿಸಿ ಹಾರೈಸಿ ತೆರಳು ತ್ತಿದ್ದೇನೆ.

# ೧೦. ಸರಸ ಮಾತುಗಾರ ಪ್ರೊ. ಭಟ್ಟರು

ಎನ್. ಕೆ. ಚೆನ್ನಕೇಶವ

ಮಂಗಳೂರಿನಲ್ಲಿ ಸ್ನಾತಕೋತ್ತರ ಕೇಂದ್ರದ ಆರಂಭ: ಕೇಂದ್ರದ ಪ್ರಧಾನ ಅಧಿಕಾರಿಯಾಗಿ ಎಸ್. ವಿ. ಪರಮೇಶ್ವರ ಭಟ್ಟರ ಆಗಮನ! ದಕ್ಷಿಣ ಕನ್ನಡದ ವಿದ್ಯಾವಂತ ಜನತೆಗೆ ಈ ಎರಡೂ ವಾರ್ತೆಗಳು ತಂದ ಕುತೂಹಲ. ಆನಂದ ಅಪಾರ. ಮೊದಮೊದಲು ಸ್ನಾತಕೋತ್ತರ ಕೇಂದ್ರ ಎಂಬ ಶಬ್ದಪ್ರಯೋಗದ ಉಚ್ಚಾರ. ಅರ್ಥಗಳೇ ಅಪರಿಚಿತ. ಆದರೆ ನಮ್ಮ ಉತ್ಸಾಹಕ್ಕೆ ಹೊಸ ವಿಷಯಗಳನ್ನು ಪರಿಚಯಮಾಡಿಸಿ ಕೊಡುವ ವಿಶೇಷ ಶಕ್ತಿ ಇರುವುದೋ ಏನೋ! ಉತ್ಸಾಹಕ್ಕೆ ಆ ಶಕ್ತಿ ಇರಲಿ ಇಲ್ಲದಿರಲಿ. ಪರಮೇಶ್ವರ ಭಟ್ಟರಿಗಂತೂ ಪರಿಮಳ ಹರಡುವ ಶಕ್ತಿ ಉಂಟು, ಮಾತ್ರವಲ್ಲ ಬಹಳ ಹೆಚ್ಚಿನ ಮಟ್ಟದಲ್ಲಿ ಉಂಟು. ಅವರು ಮಂಗಳೂರಿಗೆ ಕನ್ನಡದ ಹರಿಕಾರನಾಗಿ ಬಂದ ಮೇಲೆ ಅಲ್ಲಲ್ಲಿ ಗೈದ ತಮ್ಮ ಆಕರ್ಷಕ ಭಾಷಣದಿಂದ ಜನಪ್ರಿಯರಾದರು. ಅವರ ಉಪನ್ಯಾಸದ ರೀತಿ. ಮನುಷ್ಯರ ಮನಸ್ಸಿನ ಒಳಹೊಕ್ಕು ವಿಹಾರಮಾಡುವ ಕ್ರಮಗಳೇ ಅವರು ಈ ಗೆಲವಿಗಾಗಿ ಉಪಯೋಗಿಸಿದ ಶಸ್ತ್ರಾಸ್ತ್ರಗಳು. ಎಸ್. ವಿ. ಪರಮೇಶ್ವರ ಭಟ್ಟರು ಮಂಗಳೂರಿಗೆ ಬಂದ ಕೆಲವೇ ತಿಂಗಳುಗಳ ಅನಂತರ ಅವರಿಗೆ ಒಂದು ಪತ್ರ ಬಂದಿತ್ತು. ಅದರಲ್ಲಿ ವಿಳಾಸ S. V. Parameshwara Bhat, Mangalore ಎಂದು ಮಾತ್ರ ಬರೆದಿತ್ತು. ಈ ಪತ್ರವನ್ನು ಅಂಚೆಯವನು ಅವರ ಮನೆಗೇ ತಂದು ತಲಪಿಸಿದನು.

ನಾನು ಧರ್ಮಕರ್ಮ ಸಂಯೋಗದಿಂದ ಕನ್ನಡ ಮೊದಲ ಎಂ. ಎ., ತರಗತಿಯ ವಿದ್ಯಾರ್ಥಿಯಾದೆ; ಭಟ್ಟರ ಶಿಷ್ಯನಾದೆ. ಅಂದಿನಿಂದ ಇಂದಿನ ವರೆಗೆ ಶ್ರೀ ಭಟ್ಟರ ನಿಕಟ ಪರಿಚಯ ಇಟ್ಟುಕೊಂಡಿದ್ದೇನೆ. ಪ್ರೊ. ಭಟ್ಟರನ್ನು ನಾನು ಬಹಳ ಹತ್ತಿರದಿಂದ ಕಂಡಿದ್ದೇನೆ. ಅವರ ಸರಸ ಸಂಭಾಷಣೆಯಲ್ಲಿ ಎರಡು ವರ್ಷಗಳ ಕಾಲ ಪಾಲುಗೊಂಡಿದ್ದೇನೆ. ಅವರು ಆಡಿದ ಮಾತುಗಳನ್ನು, ಮಾಡಿದ ಭಾಷಣಗಳನ್ನು ಹಲವು ಸಲ ಕೇಳಿದ್ದೇನೆ. ತರಗತಿಯಲ್ಲಿ ಅವರು ಸಂದರ್ಭೋಚಿತವಾಗಿ ಹೇಳುವ ಹಾಸ್ಯ ಚಟಾಕಿಗಳನ್ನೆಲ್ಲ ಬರೆದಿಡಬೇಕೆಂದು ಆಸೆಪಟ್ಟೆ. ಆದರೆ ಆ ಹಾಸ್ಯದ ಮಾತುಗಳು ಅಕ್ಷರದಲ್ಲಿ ಇಳಿದಾಗ, ಅವುಗಳ ಬಹುಪಾಲು ರಸ ಸೋರಿ ಹೋಗುತ್ತದೆ. ಇದರಿಂದಾಗಿ ಈ ಪ್ರಯತ್ನದಲ್ಲಿ ಸೋತು ಅಲ್ಲಿಗೇ ಕೈಬಿಟ್ಟೆ. ಇದಕ್ಕೇನು ಕಾರಣ? ಪ್ರೊ. ಭಟ್ಟರ ಮಾತು ಕೇವಲ ಬಾಯಿಯಿಂದ ಬರುವ ಒಣಕಲು ಶಬ್ದಗಳ ಸಮುದಾಯವಲ್ಲ. ಕಣ್ಣು, ಮುಖಭಾವ, ಕೈಕಾಲು ಹೆಚ್ಚೇಕೆ ಇಡೀ ಶರೀರವೇ ಮಾತಿನ ಏರಿಳಿತಕ್ಕೆ. ಅರ್ಥ ವ್ಯತ್ಯಾಸಕ್ಕೆ ಅನುಗುಣವಾಗಿ ಸ್ಪಂದಿಸುತ್ತದೆ. ಇದನ್ನು ಕೇಳುವವನು ಮುಗ್ಧಚಿತ್ತನಾಗಿ ಆಲಿಸುತ್ತಾನೆ: ಆನಂದ ಪಡುತ್ತಾನೆ. ಎಷ್ಟೋ ವೇಳೆ ಅವರ ಪಾಠದ ನೋಟ್ಸ್ ಬರೆದುಕೊಳ್ಳುವುದೇ ಮರೆತು ಗಂಟೆ ಹೊಡೆದಾಗ ಮಾತ್ರ ಎಚ್ಚರಗೊಳ್ಳುತ್ತೇವೆ. ತರಗತಿಯ ಕೊನೆಕೊನೆಯಲ್ಲಿ ಅವರ ಪಾಠದ ಗತಿ ವೇಗದಲ್ಲಿಯೂ. ವಿಷಯ ಪರಿಪುಷ್ಟಿಯಲ್ಲಿಯೂ ತಾರಕಕ್ಕೇರುತ್ತದೆ. ಒಟ್ಟಿನಲ್ಲಿ "ಇನ್ನು ಸ್ವಲ್ಪಕಾಲ ಪಾಠ ಇರಬೇಕಾಗಿತ್ತು" ಎಂಬ ಆಸೆ ಎಲ್ಲ ವಿದ್ಯಾರ್ಥಿಗಳಲ್ಲಿಯೂ ತರಗತಿಯ ಅಂತ್ಯದಲ್ಲಿ ಉಳಿದಿರುತ್ತದೆ. ಪ್ರೊ. ಭಟ್ಟರ ಪಾಠ ವಿದ್ಯಾರ್ಥಿಗಳಿಗೆ ಎಂದೂ "ಬೋರ್" ಆದದ್ದಿಲ್ಲ; ಆಗಿರಲಾರದು.

ಪ್ರೊ. ಭಟ್ಟರ ಮಾತುಗಾರಿಕೆ ಎಂತಹದು ಎಂಬ ವಿಚಾರವನ್ನು ಹೇಳುವುದು ಕಷ್ಟ; ಅನುಭವಿಸುವುದು ಸುಲಭ ಹಾಗೂ ಸುಖಕರ. ಅವರ ಮಾತಿನ ರೀತಿಯನ್ನು ಬರೆದು ತೋರಿಸುವುದು ಮತ್ತೂ ಕಷ್ಟ. ಬರೆದಾಗ ಮಾತು ತನ್ನ ಬಹುಪಾಲು ಸ್ವಾರಸ್ಯವನ್ನು ಕಳೆದುಕೊಳ್ಳುತ್ತದೆ ಎಂಬುದು ನನ್ನೆಣಿಕೆ. ಅಂತೂ ಈ ಪ್ರಯತ್ನಕ್ಕೆ ಹೊರಟಿದ್ದೇನೆ. ಅವರೇ, ಹಿಂದೆ ಆಡಿದ ಮಾತುಗಳಲ್ಲಿ ಕೆಲವನ್ನು ಸನ್ನಿವೇಶದ ಹಿನ್ನೆಲೆಯಲ್ಲಿ ಹೇಳುತ್ತೇನೆ. ಇಲ್ಲಿ ನನ್ನ ಪಾತ್ರ ಗೌಣ. ಅವರ ಮಾತುಗಾರಿಕೆಯ ಪರಿಚಯ ರುಚಿಯಾದ ಐಸ್‌ಕ್ರೀಮು. ನಾನು ಆ ಐಸ್‌ಕ್ರೀಮನ್ನು ಸ್ವಲ್ಪ ತುಂಬಿಕೊಂಡಿರುವ ಕಾಗದದ ತೊಟ್ಟೆ. ಅದರಿಂದಾಗಿ ಇದಕ್ಕೆ ಬೆಲೆ. ಅವರಿಂದಾಗಿ ನನಗೆ ಗೌರವ.

ಪ್ರೊ. ಭಟ್ಟರು ನಮ್ಮ ತರಗತಿಗೆ "ಭಾರತೀಯ ಕಾವ್ಯಮೀಮಾಂಸೆ"ಯನ್ನು ಪಾಠ ಹೇಳಿದರು.

ಅಲ್ಲಿ ಕಾವ್ಯದ ಕುರಿತಾದ ಮಾತು ಬಂದಾಗ ವಾಮನ "ರೀತಿರಾತ್ಮಾ ಕಾವ್ಯಸ್ಯ" ಎನ್ನುತ್ತಾನೆ. ಕಾವ್ಯದ ಆತ್ಮ ರೀತಿ ಎಂದು ಇದರ ಅರ್ಥ. ನಮ್ಮ ಪ್ರೊಫೆಸರ್ ಕೂಡಲೇ ಹೇಳಿದರು. "ನಾನು ಇವನ ಗುಂಪಿಗೇ ಸೇರಿದವನು 'ರೀತಿರಾತ್ಮಾ ಭಾಷಣಸ್ಯ' ಎನ್ನುವುದು ನನ್ನ ಹೊಸ ಸಿದ್ಧಾಂತ. ಪರಮೇಶ್ವರ ಭಟ್ಟ ಏನು ಹೇಳ್ತಾನೆ ಎನ್ನುವುದು ಮುಖ್ಯ ಅಲ್ಲ ಹ್ಯಾಗೆ ಹೇಳ್ತಾನೆ ಎನ್ನುವುದು ಮುಖ್ಯ". ಅವರ ಈ ಮಾತಿಗೆ ನಿದರ್ಶನಗಳನ್ನು ನಾನು ಎಷ್ಟೋ ಬಾರಿ ಕಂಡಿದ್ದೇನೆ. ಒಮ್ಮೆ ಮಂಗಳಾದೇವಿ ದೇವಸ್ಥಾನದ ಸಮೀಪ ರಾಮಾಯಣ ಕಾವ್ಯವಾಚನ ಪೂರ್ತಿಯಾಗುವ ಸಮಾರಂಭಕ್ಕೆ, 'ಸಮಾರೋಪ ಭಾಷಣ'ಕ್ಕೆ ಪ್ರೊಫೆಸರರನ್ನು ಕರೆದಿದ್ದರು. ಆ ಸಂಬಂಧವಾಗಿ ಪುಸ್ತಕ ತೆರೆಯುವುದಕ್ಕೂ ಅವರಿಗೆ ಅವಕಾಶ ದೊರೆಯಲಿಲ್ಲ. ಅಲ್ಲಿ "ರಾಮಾಯಣದಲ್ಲಿ ಪ್ರಕೃತಿಗೆ ಪ್ರಧಾನಪಟ್ಟ. ಹನುಮಂತ ವಾಯುವಿನ ಮಗ. ಸೇತುವೆ ಕಟ್ಟುವುದು ಪ್ರಕೃತಿಯ ಮಹಾಶಕ್ತಿಯಾದ ಸಾಗರವನ್ನೇ ರಾಮ ಕಟ್ಟಬಲ್ಲನೆಂಬುದಕ್ಕೆ ಸಂಕೇತ, ಸೀತೆ ಭೂಮಿಯ ಮಗಳು............" ಎಂಬ ಕೆಲವು ವಿಚಾರಗಳನ್ನು ಹೇಳಿ, ರಾಮಾಯಣವೆಂದರೆ ಪ್ರಕೃತಿಯ ಮಹಾ ಶಕ್ತಿಗಳ ಹೋರಾಟದ ಕಥೆ ಎಂದು ಸಾಧಿಸಿ ಭಾಷಣ ಮುಕ್ತಾಯ ಮಾಡಿದರಂತೆ. ಎಂದೂ ಕೇಳದ ಹೊಸ ವಿಚಾರವೊಂದನ್ನು ಉತ್ತಮ ಶೈಲಿಯಲ್ಲಿ ಕೇಳಿದ ಜನರ ಹೃದಯ ತುಂಬಿ ಬಂತು; ಚಪ್ಪಾಳೆಯಿಂದ ಎಲ್ಲರ ಕಿವಿ ತುಂಬಿ ಬಂತು.

ಇನ್ನೊಮ್ಮೆ ನಮ್ಮ ತರಗತಿಯಲ್ಲಿ ಬಸವಣ್ಣನವರ ಕುರಿತಾದ ಲೇಖನವೊಂದನ್ನು ಸ್ವಾರಸ್ಯವಾಗಿ ಓದಿದರು. ತರಗತಿ ಮುಗಿದೊಡನೆಯೇ ಒಬ್ಬರು ವಿದ್ಯಾರ್ಥಿ ಆ ಪುಸ್ತಕ ಕೇಳಿ ಪಡೆದು ಮನೆಗೊಯ್ದರು. ಮರುದಿನ "ಈ ಲೇಖನ ನಾನು ಮೊದಲೇ ಓದಿದ್ದೇನೆ" ಎಂದರು. ಏನೋ ಮಹಾ ವಿಷಯವೆಂದು ಅವರು ಆ ಪುಸ್ತಕವನ್ನು ಕೊಂಡುಹೋದದ್ದು ಪ್ರೊ. ಭಟ್ಟರು ಓದಿದ ರೀತಿಯಿಂದಲೇ.

ನಮ್ಮ ಲೈಬ್ರರಿಯಲ್ಲಿ 'ಅಲಂಕಾರ ಶಾಸ್ತ್ರ' ಎಂಬ ಚಿಕ್ಕ ಪುಸ್ತಕವೊಂದಿತ್ತು. ವರ್ಷದ ಆರಂಭದಲ್ಲಿ ನಾವೆಲ್ಲ ಒಮ್ಮೆ ಅದನ್ನು ಪುಟ ತಿರುವಿ, "ಪ್ರಯೋಜನವಿಲ್ಲ" ಎಂದು ಮರಳಿಸಿದ್ದೆವು. ವರ್ಷದ ಕೊನೆಯಲ್ಲಿ ಅದೇ ಪುಸ್ತಕದಲ್ಲಿ ಕೆಲವು ಪುಟಗಳನ್ನು ಪ್ರೊ. ಭಟ್ಟರು ತರಗತಿಗೆ ಓದಿ ಹೇಳಿದ ಮೇಲೆ ಎಲ್ಲರೂ ಲೈಬ್ರರಿಗೆ ಓಟಕಿತ್ತೆವು. ಅಲ್ಲಿ ಇದ್ದಷ್ಟು ಪ್ರತಿಗಳನ್ನೂ ಒಬ್ಬೊಬ್ಬರು ಎರವಲು ಪಡೆದೆವು.

ಪ್ರೊ. ಭಟ್ಟರ ಮಾತಿನಲ್ಲಿಯೂ ಬರವಣಿಗೆಯಲ್ಲಿಯೂ ರೂಪಕಗಳ ಮಾಲೆ ಮಾಲೆ. ಉದಾಹರಣೆ "ಹಳ್ಳಿ ಹಳ್ಳಿಯಲ್ಲಿ ಜನರ ಆಡು ಮಾತಿನಲ್ಲಿದ್ದ ಗಾದೆಯ ಕಾಳುಗಳನ್ನು ಸಾಹಿತ್ಯದ ಕಣಜದಲ್ಲಿ ತುಂಬಿಸಿದ ಕೃಷಿ ಅಧಿಕಾರಿಗಳು ನಮ್ಮ ಕವಿಗಳು" "ಅಕ್ಕಮಹಾದೇವಿಯ ವಚನಹಿಣಿಲು ಮುಟ್ಟಿದಲ್ಲಿ ಮಧು ಸೂಸುವ ಕೋಲುಜೇನಿನ ಹಿಣಿಲಿನಂತೆ!" ಅವರ ಮಾತಿನಲ್ಲಿ ಎದ್ದು ತೋರುವ ಇನ್ನೊಂದು ಕ್ರಮ "ಹೇಗೆ—ಹಾಗೆ"ಗಳ ಪ್ರಯೋಗ. ಉದಾಹರಣೆ "ರಾಮನಿಗೆ ಲಕ್ಷ್ಮಣ ಹೇಗೆ ಪರಮೇಶ್ವರನಿಗೆ ಲಕ್ಕಪ್ಪ ಹಾಗೆ" "ಮಗುವಿಗೆ ದನದ ಹಾಲು ಹೇಗೆ ಶಾಲಾ ವಿದ್ಯಾರ್ಥಿಗೆ ಪುಸ್ತಕಗಳು ಹಾಗೆ". ಸಾಧಾರಣ ಒಂದೇ ಅರ್ಥವನ್ನು ಕೊಡುವ ಪದಗಳು ಹಲವನ್ನು ಉಪಯೋಗಿಸುತ್ತಾ ಹೋಗುವುದು ಅವರ ಮಾತಿನ ಇನ್ನೊಂದು ವೈಶಿಷ್ಟ್ಯ. ಉದಾ "ಒಬ್ಬ ಮನುಷ್ಯನಲ್ಲಿ ಅವನು ಮನುಷ್ಯ ಅಂದ ಮೇಲೆ ಒಂದು ಗುಣ, ಒಂದು ನಡತೆ, ಒಂದು ರೀತಿ, ಒಂದು ನೀತಿ, ಒಂದು ಸಹೃದಯತೆ ಬೆಳೆದು ಬರಬೇಕು".

"ಮಂಗಳೂರಿಗೆ ಬಂದಾಗ ಇಲ್ಲಿಯ ಜನ, ಇಲ್ಲಿಯ ವಿದ್ಯಾರ್ಥಿಗಳು ನನ್ನನ್ನು ದೊಡ್ಡ ವಿದ್ವಾಂಸನೆಂದು ತಿಳಿದರು. ಆದರೆ ನಾನು ಹನುಮಂತ" ಎಂದು ಅವರು ತರಗತಿಯಲ್ಲಿ ಹೇಳಿದರು. ಹನುಮಂತ ಲಂಕೆಗೆ ಹೋದಾಗ ಅವನ ಪೌರುಷ ಕಂಡ ರಾವಣಾದ್ಯರಿಗೆ ಆಶ್ಚರ್ಯ, ಹೆದರಿಕೆ ಆಯಿತಂತೆ. ಆಗ ಹನುಮಂತ "ನಾನು ನಮ್ಮ ಪಡೆಯಲ್ಲಿ ಅತಿ ಚಿಕ್ಕವ, ಕಡಮೆ ಬಲಶಾಲಿ. ನಳ, ಸುಗ್ರೀವ, ಜಾಂಬವರು ಅಲ್ಲೇ ಇದ್ದಾರೆ, ಸಮುದ್ರದ ಆ ಬದಿಯಲ್ಲಿ" ಎಂದನಂತೆ. ಪರಮೇಶ್ವರ ಭಟ್ಟರನ್ನೇ ನೋಡಿ ಮೂಗಲ್ಲಿ ಬೆರಳಿಟ್ಟು, ಅವರ ಸಹೃದಯತೆ, ವಿದ್ವತ್ತೆಗೆ ಬೆರಗಾದ ಜನ ಬಿ. ಎಂ. ಶ್ರೀ., ತೀ. ನಂ. ಶ್ರೀ., ಡಿ. ಎಲ್. ಎನ್., ಎ. ಆರ್. ಕೃ., ಇವರುಗಳನ್ನು ಕಂಡಿದ್ದರೆ ಕೇಳಿದ್ದರೆ! ಮಾತಿನ ಮೊದಲು "ನಾನು ಹನುಮಂತ" ಎಂದಾಗ ಭ್ರಮಿಸಿದ ನಾವು ವಿವರಣೆಯ ಕೊನೆಯಲ್ಲಿ ಭ್ರಮನಿರಸನವಾದಾಗ ಪಡುವ ಆನಂದ ಕೇವಲ ಅನುಭವವೇದ್ಯ. ಇದರಿಂದ ವ್ಯಕ್ತವಾಗುವ ಅವರ ವಿನಯಗುಣ ಅಸದೃಶ, ಅಲ್ಲವೇ?

ತೀ. ನಂ. ಶ್ರೀ. ಯವರ "ಭಾರತೀಯ ಕಾವ್ಯ ಮೀಮಾಂಸೆ"ಯನ್ನು ಓದುವಾಗ ಅವರ ಶೈಲಿ, ವಿಷಯ ನಿರೂಪಣಾಕ್ರಮಗಳನ್ನು ಕುರಿತು ಪ್ರೊ. ಭಟ್ಟರು ಮೆಚ್ಚುಗೆ ವ್ಯಕ್ತಪಡಿಸದ ದಿನವಿಲ್ಲ. ಆಗ ಈ ಮಾತು ಹೇಳುತ್ತಿದ್ದರು "ಕೆಲವರು ಬರೆದು ಹಾಳಾಯಿತು: ತೀ. ನಂ. ಶ್ರೀ. ಯಂತಹವರು ಬರೆಯದೆ ಹಾಳಾಯಿತು: ಈಗಂತೂ ಓದುವವರಿಂದ ಹೆಚ್ಚು ಬರೆಯುವವರೇ ಆಗಿದ್ದಾರೆ."

ಈ ಇಪ್ಪತ್ತನೆಯ ಶತಮಾನದ ಗೊಂದಲಮಯ ವಾತಾವರಣವನ್ನು ಕಂಡು ನೊಂದ ಶ್ರೀ ಭಟ್ಟರು ತಮ್ಮ ಭಾಷಣದಲ್ಲಿ ಒಮ್ಮೊಮ್ಮೆ "ಇಂದು ಬೇಕಾಗಿರುವುದು ಬದಲಿ ಹೃದಯವಲ್ಲ. ಹೃದಯ ಬದಲು ಆಗಬೇಕು; ಹೃದಯ ಪರಿವರ್ತನೆ ಆಗಬೇಕು" ಎಂಬ ಮಾತನ್ನು ಸೇರಿಸುವುದುಂಟು.

ಬೆಂಗಳೂರಲ್ಲಿ ಮುಷ್ಕರದ ವೇಳೆ ಗಾಂಧಿಯವರ, ವಿಶ್ವೇಶ್ವರಯ್ಯನವರ ಪ್ರತಿಮೆಗಳನ್ನು ನಾಶ ಮಾಡಿದ ವಾರ್ತೆ ಪತ್ರಿಕೆಯಲ್ಲಿ ವರದಿಯಾದ ಮರುದಿನ ನಾನು ಶ್ರೀ ಭಟ್ಟರನ್ನು ಭೇಟಿಯಾಗಿದ್ದೆ. ಆಗ ನನ್ನೊಡನೆ "ನೋಡಪ್ಪಾ ಚೆನ್ನಕೇಶವ! ವಿಶ್ವೇಶ್ವರಯ್ಯನಂತಹವರ, ಗಾಂಧಿಯಂತಹವರ ಹೆಸರು, ಪ್ರತಿಮೆಗಳೇ ಸತ್ತ ಮೇಲೆ ಉಳಿಯುವುದಿಲ್ಲ ಅಂದ ಮೇಲೆ ನಮ್ಮಂಥವರ ವಿಷಯ ಏನು? ಇದ್ದ ಹತ್ತು ದಿನ ಒಳ್ಳೆಯ ಹೆಸರು ಕೇಳಿ ಬಿಡಬೇಕು" ಎಂದರು.

ಹಿಂದೆ ಕ್ಲೋಸ್ ಕೋಲರ್ ಕೋಟ್, ಪೇಂಟು, ಪೂಗಳಿಂದ ಕೂಡಿದ್ದ ಅವರ ವೇಷಭೂಷಣ ಮಂಗಳೂರಿಗೆ ಬಂದ ಮೇಲೆ ಅಡ್ಡಮುಂಡು, ಪೈರಾಣು ಅಂಗಿ ಮತ್ತು ಶಾಲು ಆಯಿತು. ಮೊದಲ ಬಾರಿಯ ಎರಡು ಬಿಳಿ ಟೆರಿಕಾಟ್ ಅಂಗಿಗಳನ್ನು 'ಮುಸ್‌ಬಾ' ಎಂಬ ಬಟ್ಟೆ ಅಂಗಡಿಯಿಂದ ಕೊಂಡುಕೊಂಡಿದ್ದರು. ಅಂದಿನಿಂದ ಅವರು ಆ ರೀತಿಯ ಅಂಗಿಗಳನ್ನು 'ಮುಸ್‌ಬಾ' ಎಂಬ ಹೆಸರಿನಿಂದ ಕರೆಯತೊಡಗಿದರು. ಬೆಳಗ್ಗೆ ಕಾಲೇಜಿಗೆ ಹೊರಡುವಾಗ, "ನನ್ನ ಮುಸ್‌ಬಾ ಎಲ್ಲಿ? " ಎಂದು ಹುಡುಕುತ್ತಿದ್ದರು.

ಕಾಕತಾಲೀಯ ನ್ಯಾಯದಿಂದ ನನ್ನ ಮಾವ ಮತ್ತು ನಾನು ಎಂ.ಎ.ಯಲ್ಲಿ ಸಹಪಾಠಿಗಳಾಗಿದ್ದೆವು. ಜ್ಯೂನಿಯರ್ ಎಂ.ಎ.ಯಲ್ಲಿ ನಮ್ಮ ಕುರಿತು ಹೇಳುವಾಗ "ಸೀನಿಯರ್ ಎಂ.ಎ.ಯ ಹರಿಹರ-ರಾಘವಾಂಕರು" ಎನ್ನುತ್ತಿದ್ದರಂತೆ !

ಜೀವನದ ಬಗ್ಗೆ ಹೇಳುವಾಗ "ನಿಮ್ಮ ಮನಸ್ಸಿನ ಒರೆಗಲ್ಲಿನಲ್ಲಿ ಒಂದು ಪುತ್ಥಳಿ ಚಿನ್ನದ ಗೆರೆ ಇರಬೇಕು. ಒಂದು ಒಳ್ಳೆಯ ಕಾದಂಬರಿ, ಒಳ್ಳೆಯ ಭಾಷಣ, ಒಳ್ಳೆಯ ಕಾವ್ಯ, ಒಳ್ಳೆಯ ನಾಟಕ ನೀವು ಓದಿ ತಲೆಯಲ್ಲಿ ಗುರುತು ಮಾಡಿಕೊಂಡಿರಬೇಕು. ಆ ಮೇಲೆ ಎದುರಾದವುಗಳನ್ನೆಲ್ಲಾ ಈ ಗುರುತಿನ ಸಹಾಯದಿಂದ ತೂಗಬೇಕು" ಎನ್ನುತ್ತಿದ್ದರು.

"ಮೊತ್ತಮೊದಲು" ಶಬ್ದ ಅವರ ಉಚ್ಚಾರಣೆಯಲ್ಲಿ "ಮೊಟ್ಟಮೊದಲು" ಎಂದಾಗುತ್ತಿತ್ತು. ಎಷ್ಟೋ ವರ್ಷಗಳಿಂದ ಪಳಗಿದ ರೂಢಿ. ಯಾರೋ, "ಅದು ತಪ್ಪು. ಮೊತ್ತ ಮೊದಲು ಸರಿ" ಎಂದು ಅವರನ್ನು ಎಚ್ಚರಿಸಿದರು. ಎಷ್ಟು ನೆನಪಿನಿಂದ ಹಾಗೆ ಹೇಳಲು ಪ್ರಯತ್ನಿಸಿದರೂ, ಅಭ್ಯಾಸಬಲದಿಂದ ಒಮ್ಮೊಮ್ಮೆ "ಮೊಟ್ಟಮೊದಲು" ತಲೆಹಾಕುತ್ತಿತ್ತು. ಆಗ ಅವರು ಹಣೆ ಮುಟ್ಟಿ "ಏನಾದ್ರೂ ಆಗಲಿ ನಾನು ಮೊಟ್ಟಮೊದಲು ಅಂತಾನೇ ಹೇಳೋದು" ಎಂದು ಹೇಳಿ ಹಾಗೆಯೇ ಮುಂದುವರಿಸುವುದಿತ್ತು.

ವಿದ್ಯಾಸಂಸ್ಥೆಗಳಿಗೆ ಭಾಷಣಕ್ಕೆ ಹೋದಾಗ, "ನಾನು ಸರಸ್ವತಿಯ ಒಕ್ಕಲು" ಎಂದು ಅವರು ಹೇಳುವುದುಂಟು. ಸರಸ್ವತಿಯ ಉಪಾಸನೆಯನ್ನು ಐವತ್ತು ವರ್ಷಗಳ ಕಾಲ ಅವಿರತವಾಗಿ ಮಾಡಿ ಸಿದ್ಧಿ ಪಡೆದ ಪ್ರೊ. ಭಟ್ಟರೇ ಹಾಗೆ ಅನ್ನುವಾಗ, ಕೇಳಿದವನಿಗೆ ಅವರ ಬಗ್ಗೆ ಗೌರವ ಮೊಳೆಯುವುದು ಸ್ವಾಭಾವಿಕ.

ಒಮ್ಮೆ ಡಾ. ತಿಪ್ಪೇರುದ್ರಸ್ವಾಮಿ, ಪ್ರೊ. ಮರಿಯಪ್ಪ ಭಟ್ಟ, ಪ್ರೊ. ರಾಮರಾವ್ ಇಂತಹ ವಿದ್ವಾಂಸರು ನಮ್ಮ ಕೇಂದ್ರದಲ್ಲಿ ಭಾಷಣ ಮಾಡಲು ಬಂದಾಗ, ಭಟ್ಟರ ಮನೆಯಲ್ಲಿ ಉಳಿದಿದ್ದರು. ಅವರೆಲ್ಲ ಪ್ರೊಫೆಸರರ ಆತಿಥ್ಯವನ್ನು ಹೊಗಳಿದರು. ಪ್ರೊ. ಭಟ್ಟರು "ನಮ್ದೇನು Nescafe ಆತಿಥ್ಯ" ಎಂದು ಉತ್ತರಿಸಿದಾಗ ನಾವೆಲ್ಲಾ ನಗೆಗಡಲಲ್ಲಿ ಮುಳುಗ ಬೇಕಾಯಿತು.

"ಪ್ರಬುದ್ಧ ಕರ್ಣಾಟಕ" ಪತ್ರಿಕೆಯ ಚಿನ್ನದ ಹಬ್ಬದ ಅಂಗವಾಗಿ ನಡೆದ ಕವಿಸಮ್ಮೇಳನದಲ್ಲಿ ಅಧ್ಯಕ್ಷರಾಗಿ ಪ್ರೊ. ಭಟ್ಟರು ಮಾತನಾಡಿದರು. ಅಲ್ಲಿಗೆ ನಮ್ಮ ಕೇಂದ್ರದ ವಿದ್ಯಾರ್ಥಿಗಳು ಪ್ರವಾಸಕ್ಕೆ

ಹೋದಾಗಲೇ ಹೋಗಿದ್ದೆವು. ಅಧ್ಯಕ್ಷತೆಗೆ ಸ್ವಲ್ಪ ಮೊದಲು ಭಟ್ಟರೂ ನಾವೂ ಮೈಸೂರು ಮೃಗಾಲಯಕ್ಕೆ ಹೋಗಿ, ಅಲ್ಲಿ ನೀರುಕುದುರೆಯನ್ನು ಕಂಡಿದ್ದೆವು. ಅಧ್ಯಕ್ಷ ಭಾಷಣದಲ್ಲಿ ಅವರು "ಮಂಗಳೂರಿನ ಪಟ್ಟಣವಾಸದ ಜಂಜಡದಿಂದ ದಿನವಿಡೀ ತೊಂದರೆ ಅನುಭವಿಸಿ ಸಾಯಂಕಾಲ, ನೀರುಕುದುರೆ ನೀರಿಂದ ಹಾಗೆ.........ಹೀಗೆ (ನಟನೆ) ಹೊರಗೆ ತಲೆ ಹಾಕುವಂತೆ, ಬಾವುಟ ಗುಡ್ಡೆಯನ್ನೇರಿ ಠಾಗೂರ್ ಪಾರ್ಕಿನಲ್ಲಿ ಕೂತಾಗ ಅನುಭವಕ್ಕೆ ಬಂದವು ಈ ವಚನಗಳು" ಎಂದು ಹೇಳಿ "ಉಪ್ಪುಕಡಲು" ಎಂಬ ಅವರ ಸಂಕಲನದಿಂದ ಕೆಲವು ವಚನಗಳನ್ನು ಓದಿದರು. ಆ ಉಪಮೆ ತುಂಬಾ ಪರಿಣಾಮಕಾರಿಯಾಗಿತ್ತು.

ಮುದ್ದಣ ಅವರ ಪ್ರೀತಿಯ ಕವಿ. ನವ್ಯಕಾವ್ಯದ ಮಾತು ಬಂದಾಗ,

ಓ<br>
ಓ<br>
ಕಾಲ<br>
ಪುರುಷಂಗೆ<br>
ಗುಣಂ<br>
ಅಣಂ

ಇಲ್ಲಂ ಗಡಾ !......ಎಂದು ಕೆಳಕೆಳಗೆ ಬರೆದರೆ **first class** ನವ್ಯಕಾವ್ಯ ಆಗ್ತೋಯ್ತು ಎನ್ನುತ್ತಿದ್ದರು.

ಒಂದು ಸ್ಥಳಕ್ಕೆ ಹೋದಾಗ, ಅಥವಾ ಒಬ್ಬ ವ್ಯಕ್ತಿಯ ಕುರಿತು ಮಾತಾಡುವಾಗ ಆ ಸ್ಥಳದ, ಆ ವ್ಯಕ್ತಿಯ ಹೆಸರನ್ನು ಒಂದು ಚಮತ್ಕಾರವಾದ ಅರ್ಥದಲ್ಲಿ ಬಳಸುವುದು ಪ್ರೊ. ಭಟ್ಟರ ಒಂದು ಕ್ರಮ. ಕಲ್ಯಾಣಪುರದ ಕಾಲೇಜಿನ ವಾರ್ಷಿಕೋತ್ಸವದ ಅಧ್ಯಕ್ಷ ಪದವಿಯಿಂದ ಮಾತನಾಡುತ್ತಾ "ಕಲ್ಯಾಣಪುರದ ಕಾಲೇಜಿನ ವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ ಕಲ್ಯಾಣವಾಗಲಿ ಎಂದು ನಾನು ಹಾರೈಸುತ್ತೇನೆ" ಎಂದರು.

ಎರಡನೆಯ ಅಖಿಲ ಕರ್ಣಾಟಕ ಜಾನಪದ ಸಮ್ಮೇಳನದಲ್ಲಿ ಭಾಗವಹಿಸಿದ ಹಿರಿಯ ವ್ಯಕ್ತಿಗಳಿಗೆ ಧನ್ಯವಾದ ಹೇಳುವಾಗ, ಡಾ. ಟಿ. ಎಂ. ಎ. ಪೈಗಳ ಕುರಿತು ಹೇಳುತ್ತಾ,

"ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ<br>
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್<br>
ಮಾಧವನೀತನ್ ಪೆಱನಲ್ಲ"

ಎಂಬ ಶಾಸನದ ತ್ರಿಪದಿಯನ್ನು ಡಾ. ಪೈಗಳಿಗೆ ಅನ್ವಯಿಸಿ "ಮಾಧವನೀತನ್" ಎಂದು ಅವರೆಡೆಗೆ ಕೈಮಾಡಿ ಹೇಳಿದಾಗ, ಸಭೆಯಲ್ಲಿದ್ದವರು ಅನುಭವಿಸಿದ ಸಂತೋಷವನ್ನು ಯಾರು ಅಳೆಯಬಲ್ಲರು?

ಇಂತಹ ಸಮಯ ಸ್ಫೂರ್ತಿಯ, ಪ್ರತ್ಯುತ್ಪನ್ನಮತಿತ್ವದ ಮಾತು ಅವರಿಗೆ ಬಹು ಸಹಜ; ಸ್ವಾಭಾವಿಕ.

ಅವರ ಮಾತಿನ ಪ್ರಥಮ ಆಕರ್ಷಣೆ ಅದರಲ್ಲಿರುವ ತಿಳಿ ಹಾಸ್ಯ. ಅವರನ್ನೇ ಅವರು ಹಾಸ್ಯ ಮಾಡಿ ಶ್ರೋತೃಗಳನ್ನು ನಗಿಸುವುದುಂಟು. ಭಾಷಣದ ನಡುವೆ ಫೋಟೋಗ್ರಾಫರನ ಕೆಮರಾದ ಬೆಳಕು ಬೆಳಗಿದಾಗ, ಭಾಷಣ ನಿಲ್ಲಿಸಿ "ಆಯ್ತೋ......... ಸರಿ ಬಂತೋ?" ಎಂದು ಕೇಳಿದಾಗ ಸಭೆಯಲ್ಲಿ ನಗುವೋ ನಗು. ಅವರೇ ಹೇಳುತ್ತಾರೆ: "ಎಷ್ಟೋ ಸಲ ಏನಾಗ್ತದೆ ಎಂದ್ರೇ, ಜನಾ ವಿಷಯ ಎಲ್ಲ ಮರೆತು (ಭಾಷಣದ) **Joke** ನೆನಪಿಟ್ಕೊಂಡು ಮನೇಗೆ ಹೋಗ್ತಾರೆ."

ಕಾಲೇಜ್ ಅಧ್ಯಾಪಕರಾಗಿದ್ದಾಗ ಅವರ ಕನ್ನಡ ಪಿರೆಡು ವಿದ್ಯಾರ್ಥಿಗಳ Time table ನಲ್ಲಿ ಕೊನೆಯದಂತೆ. ಪ್ರಿನ್ಸಿಪಾಲರು "ಭಟ್ಟರ ಕನ್ನಡ ಕೊನೆಯ ಪಿರೆಡು ಆದ್ರೂ ಅಡ್ಡಿ ಇಲ್ಲ" ಎನ್ನುತ್ತಾ ಈ ಮರೆತ ಮಾಡುತ್ತಿದ್ದರಂತೆ.

ಒಂದು ದಿನ ನಾನೂ ಅವರೂ "ಮೋಹಿನಿ ವಿಲಾಸ"ದಲ್ಲಿ ಕಾಫಿ ಕುಡಿಯಲು ಕುಳಿತಿದ್ದೆವು. ನಮ್ಮ ಎದುರುಗಡೆಯಲ್ಲಿ ಇಬ್ಬರು ಹೆಮ್ಮಕ್ಕಳು ಕುಳಿತು ಮಾತನಾಡುತ್ತಾ ಇದ್ದರು. ಆಗ ಒಬ್ಬಳ ಕೈ ಇನ್ನೊಬ್ಬಳ ಕೈಯಲ್ಲಿದ್ದ ಚಿನ್ನದ ಬಳೆಗಳೊಡನೆ ಆಟವಾಡುತ್ತಾ ಇತ್ತು. ಅದನ್ನು ನೋಡಿದವರೇ "ನೋಡಿದ್ರಾ ಇಂಥ ದೃಶ್ಯ ನಮಗೆ ಬರೆಯಲು ಸ್ಫೂರ್ತಿ ಕೊಡುವಂತಾದ್ದು" ಎಂದು.

ರೀಡರ್ ಪರಮೇಶ್ವರ ಭಟ್ಟರು ಪ್ರೊಫೆಸರ್ ಎಂಡ್ ಹೆಡ್ ಒಫ್‌ದಿ ಒಫೀಸ್, ಆದಾಗ, ಮರದ ಕುರ್ಚಿಯ ಬದಲು ಸ್ಪಂಜಿನ ಸೀಟಿನ ತಿರುಗು ಕುರ್ಚಿ ಬಂದಾಗ, "ಈ ಸೀಟಿಗಿಂತ ಆ ಸೀಟೇ ಉತ್ತಮ" ಎನ್ನುತ್ತಿದ್ದರು. ಅವರು ಹೇಳುವಾಗ, ಸ್ಪಂಜಿನ ಪ್ರತಿಕ್ರಿಯೆಯಿಂದ ಸುಖ ಇಲ್ಲ ಎಂದು ಮೇಲಿನ ಅರ್ಥ ವಾದರೂ ಒಳಗಿನ ಅರ್ಥ ಯೋಚಿಸಿದರೆ Democle's swordನ ನೆನಪಾಗದೆ ಇದ್ದೀತೇ?

ಮೈಸೂರಿನಿಂದ ಮಂಗಳೂರಿಗೆ ಬರುವಾಗ ಅಲ್ಲಿಯ ಮಿತ್ರರು ಪ್ರೀತಿಯ ಕಾಣಿಕೆಯಾಗಿ ಒಂದು ಕೊಡೆ ಕೊಟ್ಟಿದ್ದರು. ಅವರ ಭಾಷೆಯಲ್ಲಿ ಹೇಳುವುದಾದರೆ ನಾಲ್ಕು ತಿಂಗಳ ಕಾಲ "ಬಾನು ಬಕೆಟ್ಟಿನ ಜೋರಲು ಮಾಡಿದಂತೆ" ಮಂಗಳೂರಲ್ಲಿ ಮಳೆ. ಉಳಿದ ಎಂಟು ತಿಂಗಳು ತಲೆಸುಡುವ ಬಿಸಿಲು. ಕೊಡೆ ಹಿಡಿದು ನಡೆವಾಗ ಅವರು ಹೇಳುವುದಿತ್ತು, "ಕೊಡೆ, ದಕ್ಷಿಣ ಕನ್ನಡದ ಜನರ ಅವಿಭಾಜ್ಯ ಅಂಗ" ಎಂದು.

ಹಿಂದಿನ ಕನ್ನಡ ಪಂಡಿತರಿಗೂ ಇಂದಿನ ಕನ್ನಡ ಎಂ.ಎ.ಗಳಿಗೂ ಇರುವ ವ್ಯತ್ಯಾಸವನ್ನು ಪ್ರೊ. ಭಟ್ಟರು ಬಹಳ ಸೊಗಸಾಗಿ ಹೀಗೆ ಹೇಳುತ್ತಿದ್ದರು: "ಪಂಡಿತರ ಜ್ಞಾನ ಬೋರ್‌ವೆಲ್ ಹೊಡೆದ ಹಾಗೆ, ನಾವು ಸಮುದ್ರದ ತೀರದ ಹಾಗೆ; ಆಳ ಕಡಮೆ ವಿಶಾಲ ಹೆಚ್ಚು : ಅವರು ಆಳ ಹೆಚ್ಚು ವಿಶಾಲ ಕಡಮೆ".

ಮುದ್ದಣ ಶತಮಾನೋತ್ಸವವನ್ನು ಪ್ರೊ. ಭಟ್ಟರ ನೇತೃತ್ವದಲ್ಲಿ ನಾವು ಆಚರಿಸಿದೆವು. ಸರ್ಕಾರದಿಂದ ಸಾವಿರ ರೂಪಾಯಿ ಗ್ರೇಂಟು ಬಂತು. ಅದು ಏನೇನೂ ಸಾಕಾಗದೆ ಕೈಸುಟ್ಟುಕೊಂಡ ಪ್ರೊ. ಭಟ್ಟರು "ಮುದ್ದಣನ ದಿನ ಆಚರಿಸಿ ಅವನ ಬಡತನ ನಮಗೂ ಬಂತು" ಎಂದು ನೊಂದು ನುಡಿದರು.

ಅವರ ಸಂಬಂಧಿಯೊಬ್ಬರು ತಮ್ಮ ಆಫೀಸಿನ typistನ್ನು ಲವ್ ಮ್ಯಾರೇಜ್ ಮಾಡಿಕೊಂಡ ಕಥೆ ಒಮ್ಮೆ ಹೇಳಿದರು. ಕೊನೆಗೆ "She typed and typed, she typed upon his heart" ಎಂದು ಮುಕ್ತಾಯ ಮಾಡಿದರು.

ಕನ್ನಡದ ಒಬ್ಬ ಸುಪ್ರಸಿದ್ಧ ಸಾಹಿತ್ಯಜ್ಞರು "ನನ್ನ ತಂದೆ ತಾಯಿ ನನಗೆ ಏನೂ ಕೊಡಲಿಲ್ಲ. ನಾನೇ ಎಲ್ಲ ಮಾಡಿಕೊಂಡದ್ದು" ಎಂದು ಭಾಷಣ ಮಾಡಿದರು. ಅವರ ಮಾತನ್ನು ಕೇಳಿಬಂದು "ಏನೂ ಕೊಡ ದಿದ್ರೂ ಆ ತಂದೆ ತಾಯಿ ಇವರ ದೇಹಾನಾದ್ರೂ ಕೊಟ್ಟಿಲ್ವೇ?" ಎಂದು ತಮ್ಮ ಪ್ರತಿಕ್ರಿಯೆ ವ್ಯಕ್ತ ಪಡಿಸಿದರು.

ಪ್ರೊ. ಭಟ್ಟರ ಮಾತು ಮನ ಮರೆಯಿಸುವಂತಹುದು. ಅವರ ಮನೆಯಲ್ಲಿ ನಾನು "ಸ್ವಯಂಪಾಕ" ಮಾಡಿಕೊಂಡು ಕೆಲವು ಕಾಲ ಇದ್ದೆ. ಅನ್ನಕ್ಕೆ ಅಕ್ಕಿ ಹಾಕಿ, ಅವರೊಡನೆ ಮಾತು ಕೇಳುತ್ತಾ ಕೂತು ಅನ್ನ ಕರಟಿದ ವಾಸನೆ, ಚಟಚಟ ಸದ್ದಿನಿಂದ ನಾನು ಎಚ್ಚರಗೊಂಡ ಸಂದರ್ಭವುಂಟು.

ಈಗಿನ ಕಾಲದಲ್ಲಿ ಉತ್ತಮ ನಾಟಕಗಳು ಏಕೆ ಬರುವುದಿಲ್ಲ ಎಂಬುದಕ್ಕೆ ಪ್ರೊ. ಭಟ್ಟರು ಕೊಡುವ ಕಾರಣ "ನಿಜ ಜೀವನದಲ್ಲಿಯೇ ಎಲ್ಲರೂ ನಟನೆಯೇ ಮಾಡುವುದು. ಒಬ್ಬ ನಿಜವಾದ ಕಳ್ಳನೇ ಕಣ್ಣೆದುರು ಇರುವಾಗ, ನಾಟಕದಲ್ಲಿ ಅವನನ್ನು ಕಾಣುವ ಆವಶ್ಯಕತೆಯೇನು? ಆದ್ದರಿಂದ ಉತ್ತಮ ನಾಟಕಗಳು ಬರುವುದಿಲ್ಲ."

ಎಂ. ಎ. ಮೊದಲ ವರ್ಷದಲ್ಲಿದ್ದಾಗ ಆರ್ಥಿಕವಾಗಿ ನಾನು ತುಂಬ ಸೊರಗಿದ್ದೆ. ಆಗ "ಏನು ಸರ್ ಮುಂದೆ ಏನಾದ್ರೂ ಒಳ್ಳೆದಾಗ್ಬಹುದೂಂತ ಈಗ ಕಷ್ಟ ಮೈಮೇಲೆಳೆದುಕೊಂಡೆ" ಎಂದರೆ ಅವರು "ಭವಿಷ್ಯದಲ್ಲಿ ಬರುವ ಸುಖದ ಕಲ್ಪನೆಯಲ್ಲೇ ನಿಜವಾದ ಸುಖ ಇರೋದು" ಎನ್ನುತ್ತಿದ್ದರು. ಈಗ ಬಯಸಿ ಬಾಯಾರಿದ ಜಾಗದಲ್ಲಿ ನಾನು ಇರತೊಡಗಿದ ಮೇಲೆ ಅವರ ಆ ಮಾತು ಇನ್ನೂ ಹೆಚ್ಚು ಅರ್ಥ ವತ್ತಾಗಿ ಕಾಣುತ್ತಿದೆ.

"ನೋಡೋಣ ದೇವ್ರಿದಾನೆ", "wonderful" "ನಮ್ಮ ಪ್ರಾಣಾ ತೆಗೀತಾರೆ" ಮೊದಲಾದ ಕೆಲವು ಮಾತುಗಳು ಅವರು ಆಗಾಗ ಹೇಳುವಂತಹವು.

ಬಯಲಾಟ, ತಾಳಮದ್ದಳೆಗಳೆಂದರೆ ಪ್ರೊ. ಭಟ್ಟರಿಗೆ ಪ್ರಾಣ. ಕೆ. ಎಂ. ಸಿ.ಯಲ್ಲಿ ನಡೆದ ತಾಳಮದ್ದಳೆ ಯಲ್ಲಿ ಅವರು ಮಾಡಿದ ಉದ್ಘಾಟನಾ ಭಾಷಣದಲ್ಲಿ "ಗುರುಪುರ ನದಿ ನೇರವಾಗಿ ಸಾಗರ ಸೇರಲಾರದು. ಕರಾವಳಿಯಲ್ಲಿಯೇ ಹರಿದು ಬಂದು, ಮೊದಲು ನೇತ್ರಾವತಿಯನ್ನು ಜೊತೆಗೂಡಿ, ಆ ಮೇಲೆ ಸಮುದ್ರ



ಸೇರುತ್ತದೆ. ಹಾಗೆ ನನಗೆ ಯಕ್ಷಗಾನಸಮುದ್ರದೊಡನೆ ಒಂದಾಗುವ ಆಸೆ. ನೇರವಾಗಿ ಸೇರಲಾರೆ. ಶ್ರೀಣಿ, ದೇರಾಜೆ ಮೊದಲಾದವರು ನೇತ್ರಾವತಿ ನದಿಯ ಹಾಗೆ. ಅವರ ಸಹಾಯದಿಂದ ನನ್ನ ಬಯಕೆ ಕೈಗೂಡುತ್ತದೆ" ಎಂದು ಆರಂಭಿಸಿದರು.

ತಾಳಮದ್ದಳೆಯಲ್ಲಿ ಮುಖ್ಯವಾಗಿ ನಡೆಯುವುದು ಪದ್ಯಗಳ ವಿವಿಧ ರೀತಿಯ ವ್ಯಾಖ್ಯಾನ. ಆದುದರಿಂದ ವ್ಯಾಖ್ಯಾನ ಎಂಬ ಅರ್ಥದಲ್ಲಿ "ತಾಳಮದ್ದಳೆ" ಎಂದು ಅವರು ಪ್ರಯೋಗಿಸುತ್ತಾರೆ. ಉದಾಹರಣೆ "ಬಸವಣ್ಣನವರ ಒಂದು ಹತ್ತು ವಚನ ನೆನಪಿಟ್ಟುಕೊಳ್ಳಿ. ಪರೀಕ್ಷೆಯಲ್ಲಿ ಅವುಗಳಿಗೆ ತಾಳಮದ್ದಳೆ ಮಾಡಿಬಿಡಿ" ಎನ್ನುತ್ತಿದ್ದರು.

ಒಮ್ಮೆ ಸ್ನಾತಕೋತ್ತರ ಕೇಂದ್ರದಿಂದ D. E. O. ಆಫೀಸಿಗೆ ಫೋನ್ ಮಾಡಿದರು. "ಹಲೋ ಹಲೋ ಸಾಹೇಬ್ರಿದ್ದಾರೋ?" ಫೋನಿನ ಆ ಕೊನೆಯಲ್ಲಿದ್ದ ಕಾರಕೂನ ತಬ್ಬಿಬ್ಬಾದ. ಆಫೀಸರಿಗೆ "ಸಾಹೇಬ್ರು" ಎನ್ನುವುದುಂಟೆಂದು ತಿಳಿಯದೆ ಆತ ಟಪ್ಪನೆ ಫೋನು ಕೆಳಗಿಟ್ಟ. ಪ್ರೊಫೆಸರರ ಸಮೀಪವಿದ್ದ ನಾನು ಈ ವಿಚಾರ ಹೇಳಿದಾಗ ಅವರಿಗೆ ತುಂಬ ಆನಂದವಾಯಿತು.

ಪ್ರೊಫೆಸರರ ಕುರಿತಾದ ಒಂದು ಒಳ್ಳೆಯ ಮಾತು ಪತ್ರಿಕೆಯಲ್ಲಿ ಬಂದಾಗ, ಇತರರು ಹೇಳಿದಾಗ, ನಮ್ಮೊಡನೆ "ನೋಡಿದ್ರೋ ಹ್ಯಾಗಿದ್ದಾನೆ ಪರಮೇಶ್ವರ ಭಟ್ಟ" ಎನ್ನುತ್ತಾ ಅವರು ಹೊಟ್ಟೆಗೆ ತಟ್ಟಿಕೊಂಡಾಗ, ನಮಗೆ ತಲೆಯಲ್ಲಿ ಕೊಂಬು ಮೂಡುತ್ತಿತ್ತು.

St. Aloysius Collegeನ "ರೆಕ್ಟರ್" (ಮುಖ್ಯ ಅಧಿಕಾರಿ) ಭಟ್ಟರೊಡನೆ ಒಮ್ಮೆ You look nice with your Professorial Coat Mr. Bhat ಎಂದಿದ್ದರಂತೆ. ಆ ಕಪ್ಪು ಸೂಟ್ ಧರಿಸುವಾಗ ಒಮ್ಮೊಮ್ಮೆ ಈ ಮಾತನ್ನು ಪುನಃ ಹೇಳಿ ಅವರು ನಗುವುದಿತ್ತು.

ಒಟ್ಟಿನಲ್ಲಿ ಪ್ರೊ. ಭಟ್ಟರ ಕೋಪಗೊಂಡ ಮುಖ ಕಂಡವರಿರಲಾರರು. ಅವರೊಡನೆ ಕಳೆದು ಹೋದ ಎರಡು ವರ್ಷಗಳು ರಸವರ್ಷಗಳು; ಇನ್ನೊಮ್ಮೆ ಬರಲಿ ಬರಲಿ ಎನ್ನಿಸುತ್ತದೆ. ಅವರ ನಡೆ ನುಡಿ, ಗುಣಗಣಗಳ ರುಪಾಯಿಯಲ್ಲಿ ಒಂದು ಪೈಸೆಯಷ್ಟು ಬಂದರೂ ಸಾಕು, ಅವರ ಶಿಷ್ಯನಾದ ನಾನು ತೃಪ್ತ.

# ೧೧. ಮಂಗಳೂರಿನಲ್ಲಿ ಶ್ರೀ ಭಟ್ಟರು

**ಕುಂಜಿಬೆಟ್ಟು ಸುಬ್ರಹ್ಮಣ್ಯ ಕೆದ್ಲಾಯ**

'ಮಂಗಳಗಂಗೋತ್ರಿ'ಯಲ್ಲಿ ಕನ್ನಡ ಎಂ.ಎ.ಗೆ ಸೇರಿ ಎರಡು ತಿಂಗಳಾಗಿತ್ತು. ಒಂದು ಆದಿತ್ಯವಾರ ಸಂಜೆ ಉಡುಪಿಯಲ್ಲಿ ಒಬ್ಬರು ಪರಿಚಿತರು ಸಿಕ್ಕಿ 'ಏನು ಕೆದ್ಲಾಯರೆ, ಈಗ ಎರಡು ತಿಂಗಳಿಂದ ನೋಡ ಲಿಕ್ಕಿಲ್ಲ? ಬ್ಯಾಂಕಲ್ಲೆಲ್ಲಾದ್ರೂ ಕೆಲ್ಸಾ ಆಯ್ತಾ?' ಎಂದು ಕೇಳಿದರು. 'ಇಲ್ಲಾ, ಮಂಗಳೂರಿನಲ್ಲಿ ಕನ್ನಡ ಎಂ.ಎ.ಗೆ ಸೇರಿದೆ' ಎಂದೆ. 'ಹ್ಹಾ ! ಪರಮೇಶ್ವರ ಭಟ್ರು ! ಹೇಗಾಗ್ತದೆ ಅವರ ಪಾಠ?' ಎಂದು ಕೇಳಿ ದರು. ನನಗಾದ ಆನಂದ ಅಪಾರ. ಎಂ.ಎ.ಗೆ ಸೇರಿದ್ದೇನೆ ಎಂದೊಡನೆಯೇ 'ಹ್ಹಾ ! ಪರಮೇಶ್ವರ ಭಟ್ಟರು' ಎಂದು ನನ್ನಲ್ಲಿ ಕೇಳಿದವರು ಹಲವರು. ಇವರಲ್ಲಿ ಸಾಹಿತ್ಯದ ಬಗೆಗೆ ತಿಳಿವಳಿಕೆ ಸಾಕಷ್ಟು ಇಲ್ಲ ದವರೂ ಇದ್ದಾರೆ. ಪರಮೇಶ್ವರರು ದಕ್ಷಿಣ ಕನ್ನಡಕ್ಕೆ ಬಂದು ಅಷ್ಟು ಬೇಗನೇ ಚಿರಪರಿಚಿತರಾದುದಕ್ಕೆ ಒಮ್ಮೆ ಆಶ್ಚರ್ಯವಾದರೂ, ತರಗತಿಗೆ ಪ್ರವೇಶ ಶುಲ್ಕವೀಯುಲು ಬಂದಾಗ ನಡೆದ ಘಟನೆ ನೆನೆದಾಗ ಆ ಅಚ್ಚರಿ ಕಡಮೆಯಾಯ್ತು. ಪ್ರವೇಶ ಶುಲ್ಕವೀಯುವ ದಿನ ನನಗೆ ಅಸ್ವಾಸ್ಥ್ಯವಿತ್ತು. ಮರುದಿನವೇ ತರಗತಿ ಆರಂಭವಾಗುವುದರಿಂದ Director ಆಗಿದ್ದ ಪರಮೇಶ್ವರ ಭಟ್ಟರಿಗೆ ತಿಳಿಸಬೇಕೆಂದು ಹೆದರುತ್ತಾ ರೂಮನ್ನೂ ಪ್ರವೇಶಿಸಿದೆ. 'ಏನಪ್ಪಾ' ಎಂದು ನಗುತ್ತಾ ವಿಚಾರಿಸಿದರು. ನನ್ನ ಪರಿಸ್ಥಿತಿ ಹೇಳಿದೆ. "ಕ್ಲಾಸ್ ಆರಂಭ ಆಯ್ತುಪ್ಪಾ, ಬೇಗ ಗುಣ ಮಾಡ್ಕೊಂಡು ಬಂದ್ಬಿಡಿ" ಎಂದರು. ಗುಣವಾಗಿ ಹತ್ತು ದಿನಗಳ ಅನಂತರ ಕ್ಲಾಸಿಗೆ ಬಂದಾಗ. ಹಾಜರಿ ಕರೆಯುತ್ತಾ ನನ್ನ ಮುಖ ನೋಡಿದರು. 'ಮೊನ್ನೆ ಮೈ ಚೆನ್ನಾಗಿಲ್ಲಾ ಅಂದವ್ರು ನೀವೇನಾ?" ಎಂದರು. 'ಹೌದು ಸಾರ್' ಎಂದೆ. ಮೊನ್ನೆ ಬೇರೆ ಅಂಗಿ ಹಾಕಿ ಕೊಂಡಿದ್ದಿರಿ, ಈಗ ಚೆನ್ನಾಗಿದ್ದೀರಾ? ಎನ್ನುತ್ತಾ ಮುಗುಳ್ನಗೆ ನಕ್ಕರು. ನಿತ್ಯವೂ ಸಿಕ್ಕಾಗ ಆತ್ಮೀಯತೆ ಯಿಂದ ಬೆನ್ನುತಟ್ಟಿ 'ಏನ್ರೀ ಚೆನ್ನಾಗಿದ್ದೀರಾ, ಊರಿಗೆ ಹೋಗಿದ್ರ್ಯಾ, ಏನ್ ವಿಶೇಷ' ಎಂದು ನಗು ನಗುತ್ತಾ ಮಾತನಾಡುವ ಭಟ್ಟರು ದಕ್ಷಿಣ ಕನ್ನಡದ ಜನತೆಯ ಹೃದಯವನ್ನು ಇಷ್ಟು ಬೇಗನೇ ಸೂರೆ ಗೊಂಡದ್ದರಲ್ಲಿ ಆಶ್ಚರ್ಯವೇನು?

ಪರಮೇಶ್ವರರ ಮೊದಲ ದರ್ಶನವಾದದ್ದು ಎಂ. ಜಿ. ಎಂ. ಕಾಲೇಜಿನ ಕವಿ ಸಮ್ಮೇಳನದಲ್ಲಿ. ಅವರು ಓದಿದ ಹಲವು ಸುಭಾಷಿತಗಳು ನನ್ನ ಮನವನ್ನು ಸೂರೆಗೊಂಡವು. ಮರುದಿನವೇ 'ಇಂದ್ರಚಾಪ'ವನ್ನು ಓದಿ ಭಟ್ಟರ ಕಾವ್ಯಶಕ್ತಿಗೆ ಮೆಚ್ಚಿ ತಲೆದೂಗಿದೆ. ಭಟ್ಟರು ಮಂಗಳೂರಿನ ಕನ್ನಡ ಎಂ.ಎ. ತರಗತಿಯ ಮುಖ್ಯಸ್ಥರಾದರು ಎಂದಾಗಲೇ ಎಂ.ಎ. ಕಲಿಯಬೇಕೆಂಬ ಆಶೆ ಮನಸ್ಸಿನಲ್ಲಿ ಹುಟ್ಟಿಕೊಂಡಿತು. ಸ್ನಾತಕ ಪದವಿ ಪಡೆದ ಅನಂತರ ಎಂ.ಎ. ಮತ್ತು ಎಂ. ಎಸ್‌ಸಿ., ಗಳೆರಡಕ್ಕೂ ಅರ್ಜಿಹಾಕಿ, ನಮ್ಮ ಕಾಲೇಜಿನ ಪ್ರಿನ್ಸಿ ಪಾಲ್ ಹರಿದಾಸ ಭಟ್ಟರನ್ನು 'ಒಂದು ಬೆಳಿಗ್ಗೆ ಭೇಟಿಯಾಗಿ ಎಂ. ಎ. ಗೆ ಸೇರಲೋ ಎಂ. ಎಸ್‌ಸಿ., ಗೆ ಹೋಗಲೋ ಎಂದು ಕೇಳಿದೆ. 'ಎಂ.ಎ.ಗೆ ಸೇರಿ. ಪರಮೇಶ್ವರ ಭಟ್ಟರಿದ್ದಾರೆ' ಎಂದು ಉತ್ತೇಜನವಿತ್ತರು. ಉಳಿದ ಅಧ್ಯಾಪಕರೂ ಅದೇ ಸಲಹೆಯನ್ನಿತ್ತರು. ಪ್ರಾಯಶಃ ಎಂ.ಎ. ಗೆ ಬಂದವರಲ್ಲಿ ಹೆಚ್ಚಿನವರು ಪರಮೇಶ್ವರಭಟ್ಟರಿದ್ದಾರೆಂದೇ ಬಂದವರು ಎಂದು ನನಗೆ ಎನ್ನಿಸುತ್ತದೆ.

ಭಟ್ಟರು ಇಷ್ಟೊಂದು ಜನಪ್ರಿಯರಾಗಲು ಅವರ ನಿರಾಡಂಬರ, ನಿರಹಂಕಾರ ಸ್ವಭಾವವೇ ಕಾರಣ. ಅಧಿಕಾರ ಪೀಠದಲ್ಲಿ ಕುಳಿತಿದ್ದಾಗಲೂ, ಮನೆಯಲ್ಲಿ ಹೇಗೆ ನಗುನಗುತ್ತಾ, ನಗಿಸುತ್ತಾ ಮಾತನ್ನಾಡು ತ್ತಾರೋ ಹಾಗೆಯೇ ಮಾತನ್ನಾಡುತ್ತಾರೆ. ವೇಷಭೂಷಣದಲ್ಲೂ ಹೆಚ್ಚಿನ ಗತ್ತು ಅವರಲ್ಲಿ ಕಾಣಲಾರದು. ಒಂದು ಬಿಳೀ ಧೋತಿ, ಬಿಳೀ ಅಂಗಿ, ಹೆಗಲ ಮೇಲೊಂದು ಶಾಲು (ಹೆಚ್ಚಾಗಿ ನಸು ಹಳದಿ. ಅಥವಾ ಬಿಳಿ; ಕೂತಿರುವಾಗ ಶಾಲು ಮೈಮೇಲಿರುವುದಕ್ಕಿಂತಲೂ ಹೆಚ್ಚಾಗಿ ನೆಲದ ಮೇಲಿರುವುದೇ ಹೆಚ್ಚು; ನಡೆಯು ವಾಗ ಅದರ ಹಿಂಭಾಗ ನೆಲಕ್ಕೆ ತಾಗಿಕೊಂಡಿರುವುದೂ ಇದೆ.), 'ಪಠಾಣ್ ಷೂ' ಮಾದರಿಯ ಹಳೆಯ ಕೆಂಪು ಪಾದರಕ್ಷೆ ಇದು ಅವರ ನಿತ್ಯಾಲಂಕಾರ.

ಭಟ್ಟರು ಸ್ವಭಾವತಃ ಸೌಮ್ಯ ಸ್ವಭಾವದವರು. ಮಂಗಳೂರಿನ ಸೆಕೆಯಿಂದಾಗಿ ಮುಖ ಕೆಂಪಾಗುವು

ದನ್ನು ಬಿಟ್ಟರೆ ಉಳಿದ ಸಂದರ್ಭದಲ್ಲಿ ಮುಖ ಕೆಂಪಾಗುವುದು ಕಡಮೆ. ಎಂದಿಗೂ ಅವರ ಮಾತು ತೂಕ ತಪ್ಪುವುದಿಲ್ಲ, ಮಾತಿನಲ್ಲಿ ಆಭಾಸಕ್ಕೆ ಎಡೆಯಿಲ್ಲ. ಸೌಮ್ಯ ಸ್ವಭಾವದವರು ಅಧಿಕಾರಾರೂಢರಾದರೆ ಸಂಸ್ಥೆಯ ಆಡಳಿತೆ ಸರಿಯಾಗಿ ನಡೆಯುತ್ತದೋ ಇಲ್ಲವೋ ಎಂದು ಸಂದೇಹ ಪಡುವವರು ಭಟ್ಟರ ನ್ನೊಮ್ಮೆ ನೋಡಬೇಕು. ಆಗಂತುಕರನ್ನು, ಮಹನೀಯರನ್ನು ಹೇಗೆ ನಗುನಗುತ್ತಾ ಮಾತನಾಡಿಸು ತ್ತಾರೋ ಹಾಗೆಯೇ ಆಫೀಸಿನ ಕ್ಲಾರ್ಕು, ಎಟೆಂಡರ್, ಪ್ಯೂನ್‌ಗಳನ್ನೂ ಹಾಗೆಯೇ ನಗುನಗುತ್ತಾ ಮಾತ ನಾಡಿಸುತ್ತಾರೆ. ಅವರ ಸದ್ಗುಣ, ಹಿರಿಯ ಗುಣಗಳನ್ನು ಅರಿತ ಎಲ್ಲಾ ಅಧಿಕಾರಿಗಳೂ, ಕೆಲಸಗಾರರೂ ತಮ್ಮ ತಮ್ಮ ಕಾರ್ಯವನ್ನು ತಪ್ಪದೆ ನಡೆಸಿಕೊಂಡು ಹೋಗುವುದರಿಂದ ಭಟ್ಟರಿಗೆ ರೇಗುವ ಸಂದರ್ಭವೇ ಇಲ್ಲ. ಸಮಾಧಾನ ಅವರು ಪಡೆದುಬಂದ ವರ; ವಿದ್ಯಾರ್ಥಿಗಳ ಮನಸ್ಸಿಗೆ ಎಂದಿಗೂ ಬೇಸರವನ್ನುಂಟು ಮಾಡುವವರಲ್ಲ. ಹೀಗಿರುವುದರಿಂದಲೇ ಅವರೂ ತೃಪ್ತರಾಗಿ 'ನಿಮಗೆ ಇದು ಗುರುಕುಲವಾಸದ ಹಾಗೆ' 'ಋಷ್ಯಾಶ್ರಮದ ಹಾಗೆ' ಎಂದು ಹೇಳುತ್ತಾರೆ. ಈ ಮಾತು ಸತ್ಯವೆಂದು ಎಲ್ಲಾ ವಿದ್ಯಾರ್ಥಿಗಳಿಗೂ ಭಾಸವಾಗಿದೆ. ಭಟ್ಟರು ವಿದ್ಯಾರ್ಥಿಗಳೊಂದಿಗೆ ಹೇಗೆ ಹೊಂದಿಕೊಂಡಿರುತ್ತಾರೆ ಎಂದು ತಿಳಿಯಲು ಅವರೇ ಹೇಳಿದ ಮಾತುಗಳನ್ನು ಉದಾಹರಣೆಯಾಗಿ ಕೊಡಬಹುದು. ಮೈಸೂರಿನಲ್ಲಿರುವಾಗ ಯಾರಾ ದರೂ ಭಟ್ಟರೆಲ್ಲಿ ಎಂದು ಕೇಳಿಕೊಂಡು ಬಂದಾಗ 'ಓ ಅಲ್ಲಿ ನೋಡಿ ಅಲ್ಲಿ ಒಂದೈವತ್ತು ಹುಡುಗರುನಗುತ್ತಾ ಇದ್ದಾರೆ ನೋಡಿ. ಅಲ್ಲೇ ಇರಬೇಕು' ಎಂದು ಹೇಳುತ್ತಿದ್ದರಂತೆ. ಹತ್ತಿರ ಬಂದು ನೋಡಿದಾಗ ವಿದ್ಯಾರ್ಥಿಗಳೊಂದಿಗೆ ನಗುತ್ತಾ ಮಾತನ್ನಾಡುತ್ತ ಇರುವ ಭಟ್ಟರನ್ನು ಕಾಣುತ್ತಿದ್ದರಂತೆ. ಭಟ್ಟರು ಯಾವ ಕ್ಲಾಸಿನಲ್ಲಿ ಪಾಠ ಮಾಡುತ್ತಿದ್ದಾರೆಂದು ತಿಳಿಯುವುದೂ ಸುಲಭ. ಯಾವ ಕ್ಲಾಸಿನಲ್ಲಿ ನಗು ಕೇಳಿಬರು ತ್ತದೋ ಆ ಕ್ಲಾಸಿನಲ್ಲಿ ಭಟ್ಟರಿದ್ದಾರೆಂದು ಸುಲಭವಾಗಿ ತಿಳಿಯಬಹುದು ಎಂದು ಅವರೇ ಹೇಳುವ ಮಾತಿನ ಸತ್ಯತೆ ಅವರ ವಿದ್ಯಾರ್ಥಿಗಳಾಗಿದ್ದುಕೊಂಡು ನಕ್ಕು ಆನಂದಿಸಿದವರೆಲ್ಲರಿಗೂ ಗೊತ್ತು.

ಯಾರನ್ನೇ ಆಗಲಿ, ಯಾರ ಲೇಖನವನ್ನೇ ಆಗಲಿ, ಪುಸ್ತಕವನ್ನೇ ಆಗಲಿ 'ಚೆನ್ನಾಗಿಲ್ಲ' ಎಂದು ಅವರ ಎದುರಿನಲ್ಲೇ ಕಟುವಾಗಿ ಹೇಳುವ ಪ್ರವೃತ್ತಿ ಭಟ್ಟರ ಜಾಯಮಾನಕ್ಕೆ ಒಗ್ಗದು. ನಾವು 'ಸೆಮಿನಾರ್' ಪೇಪರ್ ಓದಿ ಮುಗಿಸಿದಾಗಲೂ ಅಷ್ಟೇ, ಎಲ್ಲಾ ಮುಗಿದ ಮೇಲೆ 'ಚೆನ್ನಾಗಿ ಬರೆದಿದ್ದೀರಪ್ಪಾ' ಎನ್ನುತ್ತಾ ಕೆಲವು ಸಲಹೆಗಳನ್ನು ಕೊಡುವುದು ಅವರ ಸ್ವಭಾವ. ಆ ದಿನದ ಪ್ರಬಂಧ ಹೇಗಿತ್ತು ಎಂದು ತಿಳಿಯಲು ನಾಲ್ಕಾರು ದಿನ ಹೋಗಬೇಕು. ಪಾಠ ಮಾಡುವಾಗ ಪಾಠದ ಮಧ್ಯೆ ಎಲ್ಲಾದರೂ ವ್ಯಂಗ್ಯವಾಗಿ ತಮ್ಮ ನಿಜವಾದ ಅಭಿಪ್ರಾಯ ಹೇಳುವುದಿದೆ. 'ಗುಣವನ್ನು ಎತ್ತಿಹಿಡಿಯಬೇಕು, ಪ್ರೋತ್ಸಾಹಿಸಬೇಕು.' ಇದು ಅವರ ದೃಷ್ಟಿ. ಹೀಗೆ ಪ್ರೋತ್ಸಾಹಿಸುತ್ತಿರುವುದರಿಂದಲೇ 'ಮಂಗಳಗಂಗೋತ್ರಿ'ಯಿಂದ ಬಿಡುಗಡೆಯಾಗು ತ್ತಿರುವ ಪುಸ್ತಕಗಳ ಸಂಖ್ಯೆ ಅಚ್ಚರಿ ತರುವಂತಹುದಾಗಿದೆ. ಭಟ್ಟರದು ವಿಶಾಲಗುಣ. ಯಾವ ಪಂಥಕ್ಕೂ ಸೇರಿದವರಲ್ಲ. ಎಲ್ಲಾ ಪಂಥದಲ್ಲೂ ಹಿರಿಮೆಯನ್ನು ಗುರುತಿಸುವ ಹಿರಿತನ ಪರಮೇಶ್ವರ ಭಟ್ಟರದು, ನವ್ಯಕವಿಗಳು ಜೀವನವನ್ನು ದಾರುಣವಾಗಿ ಚಿತ್ರಿಸಿದ್ದಾರೆ, ಆಳವನ್ನು ಹೊಕ್ಕು ನೋಡುತ್ತಾರೆ, ಅವರ ಅಭಿವ್ಯಕ್ತಿ ತುಂಬಾ ಶಕ್ತಿಪೂರ್ಣ. ಆದರೆ ಸ್ವಲ್ಪ ಅರ್ಥವಾಗುವಂತೆ ಬರೆಯಬೇಕು ಅಷ್ಟೆ ಎಂದು ತರ ಗತಿಯಲ್ಲಿ ಅವರು ಹೇಳಿದ ಮಾತು ಅವರ ಸಮನ್ವಯದೃಷ್ಟಿಯನ್ನು ಪ್ರತಿನಿಧೀಕರಿಸುತ್ತದೆ.

'ಅಕ್ಷರ ಹೊಸ ಕಾವ್ಯ'ದ ವಿಮರ್ಶೆ ಪ್ರತಿವಿಮರ್ಶೆಗಳು ವೃತ್ತಪತ್ರಿಕೆಯಲ್ಲಿ ಬರುತ್ತಿದ್ದ ಕಾಲ, ಪರಮೇಶ್ವರ ಭಟ್ಟರ ವಿಷಯವೂ ಬಂದಾಗ 'ಪಾಪದ ಭಟ್ಟರು' ಎಂದರು ಲಂಕೇಶರು. ಬೆಂಗಳೂರಿನಲ್ಲಿ ಸಾಹಿತ್ಯ ಸಮ್ಮೇಳನದ ಸುವರ್ಣ ಮಹೋತ್ಸವದಲ್ಲಿ ಮಾಸ್ತಿ ಅವರು 'ಪಾಪದ ಭಟ್ಟರು' ಎಂದರು. ಎಲ್ಲರಿಗೂ ಪಾಪದ ಭಟ್ಟರಾದ್ದರಿಂದಲೇ, ಎಲ್ಲರಿಗೂ ಬೇಕೆನ್ನಿಸಿಕೊಂಡು ಎಲ್ಲರಿಂದಲೂ ಕಲಾಸೇವೆ ಮಾಡಿಸುತ್ತಿದ್ದಾರೆ.

ಭಟ್ಟರು ಸ್ವಲ್ಪ ಗಿಡ್ಡ ವ್ಯಕ್ತಿ. ವಯಸ್ಸು ತಕ್ಕಷ್ಟಾಗಿದೆ. ವಿಶೇಷ ಸಮಾರಂಭವಿದ್ದಾಗ, ತುಂಬಾ ಕೆಲಸ ಗಳಿದ್ದಾಗ ಮನೆಯಿಂದ ಎತ್ತರದಲ್ಲಿರುವ ಆಫೀಸಿಗೆ, ಆಫೀಸಿನಿಂದ ಮನೆಗೆ ಪುಟ್ಟ ಪಾಪನಂತೆ ಓಡಾಡು ತ್ತಿದ್ದಾಗ ನಗುಬರುತ್ತಿದ್ದರೂ ಅವರು ಸಾಹಿತ್ಯಕ್ಕಾಗಿ, ಸಾಹಿತಿಗಳ ಶ್ರೇಯಸ್ಸಿಗಾಗಿ ಕಷ್ಟಪಡುತ್ತಿದ್ದುದನ್ನು ನೋಡಿ 'ಪಾಪ' ಎನ್ನಿಸುತ್ತದೆ.

"ಮನೆಮನೆಗೆ ಸರಸ್ವತಿ"ಯ ಸಮಯ ವಿದ್ಯಾರ್ಥಿಗಳು ಮನೆಮನೆಗೆ ಪುಸ್ತಕ ಹೊತ್ತು ಸಾಗುತ್ತಿದ್ದಾಗ ಇವರೂ ಪುಸ್ತಕವನ್ನು ಹೊತ್ತು ಸಾಗಿದರು. ಮಧ್ಯಾಹ್ನದ ಬಿರುಬಿಸಿಲಿನಲ್ಲಿ ಬಿಳಿ ಬಣ್ಣದ ಮುಖ ಕೆಂಪಾಗಿ ಬೆವರು ಸುರಿಯುತ್ತಿದ್ದರೂ ನಗುನಗುತ್ತ ನಮ್ಮನ್ನು ಹುರಿದುಂಬಿಸಿದರು. ಅವರ ಪುಸ್ತಕದ ಹೊರೆಯನ್ನು ನಾವು ತೆಗೆದುಕೊಳ್ಳಲು ಯತ್ನಿಸಿದಾಗ, 'ಏನು ಪರವಾಗಿಲ್ಲಪ್ಪಾ ಭಾರವಿಲ್ಲ' ಎನ್ನುತ್ತಾ 'ಇಲ್ಲಿ ಕೊಡ್ರಪ್ಪಾ. ಈ ಬ್ಯಾಗಲ್ಲಿ ಜಾಗ ಇದೆ' ಎಂದು ನಮ್ಮ ಹೊರೆಯನ್ನೇ ತೆಗೆದುಕೊಂಡರು.

'ಕನ್ನಡ ಸಂಘ'ದ ಸಹಾಯಾರ್ಥವಾಗಿ 'ತಾಳಮದ್ದಳೆ' ಕಾರ್ಯಕ್ರಮದ ಏರ್ಪಾಡಾಗಿತ್ತು. ಅದಕ್ಕೆ ಹಣ ಸಂಗ್ರಹಿಸಲು ಟಿಕೇಟು ಪುಸ್ತಕ ಹಿಡಿದುಕೊಂಡು ಭಟ್ಟರು ನಮ್ಮೊಂದಿಗೆ ಮನೆಮನೆಗೆ ಅಲೆದರು. ಭಟ್ಟರ ಮುಖ ನೋಡಿದ ಮೇಲೆ ಇಲ್ಲವೆನ್ನುವವರಾರು? 'ನೀವು ಇವರನ್ನು ಕರೆದುಕೊಂಡು ಬರಬಾರ ದಾಗಿತ್ತು. ಉರಿಬಿಸಿಲು, ಪಾಪ!' ಎಂದು ಭಟ್ಟರ ಕೆಂಪಾದ ಮುಖ ನೋಡಿ ನಮ್ಮನ್ನು ಹಲವರು ಆಕ್ಷೇಪಿಸಿದಾಗ ನಾವು ಏನು ಹೇಳುವುದು ಎಂದು ತೋಚದೆ ಸುಮ್ಮನಾದೆವು. 'ಪರ್ವಾಗಿಲ್ಲಪ್ಪಾ. ಹುಡುಗರಿದ್ದಾರೆ. ಹೀಗೆ, ಆಗುತ್ತೆ ಬಿಸಿಲೇನು ಮಹಾ!' ಎಂದು ನಗುತ್ತಾ ನುಡಿದರು. ಭಟ್ಟರು ತಾಳ ಮದ್ದಳೆಯ ಕಾರ್ಯಕ್ರಮದಿಂದ ರಾತ್ರಿಯಿಡೀ ನಿದ್ದೆ ಬಿಟ್ಟಿದ್ದರೂ ಮರುದಿನ ಬೆಳಗ್ಗೆ 'ಸಮುತೆಂತೊ' ಕಲಾವಿದರಿಗೆ ತಕ್ಕ ವ್ಯವಸ್ಥೆ ಮಾಡಲು ತೆರಳಿದರು. ದಿನವಿಡೀ ಬಿಡುವಿಲ್ಲದೆ ಇದ್ದರೂ ಸಂಜೆಯ ನಾಟಕಕ್ಕೂ ಬಂದರು. ಆಯಾಸವಾಗಿದ್ದರೂ ತೋರ್ಪಡಿಸಿಕೊಳ್ಳುವ ಸ್ವಭಾವ ಭಟ್ಟರಿಗಿಲ್ಲ.

'ಅಂತರ ಕಾಲೇಜ್ ಯಕ್ಷಗಾನ ಸ್ಪರ್ಧೆ' ಎಡೆಬಿಡದೆ ಮೂರು ದಿನ ನಡೆಯಿತು. ನಾವು ಬಿಡುವು ಮಾಡಿಕೊಂಡೋ, ಅಥವಾ ಎಲ್ಲಾ ಮುಗಿದಲ್ಲಿ ಅನಂತರವೋ ಊಟಮಾಡುತ್ತಿದ್ದೆವು. ಕೆಲಸದ ನಡುವೆ ಬಿಡುವಿಲ್ಲದ್ದರಿಂದ ಭಟ್ಟರು ಮೂರು ದಿನವೂ ಊಟಮಾಡಿರಲೇ ಇಲ್ಲವೆಂದು ಕೊನೆಗೆ ತಿಳಿಯಿತು. ಊಟವಿಲ್ಲದಿದ್ದರೂ ಮುಖದ ಮಂದಹಾಸ ಮಾಯವಾಗುವುದಿಲ್ಲ; ಸರಸದ ಮಾತು ತಡೆಯುವುದಿಲ್ಲ.

ಒಂದು ದಿನ ಎರಡು ಗಂಟೆಗೆ ಪರಮೇಶ್ವರ ಭಟ್ಟರ ಕ್ಲಾಸು. ನಗುತ್ತಾ ಬಂದರು ಎಂದಿನಂತೆ. 'ಇನ್ನೂ ಊಟ ಆಗಿಲ್ಲಪ್ಪಾ, ಯಾರೋ ಬಂದರು ಮಾತಾಡ್ತಾ ಇದ್ದೆ. ಗಂಟೆ ಆಗೋಯ್ತು ಬಂದ್ಬಿಟ್ಟೆ' ಎಂದರು. 'ಅಯ್ಯೋ ಪಾಪ' ಎನ್ನಿಸಿತು ನಮಗೆಲ್ಲ. ಆ ದಿನ ಅಮರು ಕವಿಯ ಶೃಂಗಾರ ಮುಕ್ತಕಗಳ ಕನ್ನಡಾನುವಾದ 'ಪ್ರೇಮಾರಾಧನ'ದ ಸ್ವಾರಸ್ಯ ಹೇಳುತ್ತೇನೆ ಎಂದಿದ್ದರು ಭಟ್ಟರು. ಹೇಗಾಗುತ್ತೋ ಏನೋ ಎಂದು ನಮ್ಮಲ್ಲಿ ಹಲವರು ಯೋಚಿಸಿದೆವು. ಆದರೆ ಎಂದಿನಂತೆ ಅಷ್ಟೇ ಸ್ವಾರಸ್ಯಯುತವಾಗಿ ಪಾಠ ಮಾಡಿದರು, ನಕ್ಕು ನಗಿಸಿದರು. ಅವರ ಹಸಿವು ಪಾಠದ ಸ್ವಾರಸ್ಯವನ್ನು ಕೆಡಿಸಲಿಲ್ಲ. ಅವರ ಪಾಠದ ವೈಖರಿ ಅವರಿಗೆ ಊಟ ಆಗಿಲ್ಲ ಎಂಬ ವಿಚಾರವನ್ನೇ, ನಮ್ಮಿಂದ ಮರೆಸಿತು. ಗಂಟೆ ಹೊಡೆದ ಮೇಲೆ 'ನಾಲ್ಕು ಗಂಟೆಗೆ ಸಭೆ ಇದ್ಯಪ್ಪಾ. ಎಲ್ಲಾ ಬಂದ್ಬಿಡಿ. ನಾನೀಗ್ಲೇ ಹೋಗಿ ಊಟಮಾಡಿಕೊಂಡು, ಬಂದ್ಬಿಡ್ತೇನೆ' ಎಂದು ನಗುತ್ತಾ ಹೋದಾಗ, 'ಎಂತಹ ಹಿರಿಯ ವ್ಯಕ್ತಿ' ಎಂದು ನಮ್ಮ ನಮ್ಮಲ್ಲೇ ಅಂದುಕೊಂಡೆವು. ಹೀಗೆ ಕಾರ್ಯಬಾಹುಳ್ಯದಿಂದಲೂ, ಇವರ ಸಾನ್ನಿಧ್ಯ ಬಿಟ್ಟು ಹೋಗಲು ಮನಸ್ಸಿಲ್ಲದೆ ಬಂದವರು ಮಾತ ನಾಡುತ್ತಾ ಕುಳಿತುಕೊಳ್ಳುವುದರಿಂದಲೂ, ಊಟಮಾಡದೆ ಇರುವ ಪ್ರಸಂಗಗಳು ಹಲವು.

ಸ್ನಾತಕೋತ್ತರ ಕೇಂದ್ರದಲ್ಲಿ ಭಟ್ಟರ 'ಇಂದ್ರಗೋಪ' ಮತ್ತು 'ಕೃಷ್ಣಮೇಘ'ಗಳ ಬಿಡುಗಡೆ. ಭಟ್ಟರ ಭಾಷಣಕ್ಕೆ ನಾಲ್ಕು ನಿಮಿಷದ ಮೊದಲು ಮೈಸೂರಿನಿಂದ ಏನೋ ಟೆಲಿಗ್ರಾಂ ಬಂತು. ವಿದ್ವತ್ಪೂರ್ಣ ವಾಗಿ ನಗುತ್ತಾ ನಗಿಸುತ್ತಾ ಭಾಷಣ ಮಾಡಿದರು. ಸಭೆ ಮುಗಿದು ಎಲ್ಲರನ್ನೂ ಅದೇ ಉತ್ಸಾಹದಿಂದ ಬೀಳ್ಕೊಟ್ಟ ಮೇಲೆ ತಂತಿಯ ನಿಜ ವೃತ್ತಾಂತ ತಿಳಿಸಿದರು. ಅವರ ಮಗನಿಗೆ ಏನೋ, ಸ್ವಲ್ಪ ಪೆಟ್ಟು ತಗಲಿದೆ ಎಂದು ಹೇಳುತ್ತಿದ್ದಂತೆಯೇ ಕಣ್ಣಂಚಿನಲ್ಲಿ ನೀರು ಹರಿದು, ಮಾತು ಮೆಲ್ಲಗಾಯಿತು. ಕೆಲವೇ ಹೊತ್ತಿನಲ್ಲಿ ಸುಧಾರಿಸಿಕೊಂಡು ಆಫೀಸಿನಲ್ಲಿ ತಕ್ಕ ವ್ಯವಸ್ಥೆ ಮಾಡಿ ಬೇಗನೇ ಮೈಸೂರಿಗೆ ತೆರಳಿದರು. ವೇದನೆ ಒಳಗೇ ಇದ್ದರೂ ನಗುನಗುತ್ತಾ ಮಾತನ್ನಾಡಿ ಕೆಲಸವನ್ನೆಲ್ಲಾ ಮಾಡುತ್ತಿರುವ ಪರಮೇಶ್ವರ ಭಟ್ಟರ ಪಾಡನ್ನು ನೋಡಿ ಗುರುಗಳೂ, ನಾವೂ 'ಛೇ! ಎಂತಹ ಜನ' ಎಂದು ಉದ್ಗರಿಸಿದೆವು.

ಒಮ್ಮೊಮ್ಮೆ ಕ್ಲಾಸಿನಲ್ಲಿ ಕನ್ನಡದ ಅವಸ್ಥೆ ನೆನಪಿಗೆ ಬಂದು ಅದನ್ನು ನಮ್ಮಲ್ಲಿ ತೋಡಿಕೊಳ್ಳುತ್ತಾರೆ. 'ಕನ್ನಡದ ಉದ್ಧಾರ ನಿಮ್ಮಿಂದಲೇ ಆಗಬೇಕು' ಎಂದು ಹೇಳಿ ಏನೇನು ಕೆಲಸ ಆಗಲಿಕ್ಕಿದೆ ಎಂದು ಕಳ

ಕಳೆಯಿಂದ ನುಡಿಯುತ್ತಾರೆ. ಕನ್ನಡಕ್ಕೆ ಕನ್ನಡಿಗರಿಗೆ ಬೆಲೆಯಿಲ್ಲವಾಗುತ್ತಿರುವುದನ್ನು ಕಂಡು ಒಮ್ಮೊಮ್ಮೆ ಸಿಟ್ಟಿನಿಂದ ಬಹು ಜೋರಾಗಿ ಮಾತನ್ನಾಡುತ್ತಾರೆ. ನಿತ್ಯ ಕನ್ನಡ ನಾಡಿಗೆ, ಕನ್ನಡ ಬರಹಗಾರರಿಗೆ, ಕನ್ನಡ ಜನಕ್ಕೆ ಅನ್ಯಾಯವಾದಾಗ ಭಟ್ಟರ ಮುಖ ಸಿಟ್ಟಿನಿಂದ ಕೆಂಪಾಗುತ್ತದೆ. ಕ್ರೋಧದಿಂದ ಕೆಂಡದ ನುಡಿಗಳನ್ನಾಡುತ್ತಾರೆ.

ಹೀಗೆ ಶ್ರೀಯುತ ಭಟ್ಟರ ಹಿರಿಯ ವ್ಯಕ್ತಿತ್ವವನ್ನು, ಅವರು ನಮ್ಮೊಂದಿಗಿದ್ದಾಗ ನಡೆದ ರಸನಿಮಿಷಗಳನ್ನು ಹೇಳುತ್ತಾ ಹೋದಷ್ಟೂ ಅಪೂರ್ಣವೇ. ಪರಮೇಶ್ವರ ಭಟ್ಟರದು ಬಹುಮುಖ ಪ್ರತಿಭೆ. ತೀರಾ ಹಿರಿಯ ವ್ಯಕ್ತಿ ಶ್ರೀ ಭಟ್ಟರು. 'ನನ್ನ ಜೀವನ ಒಂದು ತೆರೆದಿಟ್ಟ ಪುಸ್ತಕ. ಯಾರೂ ಅದನ್ನು ಓದಿಕೊಳ್ಳಬಹುದು' ಎಂದಿದ್ದರು ಭಟ್ಟರು ಒಮ್ಮೆ. ಆದರೆ ಆ ಪುಸ್ತಕ ಓದುವ ಅರ್ಹತೆ ನಮಗೆ ಇನ್ನೂ ಬಂದಿಲ್ಲ.

ಭಟ್ಟರ ಹಿರಿತನಕ್ಕೆ ದಕ್ಷಿಣ ಕನ್ನಡದಲ್ಲಿ ಅವರು ಪಡೆದ ಜನಾದರಣೆಯೇ ಸಾಕ್ಷಿ. ಅವರ ಕಾರ್ಯದಕ್ಷತೆಗೆ ಜಿಲ್ಲೆಯಲ್ಲಿ ಇತ್ತೀಚೆಗೆ ಬಿರುಸಿನಿಂದ ನಡೆಯುತ್ತಿರುವ ಸಾಹಿತ್ಯಕ ಚಟುವಟಿಕೆಗಳೇ ಸಾಕ್ಷಿ. ಭಟ್ಟರು ಮಂಗಳೂರಿಗೆ ಬಂದಾಗ ಮಂಗಳೂರಿನ ಸಾಹಿತ್ಯಜ್ಞರಿಗೆ ಹೊಸ ಹುರುಪು ಬಂತು. ಶ್ರೀ ಪರಮೇಶ್ವರರು 'ಮಾನಸಗಂಗೋತ್ರಿ'ಯಿಂದ 'ಮಂಗಳಗಂಗೋತ್ರಿ' ಯತ್ತ ಹರಿದು ಬಂದಾಗ ಅಲ್ಲಿಯ ಜನತೆ 'ಪುರದ ಪುಣ್ಯಂ ಪುರುಷರೂಪಿಂದೆ ಪೋಗುತಿದೆ' ಎಂದು ದುಃಖಿಸಿರಬೇಕು. ಆದರೆ ಮಂಗಳೂರಿಗೆ ಬಂದು ಸಾಹಿತ್ಯಜ್ಞರಿಗೆ ನವಚೈತನ್ಯವನ್ನಿತ್ತು, ಉತ್ತೇಜಿಸಿದ ಭಟ್ಟರು ಇಲ್ಲಿಯ ಜನತೆಗೆ 'ಪ್ರಾಣಂಬರ್ಪಾಕೃತಿಯೊಳ್' ಬಂದರು ಎಂದೆನಿಸಿದ್ದರೆ ಆಶ್ಚರ್ಯವೇನು?

# ೧೨. ಪ್ರೊ. ಎಸ್. ವಿ. ಪಿ. ನಾನು ಕಂಡಂತೆ

ಯು. ಶಂಕರನಾರಾಯಣ ಭಟ್ಟ

ಪಶ್ಚಿಮ ಘಟ್ಟದಲ್ಲಿ ಹುಟ್ಟಿದ ನೇತ್ರಾವತಿ ಪರ್ವತವನ್ನಿಳಿದು ಹತ್ತಾರು ಮೈಲುಗಳಷ್ಟು ಬಯಲನ್ನು ಹಾದು ಪ್ರಾಣಿ ಪಕ್ಷಿ ಸಸ್ಯಗಳಿಗೆ ತನ್ನ ಅಮೃತೋದಕವನ್ನಿತ್ತು ಪಡುಗಡಲ ದಕ್ಷಿಣ ಕನ್ನಡಕ್ಕೆ ಬಂದು ಅಲ್ಲಿಯ 'ಉಪ್ಪುಗಡಲನ್ನು' ಕಂಡು ಸಾಫಲ್ಯ ಪಡೆಯಿತೆನ್ನಬೇಕು. ಎಸ್, ವಿ. ಪಿ.ಯವರ ಈ ಜೀವನವಾಹಿನಿ ವಿದ್ಯಾಪಿಪಾಸುಗಳ ಆಸರನ್ನು ತೀರಿಸುತ್ತಲೂ ಇನ್ನೂ ಕುಂದದೆ ಮಡುಗಟ್ಟಿ ವರ್ಧಿಸುತ್ತಿರುವುದು ಕನ್ನಡ ನಾಡವರ ಪುಣ್ಯವೆಂದರೆ ಅತಿಶಯೋಕ್ತಿಯಿಲ್ಲ. ರನ್ನನ ಮಾತಿನಂತೆ 'ಪಲರ್ ಕೊಂಡು ಪೋಗೆಯುಂ ಕುಂದದೆ ಪಜ್ಜಳಿಸುವ' ಈ ಜ್ಯೋತಿ ಕರ್ನಾಟಕ ದೇವಿಯ ಪೂಜೆಯಾರತಿ. ವಿವಿಧ ಕೃತಿಯಾರತಿಗಳಲ್ಲಿ ಬೆಳಗುವ ಈ ಜ್ಯೋತಿ ಒಂದರಿಂದ ಮಿಗಿಲು ಇನ್ನೊಂದೆಂಬಂತೆ ಕನ್ನಡಮಾತೆಯ ದೇಗುಲವನ್ನು ಬೆಳಗಿಸಿದೆ.

ಸ್ವಾನುಭವದ ಬೆಳಕಿನಲ್ಲರಿತ ನೈಜವಿಚಾರಗಳಿವೆಂದು ತಿಳಿಸಲು ಅಭಿಮಾನ ಪಡುತ್ತೇನೆ. ಅಮೃತ ಬಿಂದುವಿನಿಂದ ಅದರ ಸ್ವಾದುವನ್ನರಿತು ಅಮೃತತ್ವವನ್ನು ಪಡೆಯುವುದು ನಿಜವಾದರೆ ಅಲ್ಪಕಾಲದ ಶಿಷ್ಯತ್ವವಾದರೂ ಹಿರಿಯರ ಅಂತಸ್ಸತ್ತ್ವದ ಬಿಂದುಮಾತ್ರವನ್ನರಿತರೆ ಅದು ಮಿಥ್ಯವಲ್ಲ. ಪರಮೇಶ್ವರನು ಗಂಗೆಯನ್ನು ಮಾತ್ರ ವಹಿಸಿದ್ದರೆ ಈ ಪರಮೇಶ್ವರರು ಮಂಗಳ ಗಂಗೆಯನ್ನು ಶಿರಸಾವಹಿಸಿ ಈ ನಾಡನ್ನು ಪಾವನಗೊಳಿಸಿದುದು ವಿಶಿಷ್ಟವೆನಿಸುತ್ತದೆ.

ಮಂಗಳ ಗಂಗೋತ್ರಿಯನ್ನು ಮಂಗಳಗೊಳಿಸಿ ಪೋಷಿಸಿದ ಕೀರ್ತಿಗೆ ಸಂದೇಹವಿಲ್ಲ. ಕನ್ನಡತನಕ್ಕಾಗಿ ಕನ್ನಡಕ್ಕಾಗಿ ಅವರು ಕೈಗೊಂಡ ಸಕ್ರಿಯ ಚಟುವಟಿಕೆಗಳು ನಾಡಪ್ರೇಮಿಯಿಂದ ಅನುಸರಿಸತಕ್ಕವುಗಳೇ. ಸರಸ್ವತಿಯನ್ನು ಸ್ನಾತಕೋತ್ತರ ಕೇಂದ್ರಕ್ಕೆ ಬಂದವರಿಗೆ ಮಾತ್ರವಲ್ಲ ಮನೆಮನೆಗೆ ಸರಸ್ವತಿಯನ್ನು ಸ್ವಸ್ಫೂರ್ತಿಯಿಂದ ತಲುಪಿಸಿದ ಹೆಮ್ಮೆ ಅವರದು. ಹಿಂದಿನ ದಾಸರು ಬಾಯ್ದೆರೆಯಾಗಿ ಹೇಳುತ್ತಾ ಹೋದರೆ ಹೇಳಿಕೆಗಳ ಕಂತೆಗಳನ್ನೇ ಅಚ್ಚಳಿಯದೆ ಉಳಿಯುವಂತೆ ಮನೆಮನೆಗೆ ತಲುಪಿಸಿದ ಮೊದಲ ಕೀರ್ತಿ ಅವರಿಗೆ. ತಮ್ಮ ಸಂಗಡಿಗರೊಡನೆ ತಾವೇ ತಮ್ಮ ವೆಚ್ಚದಿಂದಲೇ 'ಪಲಚಂಪಿ' ಪ್ರಕಾಶನವನ್ನು ತೆರೆದ ಸಕ್ರಿಯ ಕನ್ನಡ ಸೇವೆ ಇನ್ನಾವುದಕ್ಕೆ ಕಡಮೆ. ಈಗಾಗಲೇ ತಮ್ಮ ಪ್ರಕಾಶನದಿಂದ ಪ್ರಕಾಶಗೊಂಡ ಹಲವು ಹೊತ್ತಗೆಗಳು ಕನ್ನಡ ನಾಡಿನಾದ್ಯಂತದಲ್ಲಿ ಬೆಳಕು ಬೀರಿವೆ.

ಅವರ ನನ್ನ ಸಂಪರ್ಕ ಕೇವಲ ಎರಡು ವರ್ಷದ ಒಳಗಿನದಾದರೂ ನನ್ನ ಜೀವನ ಪರ್ಯಂತ ನೆನಪಿನ ಮೆರುಗು ಕಳೆಯದ ನನ್ನ ಜೀವನದ ಘಟ್ಟಗಳಲ್ಲಿ ಒಂದು ಅದು. ದಿನ ನಿತ್ಯದ ಪಾಠ ಪ್ರವಚನದ ರಸದೂಟ, ರಸಋಷಿಯ ಹಾಸ್ಯ ಶೃಂಗಾರಗಳ ರಸದ ತೊರೆಯಲ್ಲಿ ಮಿಂದರೆ ಅದೇನೂ ಹೆಚ್ಚಲ್ಲ. ಸದಾ ಮುಖದಲ್ಲಿ ಬೆಳಗುವ ಮಂದಸ್ಮಿತ, ಜ್ಞಾನದ ಹೊರಬೆಳಕು, ಯಾರನ್ನೇ ಆದರೂ ಶಾಂತಗೊಳಿಸಿ ವಿನಯವುಕ್ಕಿಸುವುದು. ನನ್ನ ಅವರ ಪರಿಚಯದ ಪ್ರಥಮದಲ್ಲೇ ಅಂದರೆ ಸ್ನಾತಕೋತ್ತರ ತರಗತಿಯನ್ನು ಸೇರುವ ಸಂದರ್ಭದಲ್ಲೇ ಅವರು ಗೌರವಿಸಿ ಮಾತನಾಡಿಸಿ ತಮ್ಮ ಗರಡಿಗೆ ಸ್ವೀಕರಿಸಿದ ಘಟನೆ ಎಂದಿಗೂ 'ನಯನದೊಳಂ ಎರ್ದೆಯೊಳಂ' ಅಚ್ಚೊತ್ತಿ ನಿಲ್ಲುವುದು. ನೀನಾರ ಶಿಷ್ಯನೆಂದರೆ ಅವರ ಶಿಷ್ಯನೆನ್ನುವ ಹೆಮ್ಮೆ ನನಗೆ. ಅವರ ಶಿಷ್ಯಕೋಟಿಯಲ್ಲಿ ಕಡಲ ತೆರೆತೊಳೆದ ಸೈಕತ ಕಣದಂತೆ ನಾನೊಬ್ಬನೆಂಬ ಹಿರಿಮೆ ನನಗೆ.

ಶ್ರೀಯುತರ ಸಂದರ್ಶನ ಪಡೆಯಲು ಅವರನ್ನು ಅಧ್ಯಕ್ಷಸ್ಥಾನಕ್ಕೆ ಆಹ್ವಾನಿಸಲು ಅವರೊಡನೆ ವಿಚಾರ ವಿನಿಮಯ ಮಾಡಲು ಅವರ ಸಲಹೆ ಉಪದೇಶ ಪಡೆಯಲು ದಿನನಿತ್ಯ ಅವರ ಮನೆಗೆ ಅಲ್ಲದಿದ್ದರೆ ನಮ್ಮ ಕೇಂದ್ರಕ್ಕೆ ಬರುವ ಜನ ನೂರಾರು, ಎಲ್ಲಿಗೆ ಆಹ್ವಾನಿಸಿದರೂ ಪಾಠ ಪ್ರವಚನದ ಕಾರ್ಯಾಲಯದ ಕಾರ್ಯಭಾರ ಇತ್ಯಾದಿ ಯಾವುದೇ ಅಡೆತಡೆಯಿದ್ದರೂ ಎಲ್ಲವನ್ನೂ ಸಹಿಸಿ ಸೌಮನಸ್ಯದಿಂದ ಆಹ್ವಾನವನ್ನು ಸ್ವೀಕರಿಸಿ ಅವರೊಡನೆ ಅವರ ಹಬ್ಬಗಳಲ್ಲಿ ಬೆರೆತು ಅವರನ್ನು ಸಂತೋಷಗೊಳಿಸಿದರೇ ಅವರಿಗೆ

ತೃಪ್ತಿ. ಸಣ್ಣವರು ದೊಡ್ಡವರೆಂಬ ಭೇದವಿಲ್ಲದೆ ನಮ್ಮೂರಿನ ಹಲವಾರು ಸಾರ್ವಜನಿಕ ಹಾಗೂ ವಿದ್ಯಾ ಸಂಸ್ಥೆಗಳ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಅವರ ಹೆಸರು ಈಗಾಗಲೇ ನಮ್ಮೂರಲ್ಲೆಲ್ಲಾ ಮನೆಮಾತಾಗಿದೆ. ಅವರು ಹೀಗೆ ಅತಿಥಿಗಳಾಗಿ ಹೋಗುತ್ತಿದ್ದಾಗ ಅವರ ಶಿಷ್ಯರ ಊರುಗಳಿಗಾದರೆ ಆಯಾ ಊರಿನ ಶಿಷ್ಯರನ್ನೂ ಒಡಗೂಡಿಕೊಳ್ಳುವುದು ಅವರ ಸೌಜನ್ಯದ ಕ್ರಮವಾಗಿತ್ತು. ಹಾಗೆ ನಾವು ಕೆಲವರು ಅವರೊಡನೆ ಹೋದಲ್ಲಿ ಅವರಿಗೆ ಸಿಗತಕ್ಕ ಎಲ್ಲಾ ಆದರಾತಿಥ್ಯಗಳೂ "ಪುಷ್ಪಮಾಲಾನುಷಂಗೇಣ ಸೂತ್ರಂ ಶಿರಸಿ ಧಾರ್ಯತೇ" ಎಂದಂತೆ ನಮಗೂ ಸಹಜವಾಗಿ ದೊರೆಯುತ್ತಿತ್ತು. ಅವರ ಪರಿಚಯವನ್ನು ಜನರು ಮಾಡುವುದರೊಂದಿಗೆ ಅವರ ಶಿಷ್ಯರೆಂಬ ನಮ್ಮ ಮೇಲಿನ ಗೌರವದಿಂದ ನಮ್ಮ ಪರಿಚಯವೂ ಅವರಿಗಾಗುತ್ತಿತ್ತು. ಇಂತಹದೇ ಒಂದು ಉದಾಹರಣೆಯನ್ನು ಇಲ್ಲಿ ಸ್ಮರಿಸುತ್ತೇನೆ.

ಸಾಧಾರಣವಾಗಿ ನಮ್ಮ ಕೇಂದ್ರದಲ್ಲಿರುವಾಗ ಶುಭ್ರವಾದ ಪಂಚೆ, ಮೊಣಗಾಲನ್ನು ಮೀರಿ ನಿಲ್ಲುವ ಜುಬ್ಬ, ಹೆಗಲಿಗೊಂದು ಶಾಲು, ಮತ್ತೆ ಕನ್ನಡಕ ಇವು ಅವರ ಸಾಧಾರಣ ವೇಷ. ಮನಸ್ಸಿನ ಆಂತರ್ಯದ ಶುಭ್ರತೆಯನ್ನು ಉಡುಪೇ ಸಾರಿ ಹೇಳುವಂತಿರುತ್ತದೆ. ಅಂದು ಅವರು ನಮ್ಮೂರಿನ ಒಂದು ಪ್ರಾಥಮಿಕ ಶಾಲೆಯ ಸುವರ್ಣೋತ್ಸವಕ್ಕೆ ಅಧ್ಯಕ್ಷರಾಗಿ ಬರುವವರೆಂದು ಮೊದಲೇ ಹೇಳಿ ನಮ್ಮನ್ನೂ ಆಹ್ವಾನಿಸಿದ್ದರು. ನಾವೂ ಸಂತೋಷದಿಂದ ಆ ಸಂಭ್ರಮವನ್ನು ಎದುರು ನೋಡುತ್ತಿದ್ದೆವು. ಒಡಗೊಳ್ಳುವವರು ಬಂದಂತೆ ಶ್ರೀಯುತರು ತಮ್ಮ ಯಥಾವೇಷದಲ್ಲಿ ಹೊರಡಲನುವಾದರು. ಆಗ ನಾವು ನಮ್ಮ ಚಾಪಲ್ಯದಿಂದ 'ಸಾರ್ ನೀವು ಹೀಗೆ ಸಾದಾ ವೇಷದಿಂದ ಹೋದರೆ ನಿಮ್ಮನ್ನು ಆ ಹಳ್ಳಿಯ ಜನರು ಗುರುತಿಸುವುದು ಕಷ್ಟ. ಸೂಟನ್ನೇ ಧರಿಸಿದರೆ ಸುಲಭವಲ್ಲವೇ' ಎಂದು ಮೆಲ್ಲನೆ ಕಿರುದನಿಯೆತ್ತಿದೆವು. ನಿಮ್ಮಿಷ್ಟದಂತೆಯೇ ಆಗಲಿ ಎಂದು ಮತ್ತೆ ಹಾಗೆಯೇ ಮಾಡಿ ಹೊರಟರು. ಆಗ ನಾವವರ ಸರಳತೆಯನ್ನು ಗೊತ್ತುಹಚ್ಚಿದಂತೆ ನಮ್ಮ ಡೌಲಿನ ಅರಿವನ್ನೂ ಅವರು ಮಾಡಿಕೊಂಡಿರಬಹುದೇ ಎಂದು ನನಗೀಗ ಸಂದೇಹವಾಗುತ್ತದೆ. ಕಾರಿನಲ್ಲಿ ನಾವೆಲ್ಲಾ ಒಟ್ಟಾಗಿ ಹೋಗುತ್ತಿದ್ದಂತೆ ಆ ಮಾತು ತಮಾಷೆಗಳು ಸಾಕಷ್ಟು ನಡೆದೇ ಇದ್ದುವು.

ಸ್ಥಳವನ್ನು ತಲಪಿದಾಗ ಅದೆಷ್ಟೋ ಮಂದಿ ಅವರ ಸ್ವಾಗತಕ್ಕಾಗಿ ಹಾತೊರೆಯುತ್ತಿದ್ದು ಆತ್ಮೀಯತೆಯಿಂದ ಬರಮಾಡಿಕೊಂಡು ನಮಗೆಲ್ಲರಿಗೂ ಸತ್ಕಾರಗಳು ನಡೆದವು. ಅಧ್ಯಕ್ಷಸ್ಥಾನದ ಅವರ ಅಮೋಘ ನಿರರ್ಗಳ ಭಾಷಣ ಆ ಊರ ಜನರನ್ನು ತನ್ಮಯವಾಗಿಸಿತ್ತು. ಹಳೆ ಹೊಸ ವಿಚಾರಗಳು ಹೊಸತರಲ್ಲಿ ಮತ್ತೆ ಹೊಸತೆನಿಸುವ ಸಂದರ್ಭಕ್ಕೆ ಸರಿಹೋಗುವ ಸಂಗತಿಗಳು ಪಂಪರನ್ನಾದಿಗಳ ಮಾತುಗಳು ಪ್ರಕೃತ ರಾಜಕೀಯ ಎಡೆಯೆಡೆಯಲ್ಲಿ ನುಗ್ಗಿ ನುಸುಳುವ ಹಾಸ್ಯ ಚಟಾಕಿ ಇವೆಲ್ಲಾ ಸೇರಿ ಆ ಭಾಷಣ ಒಂದು ರಸದೂಟವಾಗಿತ್ತು. ಆ ಭಾಷಣದ ಮೆಚ್ಚುಗೆಯ ಕುರಿತು ಜನರ ಪರಸ್ಪರ ಮಾತನ್ನು ನಾನು ಕೇಳಿ ಹರ್ಷಗೊಂಡೆ. ನಮ್ಮ ಗುರುಗಳನ್ನು ಹೊಗಳಿದರೆ ನಮ್ಮನ್ನು ಹೊಗಳಿದಂತಲ್ಲವೇ. ಇದಾದ ಬಳಿಕ ನಮ್ಮೊವರೊಬ್ಬ ಪೂಜ್ಯ ವೃದ್ಧರಲ್ಲಿ ಅವರು ಮಾಡಿದ ಸಂಭಾಷಣೆ ಎಂದೂ ಮರೆಯತಕ್ಕುದಲ್ಲ:

ಅವರು—ನಮಸ್ಕಾರ ಸ್ವಾಮಿ !

ಇವರು—ನಮಸ್ಕಾರ, ನಮಸ್ಕಾರ. ಹ್ಯಾಗಿದ್ದೀರಿ ಸೌಖ್ಯತಾನೆ ಈ ವೃದ್ಧಾಪ್ಯದಲ್ಲಿ?

ಅವರು—ಸೌಖ್ಯ ಏನು ಮಣ್ಣು. ನಾವು ನೀವು ಎಲ್ಲ ಒಂದೆ ಅಲ್ಲವೆ ನಮ್ಮ ಮಕ್ಕಳೆಲ್ಲಾ ನಿಮ್ಮ ಶಿಷ್ಯರು, ಹೇಗಿದ್ದಾರೆ?

ಇವರು—ನೋಡಿ (ನಮ್ಮನ್ನು ತೋರಿಸಿ) ಇಲ್ಲೇ ಇದ್ದಾರೆ ಚಲ್ಲಣ ಷರ್ಟ್ ಧರಿಸಿ......ಎಂದಾಗ ಅವರ ಆ ವ್ಯಂಗ್ಯದ ಹಾಸ್ಯದ ನುಡಿಯೊಮ್ಮೆ ನಗೆಯೆಬ್ಬಿಸಿತು. ನಾವೆಲ್ಲರೂ ನಕ್ಕೆವು ಎರಡು ಮಿನಿಟು. ನಗೆಗೆ ಬೇರೇನೂ ಕಾರಣವಲ್ಲ ನಾವು ಸಾಕಷ್ಟು ಗಮ್ಮತ್ತಾಗಿದ್ದುದೇ......ನಮ್ಮ ಹಿರಿಯರಿಗೂ ಅದರ ಅರ್ಥ ಚೆನ್ನಾಗಿ ಆಗಿತ್ತು,

ಅವರು—ನಾನು ಹಾಗಲ್ಲ ವಿಚಾರಿಸಿದ್ದು ಕಲಿಯುವಿಕೆಯಲ್ಲಿ ಹೇಗಿದ್ದಾರೆ? ಚೆನ್ನಾಗಿ ಕಲಿಯುತ್ತಾರೋ ಅಂದೆ.

ಇವರು—ಪರವಾಯಿಲ್ಲ, ಚಿಕ್ಕವರಲ್ಲವೇ ಉತ್ಸಾಹವಿದೆ; ಕಲಿಯುವರು ಎಂದಾಗ ನಮ್ಮ ಮನಸ್ಸಿ

ಗೊಮ್ಮೆ ಸಮಾಧಾನವಾಯಿತು. ಮತ್ತೆ ಗೃಹಸ್ಥಿಕೆ ರಾಜಕೀಯ ಎಲ್ಲಾ ಮಾತುಕತೆಗಳಾದುವು. ಬಹಳ ಸರಸವಾಗಿಯೇ ಶ್ರೀಯುತರು ಅವರೊಡನೆ ಅವರಂತಾಗಿ ಮಾತನಾಡಿದ ಕ್ರಮ ಮನಮೆಚ್ಚುವಂತಹುದು. ಜನರೊಡನೆ ಬೆರೆಯುವ ತಿಳಿನಗೆಯಿಂದ ಹೃದಯ ಬಿಚ್ಚಿ ನಿಷ್ಕಲ್ಮಷವಾಗಿ ಮಾತಾಡುವ ಅವರ ರೀತಿ ಬಹಳ ವಿಶಿಷ್ಟಯೆಂಬುದಕ್ಕಾಗಿ ಈ ಚಿಕ್ಕ ಉದಾಹರಣೆ.

ಹೀಗೆ ಬೇರೆ ಬೇರೆ ಕಡೆಯ ಅವರ ಸಿಹಿ ಕಹಿ ಅನುಭವಗಳನ್ನು ನಮ್ಮೊಡನೆ ಹೇಳಿ ಹಂಚಿಕೊಳ್ಳುವುದು ಅವರ ರೂಢಿ. ಅವರಲ್ಲಿ ಪಾಲ್ಗೊಳ್ಳುವುದು ನಮಗೊಂದು ರುಚಿಯೂಟ. ಆ ಅನುಭವಗಳು ನಮಗೆ ಮಾರ್ಗ ದರ್ಶನ ಮಾಡುವ ಅರಿವಿನ ತುಣುಕು ದೀಪಿಗೆಗಳಾಗಿದ್ದುವೇ ಹೊರತು ಪೊಳ್ಳು ಹರಟೆಗಳೆಂದೂ ಆಗಿರಲಿಲ್ಲ. ಅವರ ಅನುಭವ ನಮಗೊಂದು ಪಾಠ; ಅವರ ಜೀವನ ನಮಗೊಂದು ಮಾರ್ಗದರ್ಶನ.

ಶ್ರೀಯುತರ ಪ್ರತಿಭೆ ಅಭಿರುಚಿಗಳು ಬಹುಮುಖಿ. ಅವರಿಗೆ ಅಭಿರುಚಿಯಿಲ್ಲದ ಕಲೆಯೇ ಇಲ್ಲ. ಸಾಹಿತ್ಯವನ್ನು ಗುಪ್ತ ಗುಡಿಯೊಳಗಿಟ್ಟು ಆರಾಧಿಸುವ ಕತ್ತಲೆಕೋಣೆಯ ಪೂಜಾರಿಯಂತಲ್ಲ ಅವರು. ಹತ್ತು ಜನರಿಗೆ ಬೇಕಾದವರು. ನಾಟಕ ಯಕ್ಷಗಾನಗಳಲ್ಲಿ ಅತ್ಯಂತ ಅಭಿರುಚಿ ಅಂತೆಯೇ ನಮ್ಮಲ್ಲಿ ಅಭಿರುಚಿಯಿರುವ ಕೆಲವರನ್ನು ಆಯ್ದು 'ಕೇಂದ್ರದ ದಿನ' ದಂದು ಯಕ್ಷಗಾನವನ್ನು ನೋಡಿ ಸಂತುಷ್ಟರಾದರೂ ಈ ವೃದ್ಧಾಪ್ಯದಲ್ಲಿಯೂ ರಾತ್ರಿಯಿಡೀ ಕುಳಿತು ಆಲಿಸಿ ಕೇಳುವ ನೋಡುವ ಪ್ರೋತ್ಸಾಹಿಸುವ ಉತ್ಸಾಹ ಅವರಿಗೆ. ಅಂತೆಯೇ ಪ್ರಮುಖ ಅರ್ಥಧಾರಿಗಳನ್ನು ಕೂಡಹಾಕಿ 'ತಾಳಮದ್ದಳೆ'ಯನ್ನು ಅಮೋಘವಾಗಿ ಜರಗಿಸಿದ್ದಾರೆ. ಅಂತರ ಕಾಲೇಜು ಯಕ್ಷಗಾನ ನಾಟಕ ಸ್ಪರ್ಧೆಯನ್ನೇರ್ಪಡಿಸಿದುದೂ ಅವರ ಆ ಮೆಚ್ಚುಗೆಯನ್ನು ವ್ಯಕ್ತಗೊಳಿಸುತ್ತದೆ. ಸಾಹಿತ್ಯಗೋಷ್ಠಿ, ಕವಿಸಮ್ಮೇಳನ, ಕೃತಿಬಿಡುಗಡೆ, ಸಾಹಿತಿಗಳ ಸನ್ಮಾನಕಾರ್ಯಗಳು ದಿನಚರಿಯಂತೆ ಆಗಾಗ ನಡೆಯುತ್ತಲೇ ಇರುತ್ತವೆ. ಅವರು ನಮಗೆ ಯಾವಾಗಲೂ ಉಪದೇಶಿಸುತ್ತಿದ್ದುದು ಇಷ್ಟು. ನೀವು ಡಿಗ್ರಿ ಮಾಡಿಕೊಂಡು ನೌಕರಿ ಪಡೆದ ಮಾತ್ರಕ್ಕೆ ತೃಪ್ತರಾಗಬೇಡಿ. ಕನ್ನಡಕ್ಕಾಗಿ ಸಾಹಿತ್ಯದಲ್ಲಿ ನಿಮ್ಮ ಹೆಸರು ಉಳಿಯುವಂತೆ ಏನಾದರೂ ಮಾಡಿ ಎಂಬುದೇ ಅವರ ಕಳಕಳಿಯ ಸಂದೇಶ. ಇದು ಅವರ ಬರಿಯ ಉಪದೇಶವಲ್ಲ; ತಾವು ಮಾಡಿ ತೋರಿಸಿದ್ದಾರೆ. ಸಾಹಿತ್ಯಕ್ಷೇತ್ರದಲ್ಲಿ ಅನುವಾದ ಹಾಗೂ ಸ್ವತಂತ್ರ ಕೃತಿರಚನೆಗಳಿಂದ ಅವರು ಸಾಹಿತ್ಯ ದೇವಿಯ ಭಂಡಾರವನ್ನು ತುಂಬಿದ್ದಾರೆ. ಕಾಳಿದಾಸನ ಎಲ್ಲಾ ಕೃತಿಗಳನ್ನು ಸರಳವಾಗಿ ಅನುವಾದಿಸಿ ಅವರು ಅಭಿನವ ಕಾಳಿದಾಸರೇ ಆಗಿದ್ದುದು ಮಾತ್ರವಲ್ಲ. 'ಗಾಥಾಸಪ್ತಶತಿ', 'ಗೀತಗೋವಿಂದ'ದಂತಹ ಸಂಸ್ಕೃತ ಕೃತಿಗಳ ರಸಘಟ್ಟಿಯನ್ನು ಕನ್ನಡಕ್ಕಿತ್ತು ಕೃತಾರ್ಥರಾಗಿದ್ದಾರೆ. ಅನುವಾದವೆಂಬುದು ಪ್ರತಿಭಾ ಶೂನ್ಯನ ಕೆಲಸವೆಂದು ಭಾವಿಸುವುದು ತಪ್ಪು; ಮೂಲದ ಸ್ವಾರಸ್ಯವನ್ನು ಇನ್ನೊಂದು ಭಾಷೆಗೆ ತರುವುದು ಸ್ವತಂತ್ರ ಕೃತಿರಚನೆಗೂ ಮಿಗಿಲೆಂಬುದನ್ನು ನೆನೆಯಬೇಕು. ಸ್ವತಂತ್ರರಚನೆಯಲ್ಲಿ ಸ್ವಾತಂತ್ರ್ಯವಿದೆ. ಇದರಲ್ಲಿ ಹಾಗಲ್ಲ. ಮೂಲಕವಿಯೇ ತಾನಾಗಿ ಅವನ ಪರಕಾಯಪ್ರವೇಶಮಾಡಿ ಅದನ್ನು ತನ್ನ ಮಾತುಗಳಲ್ಲಿ ಒಡಮೂಡಿಸುವುದು ಅಸಾಮಾನ್ಯ ಸಾಹಸ. ಇದರಲ್ಲಿ ಶ್ರೀಯುತರು ಯಶಸ್ವಿಗಳಾಗಿರುವರೆಂಬುದನ್ನು ಅವರ ಅನುವಾದಗಳನ್ನು ಓದಿದರೆ ಮನದಟ್ಟಾಗುತ್ತದೆ.

ಇನ್ನು ಅವರ ಸ್ವತಂತ್ರ ಕೃತಿಗಳು ಬಹುಮುಖವಾಗಿ ಈಗಾಗಲೇ ಕನ್ನಡ ಜನದ ಅಭಿರುಚಿಯನ್ನು ಕೆರಳಿಸಿವೆ. 'ಇಂದ್ರಚಾಪ,' 'ಸುರಗಿ ಸುರಹೊನ್ನೆ', 'ತುಂಬೆ ಹೂ' 'ಚಂದ್ರವೀಥಿ' 'ಉಪ್ಪುಕಡಲು' ಮುಂತಾದವುಗಳು ಅವರ ವ್ಯಕ್ತಿತ್ವದ ಹಿರಿಮೆಯನ್ನು ಹೊರಹೊಮ್ಮಿಸುವ ಸ್ವತಂತ್ರ ಕೃತಿಗಳು.

'ಇಂದ್ರಚಾಪ' ಸಾಂಗತ್ಯದ ಮುಕ್ತಕಗಳ ಸಂಕಲನವಾದರೆ 'ಮಂಥಾನ' ಸ್ವತಂತ್ರ ಗಾದೆಗಳ ಸಂಕಲನ. 'ಸುರಗಿ ಸುರಹೊನ್ನೆ' ತ್ರಿಪದಿಯ ಮುಕ್ತಕಗಳ ಮಾಲೆಯಾದರೆ ಆಧುನಿಕ ಗಾಥಾಸಪ್ತಶತಿಯಾದ 'ಚಂದ್ರ ವೀಥಿ' ಸಾಂಗತ್ಯದಲ್ಲಿರುವ ಲೋಕೋಕ್ತಿ. ಅನ್ಯೋಕ್ತಿ, ಸ್ವಾನುಭವ, ಪರಾನುಭವ, ಕವಿ ಕಂಡುಂಡ ಸಂಗತಿಗಳನ್ನೊಳಗೊಂಡ ರಸಮಯ ಮುಕ್ತಕಗಳ ಮುಡಿ. 'ತುಂಬೆ ಹೂ'ವಿನ ಆ ಗಿಡ 'ಏಳೆ'ಯ ನುಡಿಕುಸುಮಗಳಿಂದ ಬಾಗಿ ತೊನೆಯುವ ಸುಂದರ ಕೃತಿ. ಹೀಗೆ ಅವರ ಎಲ್ಲಾ ಕೃತಿಗಳ ಪರಿಚಯ ಮಾಡಿಕೊಡುವುದು ನನ್ನಿಂದ ಅಸಾಧ್ಯ ಮಾತ್ರವಲ್ಲ ಇಲ್ಲಿ ಅಪ್ರಸ್ತುತ. ಕನ್ನಡದ ಅಚ್ಚ ದೇಸಿ ಛಂದಸ್ಸುಗಳ ಸ್ವತಂತ್ರ ಕೃತಿ ರಚನೆ ಮಾಡಿದುದು ಅವರ ವೈಯಕ್ತಿಕ ಹಿರಿಮೆಯನ್ನು ಎತ್ತಿತೋರಿಸುತ್ತದೆ. ಮೂಲೆಗುಂಪಾಗಿರುವ

ಕನ್ನಡದ ದೇಸಿಯನ್ನು ಅವರು ಮತ್ತೊಮ್ಮೆ ಬೆಳಕಿಗೆ ತಂದು ಅವುಗಳ ಸರಳತೆ, ಭಾವಪ್ರಖರತೆಗಳಿಗೆ ಕನ್ನಡಿ ಹಿಡಿದಿದ್ದಾರೆ. ಅವರ ಈ ಎಲ್ಲಾ ಕೃತಿಗಳು ಸಿಹಿ ಕಹಿ ಅನುಭವ, ಜ್ಞಾನ, ಸರಸತೆಗಳನ್ನು ಪ್ರತಿಬಿಂಬಿಸುವ ಕನ್ನಡಿಗಳಾಗಿವೆ.

ಶ್ರೀಯುತರು ಕೃತಿಗಾಗಿ ಕೃತಿರಚನೆ ಮಾಡಿದವರಲ್ಲ. ಅವರ ಕೃತಿಗಳು ಅವರ "ಸ್ವಾಂತಃಸುಖಾಯ" ರಚಿತವಾದವುಗಳೆನ್ನುವಾಗ ಹಿಂದೀ ಸಾಹಿತ್ಯದ ಪ್ರಸಿದ್ಧ ಸಾಹಿತಿ ಪ್ರೇಮಚಂದರ ನೆನಪಾಗುತ್ತದೆ. ಅವರ ವಿಚಾರವಾಗಿ ಒಂದೆಡೆ ಹೀಗೆ ಹೇಳಿದೆ. ಕವಿಯ ಮನಸ್ಸಿನಲ್ಲಿ ಪಲವು ವಿಚಾರಗಳು ಎಷ್ಟರಮಟ್ಟಿಗೆ ತಾಕಲಾಡುತ್ತಿವೆಯೆಂದರೆ ಅವುಗಳನ್ನು ಪ್ರಕಟಪಡಿಸದೆ ಅವನು ಇರಲಾರ. ಇದು ಹುಟ್ಟುಕವಿಯ ಗುಣವಷ್ಟೆ. ಅಂತೆಯೇ ಹುಟ್ಟುಕವಿಗಳಾದ ಶ್ರೀಯುತರೂ ತಮ್ಮ ರಸಾನುಭವವನ್ನು ಭಾಷೆಯಲ್ಲಿ ಪ್ರಕಟಪಡಿಸದೆ ಇರಲಾರರು.

ಶ್ರೀಯುತರ ಇನ್ನೊಂದು ರಸಿಕತೆಯ ಘಟನೆಯನ್ನು ಸ್ಮರಿಸಿದರೆ ಹೆಚ್ಚಾಗದೆನ್ನಿಸುತ್ತದೆ. ಅಂದು ಬೇಸಿಗೆಯ ದಿನ. ಪ್ರಾಚಾರ್ಯರು ತರಗತಿಯಲ್ಲಿ 'ರಸರತ್ನಾಕರ'ವನ್ನು ರಸವತ್ತಾಗಿ ಪಾಠ ಹೇಳುತ್ತಿದ್ದರು. ಆಗ ನಮ್ಮ ಸಹಪಾಠಿಗಳಲ್ಲೊಬ್ಬರು ತಮಾಷೆಗಾಗಿ 'ನಾನು ಅದನ್ನು ಚೆನ್ನಾಗಿ ಓದುತ್ತಿದ್ದೇನೆ'ಂದು ದನಿಯೆತ್ತಿದಾಗ ಮುಗುಳ್ನಗೆ ನಗುತ್ತಾ ಅವರು "ಈ ಬೇಸಿಗೆಯಲ್ಲಿ ರಸರತ್ನಾಕರವನ್ನು ಹೆಚ್ಚು ಓದಬೇಡಿ" ಎಂದು ಒಂದೇ ಮಾತನ್ನು ವ್ಯಂಗ್ಯವಾಗಿ ಹೇಳಿದರೋ ಇಲ್ಲವೋ, ವರ್ಗವಿಡೀ ನಗೆಗಡಲಿನಲ್ಲಿ ತೇಲಾಡಿತು. ರಸರತ್ನಾಕರದ ರಸಿಕತೆಯ ಪಾರಮ್ಯವನ್ನು ಧ್ವನಿಪೂರ್ಣವಾಗಿ ಅವರು ಒಂದೇ ಮಾತಿನಲ್ಲಿ ಹೇಳಿದುದು ನಗೆ ಬರಿಸದೆ ಏನು ಮಾಡೀತು. ಆ ರಸಿಕಚಕ್ರಿಯ ಇಂತಹ ಘಟನೆಗಳು ಹಲವಾರು. ಅವರ ಪಾಠ ಎಂದೂ ಸಾಕೆನಿಸದು. ಪಾಠವನ್ನು ಪಾಠವಾಗಿಸದೆ ವಿನೋದವಾಗಿ ಎಂದೂ ಸ್ಮೃತಿಪಟಲದಲ್ಲಿ ಅಚ್ಚೊತ್ತುವಂತೆ ಮಾಡುವ ಅವರ ಜಾಣ್ಮೆ ಅನ್ಯಾದೃಶ. ಅಂತೆಯೇ ಕವಿತ್ವ ಇವೆರಡೂ ಒಂದಾಗಿರುವ ವ್ಯಕ್ತಿಯನ್ನು ಅಧ್ಯಾಪಕರನ್ನಾಗಿ ಪಡೆಯುವ ಶಿಷ್ಯರು ಭಾಗ್ಯಶಾಲಿಗಳು.

ಹೀಗೆ ಪಾಠ ಪ್ರವಚನದಿಂದ, ಕೃತಿರಚನೆಯಿಂದ, ಸಾಹಿತ್ಯಪ್ರಚಾರದಿಂದ ಭಾಷಣಗಳಿಂದ ದಿನದಿತ್ಯ ಕನ್ನಡಮ್ಮನ ಸೇವೆಯನ್ನು ಗೈದು ನಮ್ಮೆಲ್ಲರಿಗೂ ಆ ದಿಸೆಯಲ್ಲಿ ಮಾರ್ಗದರ್ಶನವೀಯುವ ಶ್ರೀಯುತ ಎಸ್. ವಿ. ಪಿ. ಯವರು ಕನ್ನಡಿಗರಿಗೆಲ್ಲಾ ಪ್ರಾತಃಸ್ಮರಣೀಯರು; ಮಾತ್ರವಲ್ಲ ಅಂತಹ ಉನ್ನತ ವ್ಯಕ್ತಿಗಳನ್ನು ಪಡೆದ ನಾಡು ಧನ್ಯ. ಅವರನ್ನು ಗುರುಗಳಾಗಿ ಪಡೆದ ನಾವೂ ಧನ್ಯ. ಇನ್ನೂ ಅವರಂತಹ ಆದರ್ಶಪುರುಷರು ಚಿರಾಯುವಾಗಿ ಕನ್ನಡ ನಾಡ ಸೇವೆಯನ್ನು ಗೈದು ನಮಗೆಲ್ಲಾ ದಾರಿದೀಪವಾಗಿ ಮುನ್ನಡೆಸಲಿ. ಅವರಂತಹವರ ನೆನಹೇ ನಮಗೆಲ್ಲಾ ಪ್ರೋತ್ಸಾಹದಾಯಕವಾಗಿ ಕನ್ನಡಮ್ಮನ ಜಯಡಿಂಡಿಮವು ದಿಕ್ಕು ದಿಕ್ಕುಗಳಲ್ಲಿ ಮಾರ್ದನಿಗೊಳ್ಳಲಿ !

ಏಳ್ಗೆ ಸಿರಿಗನ್ನಡಂ ! ಬಾಳ್ಗೆ ಸಿರಿಗನ್ನಡಂ ! ಗೆಲ್ಗೆ ಸಿರಿಗನ್ನಡಂ !

## ೧೩. "ಉಪ್ಪು ಕಡಲು ಒಂದು" — ವಿವೇಚನೆ

**ಕೆ. ಬಿ. ಶ್ರೀಕಾಂತ**

ಆಧುನಿಕ ವಚನಕಾವ್ಯಗಳಲ್ಲಿ ಶ್ರೀ ಎಸ್. ವಿ. ಪರಮೇಶ್ವರ ಭಟ್ಟರ ಅನುಭವಪೂರ್ಣ ಚೇತನದಿಂದ ಹೊರಮೂಡಿರುವ "ಉಪ್ಪುಕಡಲು" ಏಳುನೂರು ವಚನಗಳನ್ನೊಳಗೊಂಡ ಪರಿಣತ ಕೃತಿ. ಜೀವನಾನುಭವಗಳನ್ನು ವಚನಗಳ ಮೂಲಕ ತಿಳಿಯಪಡಿಸುವ ಸಮಕಾಲೀನ ವಚನಕಾರರ ಶ್ರೇಣಿಯಲ್ಲಿ ಶ್ರೀಯುತರು ಅಗ್ರಪಂಕ್ತಿಯಲ್ಲಿ ನಿಲ್ಲುತ್ತಾರೆ. ಹೃದಯದ ಕಡಲ ಅನುಭವಗಳ ಘರ್ಷಣೆಯಿಂದುದಿಸಿದ 'ರತ್ನ' ಈ "ಉಪ್ಪುಕಡಲು". ಕಡಲಿನಲ್ಲಡಕವಾಗಿರುವ ಬೆಲೆಬಾಳುವ ರತ್ನಗಳಂತೆಯೇ ಈ "ಉಪ್ಪುಕಡಲಿ"ನಲ್ಲೂ ಅನೇಕ ಶ್ರೀಮಂತ ನುಡಿರತ್ನಗಳೂ, ಕವಿಯ ಮನದ ತುಯ್ತದ ಫಲವಾಗಿ ಚಿಮ್ಮುವ "ಭಾವ"ಗಳಿಂದ ರೂಪುಗೊಂಡ ಭಾವಗೀತಗಳೂ ಅಲ್ಲಲ್ಲೇ ಅಡಕವಾಗಿರುವುದನ್ನು ಕಾಣಬಹುದು.

ತಿಳಿಮುಗಿಲಿನ ತೊಟ್ಟಿಲ ಕಟ್ಟಿ, ಬಿಳಿಮೋಡದ ಅರಳೆಯನ್ನೇ ಹೊದಿಸಿ, ತಂಗಾಳಿಯ ಜೋಗುಳ ಹಾಡಿಸಿ, ಗಗನಮಾತೆಯ ಮಡಿಲಲ್ಲಿ ಶಿಶುಚಂದಿರನನ್ನು ತೂಗಿಸಿದ ಕವಿ ಪರಮೇಶ್ವರರ ಚೇತನ ಭಾವನಾ ಪ್ರಪಂಚದಲ್ಲಿ ತಲ್ಲೀನವಾಗಿರುವುದನ್ನು ಕಾಣುತ್ತೇವೆ. ಇಂತಹ ಉತ್ತಮ ಭಾವಗೀತಗಳನ್ನು ಜನತೆಗಿತ್ತ ಕವಿಹೃದಯ ವಚನರಚನೆಗೆ ಕೈಹಾಕಿದರೂ ಭಾವಾವೇಶರಾದಾಗ ಅವರಿಗರಿಯದಂತೆಯೇ ಅನೇಕ ಭಾವಗೀತಗಳು ಮೂಡಿ ಬಂದು "ಉಪ್ಪುಕಡಲಿ"ನಲ್ಲಿ ಮಿಳಿತವಾಗಿವೆ.

ಕೃತಿಯಲ್ಲಿ ವಚನಗಳೊಡನೆ ಹಲವೆಡೆ ಭಾವಗೀತಗಳು ಸಮರಸಗೊಂಡಿರುವುದೂ ಒಂದು ಹಿರಿಮೆಯೇ. ಕಡಲ ವರ್ಣನೆಯಲ್ಲಿ ತಮ್ಮ ಹೃದಯದಲ್ಲಿನ ಭಾವನೆಗಳನ್ನು ಹೊರಗೆಡಹುವಾಗ ಅಯತ್ನಪೂರ್ವಕವಾಗಿಯೇ ಅದರ ಸುಂದರ ಅಭಿವ್ಯಕ್ತಿಗೆ ಉತ್ತಮ ದಾರಿ ಕಂಡುಕೊಂಡು 'ಭಾವಗೀತ'ವಾಗಿ ಪಡಿಮೂಡಿರುವುದನ್ನು ಗಮನಿಸಬಹುದು.

> "ಉದ್ದಗಲವಾಗಿ ಹೇರಾಳವಾಗಿ.........
> ಮೈಚಾಚಿ ಮಲಗಿದೆ ನೋಡು ಕಡಲು
> ಮೈ ಮುರಿದ ಹಾಗೆ ತೆರೆಯುರುಳಿ ಬಹುದು
> ಕನವರಿಸಿದಂತೆ ಮೊರೆ ಕೇಳಿ ಬಹುದು
> ಕನಸುಕಂಡೆದ್ದವೊಲು ಮೈ ನೀಲವಹುದು"

ಎನ್ನುವಲ್ಲಿ ಕವಿಯ ಮೈಮನಗಳೆರಡೂ ಆ ಕಡಲ ತೆರೆಯ ದನಿಗೆ, ಆ ನೀಲ ದರ್ಶನಕ್ಕೆ ಮಾರುಹೋಗಿ ಭಾವುಕರಾಗಿ ತೆರೆಯ ಉರುಳುವಿಕೆಯನ್ನೂ ಅದರ ಉಲಿವಿನ ದನಿಯನ್ನೂ ಹಾಡಿರುವ ನುಡಿಗಳಲ್ಲೇ ಕೂಡಿಟ್ಟಿರುವಂತೆ ಈ ಗೀತದ ಮೂಲಕ ಚಿತ್ರಿಸಿದ್ದಾರೆ. "ಹೇರಾಳವಾಗಿ", "ಉದ್ದಗಲವಾಗಿ" ಎನ್ನುವ ಶಬ್ದಗಳೇ ಕಡಲ ಆಳ-ಅಗಲವನ್ನು ಸೂಚಿಸುವಂತಿವೆ. ಅಷ್ಟರಿಂದಲೇ ತೃಪ್ತವಾಗಲಿಲ್ಲ ಕವಿಯ ಮನಸ್ಸು. ಆ ತೆರೆಗಳ ಲಾಸ್ಯದ ಬೆಡಗನ್ನೂ, ಹೆದ್ದೆರೆಗಳ ಹುಯಿಲನ್ನೂ ಪಡಿಮೂಡಿರುವ ಸಾಲುಗಳಲ್ಲೇ ಸಹೃದಯರು ಅದನ್ನನುಭವಿಸುವಂತೆ ಚಿತ್ತರಿಸಿದ್ದಾರೆ.

> "ತೆರೆಯ ಮುಡಿ ಮುರಿದು
> ತನ್ನಡಿಗೆ ತಾನೆ ಕೆಡೆದು
> ಕಡೆದೊಡನೆ ಒಡೆದು
> ಚೂರು ನೂರಾಗಿ ಹರಿದು
> ಹರಿದ ನೀರು ಪಸರಿಸುವ ಪರಿಯನೋಡಾ
> ದಡಕಟ್ಟಲೆಂದು ಬರುವ ಪೆರ್ದೆರೆಯನೋಡಾ!
> ಒಂದನಿನ್ನೊಂದುನುಂಗಿ ನೊಣೆವಂತೆ, ಸೆಣಸಿ ಕುಣಿವಂತೆ,
> ತೆರೆಯ ಮೇಲೆ ತೆರೆಯುರುಳಿಬರುವ ಪರಿಯನೋಡಾ

ಭಾವ ಭಾವಗಳ ವೀಚಿ ವೀಚಿಗಳ ಮಾಲೆ ಮಾಲೆಗಳ
ಹೆಡೆಬಿಚ್ಚಿ ಉಬ್ಬಿ ಅಬ್ಬರಿಸಿ ಹಬ್ಬಿ ಸಿಸ್ಸಡಿಯು ತಬ್ಬಿ ಕಡೆಯುತಿದೆ ನೋಡಾ!"

ಎಂತಹ ಸುಂದರ ಭಾವನೆಯಿಂದುದಿಸಿದ ಗೀತವಿದು! ಪದಗಳ ಕುಣಿತವೇ ತೆರೆಯ ನಾಟ್ಯವನ್ನು ಪ್ರದರ್ಶಿಸಲಾರದೇ? ಅಲ್ಲಿನ ಅಕ್ಷರಗಳ ಜೋಡಿ, ಪದಪುಂಜಗಳ ಜೋಡಿ, ಪ್ರಾಸಾನುಪ್ರಾಸದ ಬಂಧವೇ ಕೇಳುವವರನ್ನೂ ಕ್ಷಣಕಾಲ ಕುಣಿಯುವಂತೆ ಮಾಡುತ್ತವೆಯೆಂದರೆ ಅತಿಶಯವಲ್ಲ. ಭಾವ ಬಂಧುರತೆಯಿಂದ ತಾನೇತಾನಾಗಿ ಹೊರಹೊಮ್ಮಿದ ಈ ವಚನ ಸುಂದರ ಭಾವಗೀತವೇ ಸರಿ.

ಕೋಗಿಲೆಯನ್ನು ಕುರಿತು ಎಷ್ಟು ಜನ ಹಾಡಿಲ್ಲ? ಎಷ್ಟು ಮಂದಿ ಕವಿಗಳು ಕವಿತೆಕಟ್ಟಿಲ್ಲ? ಆದರೆ ಭಾವ ಭಾವನೆಗಳು ಒಬ್ಬೊಬ್ಬರಲ್ಲಿ ಒಂದೊಂದು ರೀತಿಯಿರುತ್ತವೆ. ಅದೇ ಅವರವರ ವೈಶಿಷ್ಟ್ಯ. ಅಂತೆಯೇ ಕಡಲ ವರ್ಣನೆಗೆ ಏಸು ಮಂದಿ ಕೈಹಾಕಿಲ್ಲ? ಆದರೆ ಶ್ರೀ ಎಸ್.ವಿ.ಪಿ.ಯವರಂತೆ ಎಲ್ಲ ನಿಟ್ಟಿನಲ್ಲೂ ನಿಂತು ಅದರ ಸೊಬಗಿನ ದನಿಯನ್ನಾಲಿಸಿದ ಭಾವುಕ ಕವಿಗಳು ತೀರ ವಿರಳ.

"ಭಾವಗೀತೆಯಲ್ಲಿ ಮುಖ್ಯವಾದದ್ದು ವರ್ಣನೆಯಲ್ಲ; ರಸಗಳ ಪ್ರದರ್ಶನವಲ್ಲ; ವಸ್ತು ವಿನ್ಯಾಸದ ಕೌಶಲವಲ್ಲ—ಅಯತ್ನ ಪೂರ್ವಕವಾಗಿ ಕವಿಯ ಮನದ ತುಯ್ತದ ಫಲವಾಗಿ ಚಿಮ್ಮುವ ಭಾವ" ಎಂದು ಅವರು ತಮ್ಮ 'ಭಾವಗೀತೆ'ಯಲ್ಲಿ ಹೇಳಿದ್ದಾರೆ. ಇದು ವ್ಯಕ್ತಿನಿಷ್ಠವಾದುದು. ಅಂತೆಯೇ ಶ್ರೀ ಎಸ್.ವಿ.ಪಿ.ಯವರ ಮನಸ್ಸು ಕಡಲ ತೆರೆಗಳಲ್ಲಿ ಲೀನವಾದಾಗ ಅದರ ಪ್ರಭಾವದಿಂದುದಿಸಿದ ಉತ್ಕಟ ಭಾವದಿಂದ ತಾನೇ ತಾನಾಗಿ ಒಗೆದು ಬಂದಿದೆ ಈ ಗೀತೆ.

ಅವರೇ ಹೇಳುವಂತೆ "ಎರಡು ಸಾಲಿನದೂ ಭಾವಗೀತೆಯಾಗಬಹುದು. ಇನ್ನೂರು ಸಾಲಿನದೂ ಭಾವಗೀತೆಯಾಗಬಹುದು". ಆದರೆ ಅದರಲ್ಲಿ ಗೇಯತೆ, ಸಂಕ್ಷಿಪ್ತತೆ, ಸ್ವಾಂತತೆ ಇತ್ಯಾದಿ ಭಾವಗೀತೆಯ ಮುಖ್ಯಾಂಶಗಳ ಮಿಳಿತವಾಗಿದ್ದಲ್ಲಿ ಅದು ಸುಂದರ ಭಾವಗೀತೆಯಾಗಬಲ್ಲದು.

"ನಿಸರ್ಗದ ಶೀತಲ ರೆಫ್ರಿಜಿರೇಟರು ನೀನೆ ಕಣಾ
ನಿಸರ್ಗದ ಬೆಚ್ಚನೆಯುರಿಯಗ್ಗಿಷ್ಟಿಕೆ ನೀನೆ ಕಣಾ
ಈ ಕಡಲೆಂಬುದು ಬಿಸವಂದ ಕಣಾ ಆನಂದ ಕಣಾ."

ಇಲ್ಲಿ ಆಧುನಿಕ ದೃಷ್ಟಿಯಿದೆಯಾದರೂ ಲಯಬದ್ಧವಾಗಿಯೂ ಪಡಿಮೂಡಿದೆ. ಭಾವಗೀತೆಯ ತಳಹದಿಯಾದ ಗೇಯತೆಯೂ ಮಿಳಿತವಾಗಿದೆ. ಭಾವಪ್ರಖರತೆಯಿಂದ ಈ ಕಿರಿಯ ವಚನ ಒಂದು ಗೀತೆಯಂತೆಯೇ ಇದೆ. ಇಡೀ ಕಡಲ ವಿಸ್ತಾರವನ್ನು, ಬೇಗೆಯನ್ನು ಉಪಶಮನಗೊಳಿಸುವ ಶೀತೋಪ ಕರಣಕ್ಕೂ, ತಲೆತಲಾಂತರದಿಂದ ಹಳ್ಳಿ ಹಳ್ಳಿಗಳಲ್ಲಿ ಬೆಚ್ಚನೆಯನ್ನುಂಟುಮಾಡುವ ಅಗ್ಗಿಷ್ಟಿಕೆಗೂ ಹೋಲಿಸಿರುವುದು ಸಂಕ್ಷಿಪ್ತವಾಗಿದ್ದರೂ ಆ ನಾಲ್ಕು ನಾಲ್ಕು ಮಾತ್ರೆಗಳಲ್ಲಿ ಜಗ್ಗಿ ಜಗ್ಗಿ ಸಾಗುವ ಹದ ವೇಗದಲ್ಲೂ ಒಂದು ಬಗೆಯ ರಮ್ಯತೆಯಿದೆ. ಭಾವಾಭಿವ್ಯಕ್ತಿ ಸ್ಪಷ್ಟವಾಗಿದೆ.

ಮಳೆಯು ಬರುವ ಮುನ್ನಿನ ಗುಡುಗು ಮಿಂಚುಗಳ ಪ್ರಕೋಪವನ್ನೂ, ಮೇಘಗಳು ಘನೀಭೂತವಾಗಿ ಇಳೆಯ ಮೇಲೆ ಕಾಳ ಛಾಯೆ ಕವಿದು ಜನರನ್ನು ತಲ್ಲಣಗೊಳಿಸುವುದನ್ನೂ, ಮಳೆ ಸುರಿದ ಅನಂತರದ ಜನಮನ ತಣಿಯುವುದನ್ನೂ ಪಕ್ಷಿಸಂಕುಲ ಕುಣಿಯುವುದನ್ನೂ ಕಣ್ಮುಂದೆ ನಿಲ್ಲುವಂತೆ ನಾಲ್ಕೇ ಸಾಲು ಗಳಲ್ಲಿ ಚಿತ್ರಿಸಿರುವ ಒಂದು ವಚನ—ಭಾವಗೀತದಂತಿದೆ. "ನಿಸರ್ಗದ ಲೀಲೆಯೊಡನೆ ತಲ್ಲೀನನಾಗಿ ಅಂತರ್ಮುಖಿಯಾದ ಕವಿಯ ಮನದಾಳದ ಭಾವಪ್ರಚೋದನೆಯಿಂದ ಲಯಬದ್ಧವಾಗಿ ಹೊರಹರಿಯು ವುದೇ ಭಾವಗೀತೆ". ಲಯ ಅಲೆಅಲೆಯಾಗಿ ಮನದಾಳದ ಸೆಲೆಯಿಂದ ಚಿಮ್ಮಿ ಹರಿದಿರುವ ಈ ಗೀತೆ ಭಾವಗೀತೆಗೆ ಸಾಕ್ಷಿಯಾಗಿದೆ. ಲಯದಲ್ಲೇ ಗೀತೆಯೂ ಅಡಗಿದೆ.

"ಮೊದಲೆಂದ ಗುಡುಗು ಮಿಂಚು ಸಿಡಿಲು
ವಿಲಯವೋ ಎಂಬಂಥ ಹುಯಿಲು
ಹುಯ್ದಂಥ ಹದಮಳೆಗೆ ತಣಿಯಿತ್ತೈ ತಾಯಿ ನೆಲದೊಡಲು
ಅದನೋಡಿ ಏನೆಂಥ ಥಕ ಥೈಜನಮನದ ನವಿಲು."

ಕವಿಚೇತನ ಇಂತಹ ಸುಂದರ ಚಿತ್ರವೊಂದನ್ನು ಅಲ್ಲಿನ ಕೆಲವೇ ಕಿರುಸಾಲುಗಳಲ್ಲಿ ಇತರರ ಕಣ್ಮುಂದೆ ತಂದು ನಿಲ್ಲಿಸಿ ತಲ್ಲೀನರಾಗಿ ತಾವೂ ಬೆರೆತು ಅನುಭವಿಸುವಂತೆ ಗೈದಿರುವುದರಲ್ಲಿ ಸಾರ್ಥಕವೆನಿಸಿಕೊಂಡಿದೆ. ಭಾವಗೀತೆಯ ಮುಖ್ಯಾಂಶಗಳಲ್ಲಿ ಇದೂ ಒಂದು. ಶ್ರೋತೃವನ್ನು ಅನುಭಾವಿತ ಕವಿಯು ಮಟ್ಟಕ್ಕೇರಿಸುವಂತಹುದು ಉತ್ತಮ ಭಾವಗೀತೆಯೆಂಬುದು ನಿರ್ವಿವಾದ. ಇಲ್ಲಿ ಅಂತಹ ಆಕರ್ಷಣೀಯ ಅಭಿವ್ಯಕ್ತಿಯಿದೆ. ಭಾವಗೀತೆಯ ಲಕ್ಷಣಗಳಾದ ಗೇಯತೆ, ಸಂಕ್ಷಿಪ್ತತೆ, ಸ್ವಾಂತತೆ, ಭಾವಪ್ರಖರತೆಗಳನ್ನು ಕಾಣುತ್ತೇವೆ.

"Beauty is to see and enjoy, but not to touch and destroy" ಎಂದು ವರ್ಡ್ಸ್‌ವರ್ತ್ ಕವಿಯು ನುಡಿಗಳಿಗೆ ಸಮಜೋಡಿಯೆಂಬಂತೆ ಶ್ರೀ ಪರಮೇಶ್ವರ ಭಟ್ಟರ ಕವಿಹೃದಯವೂ ಸೌಂದರ್ಯವನ್ನು ದೂರದಿಂದ ನೋಡಿ ತೃಪ್ತಿಪಡೆ; ಅದನ್ನು ಮುಟ್ಟಿ ಸೃಷ್ಟಿಯ ನೈಜ ಚೆಲುವನ್ನು ನಾಶಪಡಿಸಬೇಡ ಎನ್ನುವಲ್ಲಿ ಅವರು ತೋಡಿಕೊಂಡ ರೀತಿಯಾದರೂ ಎಂತಹುದು ?

"ಮುಟ್ಟದಿರು ಮುಟ್ಟದಿರು ಈ ಮುಟ್ಟಿದರೆ ಮುನಿಯ
ಮುಟ್ಟದಿರು ಮುಟ್ಟದಿರು ಈ ಮಂಜುಹನಿಯ
ಬಿಟ್ಟುಬಿಡು ಬಿಟ್ಟುಬಿಡು ನನ್ನ ಪಾಡಿಗೆ ನನ್ನ
ದಿಟ್ಟಿಯಾಚೆಯ ಬಟ್ಟಬಯಲೊಳು ಕೊಟ್ಟಕೊನೆಯೊಳು
ಇರುವ ನನ್ನನು ಬಿಟ್ಟುಬಿಡಿ ನನ್ನ ಪಾಡಿಗೆ ನನ್ನ"

ಮಂಜಿನ ಹನಿಯ ಜೀವನ ಕ್ಷಣಕಾಲವಾದರೂ ತನ್ನ ಕಿರು ಆಕೃತಿಯಲ್ಲೇ ದಿನಮಣಿಯಿಂದ ವಿವಿಧ ಬಣ್ಣಗಳನ್ನು ಸೆಳೆದು ಪ್ರತಿಬಿಂಬಿಸಿ ಮಂಜಿನ ಹನಿಯೋ ಮುತ್ತಿನ ಮಣಿಯೋ ಎಂಬಂತೆ ಎಲ್ಲರನ್ನು ಆಕರ್ಷಿಸುತ್ತದೆ. ಮುಟ್ಟಿದರೆ ಮುನಿದು ಹರಡಿಕೊಂಡಿದ್ದ ಎಲೆಗಳನ್ನು ಮುದುರಿಕೊಳುವ "ಮುಟ್ಟಿದರೆ ಮುನಿ" ಗಿಡದಂತೆಯೇ ಮಂಜಿನ ಹನಿಯೂ ಸ್ಪರ್ಶವಾದೊಡನೆ ಇಲ್ಲವಾಗುತ್ತದೆ. ಆದ್ದರಿಂದ ಇದರ ಸೌಂದರ್ಯವನ್ನು ನೋಡಿ ಆನಂದಿಸು. ಮುಟ್ಟಿ ಹಾಳುಮಾಡಬೇಡವೆನ್ನುವುದನ್ನು ಆ ಹನಿಯೇ ಹೇಳುವಂತೆ ತಮ್ಮಾತನವನ್ನೇ ಮರೆಮಾಡಿ ಅದರ ಭಾವವನ್ನು ಮಾತ್ರ ಮುಂದಿಟ್ಟಿದ್ದಾರೆ.

"ಗೇಯತೆ, ಸಂಕ್ಷಿಪ್ತತೆ ಭಾವಗೀತೆಯ ರೂಪವಿನ್ಯಾಸಕ್ಕೆ ಸಂಬಂಧಿಸಿದಂತೆ ಸ್ವಾಂತತೆ, ಭಾವದೀಪ್ತತೆ ಇವು ಅದರ ಅಂತಸ್ಸಾರಕ್ಕೆ ಸಂಬಂಧಪಟ್ಟವೆ. ಭಾವನೆಗಳು, ಕಲ್ಪನೆಗಳು ಪ್ರತಿಭಾನೇತ್ರಗಳಿಗೆ ಹೊಳೆದಾಗ ಕವಿಯ ಮನಸ್ಸು ಪುಳಕಿತವಾಗುತ್ತದೆ. ತನ್ಮಯಭಾವ ಉದಿಸುತ್ತದೆ. ಆಗ ಭಾವಗೀತೆಯ ಶ್ರೇಷ್ಠ ಕವಿ ಶ್ರೀ ದ. ರಾ. ಬೇಂದ್ರೆಯವರೇ ಹೇಳುವಂತೆ "ಜುಮ್ಮೆಂದಾಗ ತಂತಿ–ಹರಿದು ಬರತಾವ ಪಂಕ್ತಿ" "ಒಳಗೆ ಇದ್ದರ್‍ರ ಹದ್ರ ಹೊರಗೆ ಬರತಾವ್ರ ಪದ" ಎಂಬಂತೆ ಶ್ರೀ ಎಸ್.ವಿ.ಪಿ. ಯವರಲ್ಲೂ ಭಾವಸ್ಪಂದನೆಯಾದಾಗ ಕಡಲ ತೆರೆಯ ಬುಸುಗುಟ್ಟುವಿಕೆಯನ್ನು ವರ್ಣಿಸಹೋಗಿ ವಚನ ಶೈಲಿಯಲ್ಲಿ ಸೆರೆಹಿಡಿದಿಡಲಾರದೆ ಆ ಭಾವನೆಗೆ ತಕ್ಕ ಅಭಿವ್ಯಕ್ತಿಯಾದ "ಭಾವಗೀತೆ"ಯ ಮಾಧ್ಯಮವನ್ನೇ ಮರೆಹೊಕ್ಕಿದೆ.

ಗಾಳಿ ಪುಂಗಿ ಊದಿದಾಗ
ತೆರೆಯ ಮೇಳ ಸೊಕ್ಕಿದಾಗ
........................
ಅಲೆಯ ಕೋಡು ಮುರಿದುಬಿದ್ದು
ಒಡಲು ನೂರು ಕಡೆಗೆ ಹರಿದು
ತನ್ನ ಬುಡಕೆ ತಾನೆ ಸರಿದು
ಕೆಡೆದುಬಿತ್ತು, ನೀರ ಹಾವು ನೊರೆಯ ಗರೆದು.

ಇಲ್ಲಿ ಬಿಡಿಪಡಗಿಸಿರುವ ಅಭಿವ್ಯಕ್ತಿಯಾದರೂ ಎಂತಹದು? ಕಡಲತೆರೆ ಗಾಳಿಯ ಪುಂಗಿಯ ನಾದದಿಂದ ಸೆಟೆದು ಹೆಡೆಬಿಚ್ಚಿ ಬುಸುಗುಟ್ಟುತ್ತ ಬಂತೆನ್ನುವ, ಅದು ರೋಷದಿಂದ ಬಡಿಯ ಬಂದಾಗ ಹೆಡೆಯ ಕೋಡು ಮುರಿದು ದೊಪ್ಪನೆ ಬಿದ್ದು ವಿಷವೆಂಬ ನೊರೆ ಸೀಳುಸೀಳಾಗಿ ಹರಿಯಿತೆನ್ನುವ ಭಾವನೆ,

ಅವನ್ನು ನೋಡುತ್ತಿರುವಂತೆಯೇ ತಮ್ಮಲ್ಲಿರುವ ಅಹಂಕಾರ ಸರ್ಪ ಪೊರೆಯೇ ಕಳಚಿ ಬೀಳುತ್ತಿರುವ ಅವರ ಆತ್ಮಶುದ್ಧೀಕರಣದ ಬಯಕೆಯ ಭಾವನೆ ಉನ್ನತವಾದದ್ದೇ. ಇಲ್ಲಿ ಕವಿ ತಮ್ಮನ್ನು ತಾವು ಮರೆತು ತನ್ಮಯರಾಗಿ ಉಕ್ಕುತ್ತಿರುವುದರಿಂದಾದ ಭಾವಸ್ಪಂದನಕ್ಕೆ ತಕ್ಕಂತೆ ಮೂರು ಸಾಲಿನ ಗೀತೆಗಳ ಮೂಲಕ ಲಯ ಅಲೆಅಲೆಯಾಗಿ ಹೊರಹೊಮ್ಮಿದೆ.

ವಚನಗಳ ನಡುವೆ ನೂರಾರು ಕಡೆ ಪಂಕ್ತಿ ಪಂಕ್ತಿಗಳಲ್ಲಿ "ಭಾವವೂ" "ಗೀತೆಯೂ" ಮಿಳಿತಗೊಂಡಿರುವುದನ್ನು ಕಾಣುತ್ತೇವೆ.

"ಮಲೆಯ ನಾಡಿನೊಳು
ಇರುಳ ಕತ್ತಲೊಳು
ದೊಂದಿ ಬೆಳಕಿನೊಳು

ಈ ಕರಾವಳಿಯ ತಿರೆಯು
ಈ ಕಡಲಲೆಯ ಮೊರೆಯು
ಈ ನೆಲದ ನಿರಿಯು"

ಎನ್ನುವಲ್ಲಿ ಇಂತಹ ಸುಂದರಾಭಿವ್ಯಕ್ತಿಯ ಭಾವಪೂರ್ಣ ಸಾಲುಗಳು ವಚನಗಳಲ್ಲಿ ಬೆರೆತಿವೆ. ಅಸ್ತಮಿಸುವ ಭಾಸ್ಕರನನ್ನು ನಿಮಿಷ ನಿಮಿಷದಲ್ಲಿ ಕಡಲಲ್ಲಿ ಮುಳುಗುವ ಪರಿಯನ್ನು ಕವಿ ಪೂರ್ಣ 'ಭಾವುಕ'ರಾಗಿ ಅತ್ಯುಚ್ಚ ರೀತಿಯಲ್ಲಿ ವರ್ಣಿಸಿದ್ದಾರೆ.

ಇವರ ಪ್ರತಿ ನೂರು ವಚನಗಳಲ್ಲೂ ಒಂದೊಂದು ವಿಶಿಷ್ಟತೆಯಿದೆ. ಕೊನೆಯ ನೂರು ವಚನಗಳು ಕಡಲವರ್ಣನೆಗೇ ಮೀಸಲಾಗಿವೆ. ಆರನೆಯ ನೂರು ಬಹುಪಾಲು ಸರ್ವಜ್ಞನ ತ್ರಿಪದಿಗಳ ರೀತಿಯೇ ಇವೆ. ಅದರ ಪ್ರಭಾವವಿದೆಯೆಂಬುದೂ ನಿಜವೇ. ಈ ಚಿಕ್ಕ ಚಿಕ್ಕ ಚೊಕ್ಕ ವಚನಗಳೂ ಪ್ರಾಸಾನುಪ್ರಾಸದೊಂದಿಗೆ ಭಾವ ತುಳುಕಿ ಬಳುಕಿ ನಡೆದು ಭಾವಗೀತೆಯ ಬೆಡಗನ್ನು ಪಡೆದಿವೆ.

"ಬಣ್ಣದ ವೇಷವು ಕಣ್ಣಿಗೆ ಹಬ್ಬವು
ತಿಣ್ಣದ ಚಂಡೆ ಕಿವಿಗಳಿಗೆ ಹಬ್ಬವು
ಸಣ್ಣ ಮಕ್ಕಳ ಕುಣಿತ ರೋಮಾಂಚನ
ಜಗದ ಹೊತ್ತಗೆಯೊಳು ಹಗಲಿನ ಪುಟವೊಂದು
ದೃಗುಯುಗದ ಎದುರು ತಿರುವಿತು
ಮಗುಚಿಹಾಕುವೆ ನಾಳೆ ನಾ ಹೊಸಹಾಳೆಯು

ಶಶಿಯುದಿಸಿ ಬಂದಿತು ಕುಶಲವ ತಂದಿತು
ಅಶಿವವು ತೊಲಗಿತು ನಿಶಿಗತ್ತ ತಿಳಿಯಿತು
ಅಶನವು ಕವಿಮನಕೆ ದೊರಕಿತು ಸದಾಶಿವಗು."

ಇತ್ಯಾದಿಯಾಗಿ ಹಲವಾರು ಚಿಕ್ಕ ವಚನಗಳಲ್ಲಿಯೂ ತ್ರಿಪದಿಯ ಲಯ, ಸ್ವಾಂತತೆ. ಗೇಯತೆಯನ್ನೊಳಗೊಂಡ ಕಿರಿಯ ಗೀತೆಗಳೂ ಭಾವಗೀತೆಗಳಂತೆಯೇ ಇವೆ. ಜಗತ್ತೇ ಒಂದು ಹೊತ್ತಗೆ, ಹಗಲಿರುಳು ಒಂದು ಹಾಳೆಯ ಎರಡು ಪುಟ. ಅವನ್ನು ತಿರುವಿದಂತೆಲ್ಲಾ ಹೊಸಯುಗ ಪ್ರಾರಂಭವಾಗುವುದೆನ್ನುವ ಭಾವ. ಅಂತೆಯೇ ಬಣ್ಣದ ವೇಷ ಕಣ್ಣಿಗೆ ಸಹಜವಾಗಿಯೇ ಹಬ್ಬ. ಅಂತಹುದರಲ್ಲಿ ಸಣ್ಣ ಹರೆಯದವರು ಈ ವೇಷದಲ್ಲಿ ಚಂಡೆಯ ದನಿಗೆ ಹೆಜ್ಜೆಹಾಕಿ ಕುಣಿಯುವುದು ನಿಜಕ್ಕೂ ರೋಮಾಂಚನಕಾರಿ, ಮನೋಹ್ಲಾದಕಾರಿಯೆನ್ನುವ ಭಾವ. ಹಾಗೆಯೇ ಶಶಿಯ ಬರುವಿಕೆಯೇ ಕುಶಲ ತರುವ, ನಿಶೆಯನ್ನಳಿಸುವ, ಶಿವನನ್ನು ಸಾಕ್ಷಾತ್ಕರಿಸುವ. ಕವಿಯ ಭಾವನೆಗಳಿಗೆ ಆಹಾರವನ್ನೊದಗಿಸುವ ಚಿತ್ರಗಳನ್ನು ಹಿಡಿದಿಟ್ಟಿರುತ್ತಾರೆ. ಈ ಸಣ್ಣ ಗೀತೆಗಳಲ್ಲೇ ಅಡಗಿರುವ ಸುಂದರ ಭಾವಾಭಿವ್ಯಕ್ತಿಯನ್ನು ಗಮನಿಸಿದಾಗ ಕವಿಯ ಅನುಭವಜನ್ಯವಾದ ಭಾವಸ್ಪಂದನದ ಪ್ರಕಾಶನವೇ ಭಾವಗೀತೆಯ ಸತ್ತ್ವ ಎಂಬ ನುಡಿಗೆ ಈ ಕಿರುಗೀತೆಗಳು ಹತ್ತಿರವಾಗಿವೆ ಎಂಬಂಶ ವೇದ್ಯವಾಗುತ್ತದೆ.

ಪ್ರಾಚೀನ ವಚನಕಾರರ ಪ್ರಭಾವ ಶ್ರೀ ಎಸ್.ವಿ.ಪಿ. ಯವರನ್ನು ಅದೇ ಹಾದಿಯಲ್ಲಿ ನಡೆಸಿದೆ. ಆದರೆ ಕಾವ್ಯದ ವಚನಗಳ ವಸ್ತು ಸಮಕಾಲೀನತೆಗೆ ಸಂಬಂಧಿಸಿದಂತೆ ಆಧುನಿಕವಾಗಿದೆ. ಅಭಿವ್ಯಕ್ತಿಯಲ್ಲಿ, ರಚನಾವಿನ್ಯಾಸದಲ್ಲಿ, ವಚನತಂತ್ರದಲ್ಲಿ, ಅಂಕಿತದಿಂದ ಅಂತ್ಯಗೊಳಿಸುವಿಕೆಯಲ್ಲಿ, ಅನುಕರಣೆಯಲ್ಲೆಲ್ಲಾ ಪ್ರಾಚೀನರ ಸೊಗಡನ್ನು ಪಡೆದಿದೆಯಾದರೂ ಆತ್ಮ ವಿಮರ್ಶೆ, ಜೀವನ ವಿಮರ್ಶೆ ವಾಕ್ಚಾತುರ್ಯದಲ್ಲಿ, ಪ್ರತಿಭೆ, ಪಾಂಡಿತ್ಯ, ವ್ಯುತ್ಪತ್ತಿಯಲ್ಲಿ—ಎಲ್ಲಕ್ಕೂ ಮಿಗಿಲಾಗಿ ಕಡಲನ್ನು ನೂರಾರು ಭಂಗಿಯಲ್ಲಿ ಚಿತ್ರಿಸಿದ ವೈವಿಧ್ಯ ಆಧುನಿಕ ವಚನಕಾರರಲ್ಲಿ ಶ್ರೀ ಪರಮೇಶ್ವರ ಭಟ್ಟರ "ಉಪ್ಪುಕಡಲ" ಕೃತಿಯ ಮಟ್ಟದಲ್ಲಿ ನಿಲ್ಲುವ ವಚನಕಾವ್ಯ ವಿರಳ.

ಬ್ರಹ್ಮಸೃಷ್ಟಿಯ ರುಂದ್ರ ಸಾಗರದ ಮೇಲೆ ಕೋಟ್ಯನುಕೋಟಿ ಬಾನಾಡಿಗಳು ತಮ್ಮ ಸುಬ್ಬನಿಯ ತೆರೆಯೊಡನೆ ಬೆರಸಿ ತಡಿಗೆ ಹೊರಹೊಮ್ಮಿಸುವಂತೆಯೇ ಕವಿ ಪರಮೇಶ್ವರ ಭಟ್ಟರ ಸೃಷ್ಟಿಯ ಈ "ಉಪ್ಪು ಕಡಲ"ನಲ್ಲೂ ಇಂತಹ ನೂರಾರು ಭಾವಗೀತೆಗಳು ಅವುಗಳ ನಾದಮಾಧುರ್ಯದಿಂದ, ಮೋಹತೆ, ಗೇಯತೆಗಳಿಂದ ಜನಮನವನ್ನು ತಣಿಸುತ್ತಿವೆ. ಮುಂದೆಯೂ ಎಲ್ಲರ ಮನ ಕುಣಿಸುತ್ತಿರಲಿ.

# ೧೪. ಕವಿ ಕಂಡ ಕಡಲು

ರಾ. ಲಕ್ಷ್ಮೀನಾರಾಯಣ

೧

"ಕ್ಷಣೇ ಕ್ಷಣೇ ಯನ್ನವತಾಮುಪೈತಿ
ತದೇವ ರೂಪಂ ರಮಣೀಯತಾಯಾಃ"

ಕ್ಷಣಕ್ಷಣಕ್ಕೂ ನವತ್ವವನ್ನು ಹೊಂದುವುದೇ ಸೌಂದರ್ಯದ ಸ್ವಭಾವಸಿದ್ಧ ಲಕ್ಷಣ. ನಿರಂತರ ಚಲನೆ, ಪರಿವರ್ತನೆ ಇರುವಲ್ಲಿ ಸೌಂದರ್ಯವಿದ್ದೇ ಇರುತ್ತದೆ. ಇಡೀ ಸೃಷ್ಟಿಯೇ ಇದಕ್ಕೆ ಲಕ್ಷ್ಯವಾದರೂ, ಸೃಷ್ಟಿಯ ಮಹಾದ್ಭುತಗಳಲ್ಲಿ ಒಂದಾದ ಕಡಲು, ಮೊದಲಿನಿಂದಲೂ ಕವಿಜನದ ಹೃದಯವನ್ನು ಸೆರೆ ಹಿಡಿದ ಅದ್ಭುತ ವಸ್ತು. ವೇದಕಾಲೀನ ಋಷಿಗಳಿಂದ ಹಿಡಿದು, ಅನೇಕ ಮಹಾಸತ್ತ್ವರಿಗೆ, ಮಹದ್ಭಾವನದ ಮಹತ್ಪ್ರೇರಣೆ ನೀಡಿರುವುದು ಕಡಲು. ಆದಿಕವಿ ವಾಲ್ಮೀಕಿಯಿಂದ ಹಿಡಿದು, ಇಂದಿನವರೆಗೂ ಎಷ್ಟು ಜನ ಕವಿಗಳು ಹಾಡಿ ಹಿಗ್ಗಿಲ್ಲ! ಅದೆಷ್ಟು ಜನ ಅದರ ವಿರಾಡ್ರೂಪದ ದರ್ಶನಕ್ಕೆ ಮಾರುಹೋದವರಿಲ್ಲ! ಆದರೂ ಅದು ನಿತ್ಯಂ ಹೊಸತು. ಮಾನವ ತನ್ನೆಲ್ಲ ಅಹಂಕಾರ ನಿರಸನ ಮಾಡಿ, ತಾನೆಷ್ಟು ಕುಬ್ಜನೆಂಬುದನ್ನು ತಲಸ್ಪರ್ಶಿಯಾಗಿ ಮನಗಾಣುವ ಮಹಾಸ್ಥಾನ.

ಶ್ರೀ ಪರಮೇಶ್ವರ ಭಟ್ಟರ ಕವಿಹೃದಯ ಎಳೆತನದಲ್ಲೇ ಅದರ ಭವ್ಯತೆಗೆ ಹೊಂಪುಳಿಹೋಗಿ ಮನದಲ್ಲೇ ಕನವರಿಸಿತ್ತು:

"ನೆಲಜಲ ಮುಗಿಲಿನ ಮೇಳದ ಚೆಲುವನು
ಅರಿವರೆ ಕೊನೆ ಮೊದಲಿಲ್ಲ"

ಎಂದು ಬಾಲಸಹಜವಾದ ಮುಗ್ಧಭಾವವನ್ನು ತಾಳಿ, ಭಾವುಕತೆಯ ಆವೇಶದಲ್ಲಿ ಹೀಗೆ ಕನವರಿಸಿದ ಕವಿಹೃದಯ, ತನ್ನ ಚೇತನ ಬೆಳೆದಂತೆಲ್ಲಾ, ಆ ದಿವ್ಯ ದರ್ಶನದಿಂದ ತನ್ನ ಮನೋಮುಕುರದಲ್ಲಿ ಪ್ರತಿಭಾಸಿತವಾದ ಅದರ ಬೆಡಗಿನ ಲೀಲೆಯನ್ನು ವರ್ಣಿಸುವ ಭರದಲ್ಲಿ ಪುಟಿದೆದ್ದ ವಾಕ್ತರಂಗ ಘೋಷವನ್ನು ಕೇಳಿಯೇ ಅನುಭವಿಸಬೇಕು. ಕಡಲಿನ ಬೆಡಗನ್ನು ಮನಸಾರೆ ಅರಿಯಬೇಕಾದರೆ ಅದರ ಮೊರೆತವನ್ನು ಕಿವಿಯಾರೆ ಕೇಳಬೇಕಾದರೆ, ಅದರ ತೆರೆಯೊಡನೆ ನಲಿಯಬೇಕೆನಿಸಿದರೆ ಕವಿಯ ಈ ಓಜೋಮಯವಾದ ಮಾತುಗಳನ್ನೇ ಕೇಳಬೇಕೇನೋ!

"ಭಟ್ಕಳವೆಂದರೆ ಭರ ಬಂದ ಕಡಲಂತೆ
ಕವಿ ಎದೆಯುಬ್ಬುವುದುಕ್ಕುವುದು.
ಕಣ್ದೆಟ್ಟಿ ಹೊರಳಿಸಿ ಕಡಲತ್ತ ಹಾಯಿಸು
ನೀಲಿಮವಾರಿಧಿ ಏನು ಸೊಗಸು !
ತೆರೆಯನು ತೆರೆಯಟ್ಟಿ, ಉಬ್ಬುಬ್ಬಿ ಮೇಲೆದ್ದು
ಎದೆಯುದ್ದ, ಕೊರಳುದ್ದ ಆಳುದ್ದವಾಗಿ
ಬಾಗಿ ಮೈ ಬಳುಕಿಸಿ, ತೂಗಿ ತಲೆದಿರುಗಿಸಿ
ಹೊಡೆಮುರಿಯುತಪ್ಪಳಿಸಿ, ಉರುಳುರುಳುತೆ.
ಜುಳುಜುಳನೆ ನೊರೆಗರೆದು, ಗುಳುಗುಳನೆ ಸುಳಿಸುಳಿದು,
ದಡಕೆ ಕಚಕುಳಿಯಿಡುವ ಕಡಲನೋಡು.
ಖೇದ, ಆಮೋದದ, ರೋಷ ಸಂತೋಷದ
ತೆರೆಗಳ ಪರಿಪರಿ ಲೀಲೆ ನೋಡು.

ಬೆಳ್ನೆರೆಯ, ತೆಂಪನೆಯ ಬಿಳಿ ಮಳಲ ರಾಶಿ. ಅವನಿಗೆ ಕಾಣುವ ಪರಿಯಾದರೂ

"ಅಲೆಯಾಗಿ, ಹನಿಯಾಗಿ, ಒಡೆದು ಮುತ್ತಾಗಿ,
ಬೆಳ್ನೆಯ ನೆರೆಗೆಯ ಹಾಸಿ ಹರಹಿ"ದಂತೆ.

ಇಂಥ ಉಜ್ಜ್ವಲ ಕವನವನ್ನು ವ್ಯಾಖ್ಯಾನಿಸುವ ಮೂರ್ಖತೆಗೆ ಹೋಗದೆ, ಇದರ ಒಟ್ಟು ಸೌಂದರ್ಯವನ್ನು ಪರಿಭಾವನೆಗಷ್ಟೇ ಒಳಪಡಿಸಿ, ಆಸ್ವಾದಿಸಬೇಕೆಂದು ಹೇಳಬಹುದು.

ಶ್ರೀಮಾನ್ ಭಟ್ಟರು, ತಮ್ಮ ಶಬ್ದವೈಭವದಲ್ಲೇ ಕಡಲ ವೈಭವವನ್ನು ಸೆರೆಹಿಡಿಯುವ ಸ್ತುತ್ಯಕಾರ್ಯ ಮಾಡಬಲ್ಲವರು. ಕನ್ನಡದ ಸ್ವರಗಳ ಏರಿಳಿತದಲ್ಲಿ, ತೆರೆಗಳ ಏರಿಳಿತವೂ, ಕವಿಮನದ ಏರಿಳಿತಗಳೂ ಎಷ್ಟು ಸೊಗಸಾಗಿ ರೂಪುಗೊಂಡಿವೆ! ಅಂತಲಯದ ಹಾಸು ಬೀಸುಗಳು, ಪ್ರಾಸಾನುಪ್ರಾಸಗಳು, ಆ ಕವನದ ಉಜ್ಜ್ವಲತೆಗೆ ಮಕುಟವಿಟ್ಟಿವೆ.

ಭಾವಗೀತರೂಪಿ ಚಿಲುಮೆಯ ಮೂಲಕ ಉದ್ಬುದ್ಧವಾದ ಇವರ ಕಡಲ ಪ್ರೇಮ ಉಪ್ಪು ಕಡಲಿನಲ್ಲಿ ಕಡಲುಗೊಂಡಿದೆ.

೨

ವಿನಾಯಕರ ಸಮುದ್ರಗೀತೆಗಳನ್ನು ಬಿಟ್ಟರೆ, ಕಡಲನ್ನು ಕಂಡು ಮೋಹಿತರಾಗಿ, ಅದರ ವಿರಾಟ್ ದರ್ಶನವನ್ನು ವಚನದರ್ಪಣದ ಮೂಲಕ ಕಾಣಿಸಿದವರು ಶ್ರೀ ಪರಮೇಶ್ವರ ಭಟ್ಟರು. ಅವರ ಉಪ್ಪು ಕಡಲಿನ ನೂರೈದು ವಚನಗಳಲ್ಲಿಯೂ ಏಕಮುಖವಾಗಿ, ಏಕಪ್ರಕಾರವಾಗಿ ವ್ಯಕ್ತವಾಗುವ ಭಾವ ಕವಿ ಕಡಲಿನೊಂದಿಗೆ ಬೆಳೆಯಿಸಿಕೊಂಡಿರುವ ಆತ್ಮೀಯ, ಮಧುರ, ಹೇತುಕ ಪ್ರೇಮ. ಈ ಆತ್ಮೀಯತೆಯ ನಿಟ್ಟಿನಲ್ಲಿ ನೋಡಿದಾಗ ವಿನಾಯಕರು ಸಮುದ್ರರಾಜನ ಮಂದಿರದ ಗರ್ಭಗುಡಿಯ ಹೊಸ್ತಿಲಲ್ಲೇ ನಿಂತು ವಿವಿಧ ಸ್ವರದಿಂದ ಗಾನಗೈದು ಸೇವೆ ಸಲ್ಲಿಸುವ ಭಕ್ತನ ಹಂತದಲ್ಲೇ ನಿಂತರೆ, ಉಪ್ಪು ಕಡಲಿನ ಕವಿ ಗರ್ಭಗುಡಿಯೊಳಹೊಕ್ಕು, ಮನಸಾರೆ ತಾನೇ ಪೂಜಿಸಿ ನಲಿಯುವ ಪೂಜಾರಿಯ ನೆಲೆಗೇರುತ್ತಾರೆ.

ವಿನಾಯಕರ ಕಡಲ ಕಾಣ್ಕೆಯಲ್ಲಿ ಶುದ್ಧ ಸೌಂದರ್ಯೋಪಾಸನೆಯ ಹೃದ್ಭಾವನೆಗಳ ಪರಿಸ್ಫುಟತ್ವವಿದ್ದರೆ, ಇಲ್ಲಿ ಅದು ಆ ಸೌಂದರ್ಯವನ್ನನುಭವಿಸಿ, ಅಲ್ಲಿಗೇ ನಿಲ್ಲದೆ, "ಇಂಥ ಅದ್ಭುತ ಸೌಂದರ್ಯವನ್ನು ನಿರ್ಮಿಸಿದ ಸದಾಶಿವಗುರುವಿನ ಅಹೇತುಕ ಕರುಣೆ ಎಂಥದು" ಎಂಬ ವಿಸ್ಮಯಾಭಿಭೂತವಾದ ಉದ್ಗಾರದೊಡನೆ, ಅವನ ವಿರಾಡ್ರೂಪ ಚಿಂತನೆಯ ಅಂತಿಮಸ್ತರಕ್ಕೇರುತ್ತದೆ. ಇಲ್ಲಿನ ಎಲ್ಲ ವಚನಗಳನ್ನೂ ಈ ದೈವಿಕವಾದ ಹಿನ್ನೆಲೆಯಲ್ಲಿ ಆಸ್ವಾದಿಸಬೇಕು.

ಕಡಲು ಈ ಕವಿಗೆ ಬೃಹತ್ತಾದುದೂ ನಿಜ, ಮಹತ್ತಾದುದೂ ನಿಜ. ಆದರೆ ಅದು ಬೃಹತ್ತಮನೆಡೆಗೆ, ಮಹತ್ತಮನೆಡೆಗೆ, ನಡೆವ ಯಾನದಲ್ಲಿ ಹಾಯಿದೋಣಿಯಾಗಿದೆ ಎನ್ನಬಹುದು.

ವಿಸ್ಮಯಕೆ ವಿಸ್ಮಯವಾದ ಕಡಲನ್ನು ಕಂಡು ಕವಿ ಮೂಕನಾಗುತ್ತಾನೆ, ಹೊಂಪುಳಿಹೋಗುತ್ತಾನೆ, ಮಂದನಾಗುತ್ತಾನೆ, ದುಃಖಿಯಾಗುತ್ತಾನೆ. ಆದರೆ ಪಡುವಣ ಕಡಲೆಂಬುದು ಬರಿಯ ಕಡಲು ಮಾತ್ರವಾಗಿದ್ದರೆ, ಕವಿದೃಷ್ಟಿ ಇಲ್ಲಿಗೇ ಸೀಮಿತವಾಗುತ್ತಿತ್ತೇನೋ, ಆದರೆ ಅದು ಅವನಿಗೆ ಜೀವಾತ್ಮಪರಮಾತ್ಮರ "ಸರಸ ಸುಹಾಸದ ರಸೋದಧಿಕಣಾ." ಆದ್ದರಿಂದಲೇ ಆ ಪೂರ್ಣದೃಷ್ಟಿಗೆ ವಾಚಾಲತೆಯೂ, ತೀವ್ರತೆಯೂ, ಸುಖವೂ ಅಲ್ಲಿಂದಲೇ ಲಭಿಸುತ್ತದೆ.

ತಿಂಗಳುಗಟ್ಟಲೆ ನೆಲದ ಋಣ ತೊರೆದು, ಕಡಲ ಮೇಲೆ ಇರಬೇಕಾಗಿ ಬಂದಾಗ, ಸಮುದ್ರಗೀತಗಳು ಹೊಮ್ಮಿದಂತೆಯೇ, ಈ ಕವಿಗೂ ತನ್ನ ಶ್ವಾಸಕೋಶಗಳನ್ನು ತುಂಬುವ ಗಾಳಿ ಪಡುಗಡಲಿನದಾದಾಗ, ತನ್ನ ನೀರಡಿಕೆಯನ್ನು ಕಳೆವ ನೀರು ಪಡುಗಡಲದಾದಾಗ, ಅದರ ಉಪ್ಪಿಂದ ಕವಿಹೃದಯ ಕೃತಜ್ಞತೆಯಿಂದ ಸೂಸಿದ ಆನಂದಾಶ್ರುವೇ ಉಪ್ಪು ಕಡಲಾಗಿದೆ.

ಕಡಲ ವರ್ಣನೆಯ ವ್ಯಾಜದಲ್ಲಿ ತನ್ನ ಅಧಿದೈವವನ್ನು ನಾನಾ ವಿಧವಾಗಿ ಸ್ತುತಿಸಿದ್ದಾರೆ. ಇದು ಒಂದು ರೀತಿಯ ವ್ಯಾಜಸ್ತುತಿ.

ಕಡಲಿನ ತೆರೆಗಳ ಲೀಲೆಯನ್ನು ತುಂಬ ಮನೋಜ್ಞವಾಗಿ ವರ್ಣಿಸಿದ್ದಾರೆ. ಇಂಥ ತೆರೆಗಳ ಲೀಲಾ ವರ್ಣನೆ, ರತ್ನಾಕರನನ್ನು ನೆನಪಿಗೆ ತರುತ್ತದೆ:

"ತೆರೆಗಳು ಒಂದನು ಒಂದು ಬೆನ್ನಟ್ಟಿ ಬರುತ್ತಿವೆ
...........................................
ತೆರೆಗಳು ಒಂದನು ಒಂದು ನುಂಗಿ ಸೊಕ್ಕಿ ಬರುತ್ತಿವೆ.
ಒಂದನಿನ್ನೊಂದು ನುಂಗಿ ನೊಣೆವಂತೆ ಸೆಣಸಿ ಕುಣಿವಂತೆ
ಮುಂದೆ ಹೋಹ ತೆರೆಯನು, ಹಿಂದೆ ಬಹ ತೆರೆ
ಬೆನ್ನಟ್ಟಿ ಬರುವ ಪರಿಯ ನೋಡಾ
ಬಂದ ತೆರೆ ದಡಕೆ ಕಚಗುಳಿಯಿಡುವಷ್ಟರೊಳು,
ತೆರೆಯ ಮುಡಿ ಮುರಿದು ಕಡೆಗೆ
ತನ್ನಡಿಗೆ ತಾನೆ ಕೆಡೆವ ಪರಿಯ ನೋಡಾ"

ಎಂದು ಆಶ್ಚರ್ಯಪಟ್ಟಿದ್ದಾನೆ. ವಚನಕಾರ ಬಸವೇಶ್ವರರು "ಸಮುದ್ರಕ್ಕೆ ತೆರೆಯೇ ಶೃಂಗಾರ" ಎಂದು ಹೇಳಿದರು. ಆದರೆ ಈ ವಚನಕೋವಿದ ಅವುಗಳ ಪರಿಪರಿಯ ಲೀಲೆಯನ್ನು ವಾಸ್ತವಿಕವಾಗಿ ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ. "ನಾನು ವಾಸ್ತವವಾದಿಯಯ್ಯಾ" ಎಂದು ಕವಿಯೇ ಹೇಳಿಕೊಂಡಿದ್ದಾರೆ.

ಕವಿಯ ದೃಷ್ಟಿಯಂತೆ ಸೃಷ್ಟಿ. ಅದರ ತೆರೆಯ ಉರುಳು ವ್ಯೋಮುರಿದಂತೆ, ಅದರ ಮೊರೆ ಕನವರಿಸಿದಂತೆ ಕೇಳುತ್ತದೆ.

"ಗಾಳಿ ಪುಂಗಿ ಊದಿದಾಗ
ನಾಗರ ಹೆಡೆಯಂತೆ ಬುಸುಗುಟ್ಟಿ ಹೆಡೆಬಿಚ್ಚಿ ನಿಂತ ತೆರೆ,
ಹೆಚ್ಚು ಹೊತ್ತು ನಿಲ್ಲಲು ಶಕ್ತಿಸಾಲದೆ,
ಮರುಕ್ಷಣದಲ್ಲೆ ಕೆಡೆದು ಬೀಳುವಂತೆ"

ತನ್ನಹಂಕಾರ ಸರ್ಪ ಕಡಿದು ಬೀಳಲೆಂದು ಆಶಿಸುತ್ತಾನೆ.

"ನೀಲಾಕಾಶಕೆ ನೀಲಾಂಬೋಧಿಯನೆದುರಿಟ್ಟ ಗುರು
ನಿನ್ನದ್ಭುತವಿದೊ ನಾ ಮಣಿವೆನು."

ಎನ್ನುವ ಇದೇ ಭಾವ ಕವಿ ಶ್ರೀಕಣವಿಯವರಲ್ಲಿ ಹೀಗೆ ಮೂಡಿದೆ:

"ಬಾನಿನೆದೆಯ ಭವ್ಯತೆಗಿದೊ
ಕಡಲು ಹಿಡಿದ ಕನ್ನಡಿ, ಬೇರೆ ಬೇಡ ಮುನ್ನುಡಿ."

ಸೌಂದರ್ಯಾರಾಧಕನಾದ ಕವಿ ಕಡಲಿನ ಬಾಹ್ಯ ಸೌಂದರ್ಯದಿಂದಷ್ಟೇ ತೃಪ್ತನಲ್ಲ, ಅವನು ರೂಪಾರಾಧನೆಯ ಉನ್ನತ ಶಿಖರದಿಂದ ಕೆಳಕ್ಕಿಳಿದು,

"ಸಂಸ್ಕೃತಿ ನಾಗರಿಕತೆಗೆ, ತತ್ತ್ವಾನ್ವೇಷಣೆಗೆ, ಮತಧರ್ಮ ಪ್ರಸಾರಕೆ,
ಬೇಸಾಯಕೆ, ಆಹಾರಕೆ.........ಬೇಹಾರಕೆ ಹರದಕ್ಕೆ
ಕಡಲಿನೊಡನೆ ಕೆಳೆಯ ಬೆಳಸಿ, ಆಪ್ತರಾದರಯ್ಯಾ ಜನರು
ಇಂಥ ಕಡಲು ಉಪ್ಪಾದರು, ಇದರ ಸಂಗ
ಸವಿಯಾಯಿತ್ತು ಜನಕೆ" ಎಂದು ಕೈವಾರಿಸುತ್ತಾನೆ.

ನಮ್ಮ ಈ ಪಂಡಿತ ಕವಿಗೆ ಕಡಲ ಮೊರೆಹದಲ್ಲಿ,

"ಮೂರು ಲೋಕದ ಗಂಡ
ಜೇವೊಡೆವ ಗಾಂಡಿವಿಯ ಸಿಂಜಿನಿಯ ಗಂಡುನಾದ,"

ಮಾತ್ರವಲ್ಲ ಕೇಳಿ ಬರುವುದು; ಅದು

"ಅಂಶಗಣದೊಳು ರುದ್ರ
ರಸಂಗಳೊಳು ರೌದ್ರ
ಛಂದದೊಳು ಮತ್ತೇಭವಿಕ್ರೀಡಿತ.
ನೃತ್ಯದೊಳು ಕಥಕ್ಕಳಿ
ಕಾವ್ಯಪ್ರಸಾರದೊಳು ಕನ್ನಡ ಚಂಪು
ವಸ್ತು ವಿನ್ಯಾಸದೊಳು ಮಹಾಕಾದಂಬರಿ."

ಕಡಲಿನ ಗಭೀರತೆಯನ್ನು ಕಂಡು. ತಲಸ್ಪರ್ಶಿಯಾಗಿ ಅವಗಾಹಿಸಿ ಹೊಂಪುಳಿ ಹೋದವರುಂಟು. ಅದರ ಅನಂತತೆಯನ್ನು ತಮ್ಮ ಅಕ್ಷರದಲ್ಲಿ ಸೆರೆಹಿಡಿದವರುಂಟು, ಅದರ ತೆರೆಯ ಚಂಚಲತೆಯೊಡನೆ ಮಗುವಿನಂತೆ ಆಟವಾಡಿದವರುಂಟು, ಅದರ ರುದ್ರತೆಯನ್ನು ಧೀರಗಂಭೀರವಾಗಿ ಬಣ್ಣಿಸಿದವರುಂಟು, ಆದರೆ, ಕಡಲಿನೊಡನೆ ಆಪ್ತಸಖನಂತೆ, ಲೋಕಾಭಿರಾಮವಾಗಿ ಸರಸಸಲ್ಲಾಪ ಮಾಡಿದವರು ಶ್ರೀ ಭಟ್ಟರೊಬ್ಬರೇ.

ಹೊರಗಣ ಕಡಲ ನೋಡಿ, ಕವಿಯೊಳಗಣ ರಸವಾರಿಧಿ ಉಕ್ಕೇರಿದಾಗ, ನಡೆದ ಎರಡು ಕಡಲುಗಳ ಪ್ರತ್ಯಾಲಾಪವೇ ಇಲ್ಲಿ ವಚನತರಂಗವಾಗಿ ರೂಹುವಡೆದಿದೆ.

ಸಖನಲ್ಲಿ ಸಂಕೋಚವೆ? ತನ್ನ ಕಥೆ, ವ್ಯಥೆಯನ್ನು. ಹಾಡು ಪಾಡನ್ನು, ನೋವು ನಲಿವನ್ನು, ಕಡಲು ಒರೆಯಿತೆಂದು ಹೇಳುತ್ತಾರೆ ಕವಿ:

"ನನ್ನ ಕಡಲ ಸಲ್ಲಾಪ ಮೊನ್ನೆ ಸೊಗಸಾಗಿ ನಡೆಯಿತ್ತಯ್ಯ.
ಅದು ತನ್ನ ಮನೋವ್ಯಥೆಯ ತೋಡಿಕೊಂಡರೆ,
ನಾನು ನನ್ನ ಮನೋವ್ಯಥೆಯ ತೋಡಿಕೊಂಡೆನಯ್ಯ
ತನ್ನೊಳಗಣ ಮತ್ಸ್ಯ ಜಗತ್ತಿನ ಮಾತ್ಸರ್ಯಮಯದ ಬದುಕುಸಾವುಗಳ
ಹೋರಾಟ ಕಥೆಯನು ಕಡಲು ಹೇಳಿಕೊಂಡು ಅತ್ತಿತಯ್ಯ."

ಹೀಗೆ ಉಭಯ ಕುಶಲೋಪರಿ ನಡೆಯಿಸುವ ಸಖನನ್ನು ಉಪಾಲಂಭ ಮಾಡುವ ಹಕ್ಕು ಪ್ರಾಣ ಸ್ನೇಹಿತನಿಗಲ್ಲದೆ ಮತ್ತಾರಿಗೆ? :

"ಬೇಗ ಬಂದರೆ ನಗುವುದು ಕಡಲು, ತಡವಾಗಿ ಬಂದರೆ,
ಈಗ ತಮಗೆ ಬಿಡುವಾಯಿತೇ ಎಂದು ಹಂಗಿಸುವುದು.
ಮೇಲಿಂದ ಮೇಲೆ ಹೋದರೆ ಪರಿಹಾಸಗೈವುದು
ಸುಯ್ಯುವುದು, ಬಯ್ಯುವುದು, ಗಹಗಹಿಸಿ ನಗುವುದು."

ಇದರ ಮುಂದಿನ ಮೆಟ್ಟಿಲೇ ವಾತ್ಸಲ್ಯ ಭಾವ.

"ನಿನಗೆ ಬೇಡವಾದರೆ, ನಾನಾಗಿ ಬಳಿ ಬಂದರು ನನ್ನನ್ನು ನೂಕಿ ಕಳೆವೆ.
ತನಗೆ ಬೇಡದ ಹೊತ್ತಿನೊಳು ಓಡೋಡಿ ಬಂದು ಮೇಲೇರುತಿರುವ
ತನ್ನ ಮಗುವ ನೂಕಿಕೊಳುವ ತಾಯಿ ಬುದ್ಧಿ ನಿನ್ನದು.
ಅಂತೇ ಬೇಕಾದರೆ, ಯಾವ ಮೂಲೆಯೊಳು ಅಡಗಿದ್ದರು
ಅರಸಿ ಬಂದು ಒಲವರದ ನೊರೆಗರೆದು ಮೊರೆ ಮೊರೆದು ಮೆರೆದು ಮುದ್ದಾಡಿ ನಲಿವೆ."

ಇಂಥ ಆತ್ಮೀಯತೆಯನ್ನು ಬೆಳಸಿಕೊಂಡ ಕವಿ ಶ್ರೀ ಭಟ್ಟರೊಬ್ಬರೇ.

ತಾನು ಬೇರೆಯಲ್ಲ, ಸುತ್ತಣ ಪರಿಸರಣ ಬೇರೆಯಲ್ಲ ಎಂಬ ಅನುಭೂತಿಯನ್ನು ಪಡೆದ ಕವಿಯ ಕಣ್ಣಿಗೆ ಸೌಂದರ್ಯ, ವಸ್ತುವಿನ ಕೇವಲ ಬಹಿರಂಗದ ಗುಣವಲ್ಲ; ಅದೊಂದು ದೈವೀ ಪ್ರಕಾಶನ. ಈ ಚೈತನ್ಯಾತ್ಮಕವಾದ ಚೆಲುವನ್ನು ನಿರ್ಲಿಪ್ತವಾದ ಪರಿಭಾವನೆಯಿಂದ ಒಲಿಯಬೇಕೆಂಬುದು ಈ ಕವಿಯ ಮನೋಧರ್ಮ. ಕಡಲನ್ನು ಕಂಡು,

"ಕತ್ತಲಲ್ಲಿ ಬೆಂಕಿಯ ಹಾಳೆ, ಹಗಲಿನಲ್ಲಿ ನೀಲಿಯ ಚಾಪೆ
ನೀನಲ್ಲದೆ ಇದ ಹಾಸಿದ್ದವರನ್ಯರುಂಟೆ?
ಈ ಪಡುಗಡಲೆಂಬುದು ನಿನ್ನ ಸರ್ವಶಕ್ತಿಯ ಸುಂದರ ಸೃಷ್ಟಿ ಸದಾಶಿವಗುರು."

ಎಂದು ಹೇಳಿರುವ ಈ ವಾಕ್ಯದ ಭಾವ, Lord Byron ಕವಿಯು ಕಡಲನ್ನು ಕುರಿತ ಈ ವಾಕ್ಯದ ಭಾವದೊಂದಿಗೆ ಎಷ್ಟು ಸಮತಾನವಾಗಿ ಮಿಡಿಯುತ್ತದೆ!

"Thou glorious mirror, where the almighty's form
glasses itself in tempests in all time,
the image of eternity, the throne
of the invisible even from out of thy slime."

ಭಾಷೆ ಬೇರೆ, ಭಾವವೊಂದೆ. "ಶಿವನಿಲ್ಲದ ಸೌಂದರ್ಯವು ಶವವಾಗುವ ಕಣ್ಣು" ಎಂಬ ದೃಷ್ಟಿಯೇ ಇದಕ್ಕೆ ಕಾರಣ. ಇದು ಶ್ರೀ ಭಟ್ಟರ ಆತ್ಮಾಯತನವೂ ಹೌದು.

'ಕಡಲು ಕಂಡು ನಾನೇನಾದೆನೆಂಬುದನೆ ನಾನರಿಯದಾದೆ'. 'ಕಡಲು ಕಂಡ ಮಾನವನಿಗೆ ಗರುವ ಮುರಿದು ಬೀಳುವುದಯ್ಯಾ,' 'ಕವಿಯು ತುಂಬ ಕಡಲ ಮೊರೆ ತುಂಬಿತ್ತಯ್ಯ.' 'ಕಡಲು ನನ್ನೊಳು ತನ್ನನೆ ಕಂಡುಕೊಂಡಿತ್ತಯ್ಯ,' ಎಂದು ಆರಂಭವಾಗುವ ಈ ಎಲ್ಲ ವಚನಗಳಲ್ಲಿ ಕವಿ ಕಡಲಿನಿಂದ ಪಂಚೇಂದ್ರಿಯ ತೃಪ್ತಿಯನ್ನು ಪಡೆದು ಜೀವನದ ಚಿರಂತನ ಸ್ಫೂರ್ತಿಯನ್ನು, ಕೃತಕೃತ್ಯತೆಯನ್ನು ಪಡೆದು, ತಾದಾತ್ಮ್ಯಭಾವವನ್ನು ಹೊಂದಿರುವುದು ಕಂಡು ಬರುವುದು ಸತ್ಯವಾದರೂ, ಈ ಪುನರುಕ್ತಿಯಲ್ಲಿ ಏಕತಾನತೆಯಿಂದುಂಟಾಗುವ ಬೇಸರಿಕೆಯೂ ಆಗುತ್ತದೆಂದು ವಿಧಿ ಇಲ್ಲದೆ ಹೇಳಬೇಕಾಗುತ್ತದೆ.

ಕಡಲಿನ ಮಹಾದ್ಭುತವನ್ನು ವರ್ಣಿಸಿದ ಕವಿ, ಉಪ್ಪಿನ ಮಹತ್ತ್ವವನ್ನು ಹೇಳುವ ಈ ವಚನಗಳಲ್ಲಿ ಕಲೆಯ ಅಂಶವಂತೂ ಇಲ್ಲವೇ ಇಲ್ಲವೆಂಬಷ್ಟು ಶೂನ್ಯ; ಇಲ್ಲಿ ಉಪ್ಪೇ ಅಧಿಕ.

'ಖಾರದಾರ್ಭಟೆಯ ತಗ್ಗಿಪರೆ.........................ಗುರುವೆ',
'ಕನ್ನಡ ಜನ ಉಪ್ಪು ಕುರಿತು ನಾಲ್ಕಾರು ಗಾದೆ............ಗುರುವೆ',
'ಮಾನವ ಶರೀರಕೆ ಸೋಡಿಯಂ ಕ್ಲೋರೈಡಿನಗತ್ಯವುಂಟಯ್ಯ'.
'ನೀನು ಕೆಲವರಿಗೆ ಕಂಚು ಕೊಟ್ಟೆ.......................ಗುರುವೆ'

ಇತ್ಯಾದಿ. ಆದರೆ ಅಲ್ಲಲ್ಲಿ ಇವರ ಕ್ಷಾರವನ್ನು ತಗ್ಗಿಸುವ ಮಾತುಗಳೂ ಇವೆ ಎಂಬುದಕ್ಕೆ ಹೃದ್ಯವಾದ ಈ ಮಾತುಗಳು ಸಾಕು—

"ಭೂಮಿಯ ಶಿಲೆ, ತಿರೆಯ ಮಣ್ಣು ಕರಗಿ
ಸಾಗರ ಸೇರಿ ಉಪ್ಪಾಯಿತ್ತೆಂಬರಯ್ಯ
ಯಾರ ಮನದ ಶಿಲೆ, ಯಾರ ಮನದ ಕಣ್ಣು ಕರಗಿ
ನನ್ನ ಬಾಳುಗಡಲು ಉಪ್ಪಾಯಿತ್ತು ಸದಾಶಿವ ಗುರು?"

ಆದಿ ಕವಿ ಪಂಪನ ಚಂದ್ರೋದಯದ ಬಹುಸುಂದರವಾದ ವರ್ಣನೆ ಇರುವಂತೆ, ಈ ಕಾವ್ಯದಲ್ಲೂ ಕಡಲಿನಲ್ಲಿ ಮುಳುಗುತ್ತಿರುವ ರವಿಯಬಿಂಬ ತುಂಬ ಮನೋಹರ. ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ರವಿಬಿಂಬದ ಕಂಡರಣೆಯಲ್ಲಿ ಕವಿಯ ಸೂಕ್ಷ್ಮ ನಿರೀಕ್ಷಣ ಶಕ್ತಿಯೂ, ಸೌಂದರ್ಯೋಪಾಸನೆಯ ತೀವ್ರತೆಯೂ, ರಸಜ್ಞದೃಷ್ಟಿಯೂ ಮುಪ್ಪುರಿಗೊಂಡು, ಅನುಪಮವಾದ ಕಾಣ್ಕೆಯಲ್ಲಿ ತನ್ನ ಬಿಡುತೆಯನ್ನು ಕಂಡಿದೆ. ರವಿಬಿಂಬ ತೇಲುವ ಚೆಂಡಾದಾಗ, ಕವಿ ಕ್ರೀಡಾಸಕ್ತ ಯುವಕನಾಗಿ, ತೇರಿನ ಪರಿಜಾವಾಗ ಪರಸೆಯ ನೋಟಕನಾಗಿ, ಬುಗುರಿಯಾಯಿತೆಂದು ಆಡಿಸುವ ಬಾಲಕನಾಗಿ, ಅಮೃತ ಕಲಶವೆಂದು ತೃಷಿತ ಪಥಿಕನಂತೆ, ಶಿವಲಿಂಗವಾಯಿತೆಂದು ಜಂಗಮಭಾವನೆಯನ್ನು ತಾಳಿ, ತಟ್ಟೆಯಾಯಿತೆಂದು ಉಂಬ ಹಸುಳೆಯ ಭಾವವಾಂತು, ಬೆಳಗುವ ಸೊಡರಕುಡಿಯಾಯಿತೆಂದು ಪೂಜಾರಿಯಾಗಿ ನಲಿವ ಆತ್ಮಸಮರ್ಪಣ ಭಾವ ಎಷ್ಟು ಜನ್ಮದ ಸಂಸ್ಕಾರ!

ಹೀಗೆ, ಕಡಲಿನ ತೆರೆ ತೆರೆಯ ಮೊರೆತ ಇವರಿಗೆ ಸುಪರಿಚಿತ. ಅದರ ಹನಿಹನಿಯ ರಸದೊರತೆಗೆ ಇವರ ನರನರವೂ ರಸನೆಯಾಗಿದೆ. ಹೀಗೆಂದು ಹೇಳಿದರೆ, ಅದರ ಕಲೆಯ ಉತ್ತಮಾಂಶಕ್ಕೆ ಕಾರಣವಾದ ಕವಿ-ವ್ಯಕ್ತಿತ್ವದ ತಲ್ಲೀನತೆಯನ್ನು ಕುರಿತು ಹೇಳಿದಂತಾಯಿತೇ ಹೊರತು, ಅದರ ಬೇರೊಂದು ಮುಖದ ಪರಿಚಯವೂ ಆದಂತಾಗಲಿಲ್ಲ.

ಇಲ್ಲಿಯ ದೊಡ್ಡ ದೌರ್ಬಲ್ಯವೆಂದರೆ, ಕವಿ ಎಷ್ಟು ತೀವ್ರವಾಗಿ ಅನುಭವಿಸುತ್ತಾನೋ, ಆ ಅನುಭವದ ಪಡಿಮೂಡಿಕೆ, ಅಷ್ಟೇ ತೀವ್ರವಾಗಿ ಒಡಮೂಡಿಲ್ಲ. ಭಾವತೀವ್ರತೆಯ ಕಸುವು ಕಡಮೆ.

ಇದಕ್ಕೆ ಕಾರಣ, ಇಲ್ಲಿ ಪ್ರಯುಕ್ತವಾಗಿರುವ ಈ ವಚನದ ರೂಪಾಂಶವೆಂದು ತೋರುತ್ತದೆ. ಭಾವ ಬದಲಾದಂತೆ, ಛಂದಸ್ಸೂ ಅದಕ್ಕನುಸಾರವಾಗಿ ಬದಲಾಗುತ್ತಿರಬೇಕೆಂಬುದು ವಿದಿತ ವಿಚಾರವಷ್ಟೆ. ಇಲ್ಲಿಯ ವಚನದ ಸ್ವಚ್ಛಂದ ಬಂಧ ಅದಕ್ಕೆ ಅವಕಾಶ ಇತ್ತಿದ್ದರೂ, ಆಂತರಿಕ ಲಯದಲ್ಲಿ ಹೆಚ್ಚು ವೈವಿಧ್ಯವಿಲ್ಲದೆ, ಏಕತಾನತೆಯ ಅನುಭವವಾಗುವುದು ಕಂಡುಬರುತ್ತದೆ.

ಇನ್ನೊಂದು ಅಂಶ: ಕೆಲವು ವಚನಗಳಲ್ಲಿ ಕಾಣಬರುವ ಇತಿವೃತ್ತಾತ್ಮಕತೆಯ ದೋಷ.

ಇಲ್ಲಿ ಕೆಲವು ವಚನಗಳಲ್ಲಿ ಒಂದೇ ಭಾವ ಹಲವು ಬಾರಿ ಪುನರುಕ್ತವಾಗಿರುವುದನ್ನು ಪುನರುಕ್ತಿ ದೋಷವೆಂದು ಹೇಳಬೇಕೋ ಅಥವಾ ತಾದಾತ್ಮ್ಯದ ತೀವ್ರತೆಯಲ್ಲಿ ಮುಖರಿತವಾದ ವಚನ ಮಂತ್ರಗಳೆನಬೇಕೋ–ಸಂಶಯ.

ಕವಿಗೆ ತನ್ನ ಶಕ್ತಿಯ ಅರಿವಿದೆ. ಮಹತ್ತಿನೆದುರು ತನ್ನೆಲ್ಲ ಅಲ್ಪತೆಯನ್ನು ನೀಗಿಕೊಂಡ ನಿರಹಂಭಾವದಿಂದ ಹೇಳುವ ಈ ಮಾತಿನಲ್ಲಿಯೇ,

‘ಮಾತಿನ ಜಾಲಕೆ ಸಿಗುವುದುಂಟೆ ನೀನು’

ಅದು ಉಪ್ಪು ಕಡಲಾಗಿದೆ. ಇದು ಕವಿಯ ಆತ್ಮ ಪ್ರಕಾಶನ. ಆತ್ಮ ನಿರೀಕ್ಷಣವೂ ಹೌದು.

ಒಟ್ಟಿನಲ್ಲಿ ಹೇಳುವುದಾದರೆ, ಇದಕ್ಕೆ, ಈ ಪ್ರಕಾರದ ಸಾಹಿತ್ಯದಲ್ಲಿ ಮೇಲಾದ ಸ್ಥಾನವಿದೆ.

# ೧೫. ಇಂದ್ರಗೋಪದ ಇಣುಕು ನೋಟ

ಗು. ರಾ. ಪ್ರಭು

ಇದು ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ ಹೊಚ್ಚ ಹೊಸ ಕೃತಿಯಾಗಿದೆ. 'ಇಂದ್ರಗೋಪ' ಎಂಬ ಹೆಸರಿನ ಈ ಪುಟ್ಟ ಕವನ ಸಂಕಲನದಲ್ಲಿ ಐವತ್ತುಮೂರು ಹಾಡುಗಳಿವೆ ಎಂದು ಮುನ್ನುಡಿಯಲ್ಲಿ ಹೇಳಿದ್ದಾರೆ. ಇವುಗಳನ್ನು 'ಹಾಡು' ಎಂದು ಕರೆದಿರುವ ಔಚಿತ್ಯವನ್ನೂ ವಿವರಿಸಿದ್ದಾರೆ.

ಇಂದ್ರಗೋಪವನ್ನು ಯಾರು ನೋಡಿಲ್ಲ? ಇಡೀ ಜಗತ್ತು ಅಂಧಕಾರಮಯವಾಗಿದ್ದಾಗ ಅದನ್ನು ಬೆಳಗುವಲ್ಲಿ ವಿಶಿಷ್ಟ ಶಕ್ತಿ ಇವಕ್ಕೆ ದಯಪಾಲಿಸಲ್ಪಟ್ಟಿದೆ. ಇಂದ್ರಗೋಪದ ಮರಿಹಕ್ಕಿಯಾದರೆ ಅದು ಹಿಂಬದಿಯಿಂದ ಬೆಳಕು ಬೀರುತ್ತದೆ. ಇಂದ್ರಗೋಪ ಆಕೃತಿಯಲ್ಲಿ ಚಿಕ್ಕದು. ಆದರೆ ಅದು ಮಾಡುವ ಕೆಲಸ ಅಪಾರವಾದುದು !

ಇಲ್ಲಿ ಅನೇಕ ರೀತಿಯ ಕವನಗಳಿವೆ. ಈ ಕವನಸಂಕಲನದಲ್ಲಿರುವ ಮೊತ್ತಮೊದಲನೆಯ ಕವನವೇ ಸುಪ್ರಭಾತ. ಸುಪ್ರಭಾತದ ಹೆಬ್ಬಾಗಿಲನ್ನು ದಾಟಿ ಈ ಇಂದ್ರಗೋಪದ ವಿವಿಧ ಭಾವಗಳನ್ನು ನೋಡಬೇಕಾಗಿದೆ. ಇಲ್ಲಿ ಕವಿಯು ಬೆಳಗಿನ ಜಾವದ ವೈಭವವನ್ನು ವರ್ಣಿಸಿ, ಸೂರ್ಯನ ಬರವನ್ನು ಹೇಗೆ ಚಿತ್ರಿಸಿದ್ದಾರೆ. "ಕತ್ತಲೆ ಹೊತ್ತ"ವನ್ನು ದಾಟಿ ಭಾಸ್ಕರ ಬರುತ್ತಾನಂತೆ. 'ಬಾರ ಬಾರ ಭಾಸ್ಕರ' ಎಂಬುದೂ ಭಾಸ್ಕರನಿಗೆ ಸ್ವಾಗತವಿತ್ತ ಗೀತೆ. 'ಬಾ ಸಾವಿರ ಕರಧರ' ಎಂಬ ಕವನವೂ ಈ ಜಾತಿಗೇ ಸೇರಿದ್ದಾಗಿದೆ.

> 'ಎಲ್ಲ ಜನರ ತಮವಳಿದು
> ಮನಸು ಹಸನಾಗುವಂತೆ ಬೆಳಗೋ'

ಎಂದು ಹಾರೈಸಿದ್ದಾರೆ. ಸೂರ್ಯ ಕೇವಲ ಕತ್ತಲನ್ನು ತೊಡೆದರೆ ಸಾಲದು. ಅವನು ಜನರ ಮನಸ್ಸಿನ ಅಂಧಕಾರವನ್ನು ನೀಗಬೇಕು ಎಂಬುದು ಕವಿಯ ಹಾರೈಕೆ. 'ಈ ಬೆಳಗು' ಎನ್ನುವ ಕವನದಲ್ಲಿ ಊರಿನ ಸಹಜ ಚಿತ್ರಗಳನ್ನು ಕೊಟ್ಟಿದ್ದಾರೆ. 'ಬಂದನು ರವಿ' 'ನೇಸರು ಮೂಡಿದನು' 'ಉದಯವಾದಾಗ' ಎಂಬುದೂ ಬೆಳಗನ್ನು ಕುರಿತ ಕವನವಾಗಿದೆ. ಬೆಳಗಾದ ಮೇಲೆ ದೈನಂದಿನ ಚಟುವಟಿಕೆ ಪ್ರಾರಂಭವಾಗುತ್ತದೆ. ಅದನ್ನು ಕವಿ, ಒಬ್ಬ ಪ್ರಯಾಣಿಕನ ಉದಾಹರಣೆ ಕೊಟ್ಟು ವಿವರಿಸುತ್ತಾರೆ. 'ಗಂಟು ಮೂಟೆಯ ಮತ್ತೆ ಕಟ್ಟಿಕೊಂಡೆ' ಎಂದು ಹೇಳುತ್ತಾರೆ. ಈ ಭಾವನೆ ಚೆನ್ನಾಗಿ ಬಂದಿದೆ.

ಹೀಗೆ ಬೆಳಗನ್ನು ಕುರಿತ ಕೆಲವು ಕವನಗಳಿವೆ. ಮಳೆಯ ಬಗೆಗೂ ಕೆಲವು ಕವನಗಳಿವೆ. ಇವರಲ್ಲಿ 'ಮಳೆಗೆ ಮೊದಲು' ಕವನದಲ್ಲಿ ಮಳೆ ಬರುವ ಸನ್ನಿವೇಶವನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ನವೀನ ರೀತಿಯ ಕಲ್ಪನೆಗಳನ್ನು ಕೊಡುತ್ತಾರೆ. ಮಳೆ ನಕ್ಸಲೀಯರ ಧಾಳಿಯನ್ನು ಮೀರಿಸುತ್ತದೆಯಂತೆ! ಯಾವ ಘಳಿಗೆಯಲ್ಲಿ ಆಕಾಶವೆಂಬ ಕೊಳಾಯಿ ಒಡೆದು ನೀರು ಬಳಬಳ ಸುರಿಯುವುದೋ ಎಂಬ ಹೆದರಿಕೆ ಜನರಿಗಂತೆ !

'ಕೆಲವು ದಿನ ಮಳೆ ನಿಂತಾಗ' ಕವನದಲ್ಲಿ ಕೆಲವು ಲೌಕಿಕ ಚಿತ್ರಗಳನ್ನು ನೀಡಿದ್ದಾರೆ. 'ಮಳೆ ಮತ್ತು ಮುದ್ದಣ' ಕವನದಲ್ಲಿ ಮುದ್ದಣ ಕವಿ 'ರಾಮಾಶ್ವಮೇಧ' ಬರೆಯುವುದಕ್ಕೆ ಪ್ರಕೃತಿ ಸಹಾಯ ಮಾಡಿತು. ಆದರೆ ಅಂತಹದನ್ನು ಅನುಭವಿಸಲು ಕವಿ ಹೃದಯ ಬೇಕು. ಪ್ರಕೃತಿಯ ಎಡೆಗೆ ಶೂನ್ಯ ಮನಸ್ಕನಾದ ವ್ಯಕ್ತಿಯಿಂದ ಪ್ರಯೋಜನವಾಗುವುದಿಲ್ಲ. ಕೊನೆಯ ಸಾಲಿನಲ್ಲಿ ಕವಿ ತಮ್ಮ ಹೃದಯದ ಅಳಲನ್ನು ತೋಡಿಕೊಂಡಿದ್ದಾರೆ.

ಇಲ್ಲಿ ಕೆಲವು '–ಗೆ'ಗಳಿವೆ. 'ಹಕ್ಕಿಗೆ' ಎಂಬಲ್ಲಿ ಕವಿ ಪ್ರತಿಭಾಶಕ್ತಿಯನ್ನು ಪಕ್ಷಿಗೆ ಹೋಲಿಸಿದ್ದಾರೆ. ಇಂಥದೇ ಭಾವವನ್ನು ಶ್ರೀ ಅಸುಂದರ ಪಕ್ಷಿಗಾನದಲ್ಲೂ ಕಾಣಬಹುದು. 'ಅತಿಥಿಗೆ' ಎಂಬ ಕವನ

ಒಬ್ಬ ಕೆಲಸದಾಕೆ ಅತಿಥಿಗೆ ಸ್ವಾಗತವನ್ನು ಬಯಸುವ ಹಾಡು. ಭಾರತೀಯರು, "ಅತಿಥಿ ದೇವೋ ಭವ" ಎಂಬ ಉಕ್ತಿಯನ್ನು ಚಲಾವಣೆಗೆ ತಂದವರು. ಆ ಪರಿಸ್ಥಿತಿ ಈಗ ಹಳೆಯ ಉಕ್ತಿಯಾಗಿ ಉಳಿದಿದೆ ಅಷ್ಟೇ ! ಇಂದಿನ ಸಾಂಸಾರಿಕ ಜಗತ್ತಿನ ಸೃಜ ಚಿತ್ರವನ್ನು ಕೊಟ್ಟಿದ್ದಾರೆ. 'ಗೆ' ಎಂಬುದು ಪ್ರಕೃತಿಯನ್ನು ಕುರಿತುದಾಗಿದೆ. ಮನುಷ್ಯ ಅಲೌಕಿಕ ಪ್ರೀತಿಯನ್ನೂ ಆನಂದವನ್ನೂ ಬಣ್ಣಿಸಲು ಸಮರ್ಥನಲ್ಲ. ಪ್ರಕೃತಿಯ ಸುಂದರ ಚಿತ್ರವನ್ನು ನೋಡಿ, ಕವಿಯ ಹೃದಯದಲ್ಲಿ ಆನಂದವುಂಟಾಗಿದೆ. ಆ ಆನಂದವನ್ನು ಈ ಕವನದ ಮೂಲಕ ಸಹೃದಯರಿಗೆ ತೋರಿಕೊಂಡಿದ್ದಾರೆ.

ಮನುಷ್ಯ ಚಿಂತೆ ಮಾಡಬೇಕು. ಆದರೆ ಕೆಲವರು ಯಾವುದರ ಬಗೆಗೂ ಚಿಂತೆ ಮಾಡುವುದಿಲ್ಲ. ನಿಶ್ಚಿಂತರಾಗಿರುತ್ತಾರೆ. ಇದು ಸಲ್ಲದು. ನಾವು ಯಾವುದಾದರೂ ತತ್ತ್ವಕ್ಕೆ ಅಂಟಿಕೊಂಡು ಬಾಳ ಬೇಕು. ಸುಮ್ಮನೆ ಉದಾಸೀನರಾಗಿ ಪ್ರಾಣಿಯ ಬಾಳುವೆಯನ್ನು ಬಾಳಬಾರದು. 'ಗಾಳಿಯ ಹಾಡು' ಎಂಬಲ್ಲಿ ಪ್ರಕೃತಿಯ ಪ್ರತಿ ವಸ್ತುವೂ ಪ್ರಯೋಜನಕಾರಿಯಾಗಿದೆ. ಇದಕ್ಕೆ ಉತ್ತಮ ಹಾವ ಉದಾಹರಣೆ ಎಂದರೆ ಮಾನವನ ಅಂಗಾಂಗಗಳು. ಕೊನೆಯ ನಾಲ್ಕು ಸಾಲಿನಲ್ಲಿ ಕವಿ ಮನಸ್ಸಿನ ತಳಮಳವನ್ನೂ, ಹೊಯ್ದಾಟವನ್ನೂ ಚಿತ್ರಿಸಿದ್ದಾರೆ. ಗಾಳಿ ತನ್ನಪಾಡಿಗೆ ತಾನು ಬೀಸು ತ್ತದೆ; ಅದು ಯಾರ ಪ್ರಶಂಸೆಗಾಗಲಿ, ತೆಗಳಿಕೆಗಾಗಲಿ ಬೀಸುವುದಿಲ್ಲ. ಅದನ್ನು ಅಪೇಕ್ಷಿಸುವುದಿಲ್ಲ. ಮನುಷ್ಯನು ಹಾಗೆಯೇ ಯಾವುದೇ ವಿಧವಾದ ಕೀರ್ತಿ ಆಮಿಷಗಳನ್ನು ಬಯಸದೆ, ತನ್ನ ಕಾರ್ಯವನ್ನು ಮಾಡಬೇಕು.

'ಹೋರಾಟದ ಹಾಡು' 'ಹಾರಾಟದ ಹಾಡು' ಎಂಬ ಎರಡು ಗೀತಗಳಿವೆ. ಮನುಷ್ಯ ಜೀವನದಲ್ಲಿ ಹೋರಾಟವನ್ನು ನಡೆಸಬೇಕು. ಹೋರಾಟವಿಲ್ಲದ ಬಾಳು ವ್ಯರ್ಥ. ಕೊನೆಯ ಸಾಲು ಚೆನ್ನಾಗಿದೆ.

"ಒಡೆಯ ನೀನಿಹೆಯೆಂದು ಹೋರುವೆನು ನಾನು ಹೋರುವೆನು ನಾನು" ಎಂದಿದ್ದಾರೆ. 'ಹಾರಾಟದ ಹಾಡು' ಜೀವಿಯು ಉತ್ಕೃಷ್ಟ ಸ್ಥಿತಿಗೆ ಹೋದಾಗ ಹೇಳುವ ಹಾಡಾಗಿದೆ. 'ಆ ಮಹಾ ಭೂಮಾನು ಭೂತಿಯ ಪರಮ ಸುಖವನು ಪಡೆಯನೆ' ಎಂಬುದು ಇಲ್ಲಿಯ ಉದ್ದೇಶ.

'ಸೋಮವಾರದ ಹಾಡು'–ವಾರದಿಂದ ವಾರಕ್ಕೆ ಕಾಲ ಉರುಳುತ್ತದೆ. ಇನ್ನೂ ಉರುಳುತ್ತದೆ. ಉರುಳುವುದು ಅದರ ಧರ್ಮ. ಕಳೆದ ವಾರದ ಘಟನೆಗಳನ್ನು ಮರೆತು ಹೊಸ ವಾರದ ಶುಭಕ್ಕೆ ಆಗು ಎಂದು ಹೇಳಿ ಕವಿ ಸೀಮೆಸುಣ್ಣ–ಉಪಾಧ್ಯಾಯರ ಉದಾಹರಣೆಯನ್ನು ಉದಾಹರಿಸಿದ್ದಾರೆ.

'ನಿನ್ನ ದಯೆಯೊಂದಿಲ್ಲದ್ದರೆ' 'ನಿನ್ನ ನೆನೆವೆ' ಎಂಬುದು ದೈವವನ್ನು ಕುರಿತದ್ದಾಗಿದೆ. 'ನಗೆ ಬರುತಲಿಹುದೆನಗೆ'–ನಮಗೆ ಪುರಂದರ ದಾಸರ 'ನಗೆಯು ಬರುತಿದೆ ಎನಗೆ' ಎಂಬ ಕೀರ್ತನೆಯನ್ನು ನೆನಪಿಗೆ ತರುತ್ತದೆ. ಈ ಲೋಕದಲ್ಲಿ ಜೀವಿಸುವುದು ಕಷ್ಟ. ಹೇಗಿದ್ದರೂ,–ಹೆಚ್ಚಿದ್ದರೂ, ಕಡಮೆ ಯಿದ್ದರೂ ಜನ ತೆಗಳುತ್ತಾರೆ, ಕಟಕಿಯಾಡುತ್ತಾರೆ. ಜೀವನದಲ್ಲಿ ಹೆಚ್ಚು ಕಡಮೆಯಾಗದೆ, ಸಾಮರಸ್ಯ ಜೀವನವನ್ನು ನಡೆಯಿಸಬೇಕು ಎಂದು ಕರೆಯಿತ್ತಿದ್ದಾರೆ.

'ದೇವ ಭಾವ' ಎನ್ನುವ ಕವನದಲ್ಲಿ ದೇವರ ದೃಷ್ಟಿಯಲ್ಲಿ ಜಗತ್ತಿನ ಚೇತನರೆಲ್ಲಾ ಒಂದೇ. ಸೃಷ್ಟಿ ಕರ್ತನ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ದೇವನಿಗೆ ಸಹ್ಯ ಅಸಹ್ಯಗಳ ಭೇದವಿಲ್ಲವೆಂದು ಕವಿ ಹೀಗೆ ಹೇಳುತ್ತಾರೆ.

> "ಸಹ್ಯಾಸಹ್ಯವು ನಿನಗಿಲ್ಲವೊ ದೇವ
> ನಿನಗೆಲ್ಲವು ಆನಂದವೊ ದೇವ"

'ನಿನ್ನ ರಥ' ಎಂಬುದು ಐವತ್ತಾರನೆಯ ವಯಸ್ಸಿನಲ್ಲಿ ಬರೆದುದು ಎಂದು ತಿಳಿಯುತ್ತದೆ. ಜೀವನ ವನ್ನು ರಥಕ್ಕೆ ಹೋಲಿಸಿ ಬರೆದಿದ್ದಾರೆ. ರಥವನ್ನು ನಡೆಸುವ ಚಾಲಕ ದೇವರು. ರಥದ ದಾರಿ ನಮಗೆ ಗೊತ್ತಾಗುವುದಿಲ್ಲ. ಎಲ್ಲಾ ಆ ದೇವರ ಲೀಲೆ ಎಂದು ಮುಗಿಸುತ್ತಾರೆ. 'ಸಂಸಾರದ ಸಾಗರದಲ್ಲಿ'–ಸಂಸಾರವನ್ನು ಸಾಗರಕ್ಕೆ ಹೋಲಿಸಿ ಬರೆದಿದ್ದಾರೆ. 'ಇಂದ್ರಚಾಪ'–ಇದೇ ಹೆಸರಿನ ಇದೇ ಲೇಖಕರ ಒಂದು ಕೃತಿಯೂ ಇದೆ. ಇಲ್ಲಿ ಇಂದ್ರಚಾಪ ಅರ್ಥಾತ್ ಕಾಮನ ಬಿಲ್ಲಿನ ವಿವಿಧ

ರೀತಿ ಮತ್ತು ಮನಸ್ಸಿನಲ್ಲಿ ಅದರ ಬಗೆಗೆ ಎದ್ದ ಭಾವನೆಗಳ ಅಭಿವ್ಯಕ್ತಿಯಿದೆ. '[illegible]'-ಪಾತರ ಗಿತ್ತಿಯನ್ನು ಕುರಿತುದಾಗಿದೆ. ಬೇಂದ್ರೆಯವರ 'ಪಾತರಗಿತ್ತಿ'ಯನ್ನು ನೆನಪಿಗೆ ತಂದುಕೊಡುತ್ತದೆ. 'ಯಾರ ತಪ್ಪು' ಇದರಲ್ಲಿ ಅನೇಕ ಸಹಜವಾದ ಪ್ರಶ್ನೆಗಳನ್ನು ಕೇಳಿದ್ದಾರೆ. ಈ ರೀತಿ ಪ್ರಶ್ನೆ ಕೇಳು ವುದು ಮನುಷ್ಯನ ಸ್ವಭಾವ. ಕೊನೆಯ ಸಾಲು ತುಂಬಾ ಹೃದಯಸ್ಪರ್ಶಿಯಾಗಿದೆ.

'ನಾನಾದ ಕಾರಣವೆ ನಿನ್ನ ಮಾಯೆಗೆ ಸಿಕ್ಕಿ
ಸಾವನೊಡನಪ್ಪುವುದು ಅವರ ತಪ್ಪೇ'

'ಹುಟ್ಟು-ಸಾವು' ನಮ್ಮ ಜನ್ಮಕ್ಕೆ ಸಂಬಂಧಿಸಿದೆಂದು ತಿಳಿದಿದ್ದೇವೆ. ಇಲ್ಲಿ ನಮಗೆ ದಿನದಿನವೂ ಹುಟ್ಟು ಸಾವು ಇದೆ ಎಂದು ತಿಳಿಸಿ, ಹುಟ್ಟು-ಸಾವುಗಳ ವ್ಯಾಖ್ಯಾನ ಕೊಡುತ್ತಾರೆ:

'ಎಚ್ಚರವೆ ಹೊಸ ಹುಟ್ಟು, ನಿದ್ದೆ ಸಾವು
ಕಲಿತನವೆ ಹೊಸ ಹುಟ್ಟು, ಅಳುಕು ಸಾವು'

ಎಂದು ಹೇಳುತ್ತಾರೆ. 'ಹೇ ಸಖಿ, ನಾ ಸುಖಿ' ಎಂಬುದರಲ್ಲಿ ಮನುಷ್ಯ ಜೀವಿಸುತ್ತಿರುವುದೆಲ್ಲಾ ಮುಂದೆ ಒಳ್ಳೆಯದಾಗುತ್ತದೆ ಎಂಬ ಆಶೆಯಿಂದಲೇ ಎಂದು ತಿಳಿಸುತ್ತದೆ. ಇದಕ್ಕೆ ಸಮಾನವಾದ ಇಂಗ್ಲಿಷಿನ ಒಂದು ವಾಕ್ಯವನ್ನು ಇಲ್ಲಿ ಉದ್ಧರಿಸಬಹುದು. "What is there without a hope?"

'ಕಲೆಯ ಕುರಿತು' ಪ್ರತಿಭೆಯ ಬೆಳೆ, ಹೊಳೆ, ನೆಲೆ, ಬೆಲೆಯನ್ನು ಕೇವಲ ನಾಲ್ಕು ಸಾಲಿನಲ್ಲಿ ಸುಂದರ ವಾಗಿ ಚಿತ್ರಿಸಿದ್ದಾರೆ. 'ಪರಮಸುಖಿ' ಎಂಬಲ್ಲಿ ಪರಮಸುಖಿ ಯಾರು ಎಂಬುದರ ವಿವರಣೆಯಿದೆ. 'ಸುಭಾಷಿತ' ಎಂಬುದರಲ್ಲಿ ನಾಲ್ಕು ದಿವ್ಯೌಷಧಗಳನ್ನು ಹೇಳಿದ್ದಾರೆ. 'ಸುಜನ ಸಂಭಾಷಣವು ಮಾರ್ಗ ದರ್ಶಕವು' ಎಂಬ ಉಕ್ತಿ ಚೆನ್ನಾಗಿದೆ. 'ದೇವ ಪಕ್ಷಿ' ಎನ್ನುವಲ್ಲಿ ಲೇಖಕರು ಸಮಯ ಬಂದಾಗ ವಸ್ತುವಿನ ಸದುಪಯೋಗಪಡಿಸಿಕೊಳ್ಳಬೇಕೆಂದು ತಿಳಿಸಿದ್ದಾರೆ. 'ಶುಷ್ಕೋಪಚಾರ' ಎಂಬುದು ಎಲ್ಲರಿಗೂ ಗೊತ್ತಿರುವ ಸಂಗತಿ. ನಾವು ಬಾಯುಪಚಾರ ಮಾಡುವುದು ಜಾಸ್ತಿ. ಅದನ್ನು ಕ್ರಿಯೆ ಯಲ್ಲಿ ತೋರಿಸಿದರೆ ಅದರ ಮಹತ್ತ್ವ ಗೊತ್ತಿರುತ್ತದೆ ಎಂದು ಇಲ್ಲಿ ಹೇಳಿದೆ. 'ನಾನು ಮತ್ತು ತತ್ತ್ವ' ಎಂಬ ಕವನದಲ್ಲಿ ತತ್ತ್ವದೈಸಿರಿಯನ್ನು ಅರಿವು ಎಂಬ ಅಂಜನದೊಳು ಕಾಣಬೇಕು ಎಂದು ಕರೆಯುತ್ತಿ ದ್ದಾರೆ.

'ಒಂದು ಸಂಜೆ' ಎಂಬುದು ಒಂದು ಸಾಯಂಕಾಲ ಮಳೆಯ ದೃಶ್ಯವನ್ನು ನೋಡಿ, ಅದರ ವಿವರಣೆ ಯನ್ನು ಒಳಗೊಂಡಿದೆ. 'ಆಕಾಶದ ಆ ಉದ್ದಗಲಕೆ ನಿಶೆ ಮುಗಿಲಿನ ಕಂಬಳಿ ಹೊದ್ದುತಿದೆ' ಎಂಬ ಹೋಲಿಕೆ ಚೆನ್ನಾಗಿದೆ. 'ಕೊರಗು' ಎಂಬುದರಲ್ಲಿ ಮನುಷ್ಯನಿಗೆ ಸುಖಬೇಕು, ದುಃಖಬೇಡ; ಜೀವನ ದಲ್ಲಿ ಮನುಷ್ಯನು ಎರಡನ್ನೂ ಅನುಭವಿಸಬೇಕು. ದುಃಖ ಮತ್ತು ಸುಖ ಒಂದೇ ನಾಣ್ಯದ ಎರಡು ಮುಖಗಳು. ಸಂಪೂರ್ಣ ಸುಖ ಮತ್ತು ಸಂಪೂರ್ಣ ದುಃಖ ಯಾರಿಗೂ ಸಾಧ್ಯವಿಲ್ಲವೆಂದು ಹೇಳ ಬಹುದು. 'ಹೂವೊಂದರ ಕಥೆ' ಒಂಟಿ ಜೀವನವನ್ನು ಕುರಿತದ್ದಾಗಿದೆ. ಇಲ್ಲಿ ಹೂವನ್ನು ಒಂಟಿ ಜೀವನಕ್ಕೆ ಉಪಮೆಯಾಗಿಟ್ಟುಕೊಂಡಿದ್ದಾರೆ. 'ಬಂಡವಲು ಬದು ಕಡಮೆ' ಎನ್ನುವುದರಲ್ಲಿ ಬಟ್ಟೆ ಗುಜರಿಯವನ ಉಪಮೆಯನ್ನು ಕೊಟ್ಟು ವಿವರಿಸಿದ್ದಾರೆ.

ಇಲ್ಲಿಯ ವರೆಗೆ 'ಇಂದ್ರಗೋಪದ ಇಣುಕುನೋಟ'ವನ್ನು ನೋಡಿದೆವು. ಇದರಲ್ಲಿ ನಾನು ಸಾಧ್ಯ ವಾದಷ್ಟು ಕವನಗಳನ್ನು ಇಣಿಕಿ ನೋಡಿದ್ದೇನೆ. ಇನ್ನೂ ಕೆಲವು ಕವನಗಳು ಹಾಗೆ ಉಳಿದಿರಬಹುದು. ಇದು ಏನಾದರೂ ಇಣುಕುನೋಟವಷ್ಟೇ! 'ಇಂದ್ರಗೋಪ' ಒಂದು ಓದಲು ಯೋಗ್ಯವಾದ ಕೃತಿ ಎಂದು ಯಾರಿಗಾದರೂ ಎನ್ನಿಸುವಂತಿದೆ.

# ೧೬. ಬಸ್ಸಿನ ಮೇಲೂ ಪದ್ಯವೇ?

**ಎಂ. ಲಕ್ಷ್ಮೀನಾರಾಯಣ ರಾವ್**

ಈಗ ನಾವು ಯಂತ್ರಯುಗದಲ್ಲಿದ್ದೇವೆಂಬುದನ್ನು ಎಲ್ಲರೂ ತಿಳಿದಿರಬಹುದು. ಈ ಯಂತ್ರಯುಗದಲ್ಲಿ ಮಾನವನು ಕೇವಲ ಸೂತ್ರಧಾರಿಯಾಗಿ ನಿಂತು ಎಲ್ಲಾ ಕಾರ್ಯಗಳನ್ನೂ ಯಂತ್ರಗಳ ಮೂಲಕವೇ ನೆರವೇರಿಸುತ್ತಾನೆ. ಈಗಿನ ಯಂತ್ರಗಳ ಉದ್ಯೋಗಶೀಲತೆ ತುಂಬಾ ಹೆಚ್ಚಾಗಿರುವುದರಿಂದ ನಿರುದ್ಯೋಗಿಗಳ ಸಂಖ್ಯೆ ದಿನೇ ದಿನೇ ಹೆಚ್ಚಾಗುತ್ತದೆಂದು ಕೆಲವರ ಅಭಿಪ್ರಾಯ. ಮಾನವನು ವಿರಾಮವನ್ನೇ ಈ ಕಾಲದಲ್ಲಿ ಹೆಚ್ಚಾಗಿ ಬಯಸುವುದರಿಂದ ಈ ಮೇಲಿನ ಅಭಿಪ್ರಾಯವನ್ನು ಒಪ್ಪುವುದು ಸ್ವಲ್ಪ ಕಷ್ಟವಾಗುತ್ತದೆ. ಒಂದೊಂದು ಸಲ ಮಾನವನಿರ್ಮಿತ ಯಂತ್ರಗಳಲ್ಲಿ ಲೋಪ ಉಂಟಾದಾಗ ಅನರ್ಥ ಸಂಭವಿಸುವುದು ಉಂಟು. ಬ್ರಹ್ಮ ಸೃಷ್ಟಿಸಿರುವ ಮಾನವನೇ ಅಕಸ್ಮಾತ್ತಾಗಿ "ಹಾರ್ಟ್ ಫೈಲ್" ಆಗಿ ಸಾಯುತ್ತಾನೆನ್ನುವಾಗ ಮಾನವನಿರ್ಮಿತ ಯಂತ್ರಗಳಲ್ಲಿ ಕುಂದುಕೊರತೆ ಉಂಟಾಗುವುದು ಅಷ್ಟೇನೂ ದೊಡ್ಡ ವಿಷಯವಲ್ಲ. ಅದು ಏನೇ ಇರಲಿ, ಪ್ರಸ್ತುತ ಯಂತ್ರಗಳಿಂದಾಗಿ ಈ ಜಗತ್ತು ನಡೆಯುತ್ತದೆ ಎಂಬುದನ್ನು ಒಪ್ಪಬೇಕಾದ ವಿಷಯ.

ಈ ಯಂತ್ರಯುಗದಲ್ಲಿ ಬಸ್ಸಿಗೆ ಅತಿ ಹೆಚ್ಚಿನ ಪ್ರಾಮುಖ್ಯ ದೊರಕಿದೆ ಎಂಬುದು ನಿಸ್ಸಂದೇಹವಾದ ಮಾತು. ಮಾನವನು ಕಾಲಕ್ಕೆ ತಕ್ಕಂತೆ ತನ್ನ ಹೆಸರನ್ನು "ಚೇಂಜ್" ಮಾಡುವಂತೆ ಬಸ್ಸು ಕೂಡ ಹೆಸರು ಬದಲಾಯಿಸಿದೆ. ಹಿಂದೆ 'ಮೋಟಾರ್' ಎಂದು ಕರೆಯಲಾಗುತ್ತಿದ್ದ ಸಾಧನವೇ ಈಗ 'ಬಸ್ಸು' ಎಂಬ ನಾಮಧೇಯದಿಂದ ಶೋಭಿಸುತ್ತದೆ. ಅದೂ ಅಲ್ಲದೆ ಈಗೀಗ ಈ ಬಸ್ಸುಗಳಿಗೆ ಇಡುವ ಹೆಸರುಗಳನ್ನು ನೋಡಿದಾಗ ತಮಗೆ ಅಂಥ ಸುಂದರವಾದ ಹೆಸರಿಲ್ಲವಲ್ಲಾ ಎಂದು ಜನರು ಕೊರಗಬಹುದು. "ರವಿ ಕಾಣದ್ದನ್ನು ಕವಿ ಕಾಣುವನು" ಎಂಬ ಮಾತು ಒಪ್ಪತಕ್ಕದ್ದಾದರೂ, ಈ ಮೋಟಾರು ಉರುಫ್ ಬಸ್ಸಿನ ಕಡೆಗೆ ಈ ಕವಿಗಳ ದೃಷ್ಟಿ ಅಷ್ಟಾಗಿ ಹರಿಯಲಿಲ್ಲವೆಂದು ಹೇಳಬಹುದು. ಆದರೆ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರು ತಮ್ಮ 'ಇಂದ್ರಚಾಪ' ಮತ್ತು "ಚಂದ್ರವೀಥಿ"ಗಳಲ್ಲಿ ಬಸ್ಸಿನ ಮೇಲೆ ಕೆಲವು ಪದ್ಯಗಳನ್ನು ರಚಿಸಿದ್ದಾರೆ. "ಬಸ್ಸಿನ ಮೇಲೆಯೇ ನಾನು ಪ್ರತ್ಯೇಕವಾಗಿ ಕವಿತೆಯನ್ನು ರಚಿಸಿ ಪ್ರಕಟಿಸಬೇಕೆಂದಿದ್ದೇ" ಎಂದು ಪ್ರೊ. ಭಟ್ಟರು ಕ್ಲಾಸಿನಲ್ಲಿ ಹೇಳುವುದನ್ನು ಕೇಳಿದಾಗ "ಬಸ್ಸು ಹಿಂದಿನ ಜನ್ಮದಲ್ಲಿ ಯಾವುದೋ ಸುಕೃತ ಕರ್ಮವನ್ನು ಮಾಡಿರಬೇಕು; ಆದ್ದರಿಂದಲೇ ಅದರ ಮೇಲೆ ಕವಿಯ ದೃಷ್ಟಿ ಹರಿದಿರಬೇಕು" ಎಂದು ಸಹೃದಯರಿಗೆ ಎನ್ನಿಸದಿರಲಾರದು.

ಹಿಂದಿನ ಕಾಲದಲ್ಲಿ ಜನರು ಒಂದು ಕಡೆಯಿಂದ ಇನ್ನೊಂದು ಕಡೆಗೆ ನಡೆದುಕೊಂಡೇ ಹೋಗುತ್ತಿದ್ದರಂತೆ; ಎಷ್ಟು ಮೈಲು ದೂರವಾದರೂ ಜನರಿಗೆ ಅದು ಲಕ್ಷ್ಯವಿರಲಿಲ್ಲವಂತೆ. ಆದರೆ ಈ ಯಂತ್ರಯುಗದಲ್ಲಿ ಅರ್ಧಮೈಲು ನಡೆಯುವುದೆಂದರೂ ಮಾನವನಿಗೆ ಬೇಸರ. ಇದಕ್ಕೂ ಕಾರಣವುಂಟು. ತಾನೇ ನಿರ್ಮಿಸಿರುವ ಈ ಬಸ್ಸೆಂಬ ಸಾಧನ ತನ್ನನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಯ್ಯಲು ಸದಾ ಸಿದ್ಧವಾಗಿರುವಾಗ ನಡೆದುಕೊಂಡು ಹೋಗುವಷ್ಟು ಅವಿವೇಕಿಯಲ್ಲ ಮಾನವ. ಬಸ್ಸು ಬರಲು ತುಂಬಾ ಹೊತ್ತಿದ್ದರೂ "ಬಸ್‌ಸ್ಟ್ಯಾಂಡ್"ನಲ್ಲಿ 'ಕ್ಯೂ' ನಿಲ್ಲುವುದಕ್ಕೆ ನಾವು ಬೇಸರಪಡಲಾರೆವು. ಅದೂ 'ಆಫೀಸ್ ಟೈಮ್' ಆದರೆ ನಮ್ಮ ಅವಸ್ಥೆಯನ್ನು ಕೇಳುವುದೇ ಬೇಡ; ಈ ವೇಳೆಯಲ್ಲಿ ಕೆಲವು ಸಲ ಬಸ್ಸು ಸಿಗದೆ ಕಾದು ಕಾದು ಸೋತು ಸುಣ್ಣವಾಗುವುದುಂಟು. ಇದು ಬರಿಯ ಕಾಯುವ ಕೆಲಸವಲ್ಲ. ಇದು ಬಸ್ಸಿಗಾಗಿ ನಾವು ಮಾಡುವ ತಪಸ್ಸು. ಒಂದು ಸಲ ಈ "ಬಸ್" ಭಗವಂತ ಪ್ರತ್ಯಕ್ಷನಾದರೆ ನಮಗೆ ಸ್ವರ್ಗ ದೊರೆತುದಕ್ಕಿಂತಲೂ ಹೆಚ್ಚಿನ ಆನಂದವಾಗುತ್ತದೆ. ಇದನ್ನು ಶ್ರೀ ಭಟ್ಟರು ತುಂಬಾ ಸ್ವಾರಸ್ಯವಾಗಿ ಹೇಳಿರುತ್ತಾರೆ:

ಟಾಂಗ, ರಿಕ್ಷಾಗಳ ಸೆಳೆಗೊಳಗಾಗದೆ
ನಿಂತೆ ತಾಸಿನ ತಪಗೈದೆ

ಪ್ರತ್ಯಕ್ಷವಾಯಿತು ಕಡೆಗೊಮ್ಮೆ ಆ ಬಸ್ಸು
ಫಲಿಸಿತು ನನ್ನ ತಪಸ್ಸು

ಈ ಬಸ್ಸುದೇವ ಪ್ರತ್ಯಕ್ಷನಾದರೂ, ಕೆಲವೊಮ್ಮೆ ನಮಗೆ ಕಾಯುವ ಕೆಲಸವೊಂದು ಮಾತ್ರ ದೊರೆಯುವುದುಂಟು. ನಮಗಿಂತಲೂ ಅಧಿಕ ಪ್ರಾಮುಖ್ಯ ಪಡೆದಿರುವ ಮಹಾನುಭಾವರು ಈ ಬಸ್ಸುದೇವನ ಒಡ್ಡೋಲಗದಲ್ಲಿ ವಿರಾಜಮಾನರಾಗಿರುತ್ತಾರೆ. ಒಡ್ಡೋಲಗವು "ಹೌಸ್ ಫುಲ್" ಆಗಿದ್ದರೆ ನಾವು ನಮ್ಮ ಸರದಿಗಾಗಿ ಇನ್ನೂ ಉಗ್ರತಪಸ್ಸು ಮಾಡಬೇಕಾಗುತ್ತದೆ. ಕೆಲವು ಸಲ ಪೈಪೋಟಿ ನಡೆದು ಮುಂದೆ ಇದ್ದವರನ್ನು ಹಿಂದಕ್ಕೆ ತಳ್ಳಿ ಒಡ್ಡೋಲಗವನ್ನು ಪ್ರವೇಶಿಸಿದೆವೆಂದಾದರೆ ನಮಗೆ ಉಂಟಾಗುವ ಆನಂದವನ್ನು ಕವಿಯ ಮಾತಿನಲ್ಲೇ ಕೇಳೋಣ:

ಮೇಲಕೆ ಹತ್ತಿರಿ ಮುಂದಕ್ಕೆ ಬನ್ನಿರಿ
ಎಂದು ಕಂಡಕ್ಟರು ಕರೆಯೆ
ಉಳಿದೆಲ್ಲ ಕಡೆಯೊಳು ಹಿಂದಕ್ಕೆ ತಳ್ಳಿಸಿ–
ಕೊಂಡವನಾನಂದಕೆಣೆಯೆ

"ಫುಲ್" ಆದ ಬಸ್ಸನ್ನು ಹತ್ತಿದಾಗ ಕೆಲವು ಸಂದರ್ಭದಲ್ಲಿ ನಾವು ಮಹಾನುಭಾವರ ಕೋಪಕ್ಕೆ ತುತ್ತಾಗುವುದೂ ಉಂಟು. ಅವರ ಕಾಲಮೇಲೆ ನಾವು ಕಾಲನ್ನಿರಿಸಿದಾಗಲೋ, ಅವರ ಭುಜಗಳಿಗೆ ನಮ್ಮ ಭುಜಗಳನ್ನು ತಗುಲಿಸಿದಾಗಲೋ, ಅವರು ಒಂದು ಸಲ ಕೆಂಗಣ್ಣುಗಳಿಂದ ಹಿಂದಕ್ಕೆ ತಿರುಗಿ ನಮ್ಮನ್ನು ನೋಡಿದಾಗ ನಾವು "Sorry" ಎಂದು ಹೇಳಿ ತಲೆತಗ್ಗಿಸಬೇಕಾಗುತ್ತದೆ; ಮೊದಲೇ ಬಸ್ಸು 'ಫುಲ್' ಆಗಿರುವುದರಿಂದ ನಾವು ಏನಾದರೂ ಮಾತಾಡಿದರೆ ಕೆಳಗಿಳಿಯುವ ಸಂದರ್ಭ ಬಂದೀತು. "ದೇವರು ಕೊಟ್ಟರೂ ಪೂಜಾರಿ ಬಿಡ" ಎಂಬ ಉಕ್ತಿ ಲೋಕಪ್ರಸಿದ್ಧವಾದುದು. ಇದೇ ರೀತಿ ಕೆಲವೊಮ್ಮೆ ಬಸ್ಸಿನಲ್ಲಿ ಜಾಗವಿದ್ದರೂ, ಕಂಡಕ್ಟರನ ಕೃಪಾಕಟಾಕ್ಷ ನಮ್ಮ ಮೇಲೆ ಬೀಳದಿದ್ದರೆ ನಮಗೆ ಬಸ್ಸಿನಲ್ಲಿ ಜಾಗ ದೊರೆಯುವುದು ಕಷ್ಟ. ಬಸ್ಸಿನಲ್ಲಿ ಕಂಡಕ್ಟರನು ತುಂಬಾ ಜವಾಬ್ದಾರಿಯುತನಾದ ಮನುಷ್ಯನೆನ್ನುವುದು ನಿಜ.

ಕರುವೊಂದು ಕೆರೆಯೊಳು ನೀರನು ಕುಡಿದರೆ
ಕೆರೆಯೆಲ್ಲ ಬತ್ತಿತೆನ್ನುವರೆ
ಹೇಳಿದನೀ ಮಾತನೊಬ್ಬ ಕಂಡಕ್ಟರೆ
ಸೈಯೆಂದರಹ ಬಸ್ಸಿನವರು.

ಕಂಡಕ್ಟರನು ನಂಬಲಸಾಧ್ಯವಾದ ಸುಳ್ಳನ್ನು ಹೇಳಿದರೂ ಬಸ್ಸಿನಿಂದ ಇಳಿಯುವವರೆಗಾದರೂ ಅದು ಸತ್ಯವೆಂಬುದಾಗಿ ನಾವೂ ಭಾವಿಸಬೇಕಾಗುತ್ತದೆ. ನಾವು ಏನಾದರೂ ಸ್ವಲ್ಪ ಮಾತಾಡಿ ಅದು ಸುಳ್ಳೆಂದು ಸಾಧಿಸಲು ಹೊರಟರೆ ನಮಗೆ ಎಕ್ಸಿಟ್–ಪಾಸ್ ದೊರೆಯಬಹುದು.

"ಲಕ್ಷ್ಮಿ"ಯಾರಿಳಿಯಿರಿ ಎಂದು ಕಂಡಕ್ಟರು
ವ್ಯಂಗ್ಯಸೂಚಕವಾಗಿ ನುಡಿಯೆ
'ಲಕ್ಷ್ಮೀ ಟಾಕೀಸೆನ್ನು' ಎಂದು ಆ ಡ್ರೈವರು
ತಿದ್ದಿದನವನನು ಒಡನೆ

"ಲಕ್ಷ್ಮೀ ಟಾಕೀಸು" ಎಂದು ಹೇಳಲು ಸ್ವಲ್ಪ ಉದ್ದವಾಗುತ್ತದೆಂದು ಭಾವಿಸಿದ ಕಂಡಕ್ಟರ್ ಮಹಾಶಯನು ಬರಿಯ "ಲಕ್ಷ್ಮಿ" ಇಳಿಯಿರಿ ಎನ್ನುತ್ತಾನೆ. ಒಡನೆಯೇ ಲಕ್ಷ್ಮೀ ಎಂಬ ಹೆಸರಿನವರು ಯಾರಾದರೂ ಬಸ್ಸಿನಿಂದ ಇಳಿದರೆ ನಗೆಪಾಟಲಾಗಬಹುದು. ಆದರೆ ಡ್ರೈವರ್ ಸಾಹೇಬನು ಕಂಡಕ್ಟರನಿಗೆ ಮಾರ್ಗದರ್ಶಕನಾಗಿ ನಿಂತು ಎಲ್ಲವನ್ನೂ ಸರಿಪಡಿಸಲು ಪ್ರಯತ್ನಿಸುತ್ತಾನೆ. ಕೆಲವೊಮ್ಮೆ

ಡ್ರೈವರಿನ ಮಾತಿಗೂ ಬೆಲೆ ಬಾರದಿರುವುದುಂಟು. ಅದು ಕೂಡ ತರುಣ ಕಂಡಕ್ಟರನಾದರೆ ಮತ್ತೆ ಕೇಳುವುದೇ ಬೇಡ. ಯಾರಾದರೂ ತರುಣಿ, ಬಸ್ಸು ನಿಂತಿದ್ದನ್ನು ಕಂಡು ಹತ್ತಲು ಓಡಿಬರುವುದನ್ನು ಕಂಡರೆ ಕಂಡಕ್ಟರನು ಕೂಡಲೇ "ರೈಟ್" ಅನ್ನುತ್ತಾನೆ. ಅವಳು ಇನ್ನೂ ಜೋರಾಗಿ ಓಡಿ ಬರಬೇಕೆಂಬುದೇ ಅವನ ಆಸೆ.

ಬಸ್ಸನು ಬೇಗನೆ ಹತ್ತುವೆನೆಂದೋಡಿ
ಬರುತಿಹ ತರುಣಿಯ ನೋಡಿ
ತರುಣ ಕಂಡಕ್ಟರು ಬೇಗನೆ ಬರಲಾಕೆ
ಎನ್ನುತ ರೈಟೆನ್ನಬೇಕೆ

ಕಂಡಕ್ಟರನಿಗೆ ತಮಾಷೆಯಾದರೆ ಆ ತರುಣಿಗೋ ಬಸ್ಸು ಎಲ್ಲಿ ಹೋಗಿಬಿಡುತ್ತದೋ ಎಂಬ ಭಯ. ಬಸ್ಸನ್ನು ಹತ್ತುವುದರಲ್ಲಿಯೂ, ಬಸ್ಸಿನಿಂದ ಕೆಳಗಿಳಿಯುವುದರಲ್ಲಿಯೂ ತರುಣಿಯರು ತುಂಬಾ 'ಎಕ್ಸ್‌ಪರ್ಟ್' ಆಗಿರುತ್ತಾರೆ. ಪ್ರೊ. ಭಟ್ಟರ ಅನುಭವಕ್ಕೂ ಇದು ಬಂದಿದೆ ಎಂಬುದು ಈ ಕೆಳಗಿನ ಸಾಂಗತ್ಯವನ್ನು ಓದಿದಾಗ ತಿಳಿಯುತ್ತದೆ.

ಬಿದ್ದಳೊ ಎಂದೊಳಗಿದ್ದವರಂಜುತೆ
ಕಾತರಗೊಳ್ಳುವೊಲೆಸಗಿ
ಹೂವೊಂದು ಬಳ್ಳಿಯಿಂದುದುರಿದುದೆಂಬಂತೆ
ಬಸ್ಸಿನಿಂದಿಳಿದಳು ಬೆಡಗಿ

ಬಸ್ಸಿನ ಒಳಗಿದ್ದವರಿಗೆ ಈ ಬೆಡಗಿ ಎಲ್ಲಿ ಕೆಳಗೆ ಬಿದ್ದು ಬಿಟ್ಟಳೋ ಎಂಬ ಭಯ. ಆದರೆ ಬಳ್ಳಿಯಿಂದ ಹೂವು ಕೆಳಗೆ ಬೀಳುವಂತೆ ಬಸ್ಸಿನಿಂದಿಳಿದು ದಿಟ್ಟತನದಿಂದ ನಡೆಯುತ್ತಿದ್ದ ತರುಣಿಯನ್ನು ಕಂಡ ಪ್ರೊ. ಭಟ್ಟರು ಆಶ್ಚರ್ಯದಿಂದ ಮೂಗಿಗೆ ಬೆರಳೇರಿಸಿರಬೇಕಲ್ಲವೇ?

ಐದು ಮಕ್ಕಳ ತಂದೆ ಬೆಸಗೊಂಡನೈತಂದು
ಮಕ್ಕಳಿಗರ್ಧವೆ ಎಂದು
ಹತ್ತರ ಒಳಗಿದ್ದರೆಂದ ಕಂಡಕ್ಟರು
ಐವರೆ ಇಹರೆಂದರವರು

ಒಬ್ಬರು ಇನ್ನೊಬ್ಬರ ಮಾತನ್ನು ಸರಿಯಾಗಿ ಅರ್ಥಮಾಡಿಕೊಳ್ಳದಿದ್ದರೆ ಮುಂದೆ ಹಾಸ್ಯಾಸ್ಪದವಾಗ ಬಹುದೆಂಬುಕ್ಕೆ ಈ ಮೇಲಿನ ಪದ್ಯ ಸಾಕ್ಷಿ. ಮನೆಯಲ್ಲಿ ಮಕ್ಕಳ ಗಲಾಟೆ ವಿಪರೀತವಾಗಲು "ಇವು ಗಳನ್ನು ಎಲ್ಲಾದರೂ ಕರೆದುಕೊಂಡು ಹೋಗಿ ಬನ್ನಿ" ಎಂದು ತನ್ನ ಪತಿದೇವರಿಗೆ ಅಪ್ಪಣೆ ಮಾಡಿರ ಬೇಕು ಈ ಐದು ಮಕ್ಕಳ ತಾಯಿ. ಅವಳ ಅಪ್ಪಣೆಯನ್ನು ಶಿರಸಾವಹಿಸಿ ಮಕ್ಕಳ ಜೊತೆಯಲ್ಲಿ ಈ ತಂದೆ ಎಲ್ಲೋ 'ವಾಕಿಂಗಿಗೋ' 'ಪಾರ್ಕಿಗೋ' ಹೋಗಿರಬೇಕು. ಮನೆಗೆ ಹಿಂತಿರುಗಲು ಬಸ್ಸು ಸಿಗದೆ ಕಾದು ಕಾದು ಸೋತ ಈ ಮಹಾನುಭಾವರಿಗೆ ಕೊನೆಗೆ ಬಸ್ಸು ಬಂದಾಗ ಮಕ್ಕಳ ಸಮೇತ ಬಸ್ಸು ಹತ್ತಿ ಸೀಟು ದೊರಕಿಸಿಕೊಳ್ಳುವ ಗಡಿಬಿಡಿ. ಕಂಡಕ್ಟರಿಗೋ ಟಿಕೇಟು ಕೊಡುವ ಗಡಿಬಿಡಿ. ಮಕ್ಕಳಿಗೆ ಅರ್ಧ ಟಿಕೇಟು ಸಾಕೋ ಎನ್ನುವ ಅರ್ಥದಲ್ಲಿ ಈ ಐದು ಮಕ್ಕಳ ತಂದೆ "ಮಕ್ಕಳಿಗರ್ಧವೇ" ಎಂದರು. ಹತ್ತು ವರುಷದ ಒಳಗಿನವರಾದರೆ ಅರ್ಧ ಟಿಕೇಟು ಎನ್ನುವ ಅರ್ಥದಲ್ಲಿ "ಹತ್ತರ ಒಳಗಿದ್ದರೆ" ಎಂದು ಕಂಡಕ್ಟರ್ ಮಹಾಶಯನು ಕೊಟ್ಟ ಉತ್ತರ. ಅದಕ್ಕೆ ಈ ತಂದೆ ಐವರೇ ಇಹರೆಂದು ಹೇಳಿ ದರು. ಈ ಘಟನೆಯನ್ನು ಕೇಳಿದಮಾತ್ರದಿಂದ ನಮಗೇ ಇಷ್ಟೊಂದು ನಗು ಬರುತ್ತಿರುವಾಗ, ಅದನ್ನೇ ಕಣ್ಣಾರೆ ಕಂಡ ಶ್ರೀ ಭಟ್ಟರ ಅವಸ್ಥೆ ಹೇಗಾಗಿರಬೇಡ. ಆ ಸಂದರ್ಭದಲ್ಲಿ ಅವರೂ ನಕ್ಕು ನಕ್ಕು ಹೊಟ್ಟೆಯನ್ನು ನೋಯಿಸಿಕೊಂಡಿರಬೇಕು. ಬಸ್ಸಿನ ಒಳಗಡೆ ಏನೆಲ್ಲಾ ನಡೆಯುತ್ತದೆಂಬುದನ್ನು

ಶ್ರೀ ಭಟ್ಟರು ಎಷ್ಟೊಂದು ಸೂಕ್ಷ್ಮವಾಗಿ ಪರಿಶೀಲಿಸಿದ್ದಾರೆ ಎನ್ನುವುದಕ್ಕೆ ಈ ಮೇಲಿನ ಪದ್ಯ ಸಾಕ್ಷಿಯಾಗಿ ನಿಂತುಕೊಳ್ಳುತ್ತದೆ.

ದಾರಿಯೊಳೆತ್ತಿನ ಗಾಡಿಯ ಕಂಡರೆ
ಗದರಿಸುವನು ಟಾಂಗದವನು
ಆ ಟಾಂಗದವನು ತನಗೆದುರಾದರೆ
ಬೆದರಿಸುವನು ಬಸ್ಸಿನವನು

ಈ ರೀತಿ ಎತ್ತಿನ ಗಾಡಿಯನ್ನು ಕಂಡರೆ ಟಾಂಗಾದವನೂ, ಟಾಂಗಾದವನು "ಸೈಡ್" ಕೊಡದಿದ್ದರೆ ಬಸ್ಸು ಡ್ರೈವರೂ ಅವಾಚ್ಯ ಶಬ್ದಗಳಿಂದ ಬಯ್ಯುವುದು, ಬೆದರಿಸುವುದು ಸಾಮಾನ್ಯ ಸಂಗತಿ. ಎಲ್ಲಾ ಕ್ಷೇತ್ರಗಳಿಗೂ ಈ ಮಾತನ್ನು ಅನ್ವಯಿಸಬಹುದು. ನಮಗೇನಾದರೂ ದೇವರು ತಲೆಯನ್ನು ಕೊಟ್ಟಿದ್ದಾನೆಂದಾದರೆ ಅದನ್ನು ಸ್ವಲ್ಪ ಖರ್ಚು ಮಾಡಿದರೆ, ಶ್ರೀ ಭಟ್ಟರು ಏನೋ ಒಂದು ದೊಡ್ಡ ವಿಷಯವನ್ನು ಇಲ್ಲಿ ಅಡಗಿಸಿಟ್ಟಿದ್ದಾರೆಂಬುದನ್ನು ತಿಳಿಯಬಹುದು. ಬಲಿಷ್ಠನು ದುರ್ಬಲನನ್ನೂ, ಶ್ರೀಮಂತನು ಬಡವನನ್ನೂ, ಆಫೀಸರ್ ಸರ್ವೆಂಟನ್ನೂ ಹೆದರಿಸುವುದು, ಗದರಿಸುವುದು ಸರ್ವಸಾಮಾನ್ಯ. ಕೆಲವೊಮ್ಮೆ ಇದಕ್ಕೆ ವ್ಯತಿರಿಕ್ತವಾದಾಗ "ಆಕ್ಸಿಡೆಂಟ್" ಸಂಭವಿಸಿ ಅನರ್ಥವಾಗಬಹುದು. ಆದ್ದರಿಂದ ಸಣ್ಣವುಗಳಾದ ಗಾಡಿ, ಟಾಂಗಾಗಳು ಬಸ್ಸಿನ ಎದುರು ನಿಂತು, ಪ್ರತಿಭಟಿಸದೆ ಸಾಧ್ಯವಾದಷ್ಟು ಬದಿಯಲ್ಲಿ ಸಾಗುವುದೇ ಒಳ್ಳೆಯದು.

ತಿಗಣೆಯ ಕಾಟದಿಂದಲೋ, ಸೊಳ್ಳೆಯ ಉಪದ್ರವದಿಂದಲೋ, ಮನೆಯಲ್ಲಿ ವಿಪರೀತ ಗಲಾಟೆಯಾದುದರಿಂದಲೋ, ಇನ್ಯಾವ ಕಾರಣದಿಂದಲೋ ರಾತ್ರಿ ಸರಿಯಾಗಿ ನಿದ್ದೆ ಬಾರದೆ, ಬಸ್ಸನ್ನೇ ಮನೆಯೆಂದು ಭಾವಿಸಿ ಗೊರಕೆ ಹೊಡೆಯುವ ಕುಂಭಕರ್ಣರನ್ನು ನಾವು ದಿನನಿತ್ಯ ನೋಡುತ್ತೇವೆ.

ದಾರಿಯೊಳುದ್ದಕೆ ಸುಖನಿದ್ರೆಗೈವುದೆ
ಬಸ್ಸಿನೊಳೋಪರು ಹೀಗೆ
ಹಿಂದಿನ ರಾತ್ರಿಯೊಳಿವರೆವೆ ಮುಚ್ಚದೆ
ಜಾಗರವಿದ್ದರೊ ಹೇಗೆ?

ಬಹುಶಃ ಈ ತರುಣ ದಂಪತಿಗಳು "ಸೆಕೆಂಡ್ ಷೋ" ಸಿನೆಮಕ್ಕೋ, "ಕ್ಯಾಬರೆ ಡ್ಯಾನ್ಸಿ"ಗೋ ಹೋಗಿರಬೇಕು. ಅದನ್ನು ನೋಡಿ ಬಂದವರಿಗೆ ಬೆಳಗಿನ ವರೆಗೂ ನಿದ್ದೆ ಬಾರದೆ ಜಾಗರವಿದ್ದಿರಬೇಕು. ಬಸ್ಸಿನಲ್ಲಿ ಎಲ್ಲಿಗೋ ಹೋಗುತ್ತಿರುವಾಗ, ಆ ತಂಪಾದ ತಂಗಾಳಿ ಬೀಸಿದಾಗ ಸುಖವಾಗಿ ನಿದ್ರೆಯನ್ನು ಮಾಡುತ್ತಿದ್ದಂಥ ಈ ತರುಣ ದಂಪತಿಗಳನ್ನು ಕಂಡ ಶ್ರೀ ಭಟ್ಟರು ಈ ಮೇಲಿನ ಸಾಂಗತ್ಯವನ್ನು ರಚಿಸಿರಬೇಕು.

ಒಳ್ಳೆಯ ಮಾತನ್ನು ಒಳ್ಳೆಯ ರೀತಿಯಲ್ಲಿ ಹೇಳುವಂಥವು ಸುಭಾಷಿತಗಳೆಂದು ಶ್ರೀ ಪರಮೇಶ್ವರ ಭಟ್ಟರೇ ಹೇಳಿಕೊಂಡಿದ್ದಾರೆ. ಈ ರೀತಿ ಮಾತುಗಳು ಎಲ್ಲರಿಗೂ ಅರ್ಥವಾಗುವಂತಿದ್ದರೆ ಮಾತ್ರ ಸ್ವಾರಸ್ಯ ಹೆಚ್ಚು. ಉಪಮೆಗಳನ್ನು ಕೊಡುವಾಗಲೂ ಎಲ್ಲರಿಗೂ ತಿಳಿಯುವಂಥದನ್ನೇ ಬಳಸಿದರೆ ಜನಸಾಮಾನ್ಯರ ಮನಸ್ಸಿಗೆ ಈ ಮಾತು ನಾಟುತ್ತದೆ. ಈ ಕೆಳಗಿನ ಸಾಂಗತ್ಯದಲ್ಲಿ ಶ್ರೀ ಭಟ್ಟರು ದೊಡ್ಡ ನೀತಿಯನ್ನು ಸಣ್ಣ, ಸರಳವಾದ ಮಾತುಗಳಲ್ಲಿ ಹುದುಗಿಸಿಟ್ಟಿದ್ದಾರೆ.

ಮನೆಬಿಟ್ಟ ಹೆಣ್ಣನು ನೆಲೆಬಿಟ್ಟ ಬಸ್ಸನು
ಹಿಡಿಯುವೆನೆಂದೋಡಬೇಡ
ಮತ್ತೊಂದು ಮಾರಿಯ ಮತ್ತೊಂದು ಲಾರಿಯ
ಬಾಯಿಗೆ ಸಿಕ್ಕೀಯೆ ನೋಡ

ಪುಸ್ತಕಂ ವನಿತಾ ವಿತ್ತಂ ಪರಹಸ್ತಂ ಗತಂ ' ಗತಂ
ಅಥವಾ ಪುನರಾಯಾತಂ ಜೀರ್ಣಂ ಭ್ರಷ್ಟಾ ಚ ಖಂಡಶಃ

ಈ ಸಂಸ್ಕೃತ ಶ್ಲೋಕವನ್ನು ಓದಿದಾಗ ಪುಸ್ತಕ, ವನಿತಾ, ವಿತ್ತ ಈ ಮೂರರೊಟ್ಟಿಗೆ ಬಸ್ಸನ್ನೂ ಏಕೆ ಸೇರಿಸಬಾರದೆಂಬುದಾಗಿ ನಮ್ಮ ಭಟ್ಟರಿಗೆ ಕಂಡಿರಬೇಕು. ಕೈಕೊಟ್ಟ ಹೆಣ್ಣಿಗೂ, ಮಿಸ್ಸಾದ ಬಸ್ಸಿಗೂ ಹಂಬಲಿಸಿ ಅದರ ಹಿಂದೆ ಓಡಿ ಮತ್ತೊಂದು ಮಾರಿಗೊ, ಲಾರಿಗೋ ಬಲಿಯಾಗುವುದಕ್ಕಿಂತ ಹೊಸತಿಗಾಗಿ ಕಾಯುವುದೇ ಲೇಸಲ್ಲವೇ?

ಬಸ್ಸುಗಳೊಮ್ಮೊಮ್ಮೆ ಕಿಸ್ಸು ಕೊಡುವುದುಂಟು
ತೋರಿಸಿ ನಲ್ಮೆಯ ಬೇಟ
ಒಳಗಿದ್ದ ಜನರೆಲ್ಲ ತಳಮಳಗೊಳುವರು
ಲೋಕವೆ ಈ ಪರಿಯಾಟ

# ೧೭. ಮಂಥಾನ—ಒಂದು ವಿವೇಚನೆ

ಶೀಲಾವತಿ ಕೋಳಂಜೆ

ಗಾದೆ ಅನುಭವದ ರಸಘಟ್ಟಿ. ಇದು ಒಬ್ಬನಾಡಿದ ಮಾತಾದರೂ ಎಲ್ಲರೂ ಒಪ್ಪುವ ಮಾತು. ಗಾದೆ ಮಾತಿನಲ್ಲಿ ಸೊಗಸಾದ ಬಿಡಿಪದಗಳು, ಭಾಷಾರೂಪಗಳು ಸಿಕ್ಕುತ್ತವೆ. ಪ್ರಾಚೀನ ಕಾಲದಿಂದಲೂ ಸಾಹಿತ್ಯ ಮತ್ತು ಶಾಸ್ತ್ರಗಳಲ್ಲಿ ಈ ಗಾದೆಗಳ ಇರುವಿಕೆ ಕಂಡುಬರುತ್ತದೆ. ನಮ್ಮ ಕನ್ನಡ ಕವಿಗಳಾದ ಪಂಪ, ರನ್ನ, ಕುಮಾರವ್ಯಾಸ, ಸರ್ವಜ್ಞ, ವಚನಕಾರರ ಕೃತಿಕೋಶಗಳಲ್ಲಿ ಈ ಅಪೂರ್ವವಾದ ನುಡಿಮಣಿಗಳು ಕಂಗೊಳಿಸುತ್ತವೆ. ಇಂದು ಕೂಡ ನಮ್ಮ ಸಮಕಾಲೀನರ ಕತೆ, ಕಾದಂಬರಿ, ನಾಟಕ, ಪ್ರಬಂಧಗಳಲ್ಲಿ ಗಾದೆಗಳನ್ನು ಆಯ್ದು ತೆಗೆಯಬಹುದು. ಆದರೆ ಒಬ್ಬನಿಂದಲೇ ರಚಿತವಾಗಿ ಸಂಕಲನರೂಪವಾದ ಗಾದೆಗಳ ಹೊತ್ತಗೆ ಇರಲಿಲ್ಲ. ಶ್ರೀ ಎಸ್. ವಿ. ಪರಮೇಶ್ವರ ಭಟ್ಟರದೇ ಈ ದಿಸೆಯಲ್ಲಿ ಮೊತ್ತಮೊದಲ ಹೆಜ್ಜೆ. ಇವರು ನಾಲ್ಕುಸಾಲಿನ ಸಾಂಗತ್ಯ, ಮೂರು ಸಾಲಿನ ತ್ರಿಪದಿ, ಎರಡು ಸಾಲಿನ ಪಂಕ್ತಿಗಳನ್ನು ಬರೆದು ಒಂದು ಸಾಲಿನ ಏನು ಎಂಬುದಕ್ಕೆ ಉತ್ತರವೆಂಬಂತೆ ಐನೂರು ಗಾದೆಗಳ ಸಂಕಲನ "ಮಂಥಾನ"ವನ್ನು ಬರೆದು ಸಾರಸ್ವತಲೋಕಕ್ಕೆ ತಮ್ಮ ಅಮೂಲ್ಯ ಕೊಡುಗೆಯನ್ನಿತ್ತಿರುವರು.

ಗಾದೆಗಳಲ್ಲಿ ವೇದಗಳಿವೆ ಎಂಬ ಮಾತಿದೆ. ಇದು ಅರ್ಥಪೂರ್ಣವಾದದ್ದು. ವಿಸ್ತಾರವಾದ ಅರ್ಥವನ್ನು ಸಂಕ್ಷೇಪದಲ್ಲಿ ಹೇಳುವುದೇ ಗಾದೆ. ವೇದಗಳು ಮಹರ್ಷಿಗಳು ಪಡೆದ ಸತ್ಯಾನುಭವದ ಸಂಕ್ಷೇಪ ರೂಪಗಳು. ಅಂತೆಯೇ ಶ್ರೀ ಎಸ್. ವಿ. ಪರಮೇಶ್ವರ ಭಟ್ಟರ ಜ್ಞಾನವೆಂಬ ಹಾಲ್ಗಡಲಿನ ಮಥನದಿಂದ ಜನಿಸಿದ ನವನೀತದ ಸ್ವಲ್ಪಾಂಶವೇ ಈ ಮಂಥಾನ ಕೃತಿ. ಹೆಸರ ಹಲಗೆ ಬರೆದು ನೋಟಕರನ್ನು ಆಹ್ವಾನಿಸುವ ಮಹಾಸೌಧದ ಹೆಬ್ಬಾಗಿಲಿನಂತೆ ಮಂಥಾನದ ಮುಖಪುಟವು ಅರ್ಥವತ್ತಾಗಿ ಚಿತ್ರೀಕೃತವಾಗಿದೆ.

ಯಾರೇ ಏನೇ ಬರೆಯಲಿ ಭಗವಂತನೊಡನೆ ಲೌಕಿಕದ ಪರಮಾವಧಿ ಸುಖವನ್ನು ತನಗೊಪ್ಪಿದಂತೆ ಸಾರಸ್ವತ ಸಮಾಜದ ಮುಂದಿಡುವುದು ಕಂಡುಬರುತ್ತದೆ. ಅದೇ ಮಂಥಾನದಲ್ಲಿಯೂ ಎದ್ದು ತೋರುತ್ತದೆ. ಒಂದೇ ಸತ್ಯವನ್ನು ತಿಳಿದವರು ಹಲವೆಂದು ಹೇಳುತ್ತಾರೆ. ಇದರ ಹುರುಳು "ಸಕಲವೆಂದರೂ ಒಂದೇ ಅಕಲವೆಂದರೂ ಒಂದೇ". ಭಗವಂತ ಒಬ್ಬನೇ ಎಂದರೂ ಸರಿಯೇ, ಭೂಮಿ ಮೊದಲಾದ ಹದಿನಾರು ಕಲೆ (ಅಂಶ) ಗಳಿಂದ ಪೂರ್ಣನಾದವನೆಂದರೂ ಒಂದೇ ಎನ್ನುವಂತೆ ವಿವರಿಸುತ್ತದೆ. ಈ ಮಾತು ದ್ವೈತ, ಅದ್ವೈತ, ವಿಶಿಷ್ಟಾದ್ವೈತಗಳ ಆಚಾರ್ಯತ್ರಯರನ್ನು ಸಮತೂಕದಲ್ಲಿ ತೂಗಿತೋರಿಸುವ ತೂಕದ ತಕ್ಕಡಿಯಂತಿದೆ. ಶಾಸ್ತ್ರಗಳು ಪಾರಮಾರ್ಥಿಕವನ್ನು ಮಾತ್ರ ವಿಚಾರಮಾಡದೆ ಮಾನವ ಲೋಕದ ಸುಖದುಃಖ, ಇಷ್ಟಾನಿಷ್ಟ, ಬೇಕುಬೇಡ, ಮಾಡುಬಿಡುಗಳನ್ನು ಗಂಭೀರವಾಗಿ ಹೇಳುವಂತೆಯೇ ವಿನೋದಶೀಲನೊಬ್ಬ ಅವನ್ನೇ ನಗಿಸಿ ಹೇಳುವಂತೆ ಮಂಥಾನದ ಗಾದೆಗಳಿವೆ. ಒಂದೊಂದು ಗಾದೆಯೂ ಯಾವುದೋ ಊರಿಗೆ ಹೋಗುವ ಹಾದಿಯ ಕೈಕಂಬದಂತೆ ಇರುತ್ತದೆ.

"ಕುಣಿತ ನೋಡಿ ಗಣಿತ ಮರೆತ" ಈ ಮಾತು ಮಾಡಬೇಕಾದದ್ದನ್ನು ಮರೆತು ಮೋಜಾಟ ಇಲ್ಲವೇ ವಿನೋದಕ್ಕೆ ಮರುಳಾಗಿ ಬಾಳ್ವೆಯಲ್ಲಿ ಬಿದ್ದವರನ್ನೆಲ್ಲಾ ಬಟ್ಟುಮಾಡಿ ತೋರುತ್ತದೆ. ಪುರಾಣ ಕಥೆಗಳೆಲ್ಲಾ, ಕಾದಂಬರಿ, ನಾಟಕ ಮುಂತಾದುವುಗಳೆಲ್ಲಾ ಹೇಳುವುದೇನನ್ನು? ಇದನ್ನೇ. ಇದೊಂದು ಕೈಕಂಬವು ವಿಚಾರಕನನ್ನು ಬೇಕಾದಲ್ಲಿಗೆ ಕರೆದೊಯ್ಯುವುದು. ಬಿಚ್ಚಿದಂತೆ ನೀಳವಾಗುವ ನೂಲಿನ ಸುರುಳಿಯಿದು.

ವಿಚಾರ, ವಿಮರ್ಶೆ ಇವುಗಳ ಬಗ್ಗೆ ಮಂಥಾನ ಏನನ್ನುತ್ತದೆ? 'ಕವಿಗೆ ಒಂದೇ ನಾಲಗೆ, ಕವಿತೆಗೆ ಸಾವಿರ ನಾಲಗೆ'. ಕವಿಯಾಡಿದ ಒಂದೇ ಮಾತು ಸಹಸ್ರಮುಖವಾಗಿ ಬೆಳಗಬಹುದು. ಸಹಸ್ರ ಸವಿಯಾಗಿ ಫಲಕೊಡಬಹುದು. ಸಹಸ್ರ ಬೆಳಸಿನ ಮದ್ದಾಗಬಹುದು.

'ಪರಿಶ್ರಮ ತಂದೆ, ಪ್ರತಿಭೆ ಕೂಸು' ಯಾವುದೇ ಕಲಾವಿಭಾಗದಲ್ಲಿ ಹುಟ್ಟುಗುಣವಿದ್ದರೆ ಸಾಲದು. ಪ್ರಯತ್ನವಿದ್ದರೆ ಮಾತ್ರ ಫಲ ದೊರೆಯುವುದು. ಕಣ್ಣು ಕಳೆದುಕೊಳ್ಳುವಷ್ಟು ಇರುಳೆಲ್ಲಾ ಓದಿ ಮಿಲ್ಟನ್ ಮಹಾಕವಿಯಾದ. ಪರಿಶ್ರಮವೇ ಕಿವುಡುತನಕ್ಕೆಡೆಮಾಡಿ ಎಡಿಸನ್ ವಿಜ್ಞಾನಿಯಾದ.

ಉಪದೇಶ: 'ಬುದ್ಧಿ ಹೇಳಿದರೆ ಯುದ್ಧಕ್ಕೆ ಬಂದ'.

ಜನರಿಗೆ ಹಿತಬೋಧೆ ಹೇಳಲು ಹೊರಟು ಏಸುಕ್ರಿಸ್ತ ಶಿಲುಬೆಗೇರಿದ. ಮಹಾಜ್ಞಾನಿ ಸಾಕ್ರಟೀಸ್ ವಿಷವುಂಡು ಸತ್ತನು. ಮಹಾತ್ಮಾ ಗಾಂಧಿಯವರ ಬೋಧೆಯನ್ನು ಸಹಿಸದ ಒಬ್ಬ ಅವರಿಗೆ ಗುಂಡಿಕ್ಕಿದ. ಅಪಾತ್ರರಿಗೆ ಮಾಡುವ ಬೋಧೆ ಉತ್ಪಾತಕ್ಕೆ ಕಾರಣವಾಗುತ್ತದೆ.

ಸಮಾಜ ಶಕ್ತಿ: 'ವ್ಯಷ್ಟಿಯೇ ತೈಲ, ಸಮಷ್ಟಿಯೇ ದೀಪ.'

ಒಂದು ಹನಿ ತೈಲದಿಂದ ದೀಪ ಉರಿಯದು. ತುಸು ಹೆಚ್ಚು ಎಣ್ಣೆ ಬೇಕು. ಒಬ್ಬನಿಂದಲೇ ಸಮಾಜ ಪ್ರಕಾಶ ಬೀರದು. ಹಲವು ವಿದ್ವಾಂಸರ, ಕಲಾವಿದರ ನೆರವಿಯಿಂದಲೇ ಸಮಾಜದ ವಿಕಾಸ.

ಇದು ಹಳ್ಳಿಗಳ ಅವನತಿಗೆ. ಪೊಳಲುಗಳ ಉನ್ನತಿಗೆ ಕಾರಣವನ್ನು ಸೂಚಿಸುತ್ತದೆ. ಹೀಗೆ ಹಲವು ಗಾದೆಗಳಲ್ಲಿ ನಾವು ಧ್ವನಿಶಕ್ತಿಯನ್ನು ಕಾಣಬಹುದು.

'ಬತ್ತಲೆ ಎಂದರೆ ಪೋಲಿ, ನಗ್ನ ಎಂದರೆ ಗಂಭೀರ.'

ಒಮ್ಮೊಮ್ಮೆ ಬೆಲೆಯುಳ್ಳ ಮಾತುಗಳನ್ನು ಹಳ್ಳಿಗರಾಡುವುದೂ ಉಂಟು. ಸೂಟೆಗೆ ಎರಡು ಕಡೆಯೂ ಹೊತ್ತಿಸಿ 'ಸೂಟೆನ್ ರಡ್ ಕೊಡಿ ಪೊತ್ತತ್ ತಿರುಗಾಪುನ' ಎಂದು ಇಬ್ಬರೊಳಗೆ ಜಗಳ ಹುಟ್ಟಿಸಿ ನಾರದನ ಕೆಲಸ ಮಾಡುವುದು ಎಂದರ್ಥ. ಇದು ಸಾರವುಳ್ಳ ಮಾತು. ಆದರೆ ಜನ ಕಿವಿಗೊಡುವುದಿಲ್ಲ. ಒಂದೆಡೆ ಸತ್ಯಾಶ್ರಯನ ಬಲಸಮುದ್ರವೂ ಇದ್ದು ನಡುವೆ ಸಿಕ್ಕಿ ಬಿದ್ದ ಅಪರಾದಿತ್ಯನು 'ಇರ್ತಲೆವೊತ್ತಿದ ಪುಳ್ಳಿಯ ಪುಳುವೊಲಿರ್ದನತಿಚಕಿತಚಿತ್ತನಪರಾದಿತ್ಯಂ' ಎಂಬ ರನ್ನಕವಿಯ ಮಾತು ವಿದ್ವಾಂಸರ ಕಿವಿಗೆ ಅಮೃತವನ್ನೆರೆಯುತ್ತದೆ. ಒಂದೇ ವಿಚಾರವನ್ನು ಕನ್ನಡದಲ್ಲಿ ಹೇಳಿದರೆ ಬೆಲೆ ಕಡಿಮೆ. ಸಂಸ್ಕೃತದಲ್ಲಿ ಹೇಳಿದರೆ ಬಹಳ ಬೆಲೆ. ಇಂಗ್ಲಿಷಿನಲ್ಲಾದರೋ ಅಪರಿಮಿತ.

ಲಾಭನಷ್ಟ, ಜಯ, ಅಪಜಯಗಳಿಗೆ ಅಂಜಬಾರದೆಂದು ಗೀತೆ ಹೇಳಿದರೆ "ಹೋದದ್ದು ನಿನಗೆ, ಇದ್ದದ್ದು ನನಗೆ" ಎಂದು ಮಂಥಾನದ ಬಿಡಿನುಡಿ ಸಮಾಧಾನ ಹೇಳುತ್ತದೆ.

ದೊಡ್ಡದು ಬೇಕೇ ನಮ್ಮಲ್ಲೂ ದೊಡ್ಡತನ ಬೇಕು. ಕಿರಿದನ್ನೂ ಅರಿಯಬೇಕೇ ನಾವು ಮತ್ತೂ ಕಿರಿದಾಗಬೇಕು. ಕೆಲವನ್ನು ಭೂಮವಾಗಿ ತಿಳಿಯಬೇಕು. ಕೆಲವನ್ನು ಸೂಕ್ಷ್ಮವಾಗಿ ಅರಿಯಬೇಕು. ಬೆಟ್ಟವನ್ನೋ, ಕಡಲನ್ನೋ ಸ್ಥೂಲವಾಗಿ ನೋಡಬೇಕು. ಬಂಗಾರವನ್ನು ಒರೆದು ತಿಳಿಯಬೇಕು. ಮಹಾವ್ಯಕ್ತಿ, ಮಹಾಕಾವ್ಯಗಳನ್ನು ಮೇಲ್ಮಟ್ಟದಲ್ಲಿ ನಿಂತೇ ವಿಚಾರಮಾಡಬೇಕು.

ಸೌಂದರ್ಯ: "ತೋರಣವಿಲ್ಲದೆ ಹಬ್ಬವಿಲ್ಲ, ಓರಣವಿಲ್ಲದೆ ಒಪ್ಪವಿಲ್ಲ."

ಚೆಲುವೇ ಹಬ್ಬ, ಕ್ರಮವೇ ಸೌಂದರ್ಯ. ಈ ಮಾತನ್ನು ಬಿಚ್ಚಿ ನೋಡಿ. ತೋರಣವೆಂಬುದು ಒಂದು ಕ್ರಮವೇ. ಅಲಂಕಾರವಿಲ್ಲದೆ ಹಬ್ಬವಿದೆಯೇ ? ಊಟವಿಲ್ಲದಿರಬಹುದು. ಯಾವ ಒಸಗೆಗೂ ತೋರಣ ಬೇಕೇ ಬೇಕು. ಬಣ್ಣದ ಕಾಗದ ಮೊದಲಾದುವು ತೋರಣದ ಮತ್ತೊಂದು ವಿಧಗಳೇ. ಹಬ್ಬಗಳಲ್ಲಿ ಬಾಹ್ಯಕ್ಕೆ ಬೆಲೆ ಹೆಚ್ಚು. ತೋರಿಕೆಗಾಗಿ ತೋರಣ. ತಿನಿಸುಣಿಸುಗಳು ಒಳಗೆ. ಇದರಂತೆಯೇ ಸೌಂದರ್ಯ ಕ್ರಮವನ್ನು ಹೊಂದಿಕೊಂಡಿದೆ. ಮುಖಸೌಂದರ್ಯ, ತುರುಬಿನ ಸೌಂದರ್ಯ, ಉಡುಪಿನ ಸೌಂದರ್ಯ ಇವೆಲ್ಲಾ ಕ್ರಮಹಿಡಿದು ಬೇಕು. ತುಸು ಕ್ರಮ ತಪ್ಪಿದರೆ ಚೆಲುವಲ್ಲ. ಈ ಮಾತು ಕಾವ್ಯಾದಿಗಳ ಸೌಂದರ್ಯದ ಕಡೆಗೂ ದೃಷ್ಟಿ ಹಾಕುತ್ತದೆ. ಹೀಗೆ ಪ್ರತಿಯೊಂದು ಗಾದೆಯನ್ನೆತ್ತಿಕೊಂಡರೂ ಒಂದು ಗ್ರಂಥ ಬರೆಯುವಷ್ಟು ವಿಚಾರ ತುಂಬಿಕೊಂಡಿದೆ.

"ಹೋಳಿ ಊಟಕ್ಕೆ ಹೋಮಾನೆ ಮಾಡಬೇಕೆ".

ಉತ್ಸವದಲ್ಲಿ ಬಹಳ ಮೇಲು. ದೈನಂದಿನ ಕಾರ್ಯದಲ್ಲಿ ಬಹಳ ಕೀಳಾಗಿ ಹಾಡುವರು. ಸಂತೃಪ್ತಿ, ಆನಂದ, ಸುಖಾನುಭವ ಸದಾ ಇರುವಂತೆ ಪ್ರಯತ್ನಿಸಬೇಕು. ಉತ್ಸವದ ದಿನ ಪರ್ವಕ್ಕೊಮ್ಮೆ, ಹಬ್ಬ ಹುಣ್ಣಿಮೆಗಳಲ್ಲಿ ಮಾತ್ರ ಅವುಗಳ ಪ್ರದರ್ಶನ ಇರಬೇಕು ಎಂಬುದನ್ನು ಮೇಲಿನ ಗಾದೆ ಸ್ಪಷ್ಟ ತೋರಿಸುತ್ತದೆ.

ವ್ಯವಹಾರ ಜ್ಞಾನ: ಇಲ್ಲಿನ ಹೆಚ್ಚಿನ ಎಲ್ಲಾ ಗಾದೆಗಳಲ್ಲೂ ಹಾಗೆ ನೋಡಿದರೆ ಬುದ್ಧಿವಾದವೂ, ವ್ಯವಹಾರ ಜ್ಞಾನವೂ ಕಂಡುಬರುತ್ತವೆ. ಲೋಕದಲ್ಲಿ ಯಾವ ಯಾವ ರೀತಿಯ ಜನರಿರುತ್ತಾರೆ. ಅವರೊಡನೆ ಹೇಗೆ ವ್ಯವಹರಿಸಬೇಕು. ಹೇಗೆ ಮೇಲ್ಮೆ ಪಡೆಯಬೇಕು ಎಂಬ ಪ್ರಶ್ನೆಗಳಿಗೆ ಬುದ್ಧಿವಂತಿಕೆಯ ಉತ್ತರಗಳಿವೆ.

"ಹೋದಾಗ ಬಿಕ್ಕಿ ಬಿಕ್ಕಿ ಅತ್ತ, ಇದ್ದಾಗ ಕುಕ್ಕಿ ಕುಕ್ಕಿ ಕೊಂದ"

"ಕಸಬು ಕಸಾಯಿ, ಹೆಸರು ದಯಾಮಯಿ"

"ಮೊದಲು ಭಾವಿಸು, ಆ ಮೇಲೆ ರೂಪಿಸು."

"ನೇಲಿ ನೋಡಿ ಶಾಲೆ ಹರವು."

ಪ್ರತಿಯೊಬ್ಬ ಮಾನವನ ಒಳಿತು ಕೆಡುಕುಗಳಿಗೆ ಮೂಲತಃ ಅವನೇ ಕಾರಣ. ಗೀತೆಯಲ್ಲಿ ಇದರ ಬಗ್ಗೆ ವಿವರವಿದೆ. ಇದನ್ನೇ ಮಂಥಾನ ಚಿಕ್ಕ ಮಾತಿನಿಂದ ಹೇಳುತ್ತದೆ. "ನಾನೇ ನನ್ನ ಗುರು. ನಾನೇ ನನ್ನ ಶನಿ."

ಆರು ದೋಸೆ ಕೊಟ್ಟರೆ ಅತ್ತೆ ಕಡೆ, ಮೂರು ದೋಸೆ ಕೊಟ್ಟರೆ ಸೊಸೆ ಕಡೆ ಎಂಬಂತೆ ಯಾರು ಹೆಚ್ಚು ಶಕ್ತಿವಂತನೋ. ಪ್ರಭಾವಶಾಲಿಯೋ ಅವನನ್ನು ಎಲ್ಲರೂ ಆಶ್ರಯಿಸುವುದು ರೂಢಿ. ಆದ್ದರಿಂದಲೇ "ಹಣ್ಣಿದ್ದ ಮರಕ್ಕೆ ಹಕ್ಕಿ ಹೆಚ್ಚು."

ಪ್ರಾಸಾನುಪ್ರಾಸ: ಪ್ರಾಸ ಅನುಪ್ರಾಸಗಳಿರುವ ವಾಕ್ಯಗಳು ಮಂಥಾನದಲ್ಲಿ ಎಷ್ಟೋ ಇವೆ. ನಿದರ್ಶನಕ್ಕಾಗಿ,

"ಹಟ್ಟಿ ತುಂಬಾ ಹಸು, ಹಾಲು ಮಾತ್ರ ತುಸು"

"ಮಾಗಿ ಹಿಂದೆ, ಸುಗ್ಗಿ ಮುಂದೆ."

ಆಧುನಿಕತೆ: ಇಂದಿನ ಆಧುನಿಕ ಜೀವನಕ್ಕೆ ಅನ್ವಯವಾಗಬಲ್ಲ ಕೆಲವು ಗಾದೆಗಳು ಇವೆ.

"ಕಾಡು ದಾರೀಲಿ ಕಾರು ಕೆಟ್ಟ ಹಾಗೆ"

"ಮುನಿಸಿಪಲ್ ಪಾರ್ಕಿಗೆ ಮಾಲಿಯೂ ಇಲ್ಲ, ಬೇಲಿಯೂ ಇಲ್ಲ"

ಹಾಸ: ಮಂಥಾನದ ಹೆಚ್ಚಿನ ಎಲ್ಲಾ ಗಾದೆಗಳಲ್ಲೂ ವಿನೋದ ಕಂಡುಬರುತ್ತದೆ. ಸ್ವಭಾವತಃ ವಿನೋದಶೀಲರಾದ ಭಟ್ಟರ ಹಾಸ್ಯಪ್ರಿಯತೆ ಇಲ್ಲಿಯೂ ಅಲ್ಲಲ್ಲಿ ಇಣುಕು ನೋಟ ಬೀರಿ ಓದುಗರಿಗೆ ನಗೆ ಮೂಡಿಸುತ್ತದೆ. ಉದಾಹರಣೆಗೆ:

"ಆಕಳಿಕೆ ಅಕ್ಕ, ತೂಕಡಿಕೆ ತಂಗಿ"

"ಉಂಡೆ ತಿಂದರೆ ಉರುಟಾದಾನೆ"

"ಇಂದು ಪಟ್ಟಾಭಿಷೇಕ, ನಾಳೆ ಶಿರಚ್ಛೇದನ"

ಗೃಹಜೀವನ: ತಂದೆ ಮಕ್ಕಳು, ಗಂಡ ಹೆಂಡತಿ ಮುಂತಾದ ಕುಟುಂಬ ಜೀವನದ ಕುರಿತಾದ ಗಾದೆಗಳೂ ಮಂಥಾನದಲ್ಲಿವೆ.

"ಅಪ್ಪ ಜೂಜು ಕಲಿತ, ಮಗ ಮೋಜು ಕಲಿತ"

"ಅಪ್ಪನ ಕೂಡ ನೋಟ ಚೆಂದ, ಅವ್ವನ ಕೂಡ ಊಟ ಚೆಂದ."

ಹೆಣ್ಣು ಗಂಡು ಇವರಲ್ಲಿ ಹೆಣ್ಣು ಅರಿತೋ, ಅರಿಯದೆಯೋ ಒಮ್ಮೆ ತಪ್ಪು ದಾರಿ ಹಿಡಿದರೆ ಸಾಕು ಅವಳದು ಅಕ್ಷಮ್ಯ ಅಪರಾಧ. ಅವಳು ಮರಳಿ ತಲೆಯೆತ್ತಿ ಎಲ್ಲರಂತೆ ಬಾಳುವಂತಿಲ್ಲ. ಆದರೆ

ಗಂಡು ಎಷ್ಟೇ ಕೆಳಮಟ್ಟಕ್ಕಿಳಿದರೂ ಅವನಿಗೆ ಮತ್ತೆ ಸಮಾಜದಲ್ಲಿ ಸ್ಥಾನಮಾನಗಳು ದೊರೆಯುತ್ತವೆ. ಇದರ ಬಗ್ಗೆ ಮಂಥಾನ ಹೀಗೆ ಹೇಳಿದೆ: "ಎಷ್ಟಾದರೂ ಹೆಣ್ಣು. ಏನಾದರೂ ಗಂಡು."

ಹೆಣ್ಣಿದ್ದರೆ ಮನೆಗೆ ಶೋಭೆ ಎಂಬುದಕ್ಕೆ "ಹೆಣ್ಣು ಹೆತ್ತ ಮನೆ ಚೆಂದ, ಹಣ್ಣು ಹೊತ್ತ ಮರ ಚೆಂದ" ಎಂಬ ಮಾತು ಸಮರ್ಥನೆಯನ್ನೀಯುತ್ತದೆ.

"ವಿನಯೇನ ವಿನಾ ಕಾ ಶ್ರೀಃ ......" ಎಂದು ಒಬ್ಬ ಕವಿ ಹೇಳಿದ್ದರೆ ಕಾಳಿದಾಸನು, "ಭಾಗ್ಯದೆ ಬಾಗಿಲು......" ಎಂಬ ಭಾವದ ಮಾತುಗಳನ್ನು ಕಣ್ವರ ಬಾಯಿಯಿಂದ ಹೇಳಿಸಿರುವನು. ಇದೇ ಭಾವನೆಯಿಂದ ಗಾದೆಯ ರೂಪದಲ್ಲಿ "ಸ್ತ್ರೀ ಇದ್ದಲ್ಲಿ ಶ್ರೀ ಇದೆ" ಎಂದು ಪರಮೇಶ್ವರ ಭಟ್ಟರು ಹೇಳಿ ಮಂಥಾನದ ಮಂಗಳಾಚರಣೆ ಮಾಡಿರುವರು.

ಮಂಥಾನ ಒಂದು ವಿಶಿಷ್ಟಕೃತಿ. ಇದು ಭಾಷಣಕಾರರಿಗೆ, ಬರಹಗಾರರಿಗೆ ಬೆಳಕುತೋರಿಸಿ ಮುನ್ನಡೆಸುವ ದಾರಿದೀಪವಾಗಬಲ್ಲುದು.

# ೧೮. ಶ್ರೀ ಎಸ್. ವಿ. ಪಿ. ರವರ "ರಾಗಿಣಿ"ಯನ್ನು ಕುರಿತು

ಕೆ. ಎಂ. ಅಚ್ಯುತಕುಮಾರ್

ಕವಿ ಶ್ರೀ ಪರಮೇಶ್ವರ ಭಟ್ಟರು ಕಳೆದ ಮೂವತ್ತು ವರ್ಷಗಳಿಂದಲೂ ಮೇಲ್ಪಟ್ಟು ಕನ್ನಡಕ್ಕಾಗಿ ದುಡಿಯುತ್ತ ಬಂದಿದ್ದಾರೆ. ಅನುವಾದ, ವಿಮರ್ಶನ, ಕವಿತೆಗಳು—ಇವೆಲ್ಲಾ ಕನ್ನಡ ಸಾಹಿತ್ಯ ಸೌಧಕ್ಕೆ ನೀಡಿದ ಹೂವು, ಹಣ್ಣುಗಳು. ಇವರ ಕಾವ್ಯರಥವು 'ರಾಗಿಣಿ'ಯಿಂದ ಹಿಡಿದು 'ಇಂದ್ರಗೋಪ'ದವರೆಗೂ ನಿರಂತರವಾಗಿ ಹರಿದುಕೊಂಡು ಬಂದಿದೆ. 'ಕನ್ನಡ ಕಾಳಿದಾಸ ಮಹಾಸಂಪುಟ' ಇವರ ಪ್ರತಿಭೆಗೆ ಪ್ರಶಸ್ತಿಯಾಗಿದೆ. ಇವರ 'ಇಂದ್ರಚಾಪ' ಕನ್ನಡದ ಓದುಗ ಬಳಗಕ್ಕೆ ಸುಪರಿಚಿತವಾಗಿರುವುದಲ್ಲದೆ, ಸಹೃದಯರ ಹೃದಯಮಂದಿರದಲ್ಲಿ ಭವ್ಯಸ್ಥಾನ ಗಳಿಸಿಕೊಂಡಿದೆ.

ಈ ಕವಿತೆಗಳ ವಸ್ತು ಮುಖ್ಯವಾಗಿ ಪ್ರೇಮ. ಸಾಮಾನ್ಯವಾದ ವಸ್ತುಗಳ ದರ್ಶನದಿಂದಲೂ ಕವಿ ಹೃದಯ ವಿಶೇಷ ಆನಂದವನ್ನು ಪಡೆಯುತ್ತದೆ. 'ಚೆಂಗುಲಾಬಿ' ಕವಿತೆಗೆ ಹೂವು ಕವಿಗೆ ಪ್ರೇರಣೆ ಕೊಟ್ಟಿದೆ. ಅರುಣಕಾಂತಿಯೊಡನೆ ಅರಳಿದ ಗುಲಾಬಿ ಪ್ರೇಮ ಹೇಮಕಾಂತಿಯಿಂದ ಕಂಗೊಳಿಸುತ್ತದೆ.

> ಅರುಣಮೂಡಿದೊಡನೆ ಮೂಡಿ
> ಬಿರ್ಮನೆ ಬಿರಿದರಳಿಹೆ
> ಕಿರಣ ಕಾಂತಿಯೊಡನೆ ಕೂಡಿ
> ಕರ್ಮನೆ ಮಘಮಘಿಸಿಹೆ

ಸೌಂದರ್ಯದಿಂದ ಕವಿಯನ್ನು ಮೂಕನನ್ನಾಗಿ ಮಾಡಿ ಬೆರಗುಗೊಳಿಸುತ್ತದೆ. ಕೂಡಲೇ ಸೂರ್ಯ ಕಿರಣಗಳಿಂದ ಇಷ್ಟು ಸುಂದರವಾಗಿ ಅರಳಿತೇ ಎಂಬ ರಹಸ್ಯ ಚಿಂತನೆಯಿಂದ,

> ಏನಿದೇನಿದೇನು ಮಾಟ
> ನೋಡಲೆನಿತಿದಚ್ಚರಿ
> ಸೊಬಗೆ ಸೂರೆಹೋದ ಬೇಟ
> ನೋಡಿದೆನಿತು ಅಚ್ಚರಿ

ಅಚ್ಚರಿಪಡುತ್ತಾನೆ. ಈ ಗುಲಾಬಿಯನ್ನು ಗಾಳಿ ಭೃಂಗಗಳು ಕವಿಯ ಮನೋಭಾವವನ್ನು ಸಹಜವಾಗಿ ಹೊಕ್ಕು,

> ಭೃಂಗರಾಜ ಸಂಗಸಖಿಯೆ
> ನೀನೆ ಧನ್ಯೆ ಧರೆಯಲಿ
> ಮಧುರ ಹೃದಯೆ ಹಸನ್ಮುಖಿಯೆ
> ನಿನ್ನನೆಂತು ಮರೆಯಲಿ !

ಎಂದು ಹಾಡಾಗಿ ಹರಿಯುತ್ತದೆ. ಹೀಗೆ ಈ ಕವಿತೆಯಲ್ಲಿ ಕವಿ ಪ್ರೀತಿಯ ಕರೆಯನ್ನು ದುಂಬಿ ಹೂಗಳ ಮೂಲಕ ಸೆರೆಹಿಡಿದಿದ್ದಾರೆ.

'ರಾಧಾಕೃಷ್ಣ' ಒಂದು ಸುಂದರ ಒಲವಿನ ಕವಿತೆ. ರತಿಯಿಂದ ಮೊದಲಾಯಿತು ಈ ಪ್ರೇಮ. ಇದಕ್ಕೆ ಸುಂದರ ಸಾಕ್ಷಿ ರಾಧಾಕೃಷ್ಣರ ಕ್ರೀಡೆ. ರಾಧೆಯ ಕೋಪವು ಹೇಗೆ ಕೃಷ್ಣನ ಒಲವಿನಿಂದ ಮಾಯವಾಯಿತೆಂದು ಸುಂದರವಾಗಿ ಕವಿ ನಿರೂಪಿಸಿದ್ದಾರೆ. ಯಮುನಾತೀರವಿಹಾರದಲ್ಲಿ ಪೌರಾಣಿಕ ಪ್ರಪಂಚದ ವಾತಾವರಣದ ಸ್ಪರ್ಶವೂ ಇಲ್ಲಿದೆ. ಎರಡು ಆತ್ಮಗಳು ಮಿಲನವಾದಾಗ, ಸಮಶ್ರುತಿಯುಳ್ಳ ವೀಣೆಗಳಂತೆ,

'ಕೃಷ್ಣಾ' ಎಂದಳು ರಾಧೆಯು ರಾಧೆಯು ಎದ್ದು
'ರಾಧೆ' ಎಂದನು ಕೃಷ್ಣನು ಎದ್ದು
ರಾಧಾಕೃಷ್ಣರ ಪ್ರೇಮೋತ್ಸವದಿ
ಬ್ರಹ್ಮಾನಂದದ ದಿವ್ಯನದಿ

ಹೃದಯಗಳೆರಡು ಒಂದಾಗಿ, ರಾಧಾಕೃಷ್ಣರ ಪ್ರೇಮ ತೊರೆಯಾಗಿ ಹರಿದಿರುವುದನ್ನು ಕಾಣುತ್ತೇವೆ. ಎರಡು ಎದೆಗಳಲ್ಲಿ ಮೈದೋರಿ ಬಾಳನ್ನು ಬೆಳಗುವ ಶಕ್ತಿ—ಈ ಪ್ರೇಮ ಎನ್ನುವುದನ್ನು ಇಲ್ಲಿ ಕಾಣುತ್ತೇವೆ.

'ಮಳೆಯ ಮೋಡಿ', ಕವಿತೆಯಲ್ಲಿ ಕವಿ ಮಳೆಬರುವ ಒಂದಿರುಳನ್ನು ಕಾಣುತ್ತಾನೆ.

ಪ್ರಣಯ ಜನದ ಮನದ ಜೋಡಿ
ಯಪ್ಪುದಿಂಥ ಮಳೆಯ ಮೋಡಿ

ಸಾಮಾನ್ಯವಾದ ಮಳೆಯಲ್ಲವೆಂದು ಕವಿಗೆ ಹೊಳೆಯುತ್ತದೆ. ಕವಿ ಆ ಮಳೆಯ ಸುತ್ತ ಆವರಿಸಿರುವ ಮಿಂಚು, ಗುಡುಗು, ಕಾಮನಬಿಲ್ಲು ಮುಂತಾದುವುಗಳನ್ನು ಕಾಣುತ್ತಾರೆ.

ನೆನಪಾಯಿತು ವ್ಯಂಗ್ಯ ದಾಟಿ
ಪ್ರಣಯ ಕುಪಿತೆಯಾರ್ಭಟ;

ಮರುಕ್ಷಣವೇ ಮನದನ್ನೆಯ ಸೌಂದರ್ಯ ಮರುಕಳಿಸುತ್ತದೆ. ನಲ್ಲಳಿಗೆ ಮಳೆಯ ಸೌಂದರ್ಯವನ್ನು ಹೋಲಿಸಿ ಹರ್ಷಿತರಾಗುತ್ತಾರೆ. ಮಳೆ–ಮಣ್ಣು ಸೇರಿ ಹಸುರಾದುದನ್ನು ಕಂಡು, ಕವಿ ಹೃದಯ

ಮಣ್ಣ ಬದುಕು—ಮನಕೆನಿಸಿತು
ಒಲುಮೆಯಿಂದ ಹೊನ್ನಾಯಿತು
ಒಲಿದ ಬಾಳು ಸಾರ್ಥಕ

ಎಂದು ಸಮಾಧಾನಪಡುತ್ತದೆ.

'ಕಲ್ಪನಾವಿಲಾಸ' ಕವಿತೆ ಸಂಧ್ಯಾಸಮಯದಿಂದ ಆರಂಭವಾಗುವುದು. ಕವಿಯು ಕಲ್ಪನೆಯ ಕಣ್ಣಿಂದ ಸಂಧ್ಯಾದೇವಿಯ ಚೆಲುವನ್ನು ಕಂಡು, ತಾನು ಕಂಡ ಕಲ್ಪನೆಯಲ್ಲಿ ಸಂಧ್ಯಾದೇವಿಯ ಸುಂದರ ಚಿತ್ರವನ್ನು ಚಿತ್ರಿಸಿದ್ದಾರೆ. ಕವಿ ಸಂಧ್ಯಾದೇವಿಯ ಸೌಂದರ್ಯಕ್ಕೆ ಮರುಳಾಗಿದ್ದಾರೆ. ಸಂಧ್ಯಾದೇವಿ ಸರಿಯಲು, ಕತ್ತಲು ಕವಿಯಲು ಸಂಧ್ಯೆ ಜಾರಿದಳಯ್ಯೊ, ಜಾರಿಣಿಯ ತೆರದಿಯೆಂದು ಚಿಂತೆಯೊಳಗಾಗುತ್ತಾರೆ.

ಮುಳುಗಿದೆನೊ, ತೇಲಿದೆನೊ ನನಗೆ ಎಚ್ಚರವಿಲ್ಲ
ಮುಂದಾದುದನು ನಿಮಗೆ ಹೇಳಲೇಕೆ?

ಎಂದು ಪ್ರಶ್ನಿಸುತ್ತಾರೆ. ಬರಬರುತ್ತ ಕಲ್ಪನಾವಿಲಾಸವೇ ಮೂರ್ತಿಗೊಂಡಂತೆ ಬಹಳ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಸಂಧ್ಯಾದೇವಿ—ಪ್ರಕೃತಿಯ ಆಸ್ವಾದನೆಯ ಅನುಭವದ ವಿವಿಧ ಮಜಲುಗಳನ್ನು ಗುರುತಿಸಬಹುದು. ಸ್ತ್ರೀಸೌಂದರ್ಯ ಮತ್ತು ಪ್ರಕೃತಿ ಸೌಂದರ್ಯದ ನಡುವಣ ಸಾಮ್ಯ ಸುಂದರ ಚಿತ್ರಣವಿದೆ. ಇಲ್ಲಿನ ಕಲ್ಪನೆ ಅನುಭವದ ಬುಗ್ಗೆಯಿಂದ ಹೊರಹೊಮ್ಮಿದೆ.

ಕವಿತೆ ಹುಟ್ಟಿದಂದಿನಿಂದಲೂ ಪ್ರೇಮದ ಅಭಿವ್ಯಕ್ತಿ ನಡೆಯುತ್ತಲೇ ಬಂದಿದೆ. ಕವಿಯ ಅಂತರಂಗವನ್ನು ಮೊದಲು ಸ್ಪರ್ಶಿಸುವುದು ಪ್ರೇಮ.

ನಿನಗಾಗಿ ಹೂಗಳನ್ನು ಹೆಣೆದ ಹೊಸಹಾರ
ಕಯ್ಯೊಳೇ ಬಾಡುತಿದೆ ಬೇಗನೈತಾರ.

ಎಂದು ಪ್ರಿಯನು ಪ್ರೇಯಸಿಗಾಗಿ ಕಾದು ಕಾತುರಪಡುತ್ತಿರುವಾಗ, ಒಮ್ಮೆಲೆ ಭಾಷೆಯ ನೆನಪು ಬಂದು

ಅವಳಿನಗಿತ್ತ ಭಾಷೆಯ ಬಲದಲಿ
  ಕಾಯುತಲಿಹೆನಿಲ್ಲಿ;
ಬರುವಳು ಬರುವಳು ಎನ್ನುವ ಆಸೆಯೆ
  ನನ್ನನು ಕಾಯಿಪುದು

ಎಂದು ಆತ್ಮವಿಶ್ವಾಸದಿಂದ ಕಾದುಕೊಂಡಿರುವ ಪ್ರಿಯನ ಚಿತ್ರ ಇಲ್ಲಿದ್ದರೆ, ಅತ್ತ ಪ್ರೇಯಸಿಯು ಪ್ರಿಯನಿಗಾಗಿ,

ಹೂಜಿಯೊಳಗಿರಿಸಿರುವ ರೋಜ ಬಾಡುತ ಬಂತು
ಬೆಳ್ಳಿ ಬಟ್ಟಲು ಹಾಲು ಕೆನೆಗಟ್ಟಿತು,

ಕಾದು ಕುಳಿತ ಅವಳ ಪ್ರೇಮಕಾತುರತೆ ಕೊನೆಮುಟ್ಟುತ್ತದೆ. ಇಂತಹ ವಿರಹಯಾತನೆಯನ್ನು ಅನುಭವಿಸಿದ ಎರಡು ಹೃದಯಗಳು ಮಿಲನವಾದಾಗ ಅವರ ಒಲುಮೆ ಹೊಳೆಯಾಗಿ ಹರಿಯುತ್ತದೆ. ಆಗಲೇ,

ಬೇಡ ಬಿಡುಗಡೆ ಅಲ್ಲಿ
ಇರಲಿ ಸೆರೆ ಇಲ್ಲಿ
ಬೇಡ ಪೆರರೊಲವಲ್ಲಿ
ಇರಲು ನೀನಿಲ್ಲಿ

ಪ್ರಿಯನ ಹೃದಯ ನುಡಿಯುತ್ತದೆ, ಸಕ್ಕರೆಯು ಹಾಲೊಳಗೆ ಒಂದಾಗುವಂತೆ ನಲ್ಲನಲ್ಲೆಯರ ಹೃದಯಗಳೊಂದಾಗುತ್ತವೆ.

'ಭಾವಗೀತೆ' ಒಂದು ಸುಂದರ ಕವಿತೆ. ಸುಂದರ ಸಂಧ್ಯಾಸಮಯದಲ್ಲಿ ಎರಡು ಹೃದಯಗಳು ಒಲವಿನಿಂದ ಒಂದಾಗಿ ಆತ್ಮಾನಂದದ ಅಮರತೆಪಡೆದಿರುವುದನ್ನು ಕಾಣುತ್ತೇವೆ.

ಸನಿಯದೊಳಿನಿಯಳ ಮುರಳಿಯ ವಾದನ-
ದುಲಿಯನು ಸವಿಯುತೆ ಮೌನದಾಲಿ
ಆತ್ಮಾನಂದದ ಅಮರತೆ ಪಡೆದೆವು

ಎಂದು ಎರಡು ಆತ್ಮಗಳ ಮಿಲನವನ್ನು ಕಾಣುತ್ತೇವೆ.

ಕವಿಯ ಮನದಲ್ಲಿ ಮೂಡಿದ ಭಾವ ಭಾವನೆಗಳು ಒಪ್ಪವಾದ ನುಡಿಗಳಲ್ಲಿ, ನೇರವಾಗಿ, ಸರಳವಾಗಿ, ಸ್ಪಷ್ಟವಾಗಿ ಅಭಿವ್ಯಕ್ತವಾಗಿವೆ. ಇಲ್ಲಿಯ ಭಾವನೆ ಸಹೃದಯರನ್ನು ಬೇರೊಂದು ಪ್ರಪಂಚಕ್ಕೆ ಕರೆದೊಯ್ಯುತ್ತದೆ.

ಇಲ್ಲಿನ ಕವಿತೆಗಳಲ್ಲಿ 'ರಾಗಿಣಿ'ಯೇ ಒಂದು. ಇದರ ಹೆಸರನ್ನೇ ಸಾಂಕೇತಿಕವಾಗಿ ಈ ಕವನ ಸಂಕಲನಕ್ಕೆ ಬಳಸಿಕೊಂಡಿದ್ದಾರೆ. ಕವಿಯ ಕವಿತಾಶಕ್ತಿ ಹಣ್ಣಾಗಿದೆ.

ರಮಣಿ ಹಾಡುವಳೆಂದೆ ಒಲವಿನಾನಂದದಲಿ
  ತೊನೆದು ತೂಗಾಡಿತಂಗಳದ ಹೊಂಗೆ
ಕೆಮ್ಮನಿದ್ದಿತು ಬಳ್ಳಿ, ಸುಮ್ಮನಿದ್ದಿತು ತೆನೆ
  ಹರಿವುದನೆ ನಿಲ್ಲಿಸಿದಳಂದು ತುಂಗೆ

ಕವಿತಾಶಕ್ತಿ ಚೆನ್ನಾಗಿ ಗೋಚರವಾಗುತ್ತದೆ. ಕವಿತಾ ಕಾಮಿನಿ ಸಾಕಷ್ಟು ಪ್ರಸನ್ನಳಾಗಿದ್ದಾಳೆಂಬುದಕ್ಕೆ ಸಾಕ್ಷಿ ಈ ಕವನ. 'ನೀನು–ನಾನು', 'ನಾವು–ನಲಿವ' ಮುಂತಾದ ಕವಿತೆಗಳಲ್ಲಿ ಕವಿ ಪ್ರಕೃತಿಯ ವಿವಿಧ ವಸ್ತುಗಳೊಡನೆ ಒಂದಾಗಿರುವುದಲ್ಲದೆ, ಹಾಗೆ ಒಂದಾಗಿರುವುದರಿಂದಲೇ ತೃಪ್ತಿಪಟ್ಟಿರುವುದನ್ನು ಕಾಣಬಹುದು.

'ಇರವು-ಅಳಿವು', 'ಒಸಗೆ', 'ಒಂದು ಮಾತು' ಎಂಬ ಕವನಗಳಲ್ಲಿ ಮೂಡಿರುವ ಮನೋಭಾವ ಸಹೃದಯರನ್ನು ವಿಚಾರ ಪರರನ್ನಾಗಿ ಮಾಡುವುದು.

'ದೀಪ ಹಚ್ಚು'–ಕವಿತೆ ಸಹೃದಯರ ಜ್ಞಾನದೀಪವನ್ನು ಬೆಳಗಿಸಬಲ್ಲ ಶಕ್ತಿಯನ್ನು ಪಡೆದಿದೆ. 'ಇನಿತು ಸೊಗವಿರುವೆಂದು', 'ಹಳೆಯ ಗೀತ', 'ಒಸಗೆ', 'ನೆನೆಯದಿರು', ಕವಿತೆಗಳಲ್ಲಿ ಒಂದೇ ರೀತಿಯ ಭಾವನೆ ಮೇಲಿಂದ ಮೇಲೆ ಎದ್ದು ಕಾಣುತ್ತದೆ. ಮಾನವಜೀವನದಲ್ಲಿ ಕಷ್ಟಸುಖಗಳು, ಬೇಸಿಗೆ, ಮಳೆಗಾಲದಂತೆ ಒಂದಾದ ಮೇಲೆ ಇನ್ನೊಂದರ ಸರದಿ ಇದ್ದೇ ಇರುತ್ತದೆ. ಆದ್ದರಿಂದ ಅಂದಿನ ದಿವಸಕ್ಕೆ ಅದೇ ಚೆಲುವುಯೆಂದು ತಿಳಿದು,

ಎಷ್ಟು ಸಿಕ್ಕರಷ್ಟ ಕಡೆಗೆ
ಪಡೆದಷ್ಟಕೆ ತೃಪ್ತಿಯಾಗು

ಇದುವೇ ಜೀವನದ ಗೆಲವು. ಇದುವೆ ಒಲವು ಎಂದು ತತ್ತ್ವಚಿಂತನೆ ಮೂಡಿಸಿದ್ದಾರೆ.

ಗಂಧರ್ವನೈಪುಣ್ಯದಿಂದ ವೀಣೆಯನ್ನು ಇಂಪಾಗಿ ನುಡಿಸಿದಂತೆ ರಾಗಿಣಿಯ ಕವಿತೆಗಳಲ್ಲಿ ಮೋಹಕತೆ ಇದೆ. ಇಲ್ಲಿಯ ಎಲ್ಲಾ ಕವಿತೆಗಳು ಕವಿಯ ಹೃದಯಾಂತರಾಳದಿಂದ ಹೊರಹೊಮ್ಮಿದ ಕಾರಣ ಸಹೃದಯರ ಹೃದಯವನ್ನು ನೇರವಾಗಿ ಪ್ರವೇಶ ಮಾಡುತ್ತವೆಯೆಂಬುದರಲ್ಲಿ ಸಂದೇಹವಿಲ್ಲ. ಇಲ್ಲಿನ ಕವಿತೆಗಳಲ್ಲಿ ಭಾವವಿದೆ, ಜೀವವಿದೆ. ಪ್ರಥಮ ಕವನ ಸಂಕಲನವಾದರೂ ರುಚಿ, ಶುಚಿ ಇದೆ. ಇಲ್ಲಿನ ಎಲ್ಲಾ ಕವಿತೆಗಳಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಪ್ರೇಮದ ಸ್ಪರ್ಶವನ್ನು ಪಡೆಯುತ್ತೇವೆ. ಈ ಕವನ ಸಂಕಲನಕ್ಕೆ ಮುನ್ನುಡಿಯ ರಕ್ಷೆಯಿಟ್ಟಿರುವ ಕವಿ ಕುವೆಂಪು ಅವರ ಹಾರೈಕೆಯಂತೆ,

ಪೀಪಿಯೆ ಮುಂದೆ ವೀಣೆ; ವೇಣುವೆ ಮುಂದೆ
ವೀಣೆ; ಆ ಪದವಿಗಿಂ ಮಿಗಿಲಪ್ಪ ಪದವಿಯಂ

ಕೀರ್ತಿಯನ್ನು, ಯಶಸ್ಸನ್ನು, ಶಾಂತಿಯನ್ನು, ಪುಣ್ಯವನ್ನು ಪಡೆಯಲೆಂದು ಹಾರೈಸುತ್ತೇನೆ.

# ೧೯. ಗಗನಚುಕ್ಕಿಯ ಪ್ರಕೃತಿ ಗೀತಗಳು

ಎಸ್. ಕೇಶವ ಭಟ್, ಆಟ್ಲೂರು

ಕನ್ನಡ ಸಾಹಿತ್ಯದ ಕಾವ್ಯ ಸಾಗರದಲ್ಲಿ ಮಿಂದ ಕವಿ ವಿಭೂತಿಗಳಲ್ಲಿ ಕುವೆಂಪು, ಬೇಂದ್ರೆ, ಪು. ತಿ. ನ. ರಂತೆ ಪರಮೇಶ್ವರ ಭಟ್ಟರು ಒಬ್ಬರು; ಬಡ ಕುಟುಂಬದಲ್ಲಿ ಹುಟ್ಟಿ, ವಿದ್ಯೆಯಲ್ಲಿ ಅಗರ್ಭ ಶ್ರೀಮಂತರಾಗಿ ಬೆಳೆದು "ಮುಂದೆಯೂ ರಚನೆಗಿಹ ಕೃತಿಯು ನೂರಾರು" ಎಂದು ರಸಋಷಿಯಾಗಿ ಸಾಗುತ್ತಿ ವರು ಕನ್ನಡದ ಎಸ್. ವಿ. ಪರಮೇಶ್ವರ ಭಟ್ಟರು. ಮಾನಸ ಗಂಗೋತ್ರಿಯಿಂದ ಮಂಗಳ ಗಂಗೋತ್ರಿಯತ್ತ ಗಂಗೆಯಂತೆ ಇಳಿದುಬಂದು, ಸಂತ, ನಿರ್ಮೋಹಕರಾದ ಸೌಮ್ಯಸ್ವರೂಪರು ಪರಮೇಶ್ವರ ಭಟ್ಟರು. ಅವರ ಕವಿತ್ವ, ಬಹುಮುಖ ಪ್ರತಿಭೆಯಿಂದ ಕೂಡಿದೆ. ಕಾಳಿದಾಸನ ಬಾಗಿಲು ತಟ್ಟಿ, ತೆರೆಯಿಸಿದ ಭಟ್ಟರು, ಅನುವಾದಕಾರರಾಗಿ, ಒಮ್ಮೆ ರತ್ನಾಕರವರ್ಣಿಯಂತೆ ಸಾಂಗತ್ಯಕ್ಕೆ ಮಾರುಹೋದ ಅಭಿನವ ರತ್ನಾಕರವರ್ಣಿಯಾಗಿ, ತ್ರಿಪದಿಯ ಮತ್ತೊಬ್ಬ ಸರ್ವಜ್ಞರಾಗಿ, ವಚನಗಳ ಮತ್ತೊಬ್ಬ ಬಸವಣ್ಣನವರಾಗಿ, ಒಮ್ಮೆ ಪ್ರಕೃತಿ ಕವಿಯಾಗಿ, ಇನ್ನೊಮ್ಮೆ ಸೌಂದರ್ಯ ಆರಾಧಕರಾಗಿ, ಮಗುದೊಮ್ಮೆ ಪ್ರೇಮಾರಾಧಕರಾಗಿ, ರಸಿಕರಲ್ಲಿ ರಸಿಕರಾಗಿ, ವಾಗ್ಮಿಗಳಲ್ಲಿ ಸ್ಪರ್ಧೆಗೆ ನಿಲ್ಲುವ ವಾಗ್ಮಿಯಾಗಿ, ಪ್ರಾಧ್ಯಾಪಕರಲ್ಲಿ ನಿರಾಡಂಬರರಾಗಿ ಸ್ನೇಹಾಕಾಂಕ್ಷಿಯಾಗಿ, ಪೂಜ್ಯ ಸದಾಶಿವರಾಯರ ಏಕಮಾತ್ರ ಪುತ್ರರತ್ನರಾಗಿ ಪರಮೇಶ್ವರ ಭಟ್ಟರು ಕಾಣಿಸುತ್ತಾರೆ.

ಪ್ರಸ್ತುತ, ಕವಿಯ ಪ್ರಕೃತಿ ಗೀತಗಳ ಸಂಕಲನವೊಂದರತ್ತ ಕಣ್ಣು ಹಾಯಿಸಿದರೆ ಅವರ "ಹುಣ್ಣಿಮೆ ಚಂದಿರ"ನೇ ಮೊದಲು ಕಾಣಿಸುತ್ತಾನೆ. ಕವಿಗಳಿಗೆಲ್ಲ ಕಾಣುವ ಚಂದಿರ ಒಬ್ಬನೇ ಆದರೂ, ಬೇರೆ ಬೇರೆ ಕವಿಗಳಿಗೆ ಅವರವರ ಸಂಸ್ಕಾರ ವಿಶೇಷಗಳಿಗೆ ತಕ್ಕಂತೆ ವರ್ಣಿಸುವ ರೀತಿಗಳು ಬೇರೆ ಬೇರೆ. 'ಹುಣ್ಣಿಮೆ ಚಂದಿರಂ' ಎಂಬ ಕವನದಲ್ಲಿ ಕವಿ ಚಂದಿರನ ಸದ್ಗುಣಗಳನ್ನು ಹೇಳುತ್ತಾರೆ. "ಸೌಂದರ್ಯವನ್ನೇ ಆರಾಧಿಸು, ಆದರೆ ಕೃತಕ ಸೌಂದರ್ಯವನ್ನು ತೊರೆ" ಎನ್ನುತ್ತಾರೆ. ಕವಿ ಕಂಡ ಚಂದಿರ ಸುಂದರನಾಗಿ, ತಂಪಿನ ಇಂಪುಳ್ಳವನಾಗಿ, ಜಗಕ್ಕೆ ಶಾಂತಿಯನ್ನು ಕೊಡುವವನಾಗಿ ಗೋಚರಿಸುತ್ತಾನೆ.

"ವಸಂತ ಋತು"ವಿನಲ್ಲಿ ಪ್ರಕೃತಿಯ ಸುಖಕ್ಕೆ ಅಸೂಯೆಪಟ್ಟೋ ಎಂಬಂತೆ ಮುಂದೆ ಬರುವ ಹೇಮಂತ ಋತುವಿನ ಸಹಜ ಚಿತ್ರವನ್ನು ಕವಿ ಮೂಡಿಸಿದ್ದಾರೆ. ಹೇಮಂತ ಭೂಮಿಗೆ ಬಂದಿಳಿದಾಗಲೇ ಪ್ರಕೃತಿ ದೂರದಿಂದಲೇ 'ಅತ್ತ ತೆರಳು' ಎಂದು ಹೇಳುವಂತೆ ಗೋಚರಿಸುತ್ತದೆ. ಪ್ರಕೃತಿಯಲ್ಲಿ ಹೇಮಂತ ಋತುವಿನಿಂದಲಾಗಿ ಶೂನ್ಯತೆಯೇ ಎತ್ತಲೂ ಕಾಣಿಸುತ್ತದೆ. ಕವಿ ಹೇಳುವಂತೆ,

"ಹೇಮಂತ ಋತುರಾಜ ಇಳೆಗೆ ಬಂದಿಳಿದಂದು
ಹೂವಿಲ್ಲ ಹಸುರಿಲ್ಲ ಚಿಗುರೆಲೆಗಳಿಲ್ಲ
ದುಂಬಿಗಳ ದನಿಯಿಲ್ಲ, ಹಕ್ಕಿಗಳ ಹಾಡಿಲ್ಲ
ಕುಸುಮಗಂಧವ ತರುವ ಮರುತನಿಲ್ಲ"

ಹೇಮಂತ ಇಳೆಗೆ ಅವತರಿಸಿದಾಗ, ವೃದ್ಧ ವಿಧವೆಯೊಬ್ಬಳನ್ನು ಕಂಡಂತಾಗುತ್ತದೆ; ಪ್ರಕೃತಿಯೆಲ್ಲವೂ ಸಂಭ್ರಮವನ್ನು ಕಳೆದುಕೊಂಡು ಶೂನ್ಯವಾಗಿ ತೋರುತ್ತದೆ. ವೃದ್ಧೆಯೊಬ್ಬಳು ನಮ್ಮ ಬಳಿ ಬಂದು ಕುಳಿತಾಗ ನಮಗೆ 'ಬಿಕೋ' ಎನಿಸುವಂತೆ ಹೇಮಂತ ಬಂದು ಪ್ರಕೃತಿಯೂ ಬಿಕೋ ಎನ್ನಿಸುತ್ತದೆ. ಕವಿ ಪ್ರಕೃತಿಯ ಚೈತನ್ಯರಹಿತತೆಯನ್ನು ಹೇಳಿದ್ದಾರೆ. ಕಾವ್ಯ ಬರೆಯದ ಅಕ್ಷರವರಿಯದ ಹಳ್ಳಿಗರಿಗೂ ಈ ಕವನ ಶ್ರುತಿರಮ್ಯವೆನಿಸುತ್ತದೆ. "ಜೇಂಗುಡಿಯ ಸಿಂಗರದ ವರ ವರೂಥಗಳೆನಿಸಿದ್ದ" ಮರಗಿಡ ಬಳ್ಳಿಗಳು, ತಮ್ಮೆಲ್ಲ ಅಧಿಕಾರವನ್ನು ಕಳಕೊಂಡ ರಾಜರಂತೆ ಕಾಣಿಸುತ್ತವೆ. ಹೊಲ ಗದ್ದೆಗಳು ಸುಯ್ಯಲಿಡುತ್ತಾ ಮಲಗಿದರೆ, ತುಂಗೆ ನಾಚಿ ಹೆದರಿ ಮೆಲ್ಲನೆ ಹರಿಯುತ್ತಾಳಂತೆ.

"ಹಣ್ಣೆಲೆಗಳು ಉದುರುತಿಹ ಬರಲು ಮರಗಳನೇರಿ
ಕಣ್ಣೀರು ಸುರಿಸ ತಿಪೆ ಕಾನನದ ಹಕ್ಕಿ"

ಮಾನವ ತನ್ನ ಸಂಬಂಧಿಕರು ವ್ಯತ್ಯವಶರಾದರೆ ಕಣ್ಣೀರು ಸುರಿಸುವಂತೆ, ಕವಿಗೆ ಗೋಚರಿಸಿದ ಕಾನನದ ಪಕ್ಕ ಕಾಜಾಣದ ಸ್ಥಿತಿಯಾಗಿದೆ. ಅದಕ್ಕೆ ವಸಂತಕಾಲದ ಆ ಮರವೇ ಸರ್ವ ಬಂಧುಮಿತ್ರರ ಸಂಬಂಧದ ಮನೆಯಾಗಿತ್ತು. ಈಗ ಅದು ತನ್ನೆಲ್ಲವನ್ನೂ ಕಳಕೊಂಡು ಕಣ್ಣೀರಿಡುತ್ತದೆ. ಹೇಮಂತದ ಆಳ್ವಿಕೆ ಕಷ್ಟಕರವಾದರೂ ಪ್ರತಿ ಋತುವಿನಲ್ಲಿ ಅದು ತನ್ನ ಕರ್ತವ್ಯವನ್ನು ಮಾಡಲು ಹಿಂಜರಿಯುವುದಿಲ್ಲ.

"ಹೂಮಳೆ, ಹೂ ಬಿಸಿಲು" ಎಂಬ ಕವನದಲ್ಲಿ ಕವಿ ಪ್ರತಿಯೊಂದು ದೃಶ್ಯವೂ ಹೂವಾಯಿತು ಎಂದಿದ್ದಾರೆ.

"ಪುಷ್ಪಿತ ವಸುಂಧರೆಗೆ
ಮಿಸುನಿ ಮಳೆಯ ಮಿಂಚುನೆರಿಗೆ
ಸಡಗರಿಸುವ ದುಗುಲವೂ ಹೂವಾದುದು"

ಪ್ರಕೃತಿಕವಿ ಪರಮೇಶ್ವರ ಭಟ್ಟರು ಹಂಪೆಯಲ್ಲಿ ಒಂದು ದಿನ ನಿಂತು ಅಲ್ಲಿಯ ಸಹಜ ಸೌಂದರ್ಯವನ್ನು ಆಸ್ವಾದಿಸಹೊರಟಾಗ ಅವರ ಕಾವ್ಯಶಕ್ತಿ ಕಾರಂಜಿಯಂತೆ ಪುಟಿದು ಅಲ್ಲೇ ಕಾವ್ಯವಾಹಿನಿಯಾಗಿ ಚಿತ್ರಭಿತ್ತಿಯಲ್ಲಿ ಹರಿದಂತೆ ಭಾಸವಾಗುತ್ತದೆ. ಕವಿ ಕಂಡ ದೃಶ್ಯದಿಂದ ಅವರ ಮನಸ್ಸು ಮತ್ತೆ ರಾಮಾಯಣದ ಅರಣ್ಯಕಾಂಡದತ್ತ ವಿದ್ಯುತ್ತಿನಂತೆ ಹೊರಳಿರಬೇಕು.

"ಕಳ್ಳನೊಯ್ವ ಸಮಯದಲ್ಲಿ ದೇವಿಯರ ಸೆರಗಿಲ್ಲಿ ಜಾರಿದುದೆ? ವಾಲಿಸುಗ್ರೀವರುಗಳಂದಿಲ್ಲಿ ಕಾದಿದರೆ" ಎಂದು ಹೇಳಿ ಅನಂತರ ಆ ಪ್ರದೇಶದ ಮಹತ್ತ್ವವನ್ನು ಹೇಳಹೊರಟಿದ್ದಾರೆ. ಅದು ಪುಣ್ಯವನಗಳ ಭೂಮಿ, ವಿರೂಪಾಕ್ಷನಿರುವ ನೆಲೆ: ವಿರೂಪಾಕ್ಷನೆಡೆಗೆ ಪರಮೇಶ್ವರನ ಪಾದಯಾತ್ರೆಯಿಂದಾಗಿ ಆ ಪ್ರದೇಶದ ಕಲ್ಲು ಮಣ್ಣುಗಳು ಬಾಂಧವ್ಯವನ್ನು ಸವಿದು, "ಮುಂದೆ ಬಹ ಜನರ ಬದುಕೊಳ್ಳಿತಾಗುವುದೆ ಇದರ ಗುರಿ" ಎಂದು ಮನಸ್ಸಂತೋಷಗೊಂಡು ತುಂಗೆಯ ತಡಿಗೆ ಬರುತ್ತಾರೆ.

ಕವಿ ಬರುವ ಹೊತ್ತಿಗೆ ಕವಿಯನ್ನು ತನ್ನೆಡೆಗೆ ಕರೆಯುವಂತೆ, ತುಂಗೆಯು ಮೆಲ್ದನಿಯ ಮಾತಿನ ಮೋಡಿಯಿಂದ ಬಿಳಿನೊರೆಯನ್ನು ಅಧರದ ತುದಿಯಲ್ಲಿ ಹರಿಸುತ್ತಾ, ಮುಗುಳ್ನಗೆಯಿಂದ ನಾಚಿ ಹರಿಯುತ್ತಾಳೆ. ಬೆರಗು ಬಿಂಕಗಳಿಲ್ಲದ ಕವಿಯಂತೆ ಬೆರಗು ಇಲ್ಲದವಳಾಗಿ ತುಂಗೆ ಹರಿಯುವುದನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

"ನಡೆ ಸೌಮ್ಯವಾದರೂ ಚಟುವಟಿಕೆ ತೋರಿಹುದು
ಆಳ ಹಿರಿದಾದರೂ ಚಟುವಟಿಕೆ ತೋರಿಹುದು
ಕೋಪವಿಲ್ಲದ ಶಕ್ತಿ ಪಾತ್ರ ಮಿೂಗದ ಯುಕ್ತಿ
ಒಂದಾಗಿ ನಿನ್ನ ಹಿರಿಮೆಗೆ ಅಂತೆ ಹೊಂದಿಕೊಂಡಿಹುದು."

ದ್ವಾದಶ ಸಂವತ್ಸರಗಳನ್ನು, ಮೆಟ್ಟಿನಿಂತ ತರುಣಿಯಂತೆ ತುಂಗೆಯ ನಡೆ ಸೌಮ್ಯ, ಆದರೂ ಚಟುವಟಿಕೆ ಇದೆ. ಭಾವೋದ್ವೇಗದ ಆಳ ಹಿರಿದಾದಷ್ಟು ಮನಸ್ಸು ಅಷ್ಟೇ ನಿರ್ಮಲ, ಮೃದು. ಶಾಂತತೆ ಬಿಂದೊಡಗೂಡಿದ ತುಂಟತನ ಮುಂತಾದ ಗುಣಗಳನ್ನು ತರುಣಿಯರು ಹೊತ್ತು ನಿಂತಿರುವಂತೆ ತುಂಗೆಯು ಕವಿಗೆ ಕಾಣಿಸುತ್ತಾಳೆ.

"ಸುರ ಹೊನ್ನೆ" ಎಂಬ ಕವನ ಕಿರಿದಾದರೂ ಹಿರಿಯ ಅರ್ಥದಿಂದ ತುಂಬಿದೆ. ಸಾಂಗತ್ಯದ ಕವಿ ಭಟ್ಟರು ಇಲ್ಲಿ ರಗಳೆಯ ಪ್ರಕಾರವನ್ನು ಪ್ರಯೋಗಿಸಿದ್ದಾರೆ. "ಸುರಹೊನ್ನೆ"ಯ ದರ್ಶನದಿಂದ ಕವಿ ಆನಂದದಿಂದ ಕೂಡಿ ರಸಋಷಿಯಂತೆ ಕಾಣಿಸುತ್ತಾರೆ.

"ಜ್ಯೇಷ್ಠ" "ದಿನಾವಸಾನ" ಮತ್ತು "ಫಾಲ್ಗುಣದ ಕೊನೆಯ ರಾತ್ರಿ" ಎಂಬ ಕವನಗಳಲ್ಲಿ ಕುವೆಂಪು ಅವರ ಸರಳ ರಗಳೆಯ ಓಟದಂತೆ ಭಟ್ಟರ ಶೈಲಿಯು ಮೂಡಿದೆ. ಗ್ರೀಷ್ಮಋತುವಿನ ಜ್ಯೇಷ್ಠದ ಸ್ಥಿತಿಯನ್ನು ಕವಿ ಹೀಗೆ ಹೇಳುತ್ತಾರೆ.

"ಜ್ಯೇಷ್ಠ ದುರ್ದಿನದುದಯಮೆತ್ತುತಿಹುದೆಂಬಂತೆ
ನಿಬಿಡ ಕೃಷ್ಣಚ್ಛಾಯೆ ಒಲಿಯುತಿಹುದೋರಂತೆ
ಮೇಣಂತೆ ಮೊಗ ಚಾಚಿ ಶೈಲ ಶಿಶು ಸಮುದಯಂ
ಮುಗಿಲ ಮಾರಿಯ ಮೊಲೆಯನುಣ್ಣುವಂತೆ"

ಎಂಬ ಕವಿ ಕಲ್ಪನೆ ಅದ್ಭುತವಾಗಿ ಕಾಣುತ್ತದೆ. ಮುಗಿಲೆಂಬ ಮಾರಿ ದೇವತೆಯ ಮೊಲೆಯನ್ನು ಶೈಲವೆಂಬ ಶಿಶು ತನ್ನ ಅವಸಾನಕ್ಕೆ ಆದಿಯೋ ಎಂಬಂತೆ ಉಣ್ಣುತ್ತದೆಯಂತೆ. ಜ್ಯೇಷ್ಠದ ದುರ್ದಿನವೋ ಎಂಬಂತೆ ಕೃಷ್ಣಛಾಯೆ ಜಗವಗಲ ಮುಗಿಲಗಲಕ್ಕೆ ಹಬ್ಬುತ್ತದೆ. ಶೃಂಗಗಿರಿಮಾಲ ಸುಸ್ಥಿರವಾಗಿ ನಿಂತು ಯೋಗಿಯಂತೆ ಕಾಣಿಸುತ್ತದೆ. ಫಾಲ್ಗುಣದ ಕೊನೆಯ ರಾತ್ರಿ ಎಂಬ ಕವನವು ಸುಂದರವಾಗಿದೆ. 'ಇರುಳ ದುರ್ದಮನೀಯತೆಗೆ ರವಿ ಬೆದರಿ ಪೈಗರೆಯ ಮರೆಯಾಗಿ ಪಶ್ಚಿಮಾದ್ರಿಯನ್ನು ಏರುತ್ತಾನೆ. ಆ ಫಾಲ್ಗುಣ ಕಳೇಬರಕ್ಕೆ ರವಿ ಬಂದು ಚರಮ ಸಂಸ್ಕಾರವನ್ನು ಮಾಡಿದಾಗ ಕವಿಯು ರವಿಯೊಡನೆ ರವಿಯಾಗಿ ಚರಮ ಶ್ಲೋಕವನ್ನು ಹಾಡುತ್ತಾರೆ.

"ಮುತ್ತುಗದ ಮರ" ಎಂಬ ಕವನದಲ್ಲಿ ಕವಿ ಸಂಸ್ಕೃತ ಪದಗಳನ್ನು ಚಿನ್ನದ ಮಾಲೆಯಲ್ಲಿ ಮುತ್ತುಗಳನ್ನು ಪೋಣಿಸಿದಂತೆ ಹೆಣೆದಿದ್ದಾರೆ.

'ಬಿದಿಗೆಯ ಸಂಜೆ'ಯನ್ನು ಕವಿ ಶೂನ್ಯದೃಷ್ಟಿಯಿಂದ ಚಿತ್ರಿಸಿದ್ದಾರೆ. ರವಿ ಪೂರ್ವದಿಗಂತದಲ್ಲಿ ಉದಯಿಸಿದಾಗ ಜಗದ ಜನರು ಆನಂದಸಾಗರದಲ್ಲಿ ತೇಲಾಡತೊಡಗಿದವರು ಕತ್ತಲು ಬಂದಾಗ ತಮಗೆ ಮೋಕ್ಷ ಬಂತೋ ಎಂಬಂತೆ ಕವಿಗೆ ಕಂಡು, ಜಗದ ಜೀವ ನೊಂದಿದೆ ಎನ್ನುತ್ತಾರೆ.

"ಭಾಗ್ಯವಳಿದ ಬಡವನಂತೆ
ಸೊಬಗನುಳಿದ ಗರತಿಯಂತೆ
ಬಂದ ಬಿದಿಗೆ ಚಂದ್ರಮ
ಎಳ್ಳನಿತೂ ಕಾಂತಿ ಇಲ್ಲ
ಜಗವನೊಲಿವ ಶಾಂತಿ ಇಲ್ಲ
ಶೂನ್ಯವೊಂದೆ ಅನುಪಮ."

ರವಿ ತನ್ನ ಕಾರ್ಯ ಮುಗಿಯಿತೆಂದು ಪಶ್ಚಿಮಾದ್ರಿಯನ್ನಡರಿದ ಮೇಲೆ ನಿಶೆಯ ಸ್ವಾಗತಕ್ಕೆ ಹೊರಟ ಮುಸ್ಸಂಜೆ ಕವಿಯ ಕಣ್ಣಿಗೆ ಭಾಗ್ಯವಳಿದ ಬಡವನಂತೆ ಕಾಣಿಸುತ್ತದೆ; ಸೌಂದರ್ಯವನ್ನು ಕಳಕೊಂಡ ವೇಶ್ಯೆಯಂತೆ ತೋರುತ್ತದೆ. ಅಂತಹ ಸಂದರ್ಭದಲ್ಲಿ ಉದಯಿಸಹೊರಟ ಬಿದಿಗೆಯ ಚಂದ್ರಮನ ಕಾಂತಿ ಕುಂದಿ ಜಗತ್ತನ್ನು ಒಲಿಸುವ ಶಾಂತಿ, ಕಾಂತಿ, ಅವನ ಶೀತಲ ಕಿರಣಗಳಿಲ್ಲದೆ ಶೂನ್ಯವೊಂದೇ ಆವರಿಸುತ್ತದೆ. ಕವಿಯೆಂಬಂತೆ "ಬೆಳೆದ ಬಂಜೆ ಕನಸಿನಂತೆ, ಬಾನೆ ಬರಿಯ ಕತ್ತಲೆ." ಬಂಜೆಯ ಕನಸುಗಳು ಬೆಳೆದು ಬತ್ತಲೆಯಾದಂತೆ, ಆಗಸವೂ ಬತ್ತಲೆಯಾಗಿ ಕವಿಗೆ ಕಾಣಿಸುತ್ತದೆ. ಚಿತ್ರಕ್ಕೆ ಒಲವನ್ನೀವ ದೃಷ್ಟಿಯ ಬೆಳಕನ್ನೀ ಆ ಸಂಜೆ ನಿಸ್ಸಹಾಯಕತೆಯ ಸ್ಥಿತಿಯಲ್ಲಿದೆ ಎಂದು ಕವಿಯ ಮನೋಭಾವ ಎಂಬಂತೆ ತೋರುತ್ತದೆ.

ಸುಡುವ ಮುಗಿಲಿನಿಂಧನವದೆ
ಅತಿ ಮನೋಜ್ಞವೆನಿಸಿದೆ

ಪೂರ್ಣಿಮಾ ಚಂದ್ರೋದಯದಂತ ಪೂರ್ವದಿಕ್ಕಿನಲ್ಲಿ ದಿನಕರ ಮೂಡಿ ಅಸ್ತಗಿರಿಯಲ್ಲಿ ಅಸ್ತಮಿಸ ತೊಡಗಿದಾಗ ಅವನನ್ನೆ ಪ್ರಥಮ ಆಹುತಿ ತೆಗೆದುಕೊಳ್ಳುವ ಮಹಾಯಜ್ಞ ನಡೆದಿದೆಯಂತೆ. ಆಗಸವೇ ಯಜ್ಞಕುಂಡವಾದರೆ ಅಲ್ಲಿ ಹೊಳೆಯುವ ವಿವಿಧ ಮೋಡಗಳು ಇಂಧನವೆಂಬ ಕವಿಕಲ್ಪನೆ ಒಂದಾಗಿದೆ.

"ಸಾಂದ್ರ ರುದ್ರ ತಮೋಧೂಮವದೋ ಗಹಗಹಿಸುತ್ತಿದೆ
ಪಡುವ ಕೋಡ ಮಹಾಸ್ತೋಮದೊಡಲಿಗೆ ಘಗೆ ತಗಲಿದೆ."

ಸಂಜೆಯ ರುದ್ರಭೀಕರವಾದ ಮೋಡಗಳ ರೌದ್ರ ಹೊಗೆ ಗಹಗಹಿಸಿ ನಗುವಂತಿದೆ. ಪಡುವಣ ದಿಕ್ಕಿನಲ್ಲಿ ಮೋಡಗಳ ಮಹಾಸ್ತೋಮವೂ ಮೈವೆತ್ತು ನಿಂತಿದೆ. ಆ ಮಹಾಯಜ್ಞದಲ್ಲಿ ರವಿ ಜೆಂದು ಬಿನ್ನರೆ ಅದನ್ನೆ ನಿಟ್ಟಿಸುತ್ತಿದ್ದ ಧ್ಯಾನದಗ್ನನಾದ ಕವಿ ಬೂದಿರಾಶಿಯ ಅಡಿಯಲ್ಲಿ ಇರುತ್ತಾನೆ ಎಂದು ಕವಿ ಹೇಳುತ್ತಾರೆ.

ಸಾವಿರಾರು ಶ್ರೋತೃಗಳ ಹೃದಯ ಸೆಳೆದ, ಆಕಾಶವಾಣಿಯ ಮನಪೊಲಿಸಿದ, ಹಾಡುಗಾರರು ಮನಮೆಚ್ಚಿ ಹಾಡಿ, ಕವಿ ಭಟ್ಟರ ಹೃದಯಕ್ಕೆ ಆನಂದವನ್ನು ಉಕ್ಕಿಸಿದ ಕವನವೇ "ಒಂದು ರಾತ್ರಿ" ರಾಗ ರಸಮೇಳದಲ್ಲಿ.

"ತಿಳಿಮುಗಿಲ ತೊಟ್ಟಿಲಲಿ
ಮಲಗಿದ್ದ ಚಂದಿರನ
ಗಾಳಿ ಜೋಗುಳ ಹಾಡಿ ತೂಗುತ್ತಿತ್ತು"

ಹಾಗೆಯೇ ಕವಿಯು ಮೃದು ಮನಸ್ಸೆಂಬ ಹಿತವಾದ ತೊಟ್ಟಿಲಲ್ಲಿ ಮಲಗಿದ್ದ ಶಿಷ್ಯರೆಂಬ ಚಂದಿರರನ್ನು ತಮ್ಮ ಮಾತೆಂಬ ಜೋಗುಳ ಹಾಡಿ ಪೋಷಿಸುತ್ತಾರೆ. ಅದರಂತೆಯೇ ರಾತ್ರಿಯ ವೇಳೆ,

"ಗರಿಮುದುರಿ ಮಲಗಿದ್ದ
ಹಕ್ಕಿಗೂಡುಗಳಲ್ಲಿ
ಇರುಳ ಹೊಂಗನಸೂಡಿ ತೂಗುತ್ತಿತ್ತು"

ಇಲ್ಲಿ ರಾತ್ರಿಯ ವೇಳೆಯ ಪ್ರಕೃತಿಯು ಸೃಜಚಿತ್ರವಿದ್ದಂತೆ ಕಾಣುತ್ತದೆ. ರಾತ್ರಿಗೆ ತಕ್ಕಂತೆ ಪಕ್ಕಿಗಳು ಮುಂದಿನ ಜೀವನದ ದಾರಿಯನ್ನು ಪರ್ಯಾಲೋಚಿಸುವಂತೆ ಅಂದಿನ ಕಳೆದ ಸುದಿನಕ್ಕೆ, ಸಂತೋಷ ದಿಂದ ರಾತ್ರಿಯನ್ನು ಕಳೆಯುತ್ತಿದ್ದವು. ಅದರಂತೆಯೇ ಕವಿವರ್ಯರು ಗರಿ ಮುದುರಿ ಹಿಂದೆ ಕುಳಿತ ಜಡವನ್ನು ಚೇತನದತ್ತ ಹರಿಯಿಸಿ ಹೊಂಗನಸುಗಳನ್ನು ಕಾಣಿಸುತ್ತಿದ್ದರು. ಕವಿ ತುಂಬಿ ಹರಿಯುವ ತುಂಗೆಯ ತಣ್ಣೀರಿನಲ್ಲಿ ನಿಂತು ಹೇಳಿದ ಪ್ರಕೃತಿಗೀತ ಚೆನ್ನಾಗಿದೆ.

"ತುಂಬು ನೀರಿನ ಹೊಳೆಯೊ–
ಅಂಬಿಗನ ಕಿರುದೋಣಿ
ಪ್ರಸ್ಥಾನಗೀತೆಯನು ಹೇಳುತ್ತಿತ್ತು"

ಬೆಳದಿಂಗಳ ಸುಂದರ ರಾತ್ರಿ ತುಂಬುನೀರನ್ನು ಹೊತ್ತು ಜುಳು ಜುಳು ನಿನಾದದಿಂದ ಹರಿಯುವ ತುಂಗೆಯ ನೀರಲ್ಲಿ ಪ್ರಸ್ಥಾನಗೀತೆಯನ್ನು ಹಾಡುತ್ತಾ ಹಿರಿಯರನ್ನು ಹೊತ್ತ ಅಂಬಿಗರ ಕಿರುದೋಣಿ ಮೆಲ್ಲ ಮೆಲ್ಲನೆ ದಡಕ್ಕೆ ಸಾಗುತ್ತಿರುತ್ತದೆ. ಕವಿಯು ಕಾವ್ಯವಾಹಿನಿಯೆಂಬ ತುಂಬುನದಿಯಲ್ಲಿ ಪ್ರತಿಭೆ, ಜ್ಞಾನ ಭಂಡಾರವೆಂಬ ದೋಣಿಯನ್ನು ಬಿಟ್ಟು, ಆ ದೋಣಿಯಲ್ಲಿ ಶಿಷ್ಯರನ್ನು ಕುಳ್ಳಿರಿಸಿ ಕಾವ್ಯರಸವನ್ನು ಸವಿಸುತ್ತಾ ಶಿಷ್ಯರ ಶುಭಕ್ಕೆ ಹಾರೈಕೆಯೆಂಬ ಪ್ರಸ್ಥಾನಗೀತೆಯನ್ನು ಹಾಡುತ್ತಾ ಮೈಮರೆತು ದೋಣಿ ಯನ್ನು ದಡಕ್ಕೆ ಮುಟ್ಟಿಸಿ, ಆನಂದದಿಂದ ಮೈಮರೆಯುತ್ತಾರೆ. ಇಲ್ಲಿ ಕವಿಯೇ ಅಂಬಿಗ, ಅವರ ಕಾವ್ಯ ಶಕ್ತಿಯೇ ತುಂಗೆಯ ತುಂಬುನೀರು, ಅವರ ಜ್ಞಾನಭಂಡಾರ, ತುಂಗೆಯ ಉದ್ದಗಲಗಳು ಅವರ ಪಾಠ ಪ್ರವಚನಗಳು.

"ಬರುವ ಮುಂದಿನ ದಿನದ
ನವನವೋದಯಕಾಗಿ
ಪ್ರಕೃತಿ ತಪವಿರುವಂತೆ ತೋರುತಿತ್ತು"

ಪ್ರಕೃತಿ ದೇವಿ, ಮುಂದೆ ಬರುವ ತನ್ನ ಕಂದರ ಮಹೋತ್ಕರ್ಷಕ್ಕಾಗಿ ವ್ರತಗಳನ್ನು ಮಾಡುವಂತೆ ಕಾಣುತ್ತದೆ: ಕವಿ ರಾತ್ರಿಯ ಸುಂದರವಾದ ಮುಖಮುದ್ರೆಯನ್ನು ಹೇಳಿದ ರೀತಿ ಸೊಗಸಾಗಿದೆ. ಶಾಂತರೀತಿಯಿಂದ ಇರುಳು ಮೆಲ್ಲಮೆಲ್ಲನೆ ಉರುಳಿ ಮರುದಿನಕ್ಕೆ ಶುಭಕೋರುವಂತೆ ಕವಿಯೂ ತನ್ನ ಸುತ್ತಲಿನ ಜೀವಿಗಳಿಗೆ ಶುಭ ಕೋರುತ್ತಾರೆ.

'ಮೈಸೂರಿನಲ್ಲಿ ಒಂದು ಸಂಜೆ' ಎಂಬ ಕವನವೂ ಕವಿಯ ಪ್ರತಿಭೆಯಿಂದ ಪ್ರಸಿದ್ಧವಾಗಿದೆ.

"ಕೆರಳುತಿದೆ ಭೂವಲಯು
ಪಡುಬಾನಿನ ಹುಚ್ಚು
................
ಬಿರುಗಾಳಿಗೆ ತಲೆಗೆದರಿಹ
ಚಂಡಿಯು ಮುಂಗುರುಳು
ವಿದ್ಯುನ್ಮದವಡಗಿದೆ ತಮ–
ದಾಘಾತಕೆ ಸಿಲುಕಿ,"

ಆ ಸಂಜೆ ರಕ್ತದೋಕುಳಿಯಾಡುತ್ತಾ, ಹುಚ್ಚೆದ್ದು ತೆರೆಯೆಲ್ಲವನ್ನು ಬಳಸಿದ ಪಡುವಾಗಿಲಲ್ಲಿ ನಿಂತು ಸ್ವಾರ್ಥತೆಯನ್ನು ತೋರಿಸುವ ಮುಸ್ಸಂಜೆ ಕವಿಗೆ, ಹುಚ್ಚೆದ್ದವರಂತೆ ಕಾಣಿಸುತ್ತದೆ. ಶ್ವೇತವರ್ಣದಿಂದ ರಕ್ತವರ್ಣಕ್ಕೆ ತಿರುಗಿ, ಆ ಸಂಜೆಯು ರಣಚಂಡಿಯ ಕೇಶರಾಶಿ ಬಿರುಗಾಳಿಗೆ ಸಿಕ್ಕಿ ಸುತ್ತು ಸುತ್ತು ಸುತ್ತಿ ಅಪ್ಪಳಿಸುವಂತೆ ಸುತ್ತಲೂ ಹರಡಿದಂತೆ ತೋರುತ್ತಿತ್ತು. ಮಹಾವಿಜ್ಞಾನಿಗಳ ನೂರಾರು ವರ್ಷಗಳ ಶೋಧನೆಯಿಂದ ರೂಪುಗೊಂಡು, ಲಕ್ಷ ಲಕ್ಷ ಜನರನ್ನು ಕ್ಷಣಮಾತ್ರದಲ್ಲಿ ಸುಡುವ ಮಹಾವೇಗದ ವಿದ್ಯುತ್ ಕೂಡಾ ಆ ಮುಸ್ಸಂಜೆಗೆ ಹೆದರಿ ಬಾಲ ಮುದುರಿ ಕುಳಿತಂತೆ ತೋರುತ್ತದೆ.

"ಎಂದಿಗೆ ಗಗನಾಂಗಣ ಮಣಿ
ಚಂದಿರ ಮೇಲೇರಿ
....................
ಅಡಗಿಸುವನೊ ಉಡುಗಿಸುವನೊ
ಕಾರಿರುಳನು ತುಳಿದು"

ಅಂತಹ ರುದ್ರ ಭೀಕರ ಮುಸ್ಸಂಜೆಯನ್ನು ಅಡಗಿಸಲೋ ಎಂಬಂತೆ ಚಂದಿರನೇ ತನ್ನ ಶೀತಲ ಕಿರಣಗಳನ್ನು ಹೊತ್ತು ಬಂದಾಗ ಆ ಸಂಜೆ ತನ್ನ ಶಕ್ತಿಯನ್ನು ಕಳೆದುಕೊಂಡು ಅವನಿಗೆ ಶರಣಾಗುತ್ತದೆ. ಅಂಧತಮಸ್ಸನ್ನು ಕಿತ್ತೊಗೆಯುವ ಚಂದಿರನೊಬ್ಬ ಸಮರ್ಥನೆಂದು ಕವಿಯ ಭಾವನೆ.

'ರಂಜದ ಹೂವು' ಎಂಬ ಕವನವೂ ಕವಿಯ ವರ್ಣನೆಯ ಎಲ್ಲೆಯನ್ನು ಇನ್ನಿಲ್ಲವೆಂಬಂತೆ ತಲುಪುತ್ತದೆ. ಸ್ತ್ರೀಯರಿಗಿಂತಲೂ ಹೆಚ್ಚಾಗಿ ಕವಿಗಳು ಪುಷ್ಪಗಳಿಗೆ ಮಾರುಹೋಗುವುದು ಸಹಜ. ಸ್ತ್ರೀಯರು ಪುಷ್ಪವನ್ನು ತಮ್ಮ ಸ್ವಾರ್ಥಕ್ಕಾಗಿ ಅದನ್ನು ಕಿತ್ತು ಮುಡಿಗೇರಿಸಿ ಆನಂದಪಡುವರಾದರೆ ಕವಿಗಳು ಜೈನರ ಅಹಿಂಸಾತತ್ತ್ವದಂತೆ ಗಿಡದಿಂದ ಹೂವನ್ನು ಕೀಳದೆ, ಸೌಂದರ್ಯವನ್ನು ಆಸ್ವಾದಿಸಿಯೇ ಅದನ್ನು ಜನಕೋಟಿಗೆ ಕಾವ್ಯವಾಹಿನಿಯಾಗಿ ಹರಿಸಿ, ಸವಿಯಿಸಿ, ಅದರಿಂದ ತಾವೂ ಆನಂದಪಡುತ್ತಾರೆ ಎಂಬುದಕ್ಕೆ ಶ್ರೀ ಪರಮೇಶ್ವರ ಭಟ್ಟರ 'ರಂಜದ ಹೂ' ಎಂಬ ಕವನವೇ ಸಾಕ್ಷಿಯಾಗಿದೆ. ಕವಿ ಹೇಳುವಂತೆ ರಂಜದ ಹೂವಿನ ತವರಾದ ಮಲೆನಾಡಿನಲ್ಲಿ, ಉದ್ದಗಲಕ್ಕೆ ಹಬ್ಬಿದ ಹಳ್ಳಿ, ಹೊಲ, ಕಾಡು, ಕಣಿವೆಗಳಲ್ಲಿ ಕವಿ, ಕುಸುಮವನ್ನು ಜೇನ್ಹೀರುವ ದುಂಬಿಯಂತೆ ಆ ಹೂವಿನ ಸೌಂದರ್ಯವನ್ನು ಆಸ್ವಾದನೆ ಮಾಡುತ್ತಾರೆ. ಕವಿಯ ಕಣ್ಣಿಗೆ ಬಿದ್ದ ರಂಜದ ಹೂ,

"ಕೋಮಲತೆಯೊಳು ಸುಮವು ಪಾರಿಜಾತಕೆ ಸಮವು,
ಬಾಡುವುದು ಮಾಸುವುದು ಎಲ್ಲ ಅದರಂತೆ"

ದಿವದಲ್ಲಿ ತಲೆಯೆತ್ತಿ ನಿಲ್ಲುವ ಪಾರಿಜಾತ, ಭೂಲೋಕದ ರಂಜದ ಹೂವಿಗೆ ಸಮವಾಗಿದೆಯಂತೆ. ಎಷ್ಟು ಸುಂದರವಾದರೂ ಒಮ್ಮೆ ಅದಕ್ಕೆ ಅಂತ್ಯವಿದೆ.

"ಇದ್ದಂತೆ ಹೇಳುವೆನು, ಹಳ್ಳಿ ಹುಡುಗಿಯ ಮುದ್ದು
ಹೂವಾಗಿ ರಂಜಿಸುವುದೀ ರಂಜದಲ್ಲಿ"

ಮಲ್ಲಿಗೆಯ ಪೆಂಪು. ಕೇದಗೆಯ ಕಂಪುಗಳನ್ನು ಇದು ಹೊರದಿದ್ದರೂ 'ತನ್ನತನ' ತನಗಿದೆ ಎಂಬ ಭಾವ ಮಾತ್ರ ಅದಕ್ಕಿದೆ. ರಂಜದ ಜೀವನ ಮಲೆನಾಡ ಹುಡುಗಿಯನ್ನು ಅವಲಂಬಿಸಿದೆ ಅವರೊಡನೆ ಪ್ರೇಮದಾಟವಾಡುವುದೇ ಅವಕ್ಕೆ ಇರುವ ನಿತ್ಯತೃಪ್ತಿ.

'ಮನೆ ಮನೆಯ ಮಡದಿಯರ ಜಡೆಗಿಡುವ ಶೃಂಗಾರ.' ಆ ಹೆಮ್ಮೆಯೇ ರಂಜದ ಹೂವಿಗಿರುವುದು. "ನಾಗರಿಕರಂತಲ್ಲ ನಾಚು ಮದುಮಗಳಿವಳು." ಆಧುನಿಕ ನಾಗರಿಕತೆಯ, ಮೆಟ್ಟಿಲನ್ನು ಏರಿ ನಿಂತು ಪಟ್ಟಣಗಳ ಸ್ತ್ರೀಯರ ಮುಡಿಯನ್ನು ಏರುವ ಆಶೆ ಅದಕ್ಕಿಲ್ಲ. ಪ್ರಕೃತಿದತ್ತ ಸಹಜ ಸೌಂದರ್ಯ ಶೀಲರಾದ ಹಳ್ಳಿಯ ವನಿತೆಯರ ಮುಡಿಯನ್ನೇರುವುದರಲ್ಲೇ ಅದಕ್ಕೆ ಸಾರ್ಥಕತೆ ದೊರಕುತ್ತದಂತೆ.

"ದೇವರಾಯನ ದುರ್ಗ"ದ ಸ್ಥಿತಿಗತಿಗಳನ್ನು ಕವಿ, ಆನಂದಿತರಾಗಿ, ಅಂತ್ಯದಲ್ಲಿ ವಿಷಾದಪೂರ್ಣರಾಗಿ ವಿವರಿಸುತ್ತಾರೆ. ದೇವರಾಯನ ದುರ್ಗ ಕವಿ ಮನಸ್ಸನ್ನು ಸೆರೆಹಿಡಿದು ಅವರನ್ನಲ್ಲಿ ಭಾವುಕರನ್ನಾಗಿ ಮಾಡುವ ಶೂನ್ಯ ದಿವ್ಯಚೇತನದಾಯಿಯಾಗಿದೆ. ದುರ್ಗದೊತ್ತಿನಲ್ಲಿ ವಸುಂಧರೆಗೆ ಮುತ್ತಿಟ್ಟ ಗಿರಿ ಪಂಕ್ತಿ, ಆಕಾಶದೆತ್ತರಕ್ಕೆ ಏರಿತ್ತು! ಪ್ರಶಾಂತ ವಾತಾವರಣದ ಪ್ರಕೃತಿಮಾತೆಯ ಯೋಗಸಮಾಧಿಯಲ್ಲಿರುವ ಯೋಗನರಸಿಂಹನ ಯೋಗಕ್ಕೆ ಅಡ್ಡಿ ಬಾರದಂತೆ ನಿಶ್ಶಬ್ದವಾಗಿತ್ತು. ದುರ್ಗದ ವಿವಿಧ ಪ್ರದೇಶಗಳನ್ನು ಕಾಣಹೊರಟ ಕವಿಗೆ ಗೋಚರಿಸುವ ನೆಲಪಟ್ಟಣವನ್ನು ವಿವರಿಸುವ ರೀತಿ ಹೀಗಿದೆ:

"ಮೇಲಿಣಿಕಿ ನೋಡಲು ಕೆಳಗೊಪ್ಪಿ ತೋರುವುದು
ಅನ್ವರ್ಥದಂಕಿತದ ನೆಲಪಟ್ಟಣ
ಕೆಳಗಿಂದ ನೋಡಲು ಮೇಲೊಪ್ಪಿ ತೋರುವುದು
ದುರ್ಗದ ದುರ್ಗಮ ಕಲ್ಪಟ್ಟಣ"

ಕವಿ ಮೇಲೆ ನಿಂತು ನೋಡಿದಾಗ ಕವಿಗೆ ಜೋಗದಲ್ಲಿ ಮೇಲೆ ನಿಂತು ಕೆಳಗಿನ ಪ್ರಪಾತವನ್ನು ಕಂಡಂತೆ, ಕೆಳಗಿಳಿದು ಮೇಲೆ ತಲೆಯೆತ್ತಿ ಸುತ್ತಲೂ ಈಕ್ಷಿಸಿದಾಗ ಸುತ್ತಲಿರುವ ಪ್ರಕೃತಿಯನ್ನು ಕಲ್ಲಿನಿಂದ ಕಟ್ಟಿ ಸ್ಥಿರವಾಗಿ ನಿಲ್ಲಿಸಿದಂತೆ ಭಾಸವಾಗುತ್ತದೆ. ಹಗಲಿರುಳುಗಳಲ್ಲಿಯೂ ಉದಯಾಸ್ತಗಳಲ್ಲಿಯೂ ಪ್ರತಿ ಋತುಗಳಲ್ಲಿಯೂ ಒಂದೇ ರೀತಿ ಇವುಗಳು ಕಾಣಿಸುತ್ತವೆ. ಅದು ಸರ್ವಕ್ಕೂ ಆಕರ. ಅದು ಆಸ್ತಿಕ ಭಕ್ತರಿಗೆ ನರಸಿಂಹನ ಮೂರ್ತಿಯಿದ್ದರೆ, ರಸಋಷಿಗಳಿಗೆ ಪ್ರಕೃತಿ ಪ್ರೇಮದಾಯಿಯಾಗಿ ದಿವ್ಯಸ್ಫೂರ್ತಿ ನೀಡಬಹುದು. ಹಾಗೆಯೇ ಭಾವುಕರಿಗೆ ಆತ್ಮಾನಂದದ ದರ್ಶನಶುದ್ಧಿ ಲಭಿಸಬಹುದಾದರೆ ತತ್ತ್ವಜ್ಞರಿಗೆ ಸೃಷ್ಟಿರಹಸ್ಯದ ಅರಿವಾಗಬಹುದು. ಕವಿ ಮುಂದೆ ಹೇಳುವ ಮಾತೂ ಚೆನ್ನಾಗಿದೆ. ದುರ್ಗದ ರಾಮತೀರ್ಥವನ್ನು ಕುರಿತು ಕವಿ ಹೀಗೆ ಹೇಳುತ್ತಾರೆ.

"ಕಲ್ಲೆ ನೀರಾದಂತೆ ಹರಿದಿತು ಊರ್ಮಿಯಿಂ
ಜಳ ಜಳ ಥಳ ಥಳ ತಣ್ಣನೆ ನೀರು,"

ರಾಮ ನೀರಡಿಕೆಗೆಂದು ಕಾತರಿಸಿ ನೀರನ್ನು ಕಾಣದೆ ಕಡೆಗೆ ಕಲ್ಲಿಗೆ ಬಾಣ ಪ್ರಯೋಗ ಮಾಡಿದಾಗ ಆ ಶಿಲೆಯಿಂದ ತಂಪಾದ ನೀರು ಚಿಮ್ಮಿ ಹರಿಯುತ್ತದೆ. ಕವಿ ಈಗ ಅಧಿಪತಿಯಿಲ್ಲದ ಆ ದುರ್ಗಕ್ಕಾದ ಅಸಹಾಯಕತೆಯನ್ನು ಕುರಿತು ವಿಷಾದ ಪಡುತ್ತಾರೆ. ಈಗಿರುವ ದುರ್ಗಕ್ಕೆ ಆತನ ಕಾಲಕ್ಕೆ,

"ಊಹೆಗೆ ನಿಲುಕದ ವಿಭಾಗ್ಯವಿತ್ತೊ
ಮಾನವನ ಗೈಮೆಗೆ ಕಡೆಗಿಷ್ಟೆ ಲಭ್ಯವು
ಹೆಸರೊಂದೆ ನಿಲ್ಲುವುದು ನಿಶ್ಚಯವು."

ರಾಜಮನೆತನಗಳ ಇತಿಹಾಸವೇ ಹೀಗೆ. ಇತಿಹಾಸದ ಹಾಳೆಗಳನ್ನು ತಿರುವಿದರೆ ಕಣ್ಣಿಗೆ ಮಿಂಚಿ ಮರೆಯಾಗುವ ರಾಜ ಮಹಾರಾಜರು ತಮ್ಮ ಭೂಮಿಗೇ ರಕ್ತತರ್ಪಣ ಬಿಟ್ಟು, ಗಗನಚುಂಬಿ ಸೌಧಗಳು ತಿರೆಯನ್ನಪ್ಪುವ ದೃಶ್ಯ ನಮಗೆ ಗೋಚರಿಸುತ್ತದೆ. ಆದರೆ ನಿಜವಾಗಿಯೂ ಕವಿ ಹೇಳುವಂತೆ ಹೆಸರೊಂದೇ ಶಾಶ್ವತವಾದುದು.

"ವಿಜಯ ನಗರದ ಗಿಣಿಗಳು" ಎಂಬ ಕವನದಲ್ಲಿ ಈಗಿನ ಹಾಳುಹಂಪೆಯಲ್ಲಿದ್ದ ಗಿಳಿಗಳಿಗೂ ಕವಿ ಪರಮೇಶ್ವರ ಭಟ್ಟರಿಗೂ ನಡೆದ ಸಂಭಾಷಣೆಯಿದೆ. ಹಾಳುಹಂಪೆಯನ್ನಾದರೂ ನೋಡೋಣವೆಂದು ಹೊರಟ ಗಿಳಿಗಳ ಹಿಂಡು ವಿದುವಾಗಿ ತಮ್ಮ ಪುರಾತನ ಪರಿಚಯವನ್ನು ಹೇಳುತ್ತವೆ. ಕವಿ ನಿಮ್ಮ "ಮೆಚ್ಚಿನ ಬೀಡದಾವುದು ಆವ ದೆಸೆ ನಿಮಗೊಗ್ಗಿ ಹೋಗಿದೆ? ಆವ ದಾರಿ ಸುಭಗವು" ಎಂದು ಕೇಳಿದಾಗ ನಮಗೆ ಕಣ್ಣೀರು ಉಕ್ಕುತ್ತದೆ. ಭರತಖಂಡದಲ್ಲಿ, ಕೀರ್ತಿಮಕುಟವನ್ನು ಹೊತ್ತ ಹಿಂದೂ ಅರಸುಮನೆತನದ ಭವ್ಯಮಂದಿರ ನುಚ್ಚುನೂರಾಗಿ ಹಾಳುಹಂಪೆ ಎನಿಸಿ ಈಗ ಗಿಳಿಗಳಿಗೂ ಆ ಪ್ರದೇಶದಲ್ಲಿ ತಮಗೆ ಸ್ಥಳ ಹುಡುಕಬೇಕಾದ ಕಷ್ಟಪರಿಸ್ಥಿತಿ ಇಲ್ಲಿ ಬಂದಿದೆ. ಕವಿಹೃದಯವನ್ನರಿತ ಆ ಶುಕಗಳು ಇವನೂ ನಮ್ಮಂತೆ ಸೌಜನ್ಯಶೀಲದವನೆಂದರಿತು ಧೈರ್ಯವಾಗಿ ತಮ್ಮ ಕಥೆಯನ್ನು ಹೇಳುತ್ತವೆ. ಗಿಳಿಗಳು ಹಿಂದಿನ ವೈಭವವನ್ನು ಕೇಳಿ ಆನಂದಗೊಂಡಂತೆ ಸದ್ಯದ ಪರಿಸ್ಥಿತಿಗೆ ಅವು ಕಣ್ಣೀರು ಸುರಿಸಬೇಕಾಗುತ್ತದೆ. ಅದನ್ನು ಕವಿವರ್ಯರ ಮಾತಿನಲ್ಲೇ ಹೇಳುವುದೊಳ್ಳಿತು:

"ಕೃಷ್ಣರಾಜನ ಕಾಮರಾಜ್ಯದ
ಪ್ರೇಮಮಂತ್ರಿಗಳಾವು ಗಿಳಿಗಳು
ಅಂದು ನಮ್ಮನ್ವಯದ ಗಿಳಿಗಳೆ
ರಾಣಿವಾಸದ ರಾಯಭಾರಿಗ-
ಳಾಗಿ ಮೆರೆದರು ಹೆಸರನು."

ಅವುಗಳನ್ನು ಕೃಷ್ಣರಾಜನ ಪಟ್ಟದರಸಿಯುರಿಂದ ಸೇವೆ ಮಾಡಿಸಿಕೊಂಬಷ್ಟು ಭಾಗ್ಯವಂತವೆನಿಸಿದುವಂತೆ! "ಪಚ್ಚೆ ಸರಳಿನ ರತ್ನಪಂಜರದಲ್ಲಿ ಹಾಸಿದ ತೋರಮುತ್ತಿನ ಹಾಸಿನಲ್ಲಿಯೆ ಬೆಳೆದುವಂತೆ, ಅರಸಿಯಿಂದಲೆ ಆಹಾರವನ್ನುಂಡುವಂತೆ, ಪ್ರಣಯಮಂತ್ರಗಳಿಗೆ ಓಂಕಾರವನ್ನು ಹಾಕಿದುವಂತೆ, ಶಾಂತಿಸಮಯದಲ್ಲಿ ಸುಖಪಟ್ಟಂತೆ ಕ್ರಾಂತಿಸಮಯದಲ್ಲಿ ಮಿಂಚಿನಂತೆ ಹೊಳೆದುವು."

"ರೂಕ್ಷ ರಣಹದ್ದುಗಳ ತೆರದಲಿ
ಅರಿಯ ನೆಣವನು ಕಡಿದೆವು"

ರಕ್ಕಸತಂಗಡಿಯ ಅರಿಗಳ ರಾಕ್ಷಸೀಪ್ರವೃತ್ತಿಯಿಂದ ತಮಗೆ ಸೋಲುಂಟಾಗಿ ಅಂದಿನಿಂದ ಇಂದು ತನಕ ಅವರ ಸ್ಮಾರಕದಂತೆ ಬನಬನಗಳಲ್ಲಿ ಸುತ್ತಿಸುತ್ತಿ ಆಹಾರಕ್ಕಾಗಿ ಅಲೆಯುತ್ತಿರುತ್ತವಂತೆ. ಒಂದೊಮ್ಮೆಗೆ ತಲೆಯೆತ್ತಿದ್ದ ವಿಜಯನಗರದ ಪವಿತ್ರ ನೆಲದಲ್ಲೇ ನಿಂತು ಪ್ರೇಕ್ಷಕರಿಗೆ ಕವಿಗಳಿಗೆ ತಮ್ಮ ಕರ್ಮಕಥೆಯನ್ನು ಕನಿಕರಿಸುವಂತೆ ಹೇಳುತ್ತದೆ. ಸೌಂದರ್ಯೋಪಾಸಕರಾದ ಕವಿಯೆದುರೇ ಕೆಂಪು ಹಸುರಿನ, ನೀಲಿಹಳದಿಯ ಮಕರತೋರಣದಂತೆ ಕಣ್ಗೆ ಮಿಂಚಿ ಅವು ಮರೆಯಾಗುತ್ತವಂತೆ! ಕವಿ ಯೆಂಬಂತೆ ಅವು ನಿಜವಾಗಿಯೂ ವೀರಶುಕಗಳು. ದೇವದೂತರಂತೆ, ಕೃಷ್ಣರಾಜನ ಅರಮನೆಯ ಚಿತ್ರಕಾರರಂತೆ ಕವಿದೃಷ್ಟಿಗೆ ಗೋಚರಿಸುತ್ತವೆ. ಸರ್ವಕ್ಕೂ ಶುಭವನ್ನೇ ಹಾರೈಸುವ ಕವಿ ಇಲ್ಲಿಯೂ ಮನತುಂಬಿ ಶುಭವನ್ನು ಬಯಸುತ್ತಾರೆ.

"ನಿಮ್ಮ ಮುಂದಿನ ಮರಿಗಳಾದರು
ಮತ್ತೆ ಭಾಗ್ಯೋದಯದಲಿ
ರಾಜಕೀರಗಳಾಗಿ ಮೆರೆಯಲಿ
ರಾಯಭಾರವ ತೆರೆಯಲಿ."

ಶ್ರೀ ಪರಮೇಶ್ವರ ಭಟ್ಟರ ಕವನಗಳಲ್ಲಿ ಭಟ್ಕಳ ಎಂಬ ಕವನವು ಗಗನಚುಕ್ಕಿಗಳಲ್ಲಿ ಧ್ರುವತಾರೆ ಯಂತಿದೆ. ಇಲ್ಲಿ ಕವಿ ಭಟ್ಕಳ ಬಂದರಿನ ಸುಂದರ ಚಿತ್ರವನ್ನು ಮೂಡಿಸುವುದರೊಂದಿಗೆ, ಕಡಲನ್ನು ಕಂಡು ಕಾವ್ಯ ಬರೆದ ಬೆರಳೆಣಿಕೆಯ ಕವಿಗಳಲ್ಲಿ ಇವರೂ ಒಬ್ಬ ವಿಶಿಷ್ಟ ಕವಿಯಾಗಿ ನಿಲ್ಲುತ್ತಾರೆ. ಕವಿಗೆ ಒಮ್ಮೆ ಭಟ್ಕಳವು,

4

"ಕರುನಾಡ ದೇವಿಯ ಕೊರಳ ಕಟ್ಟಾಣಿವೊ–
ಲೆಸೆಯುವುದಲ್ಲವೆ ಭಟ್ಕಳವು
ಭಟ್ಕಳವೆಂದರೆ ಭರಬಂದ ಕಡಲಂತೆ
ಕವಿಸಿದೆಯುಬ್ಬುವುದುಕ್ಕುವುದು"

ಕವಿಯ ಕಣ್ಣಿಗೆ ಭಟ್ಕಳವು ಕನ್ನಡಮ್ಮನ ಕೊರಳ ಕಂಠಿಯಂತೆ ತೋರುತ್ತದೆ. ಕಡಲಲ್ಲಿ ತೆರೆಗಳಂತೆ ಕವಿಹೃದಯದಲ್ಲಿ ತೆರೆಗಳು ಏಳುತ್ತವೆ. ಈ ಕವನವನ್ನು ಅವರೇ ನಮ್ಮ ಮುಂದೆ ಹಾಡಿದಾಗ ನಾವು ಮೈಮರೆತಿದ್ದೇವೆ. ಆ ಭವ್ಯ ನೆಲದಲ್ಲಿ ನಿಂತು ಕವಿ ಭಾವುಕರಿಗೆ ಆಗಸದತ್ತ, ಕಡಲತ್ತ, ಸುತ್ತ ಸಹ್ಯಾದ್ರಿ ಶಿಖರಗಳತ್ತ, ಕಣ್ಣಾಡಿಸಿದಾಗ ಕವಿಗೆ ಕಾಣಿಸಿದ ಪ್ರಕೃತಿ ಭಾವಪರವಶರಾದ ಕವಿ ಅದರ ಸೌಂದರ್ಯವನ್ನು ಹೇಳುತ್ತಾರೆ.

"ನೀಲಿಮಸಾಗರ, ನೀಲಿ ನಭೋಂಗಣ
ನೀಲಿಮ ಸಹ್ಯಾದ್ರಿಯ ಶಿಖರಗಳು
ತಾಯಿ ವಸುಂಧರೆ ತೊಡವಾಗಿ ಧರಿಸಿದ
ಹಚ್ಚನೆ ಹೊಲಗದ್ದೆ ತೋಟಗಳು"

ಕವಿಗೆ ಸರ್ವವೂ ನೀಲಮಯವಾಗಿ ಕಾಣಿಸುತ್ತದೆ. ಒಂದಕ್ಕೆ ಒಂದರ ಬಣ್ಣ ಹೊಂದಿಕೊಳ್ಳುತ್ತದೆ. ಪ್ರಕೃತಿಯ ನಿಯಮವೇ ಹೀಗೆ. ಸಾಗರವೂ ನೀಲಿ, ಆಕಾಶದಂಗಣವೂ ನೀಲಿ. ಸಹ್ಯಾದ್ರಿ ಶಿಖರಗಳೂ ದೂರಕ್ಕೆ ನೀಲಿಯಾಗಿ ಕಾಣಿಸುತ್ತದೆ. ಈ ನೀಲಿಗಳೆಡೆಯಲ್ಲಿ ಪ್ರಕೃತಿದೇವಿಯಾದ ವಸುಂಧರೆ ಹಸಿರು ಬಟ್ಟೆಯನ್ನುಟ್ಟು ಹಸಿರು ಕುಪ್ಪಸವನ್ನು ತೊಟ್ಟಿರುವಂತೆ. ಉನ್ನತ ಮಲೆಗಳ ಮಾಲೆಗಳು ಅವಳ ಕುಂಭಕುಚಗಳಂತೆ ಕಾಣಿಸುತ್ತವೆ. ಕಡಲ ಒಡಲನ್ನು ಸೇರಲು ಒಮ್ಮೆ ಹಾತೊರೆಯುತ್ತ ಒಮ್ಮೆ ಸೇರಿದಂತೆಯೂ ಮತ್ತೊಮ್ಮೆ ನಾಚಿ ಹಿಂದೆ ಹೋದಂತೆಯೂ ತೋರುವ ತೊರೆಯ ಇಕ್ಕೆಲಗಳಲ್ಲಿ ಹುಲುಸಾಗಿ ಬೆಳೆದು ನಿಂತ ಕಲ್ಪವೃಕ್ಷಗಳ ಸೌಂದರ್ಯವನ್ನು. ಕಡಲ ಮಕ್ಕಳ ಕಡಲಿನಾಟವನ್ನು ಕವಿ ಮನತುಂಬಿ ಚಿತ್ರಿಸಿದಂತೆ, ಕಾವ್ಯಾಸ್ವಾದಕರಿಗೂ ಕವಿಗಿಂತಲೂ ಹೆಚ್ಚು ತೃಪ್ತಿಯಾಗುತ್ತದೆ.

ಕಡಲ ಕವಿ ಪರಮೇಶ್ವರ ಭಟ್ಟರು ಕಡಲಿನ ತೆರೆಗಳ ಮೊರೆತಗಳನ್ನು ವರ್ಣಿಸಿದ ರೀತಿ ಅದ್ಭುತ ರಮ್ಯವಾಗಿದೆ. ಅವರ ಹೃದಯದಲ್ಲಿ ಕಡಲನ್ನು ಕಂಡು ಆನಂದದ ತೆರೆಗಳೆದ್ದು ಅಲ್ಲಿ ಸ್ಫುಟನೆಗೆದು ಹೊರಗೆ ಚಿಮ್ಮಿದಂತೆ ಭಾಸವಾಗುತ್ತದೆ. ಕಡಲ ವರ್ಣನೆ ಕವಿಯ ಮಾತಿನಲ್ಲೇ ಹೇಳುವುದೊಳಿತು.

"ತೆರೆಯನು ತೆರೆಯಟ್ಟಿ ಉಬ್ಬುಬ್ಬಿ ಮೇಲೆದ್ದು
ಎದೆಯುದ್ದ ಕೊರಳುದ್ದ ಆಳುದ್ದವಾಗಿ
ಬಾಗಿ ಮೈ ಬಳುಕಿಸಿ ತೂಗಿ ತಲೆ ತಿರುಗಿಸಿ
ಹೊಡೆಮುರಿಯುತಪ್ಪಳಿಸಿ ಉರುಳುರುಳುತೆ
ಜುಳುಜುಳನೆ ನೊರೆಗರೆದು ಗುಳಗುಳನೆ ಸುಳಿಸುಳಿದು
ದಡಕೆ ಕಚಕುಳಿ ಇಡುವ ಕಡಲ ನೋಡು
ಖೇದ ಆಮೋದದ ರೋಷ ಸಂತೋಷದ.
ತೆರೆಗಳ ಪರಿಪರಿ ಲೀಲೆ ನೋಡು"

ರುದ್ರ ಭೀಕರವಾಗಿ ಘೋರೆಂದು ಮೊರೆಯುತ್ತಾ ಒಂದನ್ನೊಂದು ತೆರೆಗಳು ಬೆನ್ನಟ್ಟಿಕೊಂಡು ಮೇಲೆ ಮೇಲೆ ಚಿಮ್ಮುತ್ತಾ ಉಕ್ಕಿಬಂದು ನೋಟಕರ ಎದೆಯೆತ್ತರಕ್ಕೆ ಆಳೆತ್ತರಕ್ಕೆ ನೆಗೆದು ಮೈ ಬಳುಕಿಸಿ ನಾಟ್ಯರಾಣಿಯಂತೆ ತಲೆ ತಿರುಗಿಸುತ್ತಾ ಅಪ್ಪಳಿಸಿ, ದಡಕ್ಕೆ ಮುತ್ತಿಟ್ಟು ಉರುಳುತ್ತಾ ಗುಳುಗುಳು ಸುಳಿದು ನೊರೆಕಾರುತ್ತಾ ವಿಷಾದ ಪ್ರೀತಿ ಕೋಪ ಸಂತೋಷಗಳನ್ನು ತೋರ್ಪಡಿಸುವ ಕಡಲು ಕವಿಮನಸ್ಸಿಗೆ ಮಹತ್ತರವಾದ ಪರಿಣಾಮವನ್ನು ಬೀರಿರಬೇಕು. ಕಡಲು ಮರಳಿನೊಡನೆ ಚೆಲ್ಲಾಟವಾಡುತ್ತದಂತೆ. ರಾತ್ರಿಯ ವೇಳೆಯೇ ಪ್ರಯಾಣಕ್ಕೆ ತಕ್ಕ ಸಮಯವೆಂದು. ಹೊರಟು ನಿಂತ ನೌಕೆಗಳು ಮೊತ್ತ ಸಹಸ್ರ

ಸಹಸ್ರ ದೀಪಗಳು ಕಪಿಕಲ್ಲಿನೆಗೆ. ನಾಡಿನ ದೈವಗಳಿಗೆ ಲಕ್ಷದೀಪೋತ್ಸವವನ್ನು ನಡೆಸುವಂತೆ ತೋರುತ್ತದೆ.

ಕನ್ನಡಭಾಗ್ಯದ ಬಾಗಿಲು ತೆರೆಯುವುದಕ್ಕೆ ಭಟ್ಕಳವೇ ಮುಖ್ಯ. ಅದು ಕಡಲಿಂದ ನಾಡಿಗೆ, ನಾಡಿಂದ ಕಡಲಿಗೆ ದಾಟುವ ಹೆಬ್ಬಾಗಿಲು ಹೌದು. ಭಟ್ಕಳದ ಕಬ್ಬಿನ ಬಿಲ್ಲೆಯನ್ನು ಕವಿ ಮೆಚ್ಚಿರಬೇಕು. ಮೊಲ್ಲೆ ಮೊಗ್ಗಿನ ಮಾಲೆಯ ಕಂಪನ್ನು ಕವಿ ಆಸ್ವಾದಿಸಿರಬೇಕು, ಭಟ್ಕಳದ ಉದ್ದಗಲಕ್ಕೆ ಕವಿ ಕನ್ನಡಿಗರ ಮನೆಯನ್ನು ಕಂಡು ಅವರೊಡನೆ ಆತ್ಮೀಯತೆಯಿಂದ ದಿನಕಳೆದಿರಬೇಕು. ಕನ್ನಡ ಮಾತಿನ ಸವಿಜೇನು ಭಟ್ಕಳದ ಸುತ್ತಲೂ ಹರಿಯುತ್ತದಂತೆ. ನಾನಾ ರೀತಿಯ ಪುಷ್ಪಗಳಿಂದ ಶೋಭಿಸುವ ಪ್ರಕೃತಿ ದೇವಿ ಕಡಲ ಒಡವೆಯಾಗಿ, ಭಟ್ಕಳದ ಭವತಾರಿಣಿಯಾಗಿ ಕವಿಗೆ ಗೋಚರಿಸಿರಬೇಕು.

ಪ್ರೊ. ಪರಮೇಶ್ವರ ಭಟ್ಟರ ಮನಸ್ಸಿನಂತೆಯೇ ಅವರ ಕವನಗಳೂ ಮೃದು. ಅವುಗಳನ್ನು ಗುಲಾಬಿ ಹೂವಿನಂತೆ ನೋಡಬೇಕು. ಅವರ ಪ್ರಕೃತಿಗೀತಗಳು ಕಂಪು ತುಂಬಿದ ಕೊಳದ ಕುಸುಮಗಳು. ಅವರ ಪ್ರಕೃತಿಗೀತಗಳನ್ನು ಓದಿದಷ್ಟೂ ಓದಬೇಕೆನಿಸುತ್ತದೆ.

# ೨೦. ಅಂಚೆಯ ಪೆಟ್ಟಿಗೆ

ಎಸ್. ರಾಮ ಭಟ್ಟ

"ಕಾವ್ಯಕ್ಷೇತ್ರದ ಅವರ ವಿವಿಧ ಪ್ರಯೋಗ—ಸಿದ್ಧಿಗಳು ಅವರಿಗಾಗಿಯೆ (ಶ್ರೀ ಪರಮೇಶ್ವರ ಭಟ್ಟರಿಗೆ) ಒಂದು ವಿಶಿಷ್ಟ ಸ್ಥಾನವನ್ನು ಮೀಸಲಾಗಿರಿಸಿವೆ............ಆಧುನಿಕ ಕನ್ನಡದ ದೀಪ ಹೊತ್ತಿಸಿದ ಮಹನೀಯರಲ್ಲಿ ಅವರೂ ಒಬ್ಬರು." ಎಂದು ಡಾ. ಹಾ. ಮಾ. ನಾಯಕರು "ಉಪ್ಪು ಕಡಲು" ಪುಸ್ತಕದ ವಚನಾಂಜಲಿಯಲ್ಲಿ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ ಕುರಿತು ಉಕ್ತಿಸಿದ್ದಾರೆ. ಈ ಮೇಲಿನ ನಿರೂಪಣೆ ಪ್ರೊ. ಭಟ್ಟರ ಕೃತಿಗಳನ್ನು ಅವಲೋಕಿಸಿ ಆಲೋಚಿಸಿದಾಗ ಅರ್ಥವಾಗದೆ ಇರದು. ಕಳೆದ ಮೂವತ್ತೈದು ವರ್ಷಗಳಿಂದ ಕನ್ನಡ ಸಾಹಿತ್ಯದೇವಿಯ ಪೂಜೆಯ ಭಟ್ಟರಾಗಿ ಅನೇಕ ಕೃತಿಗಳ ಮಾಲೆಗಳನ್ನು ಅವಳ ಕೊರಳಿಗೆ ತೊಡಿಸಿ, ಜನತೆಗೆ ತೀರ್ಥವನ್ನು ನೀಡಿದ್ದಾರೆ. ಪ್ರಸಾದವನ್ನು ಮುಡಿಸಿದ್ದಾರೆ. ಕಾಳಿದಾಸನ ಎಲ್ಲಾ ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸಿದವರು ಇವರೊಬ್ಬರೇ. ಇವರ ಇನ್ನೊಂದು ಅತ್ಯುತ್ತಮ ಕೃತಿ "ಇಂದ್ರಚಾಪ." ಶ್ರೀಯುತರು ಏಕಪದಿಯಿಂದ ಚೌಪದಿಯ ವರೆಗೂ, ವಚನದಿಂದ ಕವನ ನೀಳ್ಗವಿತೆಯವರೆಗೂ ಕೈಯಾಡಿಸಿ ಸಿದ್ಧಿಯನ್ನು ಪಡೆದಿದ್ದಾರೆ. ಅವರ ಪ್ರತಿಕೃತಿಯಲ್ಲಿಯೂ ಸತ್ತ್ವವಿದೆ, ತತ್ತ್ವವಿದೆ, ಕಾವ್ಯಸೌಂದರ್ಯವಿದೆ, ಮಾಧುರ್ಯವಿದೆ.

ಶ್ರೀಯುತರ ಕೃತಿಗಳಲ್ಲಿ 'ಅಂಚೆಯ ಪೆಟ್ಟಿಗೆ' ಒಂದು. ಇದರಲ್ಲಿ ಒಟ್ಟು ಅರುವತ್ತು ಬಿಡಿ ಕವನಗಳಿವೆ. ಪ್ರತಿಯೊಂದು ಕವನ ತನ್ನದೇ ಆದ ಸ್ವಂತ ಹೆಗ್ಗಳಿಕೆಯನ್ನು ಗಳಿಸಿಕೊಂಡಿದೆ. ಕವಿ ಹೇಳಿಕೊಂಡಂತೆ ಇದರಲ್ಲಿ ದೇಶ ಮತ್ತು ಸಮಾಜಗೀತಸಂಕಲನಗಳನ್ನೊಳಗೊಂಡಿವೆ. ಕವಿ ತಾನು ಕಂಡ ಅನುಭವಗಳನ್ನು, ತನ್ನ ಹಿರಿಯ ಸಾಹಿತಿಗಳ, ಗುರುಗಳ ಸ್ಮರಣೆಗಳನ್ನು, ಶ್ರದ್ಧಾಂಜಲಿಗಳನ್ನು, ಜೀವನದ ಸಿಹಿ ಕಹಿಗಳನ್ನು ಸುಂದರ ಪದಗುಚ್ಛದಿಂದ ಸಹೃದಯರಿಗೆ ನೀಡಿದ್ದಾರೆ. ತಮ್ಮ ಮೊದಲ ಕವನದಲ್ಲಿ "ಲೋಕಕೀವನು ಕವಿಯು ತನ್ನಮರ ಕಾವ್ಯವನು ತಾ ನಲಿದ ಆನಂದವಾಕೃತಿಯ ಸಲಿಸಿ" ಎಂದಂತೆ ಇದಕ್ಕೆ ನಾವು ಧ್ವನಿಕೂಡಿಸಿ ಕವಿಯಾಯ್ದ ಜಾಣ್ಮೆಯ ಸವಿನುಡಿಗಳನ್ನು ನೋಡೋಣ.

ಕವಿ 'ಅಂಚೆಯ ಪೆಟ್ಟಿಗೆ' ಕಂಡೊಡನೆ ಸಾಮಾನ್ಯರಿಗೆ ಕಾಣುವ ಅಂಚೆಯ ಪೆಟ್ಟಿಗೆಯಾಗದೆ ಭಗವದ್ಭಕ್ತನ ಲಾಂಛನದಂತೆ ಕಂಡು ತಲ್ಲೀನರಾಗುತ್ತಾರೆ. ಅದನ್ನು ನೋಡಿದೊಡನೆ ಕವಿಗೆ ಬರುವ ಉದ್ಗಾರ "ಘೋರತಪಸ್ವಿಯ ತೇಜದವೋಲಿರೆ ಗಭೀರಭಾವನೆ ವದನದಲಿ." ಅಂಚೆಯ ಪೆಟ್ಟಿಗೆಯ ಪ್ರತಿ ಅಂಚಿನ ಇಂಚನ್ನು ಕವಿ ದೈವೀಭಾವನೆಯಲ್ಲಿ ಕಂಡು ಹೊಸದೃಷ್ಟಿ ಹಾಯಿಸಿದ್ದಾರೆ.

"ಸಹಜ ನಿರಂಜನ ಸಿದ್ಧನ ತೆರದಿರೆ ಕಾವಿಯ ಬಣ್ಣವು ಮೈಯೆಲ್ಲ
ಬ್ರಹ್ಮಾನಂದವ ಪಡೆದವನಂತಿರೆ ಬಾಯನು ತೆರೆದರು ಮಾತಿಲ್ಲ"

ಅಣುಗಳೆಡೆಯಲ್ಲಿ ಅಡಗಿರುವ ಪರಮಾತ್ಮನ ಕಾಂಬ ತಪಸ್ವಿಯಂತೆ ನಿಸ್ತೇಜವಾಗಿ, ತೇಜೋಮಯವಾಗಿ ಕಂಗೊಳಿಸುವ ಇದರ ಗರ್ಭದಲ್ಲಿ ಅಡಗಿರುವುದಾದರೂ ಏನು?

"ಅರಶಿನ ಕುಂಕುಮ ಹಚ್ಚಿದ ಓಲೆ............
ನಲ್ಲ ನಲ್ಲೆಯರ ನಲ್ಮೆಯ ಓಲೆ, ಜಗಳದ ದಾಯಾದಿಗಳೋಲೆ"

ಇದರೊಂದಿಗೆ ಸರಕಾರಿಗಳ, ತಪ್ಪು ವಿಳಾಸದ, ಬಡವನ, ಧನಿಕನ ಓಲೆಗಳು ಕುಳಿತಿವೆ. ಇವೆಲ್ಲವು "ಶುಭವೋ ಅಶುಭವೊ ಸುಖವೋ ದುಃಖವೊ" ಬಲ್ಲವರಾರು? ಕಾರ್ಯನಿರ್ವಹಣೆಗೆ ಪರಿಪಾಲಕನಾಗಿ, ಭಾಷಾಭೇದ, ಗಡಿಬಂಧನವಿಲ್ಲದೆ, ದೇಶಭಕ್ತನಾಗಿ, ಜಂಜಂಭವಿಲ್ಲದೆ ನಿಂತ ಅಂಚೆಯ ಪೆಟ್ಟಿಗೆಗೆ ಕವಿ ಮಣಿಯುತ್ತಾರೆ. ಮೈಮನ ಮರೆಯುತ್ತಾರೆ. ಪ್ರಾಪಂಚಿಕ ವ್ಯವಹಾರವನ್ನು ತನ್ನ ಮುಖೇನ ನಡೆಯುತ್ತಿದೆಯಾದರೂ" 'ಅಹಂ' ಇನಿತಿಲ್ಲ. ಚಳಿ ಮಳೆ ಗಾಳಿಗೆ ಬೆದರದೆ, ಘನ ಬಿಸಿಲಿಗೆ ಬೆವರದೆ, ಕಾಯಕ ಕೈಲಾಸ ಎನ್ನುವ ಭಕ್ತೋಕ್ತಿ ಸಿದ್ಧಿಮಾಡಿದ ಜಡ ತೇಜಸ್ವಿ. ಅದ್ದರಿಂದಲೇ ಕವಿ "ಅಂಚೆಯ ಲೋಕದ

ಹೇ ಅವಧೂತ! ಸೇವಾಧರ್ಮದ ಸಂಕೇತ! ಜನತಾ ಪ್ರೇಮದ ಸುಖ ಕಲ್ಯಾಣದ ಸಾಧನ ಬೋಧೆಯ ವಿಖ್ಯಾತ" ಎಂದು ಸಾಂಕೇತಿಕವಾಗಿ ಅದರ ದರ್ಶನ ಮಾಡಿಸಿದ್ದಾರೆ.

ಕವಿ ತಾನು ಕಂಡ, ಉಂಡ ಪ್ರಕೃತಿಚಿತ್ರಣವತ್ತ ಕಣ್ಣು ಹಾಯಿಸಿ, ಬಿಳಿ ಹಾಳೆಯ ಮೇಲೆ ಲೇಖನಿ ಮೇಯುವಾಗ ಅನುಭವದ ಹೆಜ್ಜೆಗಳು ಸಾಹಿತ್ಯ ಸರಸ್ವತಿಯ ವೀಣಾನಾದವಲ್ಲಿ ಮೊಳಗುತ್ತದೆ, ಕೃತಿ ಬೆಳಗುತ್ತದೆ. ಕರಾಳ ಇರುಳಿನಲ್ಲಿ ಪ್ರಕೃತಿ ಚಿರನಿದ್ರೆಯ ಮುದ್ರೆಯೊತ್ತಿ ಜಡವಾದಾಗ, ಅನಂತ ಯಾತನೆಯ ಜನಗಾಳಿ "ನಿಗೂಢ ತತ್ವರಹಸ್ಯವನಾರೂ ಭೇದಿಸರೇ?" ಎಂಬುದಕ್ಕೆ ಗಾಳಿ ನಿಸ್ತೇಜವಾಗುತ್ತದೆ. "ನಿಗೂಢ ತತ್ವರಹಸ್ಯವ ನಾನು ಭೇದಿಸಲೆಂದೇ ಬಂದಿಹೆನು" ಎಂದ ತಥಾಗತನ ಉದ್ಗಾರವೇ ಮಹಾಭಿನಿಷ್ಕ್ರಮಣಕ್ಕೆ ಕಾರಣವಾಯಿತು. ಈ ಚೌಪದಿಗಳಲ್ಲಿ ನಿರೂಪಿತವಾದ ಮಹಾಭಿನಿಷ್ಕ್ರಮಣ ಸಾಹಿತ್ಯದೃಷ್ಟಿಯಿಂದ ಉತ್ತಮ ಕವನವಾಗಿ ಒಡಮೂಡಿದೆ. ಕರಾಳ ಇರುಳಿನಲ್ಲಿ ಅಂದರೆ ಜನತೆಯಲ್ಲಿ ಅಜ್ಞಾನ ಅಂಧಕಾರ ಮೂಡಿದಾಗ ಜ್ಯೋತಿರ್ಲಿಂಗವೊಂದು ಉದ್ಭವಿಸಿ, ಅಂಧಕಾರಕ್ಕೆ ಕಾರಣವಾಗುವ ವಿಷಯದೊಡನೆ ವೇಳೈಸಿ, ಅದರ ರಹಸ್ಯ ಭೇದಿಸಿ ಜ್ಞಾನದತ್ತ ಜನತೆಯ ಹೃದಯ ಸಾಗಿಸುತ್ತದೆ.

ಈ ಕವನ ಸಂಗ್ರಹದಲ್ಲಿ ಹೆಚ್ಚಾಗಿ ಒಕ್ಕೂಟವಾಗಿ ಕಾಣುವಂತಹದ್ದು ......ಗೆಗಳು ಅಂದರೆ, ಮಹಾತ್ಮರ ಸ್ಮರಣೆಗಳ, ಶ್ರದ್ಧಾಂಜಲಿ ಅರ್ಪಿತವಾದ ಕವನಗಳು. ತನ್ನ ಕಾವ್ಯಾಂಕುರಕ್ಕೆ ಮಾರ್ಗದರ್ಶಕರ ಕುರಿತು ಬರೆದ ಚೆಲ್ವ ನುಡಿಮುತ್ತುಗಳು. ಗಾಂಧೀಜಿಗೆ, ವಿಜ್ಞಾನಿಗೆ, ಹಾಗೂ ಕೆಲವು ಶ್ರೇಷ್ಠ ದಿನಗಳ ಸ್ಮರಣೆಗೆ, ಕವಿ ಕವನ ರಚಿಸಿ, ಭಕ್ತಿ ಗೌರವಗಳನ್ನು ತೋರ್ಪಡಿಸಿದ್ದಾರೆ. ಅವರ ಕುರಿತಾದ ಭಾವನೆಗಳು ಕವಿ ತನಗೆ ಕಂಡಂತೆ, ತಿಳಿದಂತೆ ವಿವೇಚಿಸಿದ್ದಾರೆ. ಇನ್ನೊಬ್ಬರ ಹೊಗಳಿಕೆಗೆ ಬರೆದಂತೆ ಕಾಣಬರುವುದಿಲ್ಲ. ಕೆಲವೆಡೆ ದೀರ್ಘವಾಗಿ ಓದಿದರೆ, ಮಗುದೊಂದೆಡೆಗೆ ಚುಟುಕಾಗಿ ಮುಗಿಸಿ ತೇಗಿದ್ದಾರೆ. "ಹೇಳಿದರೆ ಹಾಳಾಗುವುದೊ ಅನುಭವದ ಸವಿಯು ಹೇಳದಿರೆ ತಾಳಲಾರನೊ ಕವಿಯು" ಎಂಬ ಕುವೆಂಪು ಅವರ ಉಕ್ತಿ ನೆನಪಿಗೆ ಬರುತ್ತದೆ. ಆದರೂ ವಿಭೂತಿ ಪುರುಷರ ನೆನಪು ಚಿರಸ್ಥಾಯಿಯಾಗುವಂತೆ ಕವಿ ನಿರೂಪಿಸಿರುವುದು ಹೆಮ್ಮೆಯ ವಿಷಯವೇ ಸರಿ.

ಕನ್ನಡದ ಕವಿವರೇಣ್ಯರೂ ಕನ್ನಡದ ಕುಲದೀಪಕರೂ ಆದ, ವೆಂಕಟಾಚಾರ್ಯರಿಗೆ, ಆರ್. ನರಸಿಂಹಾಚಾರ್ಯರಿಗೆ, ವೆಂಕಣ್ಣಯ್ಯನವರಿಗೆ, 'ಶ್ರೀ'ಯವರಿಗೆ ಕವಿಪೂಜೆ ಮಾಡಿದ್ದಾರೆ. ಪದಗುಚ್ಛದಿಂದ ಶೃಂಗರಿಸಿದ್ದಾರೆ. ವೆಂಕಟಾಚಾರ್ಯರನ್ನು "ಬಂಕಿಮ ಚಂದ್ರ" ಎಂದು ಸಂಬೋಧಿಸಿದ ರೀತಿ ಉಚಿತವಾಗಿದೆ. ಕಾವ್ಯರಸ ಮಕರಂದ ಸುರಿವ ಮಧುಮಂಜರಿಯ ರಸಾಲತರುರಾಜಿಯಂ, ಸೌಂದರ್ಯಲಕ್ಷ್ಮಿಯ ವಿಹಾರೋಪವನವೀಥಿಯಂ ಸೃಜಿಸಿ, ಕನ್ನಡದ ನುಡಿನೆಲದಿ, ವಂಗ ಕಾದಂಬರಿಯನ್ನು ರಸಿಕಕಳಕಂಠಗಳಿಗಮೃತಾನ್ನ ಇತ್ತಂತೆ ಇತ್ತಿದ್ದಾರೆ. ಇವರ ಸೂಕ್ಷ್ಮ ಪರಿಚಯ ಕವಿಮಾಡಿರುವುದು ಅವರ ಮೇಲ್ಮೆಯನ್ನು ತೋರಿಸುತ್ತದೆ. ಆರ್. ನರಸಿಂಹಾಚಾರ್ಯರು ನಾಡು ನುಡಿಗೆ ತೋರಿದ ಹಿರಿಮೆ, ಆ ದೀಪ 'ನಾಡಸೇವೆಗೆ ದಾರಿ ತೋರೆಲೆಮಗಣಿಯಾಗಿ' ಎಂದು ಕವಿ ಹೇಳಿದಾಗ ಕವಿಯ ನಮ್ರತೆ ಸೂಚಿತವಾಗುತ್ತದೆ. ಅವರ ನೆನಹಿನ ದೀಪವೆಮ್ಮೆದೆಗೆ ಬೆಳಕಾಗಿ ಬೆಳಗಬೇಕು. ಇನ್ನೂ ಪ್ರಬುದ್ಧಾವಸ್ಥೆಯಲ್ಲಿ ಓಲಾಡುತ್ತದೆ. ಆಗಲೇ ವೆಂಕಣ್ಣಯ್ಯನವರ ಅಶುಭ ವಾರ್ತೆ ಕೇಳಿ ಶಿಷ್ಯ ಕೊರಗುತ್ತಾನೆ. ಅವರ ನೆನಹಿನ ಪಾದಕ್ಕೆ ಎರಗುತ್ತಾನೆ. "ಕನ್ನಡದ ಶಿಷ್ಯರಂ ತಬ್ಬಲಿಗಳೆಂದೆನಿಸಿ, ಕುಲಪತಿಗಳಿಲ್ಲದೆಲೆವನೆವೋಲೆ ಇದೋ ಶಾಲೆ" ಎಂದು ಮಮ್ಮಲ ಮರುಗಿ, ಕನ್ನಡದ ಗುರುಕುಲಕೆ ಆಚಾರ್ಯರೆಂದೆನಿಸಿದ ವೆಂಕಣ್ಣಯ್ಯನವರಿಗೆ ಚರಮಗೀತೆ ಹಾಡಿ, ಶಾಂತಿ ತಳೆದರೆ, ಆ ಕಂಬನಿ ಒಣಗುವುದಕ್ಕಿಂತ ಮೊದಲೆ ಕನ್ನಡ ತಾಯಿಯ ಹಿರಿಯ ಸತ್ಪುತ್ರ "ಶ್ರೀ"ಯವರಿಗೆ ಬಾಷ್ಪಾಂಜಲಿ. ಕವಿಗೆ ಅತೀವ ವೇದನೆಯಾಯಿತು. ಅದರಿಂದ ಹೊರಹೊಮ್ಮಿದ ಕವನ ಕಣ್ಣೀರಿನ ಪ್ರವಾಹದಂತೆ ಮೂಡಿದೆ. ಕೆಲವೆಡೆ ಪುನರುಕ್ತಿಯಾಗಿದೆ. ಆದರೂ ಸಾಹಿತ್ಯದ ರುಚಿ ಸವಿಯಾಗಿಯೇ ಇದೆ.

ರಾಷ್ಟ್ರಕ್ಕಾಗಿ ದುಡಿದ, ಉದ್ಧಾರಕ್ಕಾಗಿ ಮಡಿದ ರಾಜಕೀಯ ವ್ಯಕ್ತಿ ಮಹಾತ್ಮಗಾಂಧಿಯವರನ್ನು ಸಾಹಿತಿಯಂತೆ ಕಂಡು ನಲಿದು ಉಲಿದಿದ್ದಾರೆ. "ಭಾರತೇಯರಿಗಿತ್ತೆ ಶಾಂತಿಯಂ ದಾಂತಿಯಂ" ಎಂದು ಹೇಳಿ ಸತ್ಯ ಸೌಹಾರ್ದತೆಯ ಲೋಕಮೈತ್ರಿಯ ಬೆಳಗಿ "ಅಮರನಾದಯ್ ತಂದೆ" ಎಂದು "ಮರಣ

ವೃಕ್ಷದ ಫಲಿಸಿದ ಅಮೃತಫಲವೆಂಬಂತೆ" ಎಂದು ಗೋವಿಂದ ಪೈಗಳವರ ಸ್ತುತಿಸಿದನ್ನು ನೆನೆ-
ಸಿದ್ದಾರೆ. ರಾಜಕೀಯ ವ್ಯಕ್ತಿ ಸಾಹಿತ್ಯದಲ್ಲಿಯೂ ಅಮರನಾಗಬಲ್ಲ ಧ್ಯಾನಯೋಗಿಯಾದ. ಆದ್ದ-
ರಿಂದ ಕವಿ ಆತನನ್ನು ಭಾರತವರ್ಷದ "ದಿವ್ಯ ಧರ್ಮ ಪ್ರದೀಪ" ಎಂದು ಮುಕ್ತಕಂಠದಿಂದ ಕರೆದಿದ್ದಾರೆ.

ವೇದವ್ಯಾಸರಿಗೆ, ಬ್ರಾಹ್ಮಣರಿಗೆ ಎಂಬ ಕವನಗಳಲ್ಲಿ ಅವರವರ ಹಿರಿಮೆಗಳನ್ನು, ಧರ್ಮಕರ್ಮಗಳನ್ನು,
ವಿವೇಚಿಸಿದ್ದಾರೆ. ಮಾತಿನಲ್ಲಿ ಬ್ರಾಹ್ಮಣರೇ ಹೊರತು ಕೃತಿಯಲ್ಲಿ ಇಲ್ಲ ಎಂದು ಹೇಳಿ, "[illegible]
ಪ್ರತೀಕದಿಸುತ್ತಿದ್ದಿಯಂ ಪ್ರಶ್ನಿಸಿ ನಿನ್ನೊಳಗ ನೀಂ ಬೆಳಗು ಅಜ್ಞಾನನೆಂದೆನಿಸ" ಎಂದು ಸಮುಚಿ-
ಚಿತವಾಗಿ ಕ್ರಮಬದ್ಧವಾಗಿ ನುಡಿದಿದ್ದಾರೆ. ಪರಂಪರೆಯಿಂದ ಬಂದ ಸಂಪ್ರದಾಯ [illegible]
ಮುಂದುವರಿಯಬೇಕು. ಅದರ ತಿರುಳು ಜನತೆ ಅರಿಯಬೇಕು. "ಧರ್ಮ" ಎನ್ನುವುದರ [illegible]
ಕರ್ಮಧರ್ಮಗಳ ಬಂಟನಾಗಬೇಕು. ಆಗಲೇ ಬ್ರಾಹ್ಮಣ್ಯಕ್ಕೆ ಕಳೆಬರುವುದು.

ಕವಿಗೆ ಎನ್ನುವ ಕವನ, [illegible] ಕವಿಯನ್ನು ಹಿಡಿದು [illegible]
ಕಾರ್ಯಕ್ಷೇತ್ರಕ್ಕೆ ಎಳೆಯುವ ಚಿತ್ರವಾಗಿದೆ. ಇತ್ತಿತ್ತಲ್ಲಿ ಎಲ್ಲಿ ಎಂದು [illegible] ಕವಿಗೆ [illegible]
ನೀಡುತ್ತಾರೆ. ಈ ಕವಿ "ಏಳು ಕವಿಯೇ ಏಳು ಮಾನವನು ಒಡೆಯ [illegible] ಭಾವ ಚಿಂತಾರತ್ನವನು
ಹೂಳು, ಒಂಟಿಯಾಗಿರದೇ ನಮ್ಮೊಡನೆ ನಡೆದು ಬಾ ನೋಡಿ ಇಂದಿನ ಹಾಡು ನೀ ಹಾಡು"
ಎಂದು ಪ್ರೋತ್ಸಾಹಿಸುತ್ತಾರೆ.

ಪ್ರೊ. ಭಟ್ಟರ "ಹಚ್ಚು ದೀಪ" ಬಹಳ ಉತ್ತಮ ಕವನಗಳಲ್ಲಿ ಒಂದಾಗಿದೆ. ದೀಪವೇ ಜಗತ್ತಿಗೆ
ಒಂದು ಸಂಕೇತ. ಕರಾಳ ರಾತ್ರಿಗೆ ಇಣುಕೊಂದು ದೀಪ ಸೂರ್ಯಪ್ರಭೆಯಂತೆ ಕಾಣುತ್ತದೆ. ಅಜ್ಞಾನ
ಗಳೆದೆಯಲ್ಲಿ ಜ್ಞಾನದೀಪವು ಹಾಗೆಯೆ. ಅದ್ದರಿಂದ ಅವರು "ಹುಚ್ಚಿದ್ದ ಪ್ರಕೃತಿಯು ತಾಮಸವಾಯಿತು.
ಸಾತ್ವಿಕವಾಗಲಿತು. ಹಚ್ಚು ದೀಪ" ಎನ್ನುತ್ತಾರೆ. ಹಲವಾರು ಕಾರ್ಯತತ್ಪರತೆಯಿಂದ ಉಲ್ಲೋಲ
ಕಲ್ಲೋಲವಾದ ಪ್ರಕೃತಿಯಲ್ಲಿ ಈಗ ಶಾಂತತೆ ನಿಶ್ಶಬ್ದತೆ ಆವರಿಸಿದೆ. ದೀಪ ಈಗ ಶಾಂತತೆಗೆ ಸಂಕೇತ
ವಾಗಿ ನಿಂತಿದೆ. ಸಮತಾವಾದದ ತತ್ತ್ವವನ್ನು ಇಲ್ಲಿ ಕಾಣಬಹುದು. "ನಿನ್ನೊಳು ನಾನೆಂದು ನನ್ನೊಳು
ನೀನೆಂದು ನಾನೀನು ಒಂದೆಂದು ಹಚ್ಚು ದೀಪ" ಇಲ್ಲಿ ಪರಮಾತ್ಮ ಜೀವಾತ್ಮಗಳ ಅನ್ಯೋನ್ಯತೆಯು
ದೃಷ್ಟಿ ಇಟ್ಟು ಕವಿ ಸೃಷ್ಟಿಸಿದ್ದು ಶ್ಲಾಘನೀಯ — ಇವುಗಳ ಸಮ್ಮಿಲನವೇ ನಿಜವಾದ ಪರಿಶುದ್ಧ
ಜೀವನ.

"ಸಹ ಬಾಳುವೆ"ಯೇ ಸಮಾಜ ಜೀವನ. ಹಲವು ಧರ್ಮಗಳು ಭರತಖಂಡದಲ್ಲಿ ನೆಲೆ ನಿಂತಿವೆ.
ಕೆಲವು ಹುಟ್ಟಿವೆ. ಕೆಲವು ಬಾಳಿವೆ. ಇವುಗಳ ತತ್ತ್ವ ಒಂದೇ. ಆದರೂ "ಪ್ರಾಂತ ಭೇದದ ಜಾತಿ
ಭೇದದ ಮತ್ತೆ ಭಾಷಾಭೇದದುಷ್ಕೆಗಿಷ್ಟ ನಮ್ಮ ರುಜಿನಕೆ" ಎಂದು ಕವಿ ಹೇಳಿ ಮರುಗುತ್ತಾರೆ.
ಬೇರೆ ಬೇರೆ ಪಂಥದ ಕವಿಗಳ ನುಡಿಮುತ್ತುಗಳನ್ನು ಇಲ್ಲಿ ನೀಡಿದ್ದಾರೆ. 'ಸರ್ವ ಸಮತಾಬುದ್ಧಿ'ಯಲ್ಲಿ
ನಾವು ಬಾಳಬೇಕೆಂಬುದೇ ತತ್ತ್ವ. ವೇದಯುಗದಿಂದ ಈಗಿನ ವರೆಗೂ ಎಲ್ಲವೂ 'ಮಂಗಳ'ದಲ್ಲಿ ಅಂತ್ಯ
ವಾಗಲಿ ಎಂದು ಹರಸುವರೇ ಹೊರತು ಅನ್ಯದ್ವೇಷೋಕ್ತಿಯಿಂದಲ್ಲ. ಅದುದರಿಂದ ಪ್ರಕೃತಿಯತ್ತ
ದೃಷ್ಟಿ ಹರಿಸಿ, ಇವುಗಳು ಶಾಂತಿ ನೀಡಲಿ. "ಎಲ್ಲ ಮರ ಗಿಡ ಬಳ್ಳಿ ಚಿಗುರಲಿ ಹೂವು ಹಣ್ಣು
ಗಳಿಂದಲೇಗಳುಮಿಳಿಯ ಜನರನು ತಣಿಸಲಿ" ಎಂದು ಕವಿ ಹೇಳಿದ್ದಾರೆ. ಕ್ಷಾಮಡಾಮರಗಳು
ಪ್ರಕೃತಿಗೆ ಬರಬಾರದು. ಅದರ ಅಚ್ಚ ಹಸುರು ತನ ಹೋಗುವುದಲ್ಲದೆ, ಮಾನವನ ಜೀವನ
ಮರುಭೂಮಿಯಾಗುವುದು. ಅನ್ಯೋನ್ಯತೆಯಿಂದ ಎಲ್ಲರೂ ಬಾಳಲಿ ಎಂದು ಕವಿ ಶುಭಕೋರು
ತ್ತಾರೆ. "ಬೆಳಗಿ ಸಹಬಾಳುವೆಯ ತತ್ತ್ವವನೊಬ್ಬರೊಬ್ಬರನರಿತು ನಲಿಯಲಿ ಶರದ ನೂರನು ಬಾಳಲಿ"
ಇದು ಪ್ರತಿಯೊಬ್ಬ ಭಾರತದ ಕವಿ ಹಾಡುವ ಚರಮ ಗೀತೆ.

ಪ್ರೊ. ಭಟ್ಟರು ಕೇವಲ ಸಾಹಿತಿಗಳನ್ನು ಮಾತ್ರವಲ್ಲದೆ ದೇವ, ದೇವಿಯರ ಕುರಿತು ಕವನಗಳನ್ನು
ಬರೆದಿದ್ದಾರೆ. ಕವಿ ಹೇಗೆ ಸಾಹಿತ್ಯೋಪಾಸಕನೋ ಹಾಗೆಯೆ ದೈವೋಪಾಸಕನೂ ಹೌದು. 'ಅನ್ನಪೂರ್ಣೆಗೆ,'
'ರಾಜರಾಜೇಶ್ವರಿಗೆ,' 'ಈಶನವನೇ ಲೋಕಕ್ಕೆ' ಎಂಬೀ ಕವನಗಳಲ್ಲಿ ಕವಿ ತಮ್ಮ ಮನವಿ ಸಲ್ಲಿಸಿದ್ದಾರೆ.
ಮಾನವನ ಇಂದಿನ ಜೀವನದುರ್ಗತಿಯನ್ನು ಬಣ್ಣಿಸಿ, ಎಲ್ಲರಿಗೂ ಅನ್ನ ನೀಡು ತಾಯಿ ಎಂದು

ಅನ್ನಪೂರ್ಣೆಯಲ್ಲಿ ಪ್ರಾರ್ಥಿಸುತ್ತಾರೆ. ಸರ್ವಮಂಗಳೆ ಎಂದು ಇವಳನ್ನು ಸಂಬೋಧಿಸಿದರೆ ರಾಜರಾಜೇಶ್ವರಿಯನ್ನು "ಶ್ರೀ ಮಾತೆ." "ಭಕ್ತಜನ ಸಂಪ್ರೀತೆ" ಎಂದು ಕರೆಯುತ್ತಾರೆ. "ಅನಿಷ್ಟಶತಮಂ ನೀಗಿ ಶಾಂತಿಯುಂ ತುಷ್ಟಿಯುಂ ಪುಷ್ಟಿಯುಂ ಆಯುರಾರೋಗ್ಯಮಂ ಈಯೆಂದು" ಬೇಡುತ್ತಾರೆ. ಕವಿ ಸಾಹಿತ್ಯವನ್ನು ಉದ್ಧರಿಸು ಎಂದು ಮಾತ್ರವಲ್ಲದೆ ಜನತೆಯ ಸುಖವನ್ನು ಬಯಸಿ ಹಾಡಿರುವುದು ಆತನ ಗುಣದ ಹಿರಿಮೆಯನ್ನು ತೋರಿಸುತ್ತದೆ. ಅವರು ತಮ್ಮ "ಪೂಜೆ" ಕವನದಲ್ಲಿ "ಪ್ರೇಮ ಪೂರಿತರಾಗಿ ಸಕಲ ಜೀವಂಗಳನು ಪ್ರೇಮದಿಂ ನೋಳ್ಪೊಂದು ಬಗೆಗೆ ಸಂದು" ಹೇಳುವುದು ಕೂಡ ಜನಮನರಂಜಿತವಾಗಬೇಕು ಜನತೆಗೆ ಸುಖ ಸಿಗಬೇಕು ಎಂಬ ಉದ್ದೇಶದಿಂದ ಸಾಹಿತ್ಯ ಸೇವೆಯಾಗಬೇಕು. ಲೋಕ ಉಪಕಾರವಾಗಬೇಕು. ಅನ್ಯೋನ್ಯ ಮತ್ತು ಪ್ರೇಮ ಸೌಹಾರ್ದತೆ ಅಗತ್ಯ ಎಂಬುದು ಇವರ ಸಂದೇಶ.

ಈ ಕವಿ ಪ್ರಕೃತಿ ವರ್ಣನೆಯನ್ನು ಸಮಂಜಸವಾಗಿ ಮಾಡಬಲ್ಲರು ಎನ್ನುವುದಕ್ಕೆ 'ಬೈಗಿನಲ್ಲಿ' ಎಂಬ ಕವನವನ್ನು ನೋಡಬಹುದು. ಹಸುರಾದ ಹುಲ್ಲು ಭೂಮಿಯ ಮೇಲೆ ಇರುವುದನ್ನು ಕವಿ ಹಸಿರು ಹುಲ್ಲಿನ ಹಾಗೆ ಎಂದು ಕರೆಯುವುದು ಮಾತ್ರವಲ್ಲದೆ ಅದರಲ್ಲಿ ನಿಂತ ತುಂತುರು ಹನಿಯು ಬೆಳಕಿಗೆ ಮಿನುಗುತ್ತಿರುವ ಆ ಸುಂದರ ಸನ್ನಿವೇಶವನ್ನು ಕವಿ, ಹಸಿರುಹುಲ್ಲಿನ ಹಾಸೊಳೆಸೆದು ಹಿಮಮಣಿ ಮಾಲೆ ಕಟ್ಟಿದಂತಿತ್ತು ಎನ್ನುವುದು ಸುಂದರ ಕಲ್ಪನೆ. ಹೀಗೆ ಕವಿ ಕಲ್ಪನೆ ಹಾಗೂ ಪ್ರತಿಭೆ ಯಾವಾಗಲೂ ನವೋನ್ಮೇಷಶಾಲಿನಿಯಾಗಿರುತ್ತದೆ. ಅವರ ದೃಷ್ಟಿಕೋನ ವಿಶಾಲವಾದದ್ದು. ಸಹೃದಯರನ್ನು ಸಂತೋಷಗೊಳಿಸುವಂಥದ್ದು.

ಹೀಗೆ ಎಸ್. ವಿ. ಪರಮೇಶ್ವರ ಭಟ್ಟರು ಉತ್ತಮ ಕವನ ಸಂಕಲನವನ್ನು ಕೊಟ್ಟಿರುವುದು ಹೆಮ್ಮೆಯ ಸಂಗತಿ. ಮರುನುಡಿಯಲ್ಲಿ ಯೋಧನ ಕರ್ತವ್ಯವನ್ನು ಹೇಳಿದ್ದಾರೆ. 'ಸೋತು ಹಿಮ್ಮೆಟ್ಟಿ ಓಡುವುದಕ್ಕಿಂತ ಗೋರಿಗೆ ಓಡುವುದೇ ಲೇಸು' ಎನ್ನುವ ಉಕ್ತಿ ದೇಶಭಕ್ತಿಗೆ ಪ್ರೋತ್ಸಾಹದಾಯಕವಾದುದು.

ಕವಿ ಸಾವನ್ನು ಬೇಗ ಬಯಸಲಾರನು. ತಾನು ಮಾಡಬೇಕಾದ ಕೆಲಸ ಅದೆಷ್ಟೊ ಇದೆ. ಆದುದರಿಂದ 'ಮೆಲುನಡಯನಡಿಯಿಟ್ಟು ಕದ್ದು ಬಾ ಸಾವೆ' ಎಂದು ಆಹ್ವಾನಿಸುತ್ತಾರೆ. "ಹಲವಾರು ರೋಗರುಜನಗಳಿಂದ ಬಳಲಿಸಿ, ಅಂಗವಿಹೀನನಾಗಿ ಮಾಡಿ ಮೃತ್ಯು ಬರಬೇಡ, ಬಿರುನೋಟ ಎಸಗಿದರೆ ಸಾಕು ನಾನು ಬರುವೆನು" ಎಂದು ವಿನಮ್ರವಾಗಿ ವಿನಂತಿಸಿದ್ದಾರೆ. ಅದು ಅಲ್ಲದೆ ಸಾವು ಉತ್ತಮ ಪಾಡುದು; ಒಂದು ಶರೀರ ಬಿಟ್ಟು ಇನ್ನೊಂದು ಶರೀರ ಪಡೆಯುವುದು ಹೊಸ ಚೇತನ ಬಂದಂತೆ "ಹಳೆ ಬೆಳಕು ನಂದಿ, ಹೊಸ ಬೆಳಕು ಬಳಿಬರುವಂದು ನಿನ್ನೊಡನೆ ಬರದಿಹನೆ ಹೇ ಮುಕ್ತಿ ಬಂಧು" ಎಂದು ಉತ್ಸಾಹಿಯಾಗಿ ಮುಂದೆ ಬರುತ್ತಾರೆ. ಹುಟ್ಟು ಸಾವು ಒಂದನ್ನೊಂದು ಬಿಟ್ಟಿಲ್ಲ. ಸಾವು ಎರಡನ್ನೂ ಎದುರಿಸಬೇಕು. ಆದುದರಿಂದ ಸಾವಿಗಂಜದೆ ಕರ್ತವ್ಯಪಾಲಕರಾಗಿ ಬಾಳುವುದೇ ವ್ಯಕ್ತಿ ಧರ್ಮ ಎಂದು ಸಾರಿದ್ದಾರೆ.

'ಮೊರೆ' ತಮ್ಮ ಜೀವನಕ್ಕೆ ಸಂಬಂಧಪಟ್ಟಂತೆಯಿದೆ. ಕವಿಯ ಹಿಂದಿನ ಬಾಳು ಬಹಳ ಕಷ್ಟತರವಿರಬೇಕು. 'ನಂಟರು ಸೋತರು ಸಖರು ಕೈಬಿಟ್ಟರು ನಾನೊಬ್ಬನೆ ಬಂದೆ ಚೆಂದೆ' ಇದು 'ಇಂದ್ರ ಚಾಪ'ದ ಮೊದಲ ಮುನ್ನೂರು ಸಾಂಗ್ಯತ ಓದಿದರೆ, ಕವಿಯ ಜೀವನದ ಹಂತ ಹೀಗಿತ್ತು ಎಂದು ಹೇಳಬಹುದು. ತಮ್ಮ ಸಂಸಾರ ಹದಗೆಟ್ಟಾಗ "ಕತ್ತಲು ಕವಿಯಿತು. ಮಂಜು ಆವರಿಸಿತು. ಚಳಿಗಾಳಿ ಬೀಸಿತು ಸುತ್ತ. ಹತ್ತಾರು ತೆರದೊಳು ಚಿಂತೆಯುಲ್ಬಣಿಸಿತು. ಉನ್ಮತ್ತವಾಯಿತು ಚಿತ್ತ." ಆದರೂ ಕವಿ ಹಿಂಜರಿಯದೆ 'ವಿಶ್ವ ಮಾಯೆ' ಎಂಬ ಕವನದಲ್ಲಿ, "ಜೀವನೋಲ್ಲಾಸವನು ಚಣಾಚಣಕ್ಕೆ ತುಂಬಲೆನೆ ವಿಧಿಗೈದ ಮಾಟವಿದು ವಿಶ್ವಮಾಯೆ" ಎಂದು ಸಮಾಧಾನಪಡುವುದು ಅವರ ಹಿರಿಯ ವ್ಯಕ್ತಿತ್ವವನ್ನು ತೋರಿಸುತ್ತದೆ. ಕವಿಗಳ ಜೀವನವೆಲ್ಲಾ ಹೀಗೆ ತೋರ್ಪಡಿಸಲಾರದು. ತಮ್ಮ ಕವನಗಳಲ್ಲಿ ಅವರಿಗೆ ತಿಳಿಯದೆ ತಮ್ಮ ಸ್ವಂತ ವಿಚಾರ ಲಹರಿಗಳು ಹೊರಗೆಡುವುದುಂಟು. ಅದು ತಿಳಿಯದ ಕವಿ ತಮ್ಮ ಅಂಚೆಯ ಪೆಟ್ಟಿಗೆಯ ಕೊನೆಯ ಕವನ 'ಭರವಸೆ'ಯಲ್ಲಿ ಹೇಳಿದ್ದಾರೆ: "ಉಷೆಯ ಗಾನವಾಗಿ ಅರುಣ ಕಿರಣ ಪಾಚಿ ತುಂಬಿದ ಕೊಳಕು ಕೆರೆಯ ನೀರಿನ ಮೇಲೆ ಕಣ್ದೆರೆಯುಣಿಸು

ವುದರಲ್ಲಿ ಕಮಲ" ಹಾಗೆಯೇ. ಎಂತಹ ಕಷ್ಟ ಕಾರ್ಪಣ್ಯ ಬಂದರೂ ಕನ್ನಡ ಸಾಹಿತ್ಯದ ಸೇವೆ ತನ್ನನ್ನು ಉದ್ಧಾರ ಮಾಡುತ್ತದೆ. "ಅವ ಮಾಯೆಗೆ ಸಿಲುಕಿ ನೊಂದು ನರಳುವರೇನು. ಜೀವ ಸೇರುವುದಾತೆ ಪರಮನಡಿಯು" ಇದು ಭರತವಾಕ್ಯವಿದ್ದಂತೆ. ಜನತಾಜನಾರ್ದನ ಸೇವೆ. ಈಶ ಪರಮೇಶ್ವರ ಸೇವೆ ಮುಕ್ತಿಗೆ ದಾರಿ, ಅದೇ ಜೀವನದ ಮುಖ್ಯ ಗುರಿ. ಇಷ್ಟು ಅಚ್ಚುಕಟ್ಟಾಗಿ ಕವನಗಳನ್ನು ಕೊಟ್ಟ ಕವಿ ಹಾಗೂ ಅವರ ಕೃತಿ ಶಾಶ್ವತವಾಗಿ ಬಾಳಲಿ. ಬಾಳಿ ಬೆಳಗಲಿ. ಮಂಗಳಾಂಬೆಯ ಕೃಪೆ ಸದಾ ಕಾಪಾಡಲಿ.

# ೨೧. 'ಸೀಳುನೋಟ'ದ ಮೇಲೆ ಸೀಳುನೋಟ

ಪಚ್ಚನಾಡಿ, ಕೇಶವ ರಾವ್

ಕವಿ ಪರಮೇಶ್ವರ ಭಟ್ಟರ ಕವಿಕಾವ್ಯ ವಿಚಾರಾತ್ಮಕವಾದ 'ಸೀಳುನೋಟ' ಎಂಬ ಐದು ಬರಹಗಳ ಸಂಕಲನವು ಒಂದು ರೀತಿಯ ರಸವಿಮರ್ಶೆಯಾಗಿದೆ. ಸೀಳುನೋಟ ಎಂಬ ಪದದ ಅರ್ಥವೂ ಅದೇ ಆಗಿದೆ. ಕವಿಕಾವ್ಯ ವಿಚಾರವನ್ನು ನಾನಾ ಕೋನಗಳಿಂದ ಸೀಳಿ ನೋಡಬಹುದು. ಒಂದೇ ಪಾರ್ಶ್ವವಾಗಿ ಸೀಳಿ ನೋಡುವಾಗಲೂ ಒಳಿತು ಕೆಡುಕುಗಳ ಸಮ್ಮಿಶ್ರಣವಾಗುವುದು. ಪರಮೇಶ್ವರ ಭಟ್ಟರ ಪ್ರಕೃತದ ಸೀಳುನೋಟ ಶೀರ್ಷಿಕೆಯಲ್ಲಿ ಕವಿಕಾವ್ಯದಲ್ಲಿ ಒಳಿತು ಏನಿದೆಯೋ ಅದನ್ನು ಮಾತ್ರ ಎತ್ತಿ ಹಿಡಿದು ವಿವೇಚಿಸಿದ್ದಾರೆ. ಶ್ರೀ ಭಟ್ಟರ ಸೀಳುನೋಟವು ಯಾವ ಪರಿಯಲ್ಲಿ ಆಗಿದೆ ಎಂಬುದನ್ನು ವಿಶ್ಲೇಷಿಸುವುದೇ ಪ್ರಕೃತ ಪ್ರಬಂಧದ ವಸ್ತುವಾಗಿದೆ.

ರಾಷ್ಟ್ರಕವಿ ಕುವೆಂಪು ಅವರು "ಉತ್ತಮವಾದುದನ್ನು ಬೆರಳಿಟ್ಟು ತೋರುವುದು ಹೇಗೆ ವಿಮರ್ಶೆಯೋ, ಹಾಗೆಯೇ ಅನುತ್ತಮವಾದುದನ್ನು ಮುಚ್ಚುವುದೂ ಒಂದು ತೆರನಾದ ವಿಮರ್ಶೆಯೆ" ಎನ್ನುತ್ತಾರೆ. ಇದೇ ರೀತಿಯ ಅಭಿಪ್ರಾಯವನ್ನು ಭಟ್ಟರು ಇಟ್ಟುಕೊಂಡು ಮುಂದುವರಿದಿದ್ದಾರೆ. ಕಾವ್ಯದಿಂದ ಎಷ್ಟು ರಸಾನುಭವವನ್ನು, ಸೌಂದರ್ಯವನ್ನು ಆಸ್ವಾದಿಸಲು ಸಾಧ್ಯವಿದೆಯೋ ಅಷ್ಟನ್ನು ಆಸ್ವಾದಿಸಿದ್ದಾರೆ. ಅವರ ಅನುಭವದ ಫಲವನ್ನು ಅತ್ಯಂತ ಸ್ವಾರಸ್ಯವಾಗಿ ಚಿತ್ರಿಸಿದ್ದಾರೆ. ಅವರ ವಿಮರ್ಶಾರೀತಿಯನ್ನು ಅವರ ಮಾತಿನಿಂದಲೇ ಸ್ಪಷ್ಟವಾಗಿ ತಿಳಿಯಬಹುದು. "ಕವಿಯ ಕೃತಿ ಒಂದು ಅರ್ಥದಲ್ಲಿ ಶಿವಗಂಗೆ ಬೆಟ್ಟದ ಹಾಗೆ. ಒಂದು ದಿಕ್ಕಿನಿಂದ ನೋಡಿದವರಿಗೆ ಅದು ಸರ್ಪಾಕಾರ, ಮತ್ತೊಂದು ದಿಕ್ಕಿನಿಂದ ನೋಡಿದವರಿಗೆ ಅದು ವೃಷಭಾಕಾರ, ಮಗುದೊಂದು ದಿಕ್ಕಿನಿಂದ ನೋಡಿದವರಿಗೆ ಅದು ಲಿಂಗಾಕಾರ. ಆದರೆ ಅದರ ಸತ್ಯಸ್ಯ ಸತ್ಯದ ಸ್ಥಿತಿಯೇ ಬೇರೆ. ಕವಿಕರ್ಮವೂ ಒಂದು 'ಶಿವಗಂಗೆ' ಅನೇಕ ಪಥದಲ್ಲಿ. ಇಲ್ಲಿ ಪಂಪ, ಅಕ್ಕಮಾದೇವಿ, ಬಸವೇಶ್ವರ, ಕುವೆಂಪು, ವಿ. ಸೀ ಇವರ ಕೃತಿಶಿವಗಂಗೆಯ ಒಂದು ಮುಖವನ್ನು ಈ ಸೀಳುನೋಟದಲ್ಲಿ ತೋರಿಸಿಕೊಡುವ ಯತ್ನ ಮಾಡಿದ್ದೇನೆ" ಎಂದಿದ್ದಾರೆ. ಒಂದು ಕೃತಿಯನ್ನು ತುಲನಾತ್ಮಕವಾಗಿ ಎಲ್ಲಾ ಮುಖಗಳಲ್ಲೂ ವಿಮರ್ಶಿಸುವುದು ಮಾದರಿ ವಿಮರ್ಶೆ. ಆದರೆ ಭಟ್ಟರು ಒಂದೇ ಮುಖದಲ್ಲಿ ವಿಮರ್ಶೆಮಾಡಿ ಅದರಲ್ಲಿ ಸಂಪೂರ್ಣ ಯಶಸ್ಸನ್ನು ಸಾಧಿಸಿದ್ದಾರೆ.

ಯಾವುದೇ ಕೃತಿಯನ್ನು ವಿಶ್ಲೇಷಿಸಿ ಅದರ ಸೊಬಗನ್ನು ಸಹೃದಯನಿಗೆ ಎತ್ತಿತೋರಿಸಿದಾಗ ಅದು ಅವನಿಗೆ ನೇರವಾಗಿ ಅರಿವಾಗಬೇಕು. ಮೂಲಕೃತಿಯ ಭಾಷೆ, ಶೈಲಿಗಿಂತ ಕ್ಲಿಷ್ಟವಾಗಿ ದಾರಿದೀಪಕನು ತನ್ನ ಭಾಷೆ, ಶೈಲಿಯನ್ನು ಬಳಸಿಕೊಂಡು ಹೋಗುವುದು ಅನುಚಿತ. ಆ ರೀತಿಯ ಕ್ಲಿಷ್ಟ ಶೈಲಿಯನ್ನು ಮರೆಹೋಗುವುದಕ್ಕಿಂತ ಮೂಲಕೃತಿಯನ್ನೇ ನಾವು ಸ್ವಲ್ಪ ಶ್ರಮಪಟ್ಟಾದರೂ ಅರ್ಥಮಾಡಿಕೊಳ್ಳುವುದು ಕ್ಷೇಮವಲ್ಲವೆ? ಪರಮೇಶ್ವರ ಭಟ್ಟರ ಭಾಷೆ, ಶೈಲಿ ಅಂತಲ್ಲ. ಅದು ಸರಳ ಸುಂದರವಾದ ಶೈಲಿ. ನಿರ್ದುಷ್ಟವಾದ ಶೈಲಿ. ಚಿಕ್ಕ ಚಿಕ್ಕ ವಾಕ್ಯಗಳನ್ನು ಹೆಣೆದು ಓದುಗನಿಗಾಗಲಿ, ಸಹೃದಯನಿಗಾಗಲಿ ಅನಾಯಾಸವಾಗಿ ತಿಳಿದುಕೊಳ್ಳಬಹುದಾದ ಶೈಲಿ. ನೀರಸವಾದ ಮಾತುಗಳಲ್ಲ. ಸಂಸ್ಕೃತಭೂಯಿಷ್ಠವಾದ ಶೈಲಿಯೂ ಅಲ್ಲ. ಪ್ರತಿ ಪದದ ಹಾವಭಾವಗಳ, ಹಾಸುಬೀಸುಗಳ ಔಚಿತ್ಯವನ್ನು ಅರಿತೇ ಪ್ರಯೋಗ ಮಾಡುತ್ತಾರೆ. ಗದ್ಯವನ್ನು ಪದ್ಯದಂತೆಯೇ ಲಯಬದ್ಧವಾಗಿ, ಪ್ರಾಸಬದ್ಧವಾಗಿ ಬರೆಯಬಲ್ಲರು. ಇದಕ್ಕೆ ಕಾವ್ಯಮಯವಾದ ಶೈಲಿಯೆಂದು ಹೇಳಬಹುದು. ಈ ಮಾತಿನ ಸ್ಪಷ್ಟತೆಗಾಗಿ ಈ ಕೆಳಗಿನ ವಾಕ್ಯವೃಂದವನ್ನು ವೀಕ್ಷಿಸಬಹುದು.

'ಪಂಪನು ಬೆಳಗಿರುವ ಲೌಕಿಕ'ದ ಒಂದು ಚಿತ್ರದಲ್ಲಿ — "ನಿಮ್ಮ ಕುಲ, ಶತ್ರುಗಳನ್ನು ಅಟ್ಟಿ ತಿನ್ನುವುದಿಲ್ಲ. ನೀವು ಹೇಳುವ ಕುಲ ಕುಲವಲ್ಲ. ಛಲವೇ ಕುಲ. ಗುಣವೇ ಕುಲ. ಅಭಿಮಾನವೇ ಕುಲ. ಪರಾಕ್ರಮವೇ ಕುಲ ಈ ಮಾತುಗಳು ಮಂತ್ರದಂತೆ ಇವೆ. ಜಪಯೋಗ್ಯವಾಗಿವೆ. ಕುಲವೆನ್ನುವುದು ಹುಟ್ಟಿನಿಂದ ಬರುವುದಿಲ್ಲ. ಶೀಲದಿಂದ ಬರುತ್ತದೆ. ನಡೆನುಡಿಗಳ ಮೇಲೆ ನಿರ್ಧಾರ

ವಾಗುತ್ತದೆ. ಛಲ, ಗುಣ, ಅಭಿಮಾನ. ಅಲ್ಲ್ಯ ಇವು ಯಾರಲ್ಲಿ ಇದೆಯೋ ಅವನು ಕರ್ಣನ. ಬಿನ್ನಾಣದಂತಹ ಮಾತು ರತ್ನದಂತಹ ಮಾತು. ಕರ್ಣನಂತಹವನು ಹೇಳಿರುವುದರಿಂದ ಈ ವಾಕ್ಯ ಮಾಣಿಕ್ಯದಂತೆ ಅಮೂಲ್ಯವಾಗಿದೆ. ಕರ್ಣನು ಮುಂದೆ ಈ ಕಲಹದಲ್ಲಿ ಸಿನ್ನ್ಯ ಕುಲ ಅಕುಲವನ್ನು ಉಂಟುಮಾಡುತ್ತದೆ ಎಂದು ಟೀಕಿಸುತ್ತಾನೆ. ಈ ಟೀಕೆ ಮುಯ್ಯಿಗೆ ಮುಯ್ಯಿ ಎಂಬಂತಿದೆ."

ಪರಮೇಶ್ವರ ಭಟ್ಟರ ಸೀಳುನೋಟವು ನಮಗೆ ಪ್ರಜ್ವಲಿಸುವ ಬೆಳಕು: ನಸುಬೆಳಕಲ್ಲ. ನಸುಬೆಳಕು ತಪ್ಪುದಾರಿಗೆ ಕರೆದೊಯ್ಯಬಹುದು. ಈ ಪ್ರಜ್ವಲಿಸುವ ಬೆಳಕು ಎಂದೂ ತಪ್ಪುದಾರಿಗೆ ಒಯ್ಯಲಾರದು. ಕವಿಯಾದವನಿಗೆ ವಿಮರ್ಶಾಪ್ರಜ್ಞೆ ಇರಬೇಕೆಂಬುದಕ್ಕೆ ಭಟ್ಟರನ್ನು ಸಾಕ್ಷಿಯಾಗಿ ಇಟ್ಟುಕೊಳ್ಳಬಹುದು. ಯಾವುದೇ ಒಂದು ವಿಚಾರವನ್ನು ಸರಿಯಾಗಿ ವಿಮರ್ಶೆ ಮಾಡಿಯೇ ಕವಿಕಾವ್ಯ ಸೃಷ್ಟಿತಿಗೆ ಹೊರಡುತ್ತಾನೆ. ಭಟ್ಟರು ಯಾವ ಪೂರ್ವಕಲ್ಪಿತವಾದ ವಿಮರ್ಶಾಸೂತ್ರವನ್ನೂ ಇಟ್ಟುಕೊಳ್ಳದೆ ತಮ್ಮದೇ ಆದ ರೀತಿಯಲ್ಲಿ ವಿದ್ಯಾರ್ಥಿಗೆ, ಸಹೃದಯನಿಗೆ ಸಹಾಯ ಮಾಡುತ್ತಾರೆ. ಇವರು ನಿಯಮಾತೀತ ವಿಕಾಸಶೀಲ ಪ್ರಜ್ಞೆಯಿಂದ ವಿಮರ್ಶೆ ಮಾಡಬಲ್ಲರು. ಕೃತಿಯ ಅಂತರಂಗದ ರಸಮಡುವಿಗೆ ಧುಮುಕಿ ಅಲ್ಲಿರುವ ರಸಾಂಶಗಳನ್ನು, ಎಂದರೆ ಉತ್ತಮಾಂಶಗಳನ್ನು ನಮಗೆ ಕೊಡಬಲ್ಲ ವಿಮರ್ಶಕರು. ಅಲ್ಲಿ ದೊರೆಯುವ ಇತರ ಕಸಕಡ್ಡಿಯಂತಿದ್ದ ಕುಂದುಕೊರತೆಗಳನ್ನು ಎಂದೂ ಕೊಡಲಾರರು. ಒಂದು ಮಾತಿನಲ್ಲಿ ಹೇಳುವುದಾದರೆ ಉತ್ತಮ ಸಹೃದಯ ವಿಮರ್ಶಕರು.

೧

ಪಂಪನು ತನ್ನ ಕಾವ್ಯದಲ್ಲಿ ಲೌಕಿಕದ ವಿಚಾರವಾಗಿ ಬೆಳಗಿರುವ ಹಲವಾರು ಚಿತ್ರಗಳಲ್ಲಿ ಭಟ್ಟರು ನಮಗೆ ಒಂದು ಚಿತ್ರವನ್ನು ಆರಿಸಿಕೊಟ್ಟಿದ್ದಾರೆ. 'ಪಂಪನು ಬೆಳಗಿರುವ ಲೌಕಿಕದ ಒಂದು ಚಿತ್ರ' ಎಂಬ ಲೇಖನವಂತೂ ಭಾವಾವೇಶದಿಂದ ಭಾಷಣ ಮಾಡಿದರೆ ಹೇಗೆ ಭಾಷಣ ಆಕರ್ಷಣೀಯವಾಗುವುದೋ ಅಂತೆಯೇ ಒಂದು ಭಾವಾವೇಶದಿಂದ ಕೂಡಿದ ಬರಹವೆನ್ನಬಹುದು. ಇಲ್ಲಿಯ ಪಾತ್ರಚಿತ್ರಣ, ಸನ್ನಿವೇಶ ಚಿತ್ರಣಗಳು ಲೌಕಿಕ ಚಿತ್ರಣದ ಪೋಷಣೆಗೆ ಬಹು ಅಪ್ಯಾಯಮಾನವಾಗಿ ಬಂದಿವೆ. ಲೇಖನದ ಕೊನೆಗಂತೂ ಹಲವಾರು ಪ್ರಶ್ನೆಗಳನ್ನು ಹಾಕಿ ಅದರ ಉತ್ತರವನ್ನು ತಮ್ಮ ಪ್ರಬಂಧದಲ್ಲಿ ಆಯಾಯ ಪಾತ್ರಗಳ ಮೂಲಕ ಉಚಿತ ಸನ್ನಿವೇಶದಲ್ಲಿ ಹೇಳಿಸಿದ್ದಾರೆ. ಉಳಿದ ಲೇಖನಗಳು ಒಂದು ರೀತಿಯಾದರೆ, ಈ ಲೇಖನವು ಮಗುದೊಂದು ರೀತಿಯಾಗಿದೆ.

ವಾಸ್ತವಿಕ ಜೀವನದಲ್ಲೂ ಈ ತೆರನ ಸನ್ನಿವೇಶಗಳು, ಎಂದರೆ ಭೀಷ್ಮನಿಗೆ ಪಟ್ಟಕಟ್ಟಿದಾಗ ಸಂಭವಿಸಿದಂತಹ ಅನಿರೀಕ್ಷಿತವಾದ ಗೊಂದಲ ಆಗುವುದು ಸಹಜ. ಒಂದು ಹುದ್ದೆಗೆ ನಾಲ್ಕಾರು ಮಂದಿ ಅಭ್ಯರ್ಥಿಗಳಿದ್ದಾಗ ಯಾರು ಮೇಲು ಯಾರು ಮೇಲು ಎಂಬ ಸ್ಪರ್ಧೆ ಬರುತ್ತದೆ. ಆಗ ಅವರನ್ನು ಚುನಾಯಿಸುವ ಅಧಿಕಾರಿ ಒಂದು ದೃಷ್ಟಿಯನ್ನು ಇಟ್ಟುಕೊಂಡು ಒಬ್ಬನನ್ನು ಚುನಾಯಿಸಿದರೆ ಇತರ ಅಭ್ಯರ್ಥಿಗಳಿಗೆ ಪಶ್ಚಾತ್ತಾಪ, ಉದ್ವೇಗ ಉಂಟಾಗುವುದು ಸಹಜ. ಅವರಲ್ಲೂ ಒಬ್ಬ ತನಗೇ ಆ ಸ್ಥಾನ ಲಭಿಸಬಹುದೆಂದು ಹೆಚ್ಚು ನಿರೀಕ್ಷೆ ಮಾಡಿಕೊಂಡಿದ್ದ ಸಮರ್ಥನಿಗೆ ಬಹಳ ಉದ್ವೇಗ ಬರುತ್ತದೆ. ಒಂದು ರೀತಿಯ ಹುಚ್ಚುಹುಚ್ಚಾದ ಆವೇಶಕ್ಕೆ ಒಳಗಾಗುತ್ತಾನೆ. ಅಂತಹ ಆವೇಶದಿಂದ ಕರ್ಣ ಮಾಡಬಾರದ್ದನ್ನು, ಆಡಬಾರದ್ದನ್ನು ಆಡಿದ. ಗಲಭೆ ಎಬ್ಬಿಸಿದ. ಆ ಗಲಭೆಯಲ್ಲಿ ನಾಯಕ ಯಾವ ತೆರದಲ್ಲಿ ವ್ಯವಹರಿಸಬೇಕೆಂಬುದು ಭೀಷ್ಮರ ಪಾತ್ರಚಿತ್ರಣದಿಂದ ಅರ್ಥವಾಗುತ್ತದೆ. ಈ ಚಿತ್ರಣವನ್ನು ಭಟ್ಟರು ಬಹು ವಿಚಾರಪೂರಿತವಾಗಿ ನಾಯಕರಾದವರು ಅಂತೆಯೇ ನಡೆಯಬೇಕೆಂಬ ಆದರ್ಶವಾದವನ್ನು ಮುಂದಿಟ್ಟಿದ್ದಾರೆ. ನಿಜವಾದ ದಕ್ಷನಾಯಕನ ಲಕ್ಷಣವನ್ನು ಬಹು ಮನೋಜ್ಞವಾಗಿ ವಿಶದೀಕರಿಸಿದಂತಿದೆ. (ಸ್ವತಃ ಭಟ್ಟರ ಪಾತ್ರವು ಕೂಡ ವಿದ್ಯಾರ್ಥಿಗಳ ವಿಚಾರಗೋಷ್ಠಿಯಲ್ಲಿ ಭೀಷ್ಮನ ಪಾತ್ರದಂತೆ ಇರುತ್ತದೆ. ಎಲ್ಲಿ ಖಂಡನ ಮಂಡನಗಳು ವಿಕೋಪಕ್ಕೆ ಹೋಗುತ್ತವೆಯೋ ಅಲ್ಲಿ ಸ್ವಲ್ಪ ಸುಮ್ಮನಿರುತ್ತಾರೆ. ಆ ಖಂಡನ ಮಂಡನಗಳು ಒಂದು ಹದಕ್ಕೆ ಬರುವಾಗ ಎದ್ದು ತಮ್ಮ ವಿಚಾರಪೂರಿತವಾದ, ಗಂಭೀರ ವಿಷಯವನ್ನು ತಮ್ಮ ಹಾಸ್ಯೋಕ್ತಿಗಳಿಂದ ಅಭಿವ್ಯಕ್ತ ಮಾಡಿ ಸಮಸ್ಯೆಯನ್ನು ಪರಿಹರಿಸುವರು.) ಈ

ರೀತಿಯ ವಿಮರ್ಶೆ ಹಿತಕಾರಿಯಾಗಿದೆ. ಏಕೆಂದರೆ ಪಂಪನ ಕಾಲದಲ್ಲೂ ಈಗಿನ ರಾಜಕೀಯ ಗೊಂದಲವಿತ್ತು. ಆಗ ನಾಯಕನು ಯಾವ ರೀತಿ ತನ್ನ ಅಭಿಮಾನ, ಗೌರವವನ್ನು ಉಳಿಸಿಕೊಳ್ಳಬೇಕು ಎಂಬುದನ್ನು ಪಂಪ ಧ್ವನಿಪೂರ್ವಕವಾಗಿ ಪ್ರತಿಪಾದಿಸಿದಂತಿದೆ. ಆಗಿನ ಸಮಕಾಲೀನ ಪ್ರಜ್ಞೆ ಆಗಿರಲೂ ಬಹುದು. ಅದು ಸಾರ್ವಕಾಲಿಕವಾಗಿ ನಿಲ್ಲುವ ಪ್ರಜ್ಞೆಯಾಗಿಯೂ ಇದೆ. ಒಟ್ಟಿನಲ್ಲಿ ಓದುಗನು ತೆರೆ ಬಂದಾಗ ಭಾವಾವೇಶಕ್ಕೆ ಒಳಗಾಗುವ ತೆರೆ ಇಳಿದಾಗ ಭಾವಾವೇಶ ಹೋಗಿ ಯಾವ ರೀತಿ ಬುದ್ಧಿ ಸುವಿಚಾರಿಯಾಗುತ್ತಾನೆ ಎಂಬ ಅನೇಕ ವಿಚಾರಗಳನ್ನು ಗ್ರಹಿಸುವಂತೆ ಮಾಡಿದ್ದಾರೆ. ಮಕ್ಕಳಿಗೆ ಬೆಲ್ಲ ಕೊಟ್ಟು ಔಷಧಿ ಕುಡಿಸಿದಂತೆ ಮಾಡಿದ್ದಾರೆ.

೨

ಎಸ್. ವಿ. ಪಿ. ಯವರು ಅಕ್ಕನವರ ಗಹನವಾದ ಆಧ್ಯಾತ್ಮಿಕ ವಿಚಾರವನ್ನು ನಿಶ್ಚಲ ಮಧುರ ಭಕ್ತಿಯನ್ನು, ಧರ್ಮಶ್ರದ್ಧೆಯನ್ನು, ಧೀರ ವೈರಾಗ್ಯವನ್ನು, ರಮಣೀಯವಾದ ಜೀವನವನ್ನು ನಾವು ಕಾವ್ಯಾತ್ಮಕವಾಗಿ ಆಸ್ವಾದಿಸುವಂತೆ ಯತ್ನಿಸಿದ್ದಾರೆ. ವಚನಕಾರರ ವಚನವು ಬರೇ ಧರ್ಮದೃಷ್ಟಿಯಿಂದ, ಮತಪ್ರಚಾರ ದೃಷ್ಟಿಯಿಂದ ಬಂದಿದ್ದರೂ ಅದರಲ್ಲಿ ಕಾವ್ಯಗುಣವಿದೆಯೆಂಬುದನ್ನು ಬಹಳ ಮೊದಲು ತೋರಿಸಿಕೊಟ್ಟಿದ್ದಾರೆ. 'ಆ ಮೇಲಿನವರು ಭಟ್ಟರ ಮೂಲವಿಮರ್ಶೆಯನ್ನು ಇನ್ನಷ್ಟು ವಿಸ್ತರಿಸಿದರು' ಎಂದು ಹೇಳಿದರೆ ತಪ್ಪಾಗಲಾರದು.

ವಚನಗಳನ್ನು ಸೊಗಸಾಗಿ ವ್ಯಾಖ್ಯಾನಿಸಿ ಅರ್ಥಸ್ಪಷ್ಟತೆಯನ್ನು ಮಾಡಿದ್ದಾರೆ. ಕೆಲವು ವಚನಗಳಿಗಂತೂ ಟೀಕಿನ ಕುಡಿಯಿಲ್ಲದೆ ಅದರ ಅರ್ಥ ಸೂಕ್ಷ್ಮತೆಯನ್ನು ತಿಳಿಯಲು ಸಾಧ್ಯವಿಲ್ಲ. ಅಂತಹ ಕಡೆಗೆ ಭಟ್ಟರು ಗಮನ ಹರಿಸದೆ ಇರಲಿಲ್ಲ. ಇನ್ನು ಕೆಲವೆಡೆಯಲ್ಲಂತೂ ಅದರದರ ಪಾಡಿಗೆ ಬಿಟ್ಟಿದ್ದಾರೆ. ನಿದರ್ಶನಕ್ಕಾಗಿ ಒಂದು ವಚನವನ್ನು ತೆಗೆದುಕೊಳ್ಳುವ:

> ......"ನಾನೊಂದ ಕನಸ ಕಂಡೆ
> ಅಕ್ಕಿಯಡಕೆ ತೆಂಗಿನಕಾಯ ಕಂಡೆ
> ಚಿಕ್ಕ ಚಿಕ್ಕ ಜಡೆಗಳ ಸುಲಿಪಲ್ಲ ಗೊರವನು
> ಭಿಕ್ಷಕೆ ಬಂದುದ ಕಂಡೆನವ್ವ."

ಅಕ್ಕಿ, ಅಡಕೆ, ತೆಂಗಿನ ಕಾಯಿ, ಚಿಕ್ಕ ಚಿಕ್ಕ ಜಡೆಗಳನ್ನು ಯಾಕೆ ಕಂಡಳು? ಇದರಿಂದ ಅಕ್ಕ ಹೇಗೆ ತೃಪ್ತಳಾದಳು? ಎಂಬಿತ್ಯಾದಿ ವಿಚಾರಗಳ ವ್ಯಾಖ್ಯಾನ ಅವಶ್ಯವಾಗಿತ್ತು. ಏಕೊ ಕೈಬಿಟ್ಟಿದ್ದಾರೆ. ಆದರೆ ಅಕ್ಕನವರ ವಚನಗಳ ಕಾವ್ಯಗುಣವನ್ನೇ ದೃಷ್ಟಿಯಲ್ಲಿಟ್ಟು ಪರಿಶೀಲಿಸುವಾಗ ಅದರ ಇತರ ವಿವರಣೆ ಅನಗತ್ಯವೆಂದು ತ್ಯಾಜ್ಯಮಾಡಿರಲೂ ಬಹುದು.

ಲೇಖನದ ಪ್ರಾರಂಭದಲ್ಲಿ ವಿಪುಲವಾದ ನಿದರ್ಶನಗಳನ್ನು ಕೊಟ್ಟು, ಅಲ್ಲಲ್ಲಿ ಸ್ವಲ್ಪ ಕಾವ್ಯಾಂಶದ ಸುಳಿಹನ್ನು ತೋರಿಸಿಕೊಟ್ಟಿದ್ದಾರೆ. ವಚನಗಳು ಯಾವ ಯಾವ ಸಂದರ್ಭದಲ್ಲಿ ವಚಿಸಲ್ಪಟ್ಟಿವೆಯೆಂದು ಪರಿಚಯವನ್ನು ಮಾಡಿ ಒಂದು ರೀತಿಯಲ್ಲಿ ನೆಯ್ದಿದ್ದಾರೆ. ಲೇಖನದ ಕೊನೆಯಲ್ಲಿ ಅಕ್ಕನವರ ವಚನಗಳಲ್ಲಿ ಅಡಗಿರುವ ಕಾವ್ಯಗುಣವನ್ನು ಅದಷ್ಟು ಶಕ್ತಿಯುತವಾಗಿ, ಸಮಗ್ರವಾಗಿ ವಿವೇಚಿಸಿದ್ದಾರೆ, ತನ್ನತನದ ಮುದ್ರೆಯನ್ನು ಒತ್ತಿದ್ದಾರೆ. ನವರತ್ನಗಳ ಒಟ್ಟಿನ ನೆಲೆ ಬೆಲೆ, ಕಾಂತಿಯ ಸ್ವರೂಪವಿತ್ತಿದ್ದಾರೆ. ಅವರ ಒಂದೊಂದರ ಪ್ರತ್ಯೇಕವಾದ ನೋಟವನ್ನು ನಮಗೆ ಪರಿಚಯಿಸಿಲ್ಲ.

೩

ಕವಿ ಪರಮೇಶ್ವರ ಭಟ್ಟರು ಬಸವಣ್ಣನವರು ಕಂಡ ಲೋಕದ ಡೊಂಕನ್ನು ಬಹು ವೇದ್ಯವಾಗಿ ನಿರೂಪಿಸಿದ್ದಾರೆ. ಯಾವ ತಪ್ಪನ್ನಾದರೂ ಅದು ತಪ್ಪೆಂದು ನೇರವಾಗಿ ಹೇಳಿದರೆ ಯಾರೂ ಒಪ್ಪಲಾರರು. ತಮ್ಮ ತಪ್ಪನ್ನು ತಿದ್ದುವ ಮನಃಸ್ಥಿತಿಗೆ ಬರಲಾರರು. ತಪ್ಪೆಂದು ಹೇಳುವುದಕ್ಕೆ

ಸರಿಯಾದ ಒಂದು ನಿಲುವು ಅಗತ್ಯ. ಒಂದು ವಿಚಾರವನ್ನು ಜನಮನವು ಅಂತರಂಗಕೆ ತರಬೇಕಾದರೆ 'ಪ್ರಭುಸಮ್ಮಿತ' ಅಥವಾ 'ಕಾಂತಾಸಮ್ಮಿತ' ಉಪದೇಶದಿಂದ ಸಾಧ್ಯ. ಪ್ರಭುಸಮ್ಮಿತ ಎಲ್ಲಾ ಕಾಲದಲ್ಲೂ ಎಲ್ಲರಿಂದಲೂ ಸಾಧ್ಯವಿಲ್ಲ. ಕಾಂತಾಸಮ್ಮಿತದಿಂದ ಹಾಗೆ. ಯಥೋಚಿತವಾದ ಉಪಮೆ, ದೃಷ್ಟಾಂತಗಳನ್ನು ಕಥೆಗಳನ್ನು ಅದಕ್ಕೆ ಉಪಷ್ಟಂಭಕವಾಗಿ ಹೇಳಿದರೆ ಜನಮನಕ್ಕೆ ಅರ್ಥವಾಗುತ್ತದೆ. ಜನಾನುಭವದ ಉಪಮೆ. ಸಾದೃಶ್ಯಗಳನ್ನು. ಸುಭಾಷಿತಗಳನ್ನು ಕೊಟ್ಟರೆ ಅವುಗಳು ಬಹುಬೇಗನೆ ಮನಸ್ಸಿಗೆ ನಾಟುತ್ತವೆ. ಅದನ್ನು ಸರಿಯಾಗಿ ಮನಗಂಡೇ ಭಟ್ಟರು ಆತ್ಮಕಲ್ಯಾಣ ಹಾಗೂ ಲೋಕ ಕಲ್ಯಾಣ ಮಾಡಿದ ಬಸವಣ್ಣನವರ ವಚನಗಳನ್ನು ಮುಂದಿರಿಸಿ, ಲೋಕದ ಡೊಂಕನ್ನು ತಿದ್ದಲು ಪ್ರಯತ್ನಿಸಿದ್ದಾರೆ. ಹೀಗೆ ಹೇಳಿದರೆ ಅವರ ಮಾತಿಗೆ ಬೆಲೆಯುಂಟು. ಭಾರವುಂಟು. ಬಸವಣ್ಣನವರು ಜನರ ಬಾಳಿನ ಅಂಕುಡೊಂಕನ್ನು ತಿದ್ದಿ, ಅವರನ್ನು ಶಿವಪಥದ ಕಡೆಗೆ ಸಾಗಿಸಲು ಜ್ಯೋತಿಯಾದವರು. ಪರಮಾತ್ಮನೆಡೆಗೆ ಹೋಗುವ ದಾರಿ ಅನೇಕವಿವೆ. ಅದರಲ್ಲಿ ಒಂದು ದಾರಿ ಬಸವಣ್ಣನವರದ್ದು ಸತ್ಯ. ಅವರ ಮಾರ್ಗವೇ ಸನ್ಮಾರ್ಗ; ಉಳಿದುದು ದುರ್ಮಾರ್ಗವೆಂದು ಸಾಧಿಸಲು ಹೊರಟ ಅವರ ಕೆಲವು ವಿಚಾರವನ್ನು ಕೆಲವರು ಕಟುವಾಗಿ ಪ್ರತಿಭಟಿಸಿದ್ದಾರೆ. ಆದರೂ ಬಸವಣ್ಣನವರ ಜೀವನದಲ್ಲಿ ಅವರು ಕಂಡ ಬೆಳಕಿನಲ್ಲಿ ಲೋಕಮಾನ್ಯವಾದ ಅರ್ಥವಿದೆ. ಜನರಿಗೆ ಮುಸುಕಿದ ಕತ್ತಲೆಯನ್ನು ತನ್ನ ಜ್ಯೋತಿಯ ಪ್ರಭೆಯಿಂದ ಪರಿಹರಿಸಲು ಪ್ರಯತ್ನಿಸಿದ್ದಾರೆ. ಆ ಜ್ಯೋತಿಯ ಪ್ರಭೆ ಎಲ್ಲಾ ಕಾಲದಲ್ಲೂ ಒಂದೇ ರೀತಿಯಾಗಿ ಇರುತ್ತದೆಯೆಂದು ಹೇಳಲು ಶಕ್ಯವೆ? ಕಾಲ ಕಾಲಕ್ಕೆ ಅದರ ಪ್ರಭೆ ಹೆಚ್ಚುವುದು ಸಹಜ. ಭಟ್ಟರು ಮೊದಲೇ ಪ್ರಭೆಯಿಂದ ಕೂಡಿದ ಆ ಜ್ಯೋತಿಯನ್ನು ಜಾಜ್ವಲ್ಯಮಾನವಾಗಿ ಪ್ರಜ್ವಲಿಸುವಂತೆ ಮಾಡಿದ್ದಾರೆ. ತಮ್ಮ 'ಬಸವಣ್ಣನವರು ಕಂಡ ಲೋಕದ ಡೊಂಕು' ಎಂಬ ಈ ಲೇಖನದಲ್ಲಿ.

ಈ ಲೇಖನದ ಕೊನೆಗೆ ವಚನದ ತಂತ್ರ ಹೇಗೆ ಎಂಬುದನ್ನು. ಸಾಹಿತ್ಯಸ್ವರೂಪವನ್ನೂ ತರ್ಕಿಸಿದ್ದಾರೆ. "ಒಂದು ಕಡೆ ತಮ್ಮ ಮತದ ಉತ್ಕರ್ಷವನ್ನು ಹೇಳಬೇಕು. ಮತದ ಲೋಪದೋಷಗಳನ್ನು ತಿದ್ದಬೇಕು; ಮತ್ತೊಂದು ಕಡೆ ತಮ್ಮ ತನುಮನಗಳನ್ನು ಆ ಮೊದಲೆ ಸಂಸ್ಕರಿಸಿಕೊಂಡಿರಬೇಕು. ಹೀಗೆ ಏಕಕಾಲದಲ್ಲಿ ನಾಲ್ಕು ಕಡೆಗೆ ಗಮನವನ್ನು ಹರಿಯಿಸಿ ಮಾತನಾಡುವಾಗ ಆ ಮಾತಿನಲ್ಲಿ ಸ್ವಲ್ಪ ಖಾರವಿದ್ದರೆ ಸ್ವಲ್ಪ ಹುಳಿಯಿದ್ದರೆ ಅದು ಸಹಜವೇ ಸರಿ" ಎಂಬ ಭಟ್ಟರ ಹೇಳಿಕೆಯನ್ನು ಸಂಪೂರ್ಣ ಒಪ್ಪಬೇಕೆಂದು ಕಾಣುವುದಿಲ್ಲ. ಏಕೆಂದರೆ ಸ್ವಮತದ ಉತ್ಕರ್ಷವನ್ನು ಹೇಳುವಾಗ ಅನ್ಯಮತದ ದೂಷಣೆ ಮಾಡುವುದು ಹಿತವಲ್ಲ. ಮಹಾತ್ಮರ ಜೀವನದಲ್ಲಿ ನಾಲ್ಕು ಕಡೆಗೆ ಅಲ್ಲ, ಹತ್ತಾರು ಕಡೆಗೆ ಮಾತನಾಡುವಾಗಲೂ ಖಾರ, ಹುಳಿ ಬರುವುದು ಉಚಿತವಲ್ಲ. ಅಪ್ಪಿ ತಪ್ಪಿ ಒಂದೆರಡು ನಿಂದೆಗಳು ಬಂದಿದ್ದರೆ ಕ್ಷಮಾರ್ಹವಾಗಬಹುದು. ಆದರೆ ಅಲ್ಲಲ್ಲಿ ಪರಮತ ನಿಂದನೆ ತಲೆಯೆತ್ತಿರುವುದನ್ನು ಕಾಣಬಹುದು. ಒಟ್ಟಿನಲ್ಲಿ ಬಸವಣ್ಣನವರ ಬಹುಪಾಲಿನ ಆದರ್ಶಗುಣಗಳನ್ನು ಗಣಿಸುವಾಗ, ಕಿರುಪಾಲಿನ ಇತರ ದೋಷಗಳು ಮರೆಯಾಗುತ್ತವೆ.

೪

ಒಬ್ಬ ಕವಿಯ ಅದರಲ್ಲೂ ಮಹಾಕವಿಯ ದರ್ಶನದ ದೃಷ್ಟಿ ಮತ್ತು ವಿಕಾಸವನ್ನು ಹಂತ ಹಂತವಾಗಿ ನೋಡಿ ವಿವೇಚಿಸುವುದು ಅಷ್ಟು ಸುಲಭವಲ್ಲ. ಅದನ್ನು ಭಟ್ಟರು ಯಶಸ್ವಿಯಾಗಿ ಪೂರೈಸಿದ್ದಾರೆ. ಇಂತಹ ವಿವೇಚನೆ ಸ್ವತಃ ಕವಿಯಾದವನಿಗೆ ಸಾಧ್ಯವಾದಷ್ಟು ಇತರರಿಗೆ ಸಾಧ್ಯವಾಗಲಾರದೆಂದು ಕಾಣುತ್ತದೆ. ಅದಕ್ಕಾಗಿಯೋ ಎಂಬಂತೆ ಕುವೆಂಪು ಅವರು ವಿಮರ್ಶಕನಿಗೆ "ನಾ ಏರುವೆತ್ತರಕೆ ನೀ ಏರಬಲ್ಲೆಯಾ" ಎಂದು ಉತ್ಕಂಠರಾಗಿ ಘೋಷಿಸಿರಬಹುದು. ಇತರ ವಿಮರ್ಶಕರು ಅಶಕ್ತರೆಂದಲ್ಲ. ಕವಿವಿಮರ್ಶಕರಷ್ಟು ಮನೋಜ್ಞವಾಗಿ ವಿಮರ್ಶಿಸಲು ಸ್ವಲ್ಪ ಕಷ್ಟಕರವಾಗಬಹುದು.

ಇಲ್ಲಿ ಕುವೆಂಪು ಅವರ ದೃಷ್ಟಿ ಪ್ರಕೃತಿಯೆಡೆಗೆ ಪ್ರಾರಂಭದಲ್ಲಿ ಹೇಗಿತ್ತು? ಬರಬರುತ್ತಾ ಹೇಗಾಯಿತು? ಅಂತಿಮ ದೃಷ್ಟಿ ಯಾವ ರೀತಿಯಲ್ಲಿ ಬಂದು ನಿಂತಿತು? ಎಂಬುದನ್ನು ಬಹು ಮನನೀಯವಾಗಿ ಭಟ್ಟರು ವಿಚಾರ ಮಾಡಿದ್ದಾರೆ. ಒಂದು ರೀತಿಯ ರಸವಿಮರ್ಶೆಯೇ ಆಗಿದೆ.

ಕುವೆಂಪು ಅವರ ಭಾವಗೀತೆಯಲ್ಲಿ ಗೋಚರಿಸುವ ಪರಿಪೂರ್ಣ ಶಕ್ತಿಯನ್ನು ಭಟ್ಟರು ಆಸ್ವಾದಿಸಿ ಆ ಸವಿಯನ್ನು ಇತರರಿಗೆ ಸವಿಯಲು ಅವಕಾಶ ದೊರಕಿಸಿದ್ದಾರೆ. ಪ್ರಕೃತಿ ದರ್ಶನದ ವಿವಿಧ ಹಂತಗಳ ಕವನಗಳನ್ನು ಕವಿದೃಷ್ಟಿಯ ವಿಕಾಸಕ್ಕನುಗುಣವಾಗಿ ನಿಯೋಜಿಸಿದ್ದಾರೆ. ಕುವೆಂಪು ಅವರ ಪ್ರಕೃತಿ ವರ್ಣನೆಯನ್ನು ಕಂಡಾಗ ಆದ ಶಿಶು ಸಹಜವಾದ ಪ್ರೇಮವು ಮೆಲ್ಲ ಮೆಲ್ಲನೆ ಆಧ್ಯಾತ್ಮಿಕ ಪ್ರೇಮವಾಗಿ, ಭಗವಂತನ ಸಂಪೂರ್ಣ ಇರವನ್ನು ಪ್ರಕೃತಿಯಲ್ಲಿ ಕಂಡು ಅನುಭವಿಸಿದ್ದಾರೆ. "ಸತ್ಯದಲ್ಲಿ ಶಿವವಿದೆ; ಶಿವದಲ್ಲಿ ಸತ್ಯವಿದೆ. ಅವೆರಡು ಒಟ್ಟಿಗೆ ಸೇರಿಕೊಂಡಿದೆ ಸೌಂದರ್ಯದಲ್ಲಿ" ಎಂಬ ಕುವೆಂಪು ಅವರ ಅಭಿಪ್ರಾಯವನ್ನು ನಮಗೆ ಭಟ್ಟರು ಸರಳವಾಗಿ, ಹೃದ್ಯವಾಗಿ ಗದ್ಯದಲ್ಲಿ ನಿರೂಪಿಸಿದ್ದಾರೆ. ಹೆಚ್ಚಿನ ಕಡೆಗಳಲ್ಲಿ ಕುವೆಂಪು ಅವರ ಪದ್ಯದಲ್ಲಿ ಬಂದ ಅಭಿಪ್ರಾಯವನ್ನು ಕೆಲವೆಡೆ ಭಟ್ಟರು ಗದ್ಯಕ್ಕೆ ತಿರುಗಿಸಿದ್ದಾರೆ. ಕವಿ ಮಾತೇ ಅಷ್ಟು ಸೊಗಸಾಗಿ ಬಂದಿರುವಾಗ ವಿಮರ್ಶಕನ ಮಾತಿನಲ್ಲಿ ಅದನ್ನು ಹೇಳಿದರೂ ಅಷ್ಟು ಸ್ವಾರಸ್ಯವಾಗಲಾರದೆಂಬ ಔಚಿತ್ಯ ದೃಷ್ಟಿಯಿಂದಲೇ ಕವಿಮಾತನ್ನೇ ಬಳಸಿರಬೇಕು. ಈ ಮಾತನ್ನು ಕೆಳಗಿನ ದೃಷ್ಟಾಂತದಿಂದ ಸ್ಪಷ್ಟಪಡಿಸಬಹುದು. "ಕವಿ ಆ ಮೇಘ ವಿರಚಿತ ಯಕ್ಷಲೋಕದಲ್ಲಿ ಒಬ್ಬರೇ ತಿರುಗಾಡಿದರು. ಒಬ್ಬರೇ ಆ ಹೊನ್ನಿನ ಹೊಳಲಿನಲ್ಲಿ ಮನಬಂದಂತೆ ಸುತ್ತಿದರು. ಪಶ್ಚಿಮದ ಬಣ್ಣ ಬದಲಾಯಿಸಿತು. ಚಿತ್ರವು ಬದಲಾಯಿಸಿತು. ಆಗ ಸಾಯಂಕಾಲವು ಧ್ಯಾನಮಗ್ನಳಾದ ಮಹಾತಪಸ್ವಿನಿಯಂತೆ ತೋರಿತು. ಒಯ್ಯೊಯ್ಯನೆ ಇರುಳು ಇಳಿಯತೊಡಗಿತು. 'ಇರುಳು ಹಗಲನ್ನು ಚುಂಬಿಸುವ ಸಮಯದಲ್ಲಿ ನೀನೆನ್ನ ಚುಂಬಿಸಿದೆ. ನಿನ್ನನುರಾಗ ನನ್ನೆದೆಯನ್ನು ತುಂಬಿ ತುಳುಕಿಸಿತು' ಎಂದು ಪರಬ್ರಹ್ಮಸಂಸರ್ಗದ ರಸಾನುಭವವನ್ನು ಕುರಿತು ಹೇಳಿದ್ದಾರೆ" ಎಂದು ಭಾವಕ್ಕೆ, ಅರ್ಥಕ್ಕೆ ಅನುಸಾರವಾಗಿ ವಾಕ್ಯವನ್ನು ಹೆಣೆಯುತ್ತಾ ಹೋಗಿದ್ದಾರೆ. ಮೇಲಿನ ಉದ್ಧರಣ ಚಿಹ್ನೆಯೊಳಗೆ ಹಾಕಿದ ಕವಿಯ ಮಾತು ಆ ಸನ್ನಿವೇಶಕ್ಕೆ ಉಚಿತವಾಗಿ ಬಂದಿದೆ. ಬೇರೆ ಮಾತಿನಲ್ಲಿ ವಿಮರ್ಶಕ ಹೇಳಿದರೆ ಅಷ್ಟು ಸ್ವಾರಸ್ಯವಾಗಲಾರದು ಎಂದೇ ಕವಿಯ ಪದ್ಯದ ಸರಣಿಯನ್ನು ಉದ್ಧರಿಸಿದ್ದಾರೆ.

೫

ಜೀವನದಲ್ಲಿ ಆನಂದ ಬಂದಾಗ ಆನಂದಪಟ್ಟು ಆ ಆನಂದವನ್ನು ಕಳೆಕೊಳ್ಳುವುದು; ದುಃಖಬಂದಾಗ ದುಃಖಿಸಿ ತಮ್ಮ ಮನೋಭಾರವನ್ನು ಕಳೆಕೊಳ್ಳುವುದು ಸಾಮಾನ್ಯರ ಲಕ್ಷಣವಾಗಿದೆ. ಕವಿ ಆನಂದವನ್ನಾಗಲಿ ದುಃಖವನ್ನಾಗಲಿ ಹಾಗೆ ಬಿಡದೆ ಅದನ್ನು ಕವಿತಾರೂಪದಲ್ಲಿ ತನ್ನ ಮನೋಭಾರವನ್ನು ಅಥವಾ ಮನಸ್ಸಿನಲ್ಲಿ ಹದವಾಗಿಟ್ಟಿದ್ದನ್ನು ಹೊರಗೆ ಪದವಾಗಿ ರೂಪಿಸುತ್ತಾನೆ. ಅಮೂರ್ತತೆಗೆ ಮೂರ್ತತೆಯನ್ನು ಕಲೆಯ ಮೂಲಕ ಕೊಡುತ್ತಾನೆ. ಎಷ್ಟೆಷ್ಟೋ ಸಿಹಿಕಹಿಯನ್ನು ತಮ್ಮ ಜೀವನದಲ್ಲಿ ಅನುಭವಿಸಿದವರು ವಿ. ಸೀ. ಅವರು. ಆ ಸಿಹಿಕಹಿಯನ್ನು ಕಲೆಯ ಮೂಲಕ ಸ್ಥಿರವಾಗಿ ಇರಿಸಿದ್ದಾರೆ. ಭಟ್ಟರೂ ವಿ. ಸೀ. ಅವರಂತೆ ಜೀವನವನ್ನು ಅನುಭವಿಸಿದ್ದರಿಂದ ಅವರ ಮನೋಧರ್ಮವನ್ನು ಗ್ರಹಿಸುವುದು ಬಹಳ ಸುಲಭವಾಯಿತು. ಇತರರಿಗೆ ಗ್ರಹಿಸಲು ಅಸಾಧ್ಯವೆಂದಲ್ಲ. ಭಟ್ಟರಷ್ಟು ತನ್ಮಯತೆಯಿಂದ ಭಾವಿಸುವುದು ಕಷ್ಟ. ಭಟ್ಟರಂತಹ ನೊಂದ ಜೀವಕ್ಕೆ ಆಶಾಕಿರಣವನ್ನು ಬೀರುತ್ತದೆ ವಿ. ಸೀ. ಅವರ ಕವಿತೆಗಳು. "ಕೊಳೆ ಹೋಗಿ ಕಸ ಹೋಗಿ ಹೊಸ ನೀರು ಬರುವುದು; ತರುವುದು ತಂಪನು ನೆಲಕೆ" ಎಂದು ಭಾವಿಸಿಕೊಂಡ ಭಟ್ಟರ ಹೃದಯ ವಿ. ಸೀ. ಅವರ ಸುಖದುಃಖಗಳನ್ನು ಅನುಭವಿಸಿ ಶುಚಿಯೆಡೆಗೆ ಸಾಗಿದ ಹೃದಯವನ್ನು ಅರಿಯದೆ ಇರುವುದೆ? ಅದನ್ನು ಅರಿತು ನಮಗೆ ಹೃದ್ಯವಾಗಿ ನಿರೂಪಿಸಿದ್ದಾರೆ.

ಭಟ್ಟರು ವಿ. ಸೀ. ಅವರ ಶುಚಿ ಜೀವನವನ್ನು ಅವರ ಕವಿತೆಯಲ್ಲಿ ಕಂಡು, ಆ ಕವಿತೆಗಳನ್ನು ಪರತತ್ತ್ವ ಚಿಂತನ, ಆತ್ಮಸಾಂತ್ವನ, ಪ್ರೇಮಾರಾಧನ, ರಾಷ್ಟ್ರಾಭಿಮಾನ ಎಂದು ನಾಲ್ಕು ವಿಭಾಗವಾಗಿ ವಿಂಗಡಿಸಿದ್ದಾರೆ. ವಿ. ಸೀ. ಅವರ ಕವಿತಾಕುಸುಮಗಳ ಸೌರಭ ಸುಕುಮಾರ್ಯ, ಸೌಂದರ್ಯ, ಲಾಲಿತ್ಯಗಳನ್ನು ನೋಡಿ ಬೆರಗಾಗುತ್ತಾರೆ. "ಒಟ್ಟಿನಲ್ಲಿ ನನ್ನ ಅನುಭವಕ್ಕೆ ಬಂದ ಸಂಗತಿಯನ್ನು ಹೇಳುವ

# ೨೨. "ಚಂದ್ರವೀಥಿ"ಯಲ್ಲಿ ಶ್ರೀ ಪರಮೇಶ್ವರ ಭಟ್ಟರು

**ಎನ್. ಜಿ. ಪಟವರ್ಧನ್**

ಹಳಗನ್ನಡದ ಹಿಂಗರಿಗರಾಗಿ, ಕನ್ನಡದ ಕಹಳೆಯನ್ನೂದಲು ಪ್ರಾರಂಭಿಸಿ, ಕನ್ನಡದ ಕಾಳಿದಾಸರಾಗಿ, ಸರ್ವಜ್ಞರಾಗಿ, ರತ್ನಾಕರವರ್ಣಿಯಾಗಿ, ಬಸವಣ್ಣಾದಿಗಳಾಗಿ, ಸಮರ್ಥ ಅಧ್ಯಾಪಕರಾಗಿ, ಚತುರ ವಾಗ್ಮಿಗಳಾಗಿ, ಗಂಗೋತ್ರಿಯಲ್ಲಿ ರೀಡರರಾಗಿ ಕೊನೆಗೆ ಮಂಗಳಗಂಗೋತ್ರಿಗೆ ಪ್ರೊಫೆಸರರಾಗಿ, ಗಟ್ಟದಿಂದಿಳಿದು, ದಕ್ಷಿಣಕನ್ನಡ ಜಿಲ್ಲೆಯ ಸೋನೆಮಳೆಗೆ ಛತ್ರಿಹಿಡಿದು, ಸೆಕೆಗೆ ಪಂಚೆ ಉಟ್ಟು, ಜುಬ್ಬ ಹಾಕಿ, ಮೆಲ್ಲನೆ ಮೂರು ವರುಷಗಳ ಹಿಂದೆ ಪ್ರೊ. ಪರಮೇಶ್ವರ ಭಟ್ಟರು ದಕ್ಷಿಣ ಕನ್ನಡದ ನೆಲದ ಮೇಲೆ ತಮ್ಮ ದಿವ್ಯ ಪಾದಸ್ಪರ್ಶವನ್ನು ಮಾಡಿದರು. ಇವರ ಪಾದಸ್ಪರ್ಶವಾಗಿ ಸ್ವಲ್ಪ ಸಮಯದಲ್ಲೇ ಚಂದ್ರನ ಮೇಲೆ ಆರ್ಮ್‌ಸ್ಟ್ರಾಂಗನ ಪಾದಸ್ಪರ್ಶವಾಯಿತು. ಭಟ್ಟರು ಒಳ್ಳೆಯ ಗಳಿಗೆ ಮುಹೂರ್ತಗಳನ್ನು ನೋಡಿಯೇ ಇಲ್ಲಿಗೆ ಕಾಲಿಟ್ಟಿರಬೇಕು! ದಕ್ಷಿಣ ಕನ್ನಡ ಜಿಲ್ಲೆಗೆ ಬಂದುದೇ ತಡ, ಇಲ್ಲಿದ್ದ ಚಿಕ್ಕಪುಟ್ಟ ಬಾಣಗಳೆಲ್ಲಾ ಅವರ ದೊಡ್ಡ ಬತ್ತಳಿಕೆಯೊಳಗೆ ಸೇರಿದವು. ಮತ್ತೆ ಕೆಲವು ಬಾಣಗಳನ್ನು ಸಮರ್ಥ ಅಸ್ತ್ರಗಳನ್ನಾಗಿಯೂ ಅವರು ಪರಿವರ್ತಿಸಿದರು. ಇದಕ್ಕೆ ಕಾರಣ ಪರಮೇಶ್ವರ ಭಟ್ಟರ ವಿದ್ವತ್ತು, ಪಾಂಡಿತ್ಯ, ಸರಳತೆ, ವಿನಯ, ಉದಾರತೆ, ಪ್ರತಿಭೆ—ಇವಿಷ್ಟು. ಅವರ ಪರಿಚಯವು ಸರಿಯಾಗಿ ಆದವರು ಮೇಲಿನ ವಿಷಯಗಳೆಲ್ಲಾ ಅವರಲ್ಲಿ ಮೂರ್ತಿವೆತ್ತಂತಿವೆ ಎಂಬುದಾಗಿ ನಿಸ್ಸಂದೇಹವಾಗಿ ಹೇಳಿಯಾರು. ದಕ್ಷಿಣ ಕನ್ನಡದಲ್ಲಿ ನಾನೂ ಅವರ ಪ್ರಥಮ ಶಿಷ್ಯನಾದುದು ನನ್ನ ಭಾಗ್ಯವೇ ಸರಿ. ಅವರ ವಿದ್ವತ್ತಿಗೆ ಮಣಿದವರಲ್ಲಿ ನಾನೂ ಒಬ್ಬ.

ಭಟ್ಟರ ಉಸಿರು ರಸಿಕತೆ ಎಂಬುದನ್ನು ತಿಳಿಯಲು ಅವರೊಡನೆ ಸ್ವಲ್ಪ ಹೊತ್ತನ್ನು ಕಳೆದರೆ ಸಾಕು. ನಗೆಯ ಕಡಲಲ್ಲೇ ನಮ್ಮನ್ನು ತೇಲಿಸುತ್ತಾರೆ. ಅವರ ಮಾತಿನಲ್ಲೇ ಹೇಳುವುದಾದರೆ "ಕಲೆಕ್ಟರ್ ಬಂದರೂ ನಾನು ಅವರನ್ನು ನಗಿಸಬಲ್ಲೆ" ಇದು ಎಲ್ಲರಿಗೂ ತಿಳಿದ ವಿಚಾರ. ಅವರ ರಸಿಕತೆಯನ್ನು ಗಾಥಾಸಪ್ತಶತಿ, ಚಂದ್ರವೀಥಿ, ಇಂದ್ರಚಾಪ—ಮುಂತಾದ ಕೃತಿಗಳಲ್ಲಿ ಕಾಣಬಹುದು. ಒಳ್ಳೆಯ ವಸ್ತುವನ್ನು ವರ್ಣಿಸುವುದು ತುಂಬಾ ಕಷ್ಟ. ದೇವರನ್ನು ಹೊಗಳುವುದು ಎಷ್ಟು ಕಷ್ಟವೋ ಅದರಂತೆ ಭಟ್ಟರ ವಿದ್ವತ್ತು ಪಾಂಡಿತ್ಯಗಳನ್ನು ಶಬ್ದಗಳಲ್ಲಿ ಸಮರ್ಥಿಸುವುದು ತುಂಬಾ ಪ್ರಯಾಸ. ಅದನ್ನು ಅವರ ಕೃತಿಗಳನ್ನು ಓದಿಯೇ ಅರಿಯಬೇಕಷ್ಟೆ! ಚಂದ್ರವೀಥಿಯು ಅವರ ವಿಶಿಷ್ಟ ಕೃತಿ. ಇದರ ಬಗೆಗೆ ನಾನು ಮೆಚ್ಚಿದ ಅಂಶಗಳನ್ನು, ಕೆಲವನ್ನು ಮುಂದಿಡಲು ಬಯಸುತ್ತೇನೆ.

ಇಪ್ಪತ್ತನೆಯ ಶತಮಾನದಲ್ಲಿ ಸಾಂಗತ್ಯವನ್ನು ಉಚ್ಛ್ರಾಯಸ್ಥಿತಿಗೆ ತಂದ ಕೀರ್ತಿಯು ಪರಮೇಶ್ವರ ಭಟ್ಟರಿಗೆ ಸಲ್ಲುತ್ತದೆ. ರತ್ನಾಕರವರ್ಣಿಯಂತೆಯೇ ಲೀಲಾಜಾಲವಾಗಿ ಅವರ ಸಾಂಗತ್ಯಗಳು ಒಂದರ ಹಿಂದೆ ಒಂದರಂತೆ ಅಪ್ರಯಾಸವಾಗಿ ಬರುವುದನ್ನು ಈ ಕೃತಿಯಲ್ಲಿ ನೋಡಬಹುದು. ಚಂದ್ರವೀಥಿಯಲ್ಲಿ ಅವರ ಉಸಿರಾದ ರಸಿಕತನ, ಹಾಸ್ಯಗಳು ಲಾಸ್ಯವಾಡುತ್ತವೆ. ಇಲ್ಲಿಯ ಉಲ್ಲೇಖಗಳು ಗಂಡ–ಹೆಂಡತಿಗೂ, ಹೆಂಡತಿ–ಗಂಡನಿಗೂ, ನಲ್ಲ–ನಲ್ಲೆಗೂ, ನಲ್ಲೆ–ನಲ್ಲನಿಗೂ, ಪ್ರಿಯತಮ–ಪ್ರಿಯತಮೆಗೂ, ಪ್ರಿಯತಮೆ ಪ್ರಿಯತಮನಿಗೂ, ಗಂಡು–ಹೆಣ್ಣಿಗೂ, ಹೆಣ್ಣು ಗಂಡಿಗೂ–ಹೇಳಿದಂತೆ, ಅವರವರ ಸಂಸ್ಕಾರಕ್ಕೆ ತಕ್ಕಂತೆ ಅವರವರಿಗೆ ಓದಿದಾಗ ಕಾಣಬಹುದು. ಇದಕ್ಕಾಗಿಯೇ ಕವಿಯು:

'ಈ ಚಂದ್ರವೀಥಿಗೆ ರಸಿಕರೆ ವಿಬುಧರೆ
ಬನ್ನಿರಿ ಕವಿ ಸಹೃದಯರೆ
ನಲ್ಲನಲ್ಲೆಯರಿಲ್ಲಿ ವಿಹರಿಸುತಿರುವರು
ನಮ್ಮ ಸಮಕಾಲೀನರಿವರು'

ಎಂದು ಹೇಳಿದ್ದಾರೆ. ರಸಿಕತನದ ಜೊತೆಗೆ ಸಹಜವಾದ, ಸುಂದರವಾದ ಪ್ರಕೃತಿ ವರ್ಣನೆಯೂ ಅಲ್ಲಲ್ಲಿ ಕೆಲವು ಸಾಂಗತ್ಯಗಳಲ್ಲಿ ಇಣುಕುತ್ತದೆ.

'ಗಿಡಮರಗಳ ಬಣ್ಣ ಮಾಸಿ ಹೋಗಿರುವುದು
ಮತ್ತೊಮ್ಮೆ ಬಳಿಯುವೆನೆಂದು
ಕಲಸಿದ ಬಗೆ ಬಗೆ ಬಣ್ಣಗಳನು ತಂದು
ಚಿಮುಕಿಸಿದನು ಚೈತ್ರನಿಂದು.'

ಇಲ್ಲಿ ಚೈತ್ರನು ಬರುವುದರ ಮೂಲಕ ಗಿಡಗಳಿಗೆ ಬಣ್ಣ ಬಳಿದು ಸಾಂಗತ್ಯದ ಬಣ್ಣವೂ ಹೆಚ್ಚಿದೆ.

'ಮಂಜಿನ ಬಿಳಿಹನಿಯಭಿಷೇಕವಾಗಿದೆ
ಹಳದಿಯ ಹಣ್ಣೆಲೆಗಳಿಗೆ
ಮೌನವ ನೀರವದುಪದೇಶವಾಗಿದೆ
ಕಾಜಾಣ ಕೋಗಿಲೆಗಳಿಗೆ'

ಇಲ್ಲಿ ಬಿಳಿಯ ಮಂಜಿನ ಹನಿಗಳು ಬಿದ್ದಿರುವ ಹಳದಿ ಎಲೆಗಳು ಕಣ್ಣ ಮುಂದೆ ಕಂಗೊಳಿಸುತ್ತವೋ ಎನ್ನುವಂತೆ ವರ್ಣಿಸಿದ್ದಾರೆ.

'ತಿಳಿನೀರ ಸರಸಿಯು ತೆರದೊಳಂಗನೆಯರು
ಹಂಸರು ನೀವು ಗಂಡಸರು'

ಇಲ್ಲಿ ಪ್ರಕೃತಿಯ ಮೂಲಕ ಕೊಟ್ಟ ಗಂಡು ಹೆಣ್ಣುಗಳ ಉದಾಹರಣೆ ಎಷ್ಟೊಂದು ಸರಳ, ಸೌಮ್ಯ !

'ಮಳೆಗಾಲದೊಳು ಕರಿಮುಗಿಲಿನ ಮಡಿಲೊಳು
ಹೊಳೆಯುವ ಮಿಂಚಿನಪೋಲೆ
ಬೆಳಗಿಗೆ ಅರಳಿತು ಬೈಗಿಗೆ ಬಾಡಿತು
ಮುಗಿಯಿತು ಹೂವಿನ ಬಾಳು'

ಎಷ್ಟೊಂದು ಚಿಕ್ಕ, ಚೊಕ್ಕ ಉದಾಹರಣೆಯ ಮೂಲಕ ಇಲ್ಲಿ ಕವಿ ನಿತ್ಯಸತ್ಯವನ್ನು ಹೇಳಿದ್ದಾರೆ !

'ಕತ್ತಲು ಜಾರಿ ಹೊನ್ನಾಯಿತು ಮೂಡಲು
ಉಷೆ ತಂದಳಾರತಿ ರವಿಗೆ'

ಈ ಸಾಲನ್ನು ಕವಿಯು 'ಬೆಳಗಾಯಿತು' ಎಂದು ಹೇಳಲು ಸಮಾಧಾನವಿಲ್ಲದೆ ರಜನಿ ಎಂಬ ಹೆಣ್ಣಿನ ಮೂಲಕ ಮೂಡು ದಿಕ್ಕಿನಲ್ಲಿ ಆರತಿಯನ್ನು ಎತ್ತಿಸಿದ್ದಾರೆ. ಹೆಣ್ಣು ಆರತಿಗಾಗಿ ಹುಟ್ಟಿರುವುದು ತಾನೆ?

'ತುಂಗೆಯ ದಡದೆಡಬಲದೊಳು ಹಚ್ಚನೆ
ಗರಿಗೊಡೆವಿಡಿದಿದೆ ಕಂಗು
ಇದರ ಈ ತಣ್ಣನೆ ನೆಳಲೊಳು ಸುಮ್ಮನೆ
ಅರೆಚಣವಾದರು ತಂಗು.'

ತುಂಗೆಯ ದಡದ ಕಂಗಿನ ನೆರಳಲ್ಲಿ ವಿಹರಿಸುತ್ತಾ ಇದ್ದೇನೆ ಎಂಬ ಭಾವನೆ ಈ ಸಾಂಗತ್ಯವನ್ನು ಮೆಲುಕು ಹಾಕಿದಾಗ ಸಹಜವಾಗಿ ಬರುತ್ತದೆ.

'ನಂದನವರಳನು ತರುತಿದ್ದ ಚಂದ್ರನು
ಬಿದ್ದನು ಎಡವಿ ಮೋಡದೊಳು
ಸುತ್ತಲು ಬುಟ್ಟಿಯ ಹೂಗಳು ಬಿದ್ದುವು
ಎಂಬಂತೆ ತಾರೆಗಳಿಹವು.'

ಈ ರೀತಿ ಚಂದ್ರತಾರೆಗಳನ್ನು ಹೋಲಿಸಲು, ಪಳಗಿದ ಸಮರ್ಥ ಕವಿಯ ಲೇಖನಿಯೇ ಕಾರಣವಲ್ಲವೇ? ಮೇಲಿನ ಕೆಲವು ಸಾಂಗತ್ಯಗಳು ಪ್ರಕೃತಿಯನ್ನು ಕುರಿತು ಚಿತ್ರಿಸಿವೆ. ಇವು ಯೋಗ್ಯ ಉದಾಹರಣೆಯ

ಮೂಲಕ ಓದುಗರನ್ನು ಮಧ್ಯೆ ನಿಲ್ಲಿಸಿ, ಚೆನ್ನಾಗಿ ಓದಿಕೊಂಡು ಮುಂದೆ ಸಾಗುವಂತೆ ಕೃತಿಯಲ್ಲಿ ಮೈಲುಗಲ್ಲುಗಳಂತೆ ಅಲ್ಲಲ್ಲಿ ಶೋಭಿಸುತ್ತವೆ.

ಶ್ರೀ ಪರಮೇಶ್ವರ ಭಟ್ಟರ ರಸಿಕತನವನ್ನು ಈ ಕೃತಿಯಲ್ಲಿ ಬರುವ ಗಂಡು ಹೆಣ್ಣುಗಳ ಮೂಲಕ ಆಸ್ವಾದಿಸಬಹುದು. ಒಬ್ಬ ನಲ್ಲನು:

'ಕಾಫಿಗೆ ಸಕ್ಕರೆ ಹೆಚ್ಚಾಯಿತೆಂದೆನು
ಅಷ್ಟಕೆ ಇಷ್ಟೇಕೆ ಸಿಟ್ಟೆ
ನಾಲಗೆ ಸಿಹಿಯಾಯಿತಾದರು ಮನವನು
ಸುಮ್ಮನೆ ಕಹಿ ಮಾಡಿಬಿಟ್ಟೆ'

ಎನ್ನುತ್ತಾನೆ. ಗಂಡಹೆಂಡಿರ ಮನಸ್ಸು ಒಂದಾಗಿದ್ದರೆ ತಾನೆ ಜೀವನವೆಲ್ಲ ಸಿಹಿಯಾಗುವುದು? ತನು ಎರಡು, ಮನವೊಂದು ಆಗಿದ್ದರೆ ಮಾತ್ರ ಇದು ಸಾಧ್ಯ. ಗಂಡನನ್ನು ಹೆಂಡತಿಯು ಒಬ್ಬಳೇ ಮನೆಯಲ್ಲಿದ್ದು ಕಾಯುತ್ತಿರುವಾಗ ಒಂದು ತರಗೆಲೆ ಸರಕ್ಕೆಂದರೆ ಸಾಕು 'ಗಂಡನು ಬಂದನು' ಎಂಬ ಆತುರದಿಂದ ಹೊರಗೆ ಇಣುಕುತ್ತಾಳೆ.

'ಗಾಡಿಯ ಎತ್ತಿನ ಗಂಟೆಯ ಕೇಳಿಯೆ
ಬಂದಳು ಗೌರಿ ಅಂಗಳಕೆ
ಗಾಡಿಯ ಹೊಡೆಯುತಲಿದ್ದವರವರೆಯೆ
ಏನೆ ಕಳೆಬಂದಿತು ಮೊಗಕೆ.'

ಇಲ್ಲಿ ಹೆಣ್ಣಿನ ಆತುರವನ್ನು ಮಾರ್ಮಿಕವಾಗಿ ವ್ಯಕ್ತಪಡಿಸಿದ್ದಾರೆ.

'ಮಿತಭಾಷಣವೆ ಸತಿಯರಿಗೆ ಆಭರಣವು
ಲಜ್ಜೆಯೆ ಪರಮ ಭೂಷಣವು
ಸರಸ ಸಲ್ಲಾಪವೆ ಪ್ರೇಮೋಪಹಾರವು
ಶೀಲವೆ ಚೆಲುವಿನಾಗರವು.'

ಈ ಸಾಂಗತ್ಯದ ಮಾತುಗಳು ಸರ್ವಕಾಲ ವಿದಿತವಾದವುಗಳು. ಸ್ತ್ರೀಯರನ್ನು ಭಗವಂತನು ಪುರುಷರಿಗಿಂತ ರೂಪದಲ್ಲಿ ಸುಂದರವಾಗಿ ಚಿತ್ರಿಸಿದ್ದಾನೆ. ನಿದ್ದೆಯಲ್ಲಿರುವಾಗಲೂ ಸ್ತ್ರೀಯ ಮುಖದಾವರೆ ಒಬ್ಬನಿಗೆ ಈ ರೀತಿ ಕಾಣುತ್ತದೆ:

'ಸೀಲುಮಾಡಿದ ಹಾಗೆ ಕಣ್ಣು ಮುಚ್ಚಿರುವಳು
ತುಟಿಗಳು ಹೊಲಿದ ಪೋಲಿಹವು
ನಿದ್ರಿಸುವಾಗಲು ಮೆರೆವುದು ಮೊಗದೊಳು
ಮೊದಲರಳಿದ ನಗೆ ಹೂವು'

ಆಧುನಿಕ ಕಾಲದ ಸ್ತ್ರೀಯರ ವೇಷಭೂಷಣಗಳ ಬಗೆಗೆ ಕವಿಯ ಒಂದು ಮಾತು:

'ಸ್ಟ್ಯಾಂಡಿನ ಮೇಲೆಸೆದಿಳಿದಿದ್ದ ಬಟ್ಟೆಯ
ಹಾಗಿದೆ ಹೆಗಲೊಳು ಸೆರಗು
ಇನ್ನೂವೆ ಜಾರದೆ ಉಟ್ಟ ಈ ಸೀರೆಯ–
ದೆಂತಿಹುದೆಂಬುದೆ ಬೆರಗು'

ಹೆಣ್ಣಿನ ಮಾಟವಾದ ನೋಟ ಮತ್ತು ನಗುವಿನ ಕುರಿತು ಒಬ್ಬ ಗಂಡು:

'ಹೊಳೆಯುವ ಕಣ್ಣಿನ ಶಾಂತಿಯನೀಂಟುವೆ
ಹಾಗೆಯೆ ತುಸು ನೋಡು ಬಾಲೆ
ಪರಿಹಾಸದೊಲವಿನ ಸೊದೆಯನು ಹೀರುವೆ
ಹಾಗೆಯೆ ನಗುತಿರು ಲೋಲೆ'

ಎನ್ನುತ್ತಾನೆ. ಎಷ್ಟೊಂದು ಸಹಜ ಹೇಳಿಕೆ ಇದರಲ್ಲಡಕವಾಗಿದೆ!

'ಹೀಗೆಯೆ ನಿಶಿಯಿರಲೀ ಘಳಿಗೆಯು ಸುಖಿ
ಹೀಗೆಯೆ ಕಡೆವರೆಗಿರಲಿ
ಹೀಗೆಯೆ ನಗುತಿರು ನಿನ್ನಯ ನಗುಮುಖಿ
ಹೀಗೆಯೆ ನನ್ನೆದುರಿರಲಿ'

ರಾಮನು ಬೆಳಗಾದೊಡನೆ ಮರುದಿನ ಕಾಡಿಗೆ ಹೋಗುವವನಾದುದರಿಂದ 'ಬೆಳಗಾಗದೆ ಇರಲಿ' ಎಂದ ಧಶರಥನ ಮಾತು ಇಲ್ಲಿ ನೆನಪಿಗೆ ಬರುತ್ತದೆ.

'ತಿಳಿಯಿತು ನಾಳೆ ವಿನಾಯಕ ಚೌತಿಗೆ
ಬರುವರು ತನ್ನವರೆಂದು
ಒಡನೆಯೆ ಆರ್ತಿಯಿನಿನ್ನೊಮ್ಮೆ ಗೌರಿಗೆ
ಬೆಳಗಿದಳಾರತಿ ತಂದು'

ಪತಿಯ ಮೇಲೆ ಸತಿಗೆ ಎಷ್ಟೊಂದು ಭಕ್ತಿ! ಅವಳಿಗೆ ಪತಿಯೇ ಸರ್ವಸ್ವ ಎಂಬುದನ್ನು ಈ ಸಾಂಗತ್ಯದಲ್ಲಿ ಮೂಡಿಸಿದ್ದಾರೆ. ಭಾವೀ ಗಂಡನ ಬಗ್ಗೆ ಹೆಣ್ಣು ತಾಳಿದ ಮನೋಭಿಲಾಷೆಯನ್ನು ಸಹಜವಾಗಿ, ಸುಲಲಿತವಾಗಿ ಕವಿ ಈ ರೀತಿ ಹೇಳಿದ್ದಾರೆ:

'ಸುಂದರನಿರಬೇಕು ಸುದೃಢನಾಗಿರಬೇಕು,
ವಿದ್ವಾಂಸನಾಗಿರಬೇಕು
ಹಣವಂತನಿರಬೇಕು ಗುಣವಂತನಿರಬೇಕು
ಇಂತಹ ಗಂಡನು ಬೇಕು'

ಪ್ರಣಯಿಗಳ ಜೀವನ ಎಂದರೆ ಏನು ಎಂಬುದನ್ನು ಈ ಕೆಳಗಿನ ಸಾಂಗತ್ಯ ತೋರಿಸುತ್ತದೆ:

'ನಾ ಮುಂದೆ ಬಂದರೆ ನೀನು ಹಿಂಜರಿಯುವೆ
ನಾ ಸರಿದರೆ ಮುಂದೆ ಬರುವೆ
ಹಿಂದಕೆ ಮುಂದಕೆ ಸರಿಯುವೀ ಆಟವೆ
ಜೀವನವೆನ್ನುತಲಿರುವೆ'

ಇಲ್ಲೊಬ್ಬಳು ಕನಕಾಂಬರೆಯೆಂಬ ಹೆಣ್ಣಿರುವಳು:

'ಉಡಿಗೆ ಕನಕಾಂಬರ ತೊಡಿಗೆ ಕನಕಾಂಬರ
ಮುಡಿದ ಹೂವದೆ ಹೆಸರಿನದು
ಓಹೊ ಕನಕಾಂಬರೆ ನಿನ್ನನು ಕಾಂಬರೆ
ಕಣ್ಗೆ ನೀನಮರಿಯೆ ಹಾದು'

'ಬ್ರೆಡ್ಡಿನಂಗಡಿಯೊಳು ಕನ್ನಡಿಯೊಳಗಡೆ
ಬಗೆ ಬಗೆ ತಿಂಡಿಗಳಿಹವು
ಬೀದಿಯ ನಾಯಿಗಳೊಂದೆರಡೀಕಡೆ
ಮೋಟುಬಾಲವನಲುಗಿಪವು'

ಇಲ್ಲಿ ಹೆಣ್ಣು–ತಿಂದಿ; ಗಂಡು–ನಾಯಿ? ಇನಿಯನಿಂದ ಬಂದ ಪತ್ರವು ಇನಿಯಳಿಗೆ ಸವಿಜೇನು ಕುಡಿದಂತೆ. ಇಲ್ಲೊಬ್ಬಳು:

'ಇನಿಯನ ಓಲೆಯನೋದುತಲಿರುವಳು
ತುಟಿಯಾಡುವಳು ಪುಟಪುಟಕೆ
ಪರಿಹಾಸಲೀಲಕೆ ಬೆರಗಾಗುತಿರುವಳು
ನಸುನಗುವಳು ಪದಪದಕೆ'

ಮತ್ತೊಬ್ಬಳು ಪೆದ್ದನಾದ ಗಂಡನನ್ನು ನೋಡಿ ಹೀಗೆನ್ನುತ್ತಾಳೆ:

'ನಿಮ್ಮಂತೆ ಗುಳಿಗೆನ್ನೆ ನಿಮ್ಮಂತೆ ನಿಡುಮೂಗು
ತುಟಿ ಕಿವಿ ಕಣ್ಣು ನಿಮ್ಮಂತೆ
ವೊದ್ದನೆ ಮೆರೆದೀತು ಬೆಳೆದ ಮೇಲೀ ಮಗು
ಪೆದ್ದಾಗಿ ನಾಳೆ ನಿಮ್ಮಂತೆ."

ಜೀವ ಜೀವನಗಳ ಮೇಲೆ ಗಂಡು ಹೆಣ್ಣಿಗಿರುವ ಮಹತ್ವಾಕಾಂಕ್ಷೆಯನ್ನು ಪಯಣಿಸುತ್ತಿರುವಾಗ ಮನ ಪಟಲದ ಮೇಲೆಬಿದ್ದ ಚಿತ್ರವು ಎತ್ತಿ ಹಿಡಿಯುತ್ತದೆ.

'ಹಳಿಯ ಮೇಲೋಡುತಲಿದೆ ರೈಲು ಜೋರಾಗಿ
ಹಳಿಯ ತಪ್ಪುವ ಭಯ ಮಾಣು
ಆದಷ್ಟು ಬೇಗನೆ ಪಯಣವು ಸುಖವಾಗಿ
ಸಾಗಿ ರೈಲಿಳಿವುದೆ ಮಾಣು'

ಹೆಣ್ಣೆದೆಯಲ್ಲಿ ಗಂಡೆದೆಯು ಧೈರ್ಯದ ಬೀಜವನ್ನು ಬಿತ್ತಿದೆ.

'ನಿನ್ನ ತಾಯಿಯ ಕೈಯ ಅಡಿಗೆಯ ಸವಿಯುವೆ
ತಾರು ಸೇರಿದ ಮೇಲೆ ನೀನು
ಇಲ್ಲಿ ತುತ್ತೆಣಿಸುತೆ ಗಂಟಲಿಗಿಳಿಸುವೆ
ಹೋಟಲು ಕೂಳನು ನಾನು'

ಮನೆಯಲ್ಲಿ ಹೆಂಡತಿ ಇಲ್ಲದಾಗ ಮಾತ್ರ ಗಂಡನಿಗೆ ಅವಳಿಲ್ಲದಿದ್ದಲ್ಲಿ ಪಡುವ ಬೇನೆಯು ಮನವರಿಕೆಯಾಗುವುದಷ್ಟೆ? ಗಂಡನ ಓಲೆಯನ್ನೇ ನಂಬಿ ಕುಳಿತಿದ್ದ ಹೆಣ್ಣು ಈ ರೀತಿ ಚಡಪಡಿಸುತ್ತಾಳೆ:

'ವಾರವಾರಕೆ ನಾನು ನಿನಗೋಲೆ ಬರೆವೆನು
ಎಂದಾಣೆಯಿಟ್ಟು ಹೋದವರು
ಆರಿಗೆ ಓಲೆಯ ಬರೆದರೊ ಕಾಣೆನು
ಸಂದವು ವಾರಗಳಾರು'

ಕೈಹಿಡಿದವನೇ ಎರಡನ್ನು ಬಗೆದರೆ ಸಂಶಯ ಹುಟ್ಟುವುದು ಸಹಜ! ನಲ್ಲನನ್ನು ಪ್ರೀತಿಸುತ್ತಿದ್ದ ಹಳ್ಳಿಯ ಒಬ್ಬಳು ಭೀರು ಹೀಗೆನ್ನುತ್ತಾಳೆ:

'ನನ್ನಷ್ಟಕೆನ್ನನು ಸುಮ್ಮನೆ ಬಿಡು ನೀನು
ಹಳ್ಳಿಯ ಮೂಲೆಯೊಳಿರುವೆ
ನೀಹೋಗಿ ಹೋರಾಡಿ ಸಾಧಿಸು ಗೆಲುವನು
ಶಿವನಿಗೆ ಪೂಜೆ ಸಲ್ಲಿಸುವೆ'

ಗಂಡನು ಕನಸಿನಲ್ಲಿ ಗದ್ದರೆ ಅವನು ಛತ್ರಿಯಿಂದ ಬೀಸನ್ನು ಪ್ರಾರ್ಥಿಸುತ್ತಾನೆ! ಪ್ರೀತಿಯ ಎಷ್ಟೊಂದು ಆಳ! ಪ್ರೀತಿಯ ಮಡದಿಯ ರೂಪ ಚೆನ್ನಾಗಿ ಕಾಣುವುದು ಸಹಜ. ಅವಳು ಯಾವ ಬಣ್ಣದ ಸೀರೆಯನ್ನುಟ್ಟರೂ ಅದು ಪ್ರಿಯತಮನಿಗೆ ಚೆನ್ನಾಗಿ ಕಾಣುತ್ತದೆ:

'ನೀಲಿಯನುಟ್ಟರು ಚೆನ್ನಾಗಿ ಕಾಣುವೆ
ಕೆಂಪುಟ್ಟರೂ ಬಲು ಚೆಲುವೆ
ಹಳದಿಯನುಟ್ಟರು ಚೆನ್ನಾಗಿ ಕಾಣುವೆ
ಒಲಿದರೆ ಎಲ್ಲವು ಚೆಲುವೆ'

ರೂಪದ ಜೊತೆಗೆ ಅವಳು ಒಲಿದರೆ ಅವನಿಗೆ ಚೆಲುವಲ್ಲದಿದ್ದೀತೇ? ಎಷ್ಟೊಂದು ಸರಳ ಶೈಲಿಯಲ್ಲಿ ಓದುಗರನ್ನು ಈ ಸಾಂಗತ್ಯವು ಸೆಳೆದಿದೆ! ಭಾರತೀಯ ಸ್ತ್ರೀಯು ಎಷ್ಟೊಂದು ಮುಗ್ಧ. ಮುಗುದೆ. ಸರಳೆ ಎಂಬುದು ಕೆಳಗಿನ ಸಾಂಗತ್ಯದಲ್ಲಡಗಿದೆ.

'ಕಾಡಿಗೆ ಕಣ್ಣಿಗೆ ಅರಸಿನ ಕೆನ್ನೆಗೆ
ದುಂಡುಕುಂಕುಮನಡುಹಣೆಗೆ
ಹೀಗಣಿಗೊಂಡೀಕೆ ಕಂಡುಕಾಣದ ಹಾಗೆ
ಬಂದು ನಿಂದಳು ಚೆನ್ನ ಬಳಿಗೆ'

ಧನ್ಯರು ಭಾರತೀಯ ಮಹಿಳೆಯರು! ಮುಚ್ಚಿಟ್ಟ ವಿಷಯಗಳ ಬಗೆಗೆ ಆಸಕ್ತಿಗಳು ಹೆಚ್ಚು. ಇದು ಮನುಷ್ಯನ ಸಹಜವಾದ ಗುಣ. ತೆರೆಯ ಮರೆಯಲ್ಲಿದ್ದ ಮುಖೇಂದುವು ಕವಿಯ ಮನಸ್ಸಿಗೆ ಎಷ್ಟೊಂದು ಆತುರವನ್ನು ತಂದಿದೆ.

'ರೇಸಿಮೆಯೊಳಗಿರುವ ಮುಚ್ಚಿದ ರತ್ನವು
ಎಷ್ಟೆಷ್ಟು ಕಣ್ಗೆ ಕಾತರವು
ರೇಸಿಮೆ ತೆರೆಯ ಈ ಮರೆಯ ಮುಖೇಂದುವು—
ಮಷ್ಟಷ್ಟು ಮನಕೆ ಕಾತರವು'

ಇವಲ್ಲದೆ ಇನ್ನೂ ಕಾತುರವನ್ನು ಹುಟ್ಟಿಸುವ ಸಾಂಗತ್ಯಗಳು ಈ ಹೊತ್ತಗೆಯಲ್ಲಿವೆ. ಎಲ್ಲವೂ ನೋಡಲು ಸರಳವೂ ಮನಸ್ಸಿಗೆ ಹಿತವೂ ಆಗಿವೆ. ಇದು ಶ್ರೀ ಪರಮೇಶ್ವರ ಭಟ್ಟರ ಕಾವ್ಯಲಕ್ಷಣ. ಕವಿಗೆ ವಿಷಯಗಳ ಕೊರತೆ ಇರುವುದಿಲ್ಲ. ಜಿರಳೆಯಿಂದ ಜೀಮೂತದವರೆಗೂ. ತಿಪ್ಪೆಯಿಂದ ತಾರಕೆಯವರೆಗೂ ವಿಷಯಗಳಿವೆ. ಕವಿಯ ಮನಸ್ಸಿಗೆ ಈ ವಸ್ತುಗಳಲ್ಲಿ ವಿಶೇಷತೆಯು ಕಂಡರೆ ಅವು ಮಧುಮಯವಾಗುವುವು.

'ನಿನ್ನ ಈ ರೂಪವು ಹೆಜ್ಜೇನು ಕಣ್ಣಿಗೆ
ದನಿತುಂಬಿಯ ಜೇನು ಕಿವಿಗೆ
ಸರಸದ ಭಾವವು ಕೋಲ್ಜೇನು ಮನಸಿಗೆ
ಸರ್ವವು ಮಧುಮಯ ಕವಿಗೆ'

ನೋಡುವ ಕಣ್ಣು. ಕೇಳುವ ಕಿವಿ, ಅರಿಯುವ ಮನಸ್ಸುಗಳು ಶ್ವೇತವರ್ಣದಂತೆ ಶುಭ್ರವಾಗಿದ್ದರೆ ಕವಿಗೆ ಸರ್ವವೂ ಮಧುಮಯ. ವಿಷಯಕ್ಕೆ ತಕ್ಕ ಛಂದಸ್ಸು ಅಗತ್ಯ. ಅಲ್ಪವಾದ ವಿಷಯವನ್ನು ವೃತ್ತಗಳಲ್ಲೋ, ಕಂದಗಳಲ್ಲೋ ಹೇಳಿದರೆ ಆಭಾಸವಾಗಬಹುದು. ವಿಷಯಕ್ಕೆ ತಕ್ಕಂತೆ ಛಂದಸ್ಸನ್ನು ಆರಿಸುವುದರಲ್ಲಿ ಶ್ರೀ ಪರಮೇಶ್ವರಭಟ್ಟರು ಅಗ್ರಗಣ್ಯರು. ಈ ಹೊತ್ತಗೆಯಲ್ಲಿಯೂ ತಕ್ಕ ವಿಷಯಗಳಿಗೆ ಸರಿಹೋಲುವ ಚೊಕ್ಕ ಛಂದಸ್ಸಿನ ಮೂಲಕ ವಿಷಯ ನಿರೂಪಣೆ ಸೊಗಸಾದ ರೀತಿಯಲ್ಲಿ ಮಾಡಿದ್ದಾರೆ. ಅವರೇ ಹೇಳುವಂತೆ,

'ಚಿತ್ರಕೆ ತಗುವಂತೆ ಚೌಕಟ್ಟನಾರಿಸು
ಚಿತ್ರ ದೊಡ್ಡದು ಎನ್ನಬೇಡ
ವಿಷಯಕ್ಕೆ ತಕ್ಕಂತೆ ಛಂದಸ್ಸನಾರಿಸು
ವಿಷಯ ದೊಡ್ಡದು ಎನ್ನಬೇಡ'

ಅವರೇ ರಚಿಸಿದ ಫಲವತ್ತಾದ ಕಾವ್ಯದ ಮೂಲಕ ಅವರಿಗಾದ ಅನುಭವವನ್ನು ಇಲ್ಲಿ ಹೇಳಿರುತ್ತಾರೆ. ತನ್ನ ಬಾಳಿನಲ್ಲಿ ತನಗಾದ ಸಿಹಿ. ಕಹಿ ಅನುಭವಗಳನ್ನು ಕವಿಯು ಕಾವ್ಯದ ಮೂಲಕವೂ, ಚಿತ್ರಗಾರನು ಕುಂಚದ ಮೂಲಕವೂ ಜಗತ್ತಿಗೆ ತೋರಿಸಿಕೊಡುತ್ತಾರೆ. ಕವಿಯು ತನ್ನ ಅಂತರಾಳದಿಂದ ಹೊರಟ ವೇದನೆ, ಗ್ಲಾನಿಗಳನ್ನೂ, ಕಾರಂಜಿಯಂತೆ ಪುಟಿದ ಸುಖಸಂಭ್ರಮಗಳನ್ನೂ ತನ್ನ ಕೃತಿಯಲ್ಲಿ ತೋರಿಸಿಕೊಡುತ್ತಾನೆ.

'ಪಕೆತ್ತರವತ್ತು ದೀರ್ಘವು ಎಂದಳು
ಪ್ರೇ ಮೊದಲಕ್ಷರವೆಂದೆ
ಹೀಗೆ ನಾವಾಡಿದೆವಾಗಿನ ದಿನದೊಳು
ಇದು ಹತ್ತು ವರುಷದ ಹಿಂದೆ'

ಕವಿಯು ಹಿಂದೆ ಸಂತೋಷಪಟ್ಟ ವಿಷಯಗಳನ್ನಂತೂ ಹೇಳದೆ ಖಂಡಿತವಾಗಿಯೂ ತಾಳಲಾರನು. ಇಂತಹ ಉದಾಹರಣೆಗಳು ಈ ಹೊತ್ತಗೆಯಲ್ಲಿ ಅಲ್ಲಲ್ಲಿ ಸುಳಿದು ಮಾಯವಾಗುತ್ತವೆ. ಶ್ರೀ ಪರಮೇಶ್ವರ ಭಟ್ಟರ ಬಾಳು ನಮಗೆ ಗೊತ್ತು. ಅವರ ಸ್ವಂತ ನೂರಾರು ಅನುಭವಗಳನ್ನು ಅವರ ಇಂದ್ರಚಾಪದಲ್ಲಿ ನಾವು ಕಾಣುತ್ತೇವೆ. ಅವರು ಪಟ್ಟ ಪಾಡಿನ ಮೂಲಕ ನಮಗೆ ಒಳ್ಳೆಯ ಹಾಡುಗಳು ಈಗ ಸಿಕ್ಕಿವೆ. ಸೊಗಸಾದ ಚಂದ್ರನ ತಂಪುಬೆಳಕಿನಲ್ಲಿ ವಿಹರಿಸುವ ನಲ್ಲನಲ್ಲೆಯರಿಗಾಗುವ ಆನಂದವೇ ಈ ಕೃತಿಯನ್ನೂ ಓದಿದವರಿಗೆ ಆಗಬಹುದು. ಅವರ ಮಂಗಳಗೀತೆಯೊಂದಿಗೇ ನಾನೂ ಮಂಗಳವನ್ನು ಹಾಡುತ್ತೇನೆ:

'ಮಂಗಳವಾಗಲಿ ಈ ಚಂದ್ರವೀಧಿಗೆ
ಮಂಗಳವಾಗಲಿ ಕವಿಗೆ
ಮಂಗಳವಾಗಲಿ ಈ ಪ್ರೇಮಬೋಧಿಗೆ
ಮಂಗಳವಾಗಲಿ ಬುವಿಗೆ'

# ೨೩. ಏಳೆಯ ಏಳೆಗಳಲ್ಲಿ ಸೊಗದ ಕಳೆ

ಎಂ. ತಾರಿಣೀ ದೇವಿ

ಕನ್ನಡ ಕವಿಗಳು ಸಂಪಿಗೆ, ಮಲ್ಲಿಗೆ, ಕಮಲ, ಜಾಜಿ ಮುಂತಾದ ಸುಂದರಿಯರಿಗೆ ಸಾಹಿತ್ಯದಲ್ಲಿ ಸ್ಥಾನವನ್ನು ಕೊಟ್ಟಂತೆ ಪುಟ್ಟ, ಸರಳ, ಶುಭ್ರ ಸುಂದರಿಯಾದ ತುಂಬೆಯನ್ನು ಆದರಿಸಿಲ್ಲ. ಹಾಗೆಯೇ ಷಟ್ಪದಿ, ತ್ರಿಪದಿ, ಸಾಂಗತ್ಯ ಮುಂತಾದವುಗಳು [illegible] ಪಡೆದಿಲ್ಲ. [illegible] ಏಳೆಯನ್ನು [illegible] ಮಾಡಿದರು. [illegible] ಕೊಂಡರು. ಗಾದೆ, ತ್ರಿಪದಿ, ಸಾಂಗತ್ಯ, [illegible] ಕೃತಿರಚನೆ ಮಾಡಿದ [illegible] ಛಂದಸ್ಸಿನ ಬಗ್ಗೆ ಅಪಾರ ಅಭಿಮಾನ. ಹೀಗಾಗಿ ಏಳುನೂರು ಏಳೆಗಳಲ್ಲಿಯೇ ಒಂದು ಕೃತಿಯನ್ನು ರಚಿಸಿರುವ ಕೀರ್ತಿ ಅವರಿಗೆ ಸಲ್ಲಬೇಕು. ಈ ವರೆಗೆ ಜನಪದ ಸಾಹಿತ್ಯದಲ್ಲಿ ವಿರಳವಾಗಿ ರಚನೆಗಳು ಸಿಗುವುದೇ ಹೊರತು ಮಿಕ್ಕೆಲ್ಲಿಯೂ ಯಾವ ಕವಿಗಳೂ ಇದರಲ್ಲಿ ರಚನೆ ಮಾಡಿಲ್ಲ. ಕೃತಿಕಾರರೇ ಹೇಳುವಂತೆ,

ಪ್ರಾಚೀನ ಕೃತಿಗಳನಾಚೀಚೆ ಮಗುಚಿದೆ  
ಚಾರು ಏಳೆ ಸಿಗಲಿಲ್ಲ

ಅವರೆ ಯಾರೂ ರಚಿಸಿಲ್ಲದ್ದರಿಂದ ತಾವು ಅದನ್ನು ರಚಿಸಬೇಕು ಎಂಬ [illegible] ಒಂದು [illegible] ಕೃತಿಯನ್ನು ರಚಿಸಲಿಲ್ಲ. ಅದಕ್ಕೆ ಕಾರಣ,

ಏಳೆಯಾಕಾರಕ್ಕೆ ಏಳೆಯ ನಾದಕೆ  
ಏಳೆಯ ಲಯಕೆ ಮರುಳಾದೆ

ಎನ್ನುತ್ತಾರೆ. ಅದರ ಆಕಾರ, ನಾದ, ಲಯ ಅವರನ್ನು ಸೆಳೆದಿದುವು. ಕವಿ ತಮ್ಮ ಕಾವ್ಯ ಪುಷ್ಪೋದ್ಯಾನದಲ್ಲಿ ಸುರಗಿ—ಸುರಹೊನ್ನೆಯಂತಹ ಹೆಮ್ಮರಗಳಿಗೆ ಆಶ್ರಯಕೊಟ್ಟು [illegible] ಎಲೆಮರೆಯ ಪುಷ್ಪವಾದ ಪುಟ್ಟ ತುಂಬೆಗೂ ಆಶ್ರಯ ಕೊಟ್ಟರು. ಅದರ ಪರಿಣಾಮವಾಗಿ ತುಂಬೆಯ ಗಿಡದಿಂದ ಮೂಡಿಬಂದ ಏಳುನೂರು ತುಂಬೆಗಳ 'ಹೊಸ ಬಾಸಿಗ'ವನ್ನು ಕವಿಮಾಲೆಗಾರ ರಸಿಕರ ಮುಂದಿಟ್ಟಿದ್ದಾರೆ. "ಕಟ್ಟಿಯುಮೇನೊ ಮಾಲೆಗಾಜಿನ ಹೊಸ ಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೆ?" ಎಂದು ಕವಿ ವ್ಯಥೆ ಪಡಬೇಕಾಗಿಲ್ಲ. ಸಹೃದಯರ ಮನವನ್ನು ಸೆಳೆದು ಉಲ್ಲಾಸಗೊಳಿಸುವ ಸೊಗದ ಕಳೆ ಈ ಏಳೆಯ ಏಳೆಯಲ್ಲಿದೆ ಮತ್ತು ಹಲವಾರು ದೃಷ್ಟಿಗಳಿಂದ ವಿಶಿಷ್ಟವಾದ 'ತುಂಬೆ ಹೂ' ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಪ್ರಯೋಗ.

ತುಂಬೆ ಹೂವಿನ ಸೊಗಸನ್ನು ಸವಿಯುವ ಮುಂಚೆ ಏಳೆಯ ಸ್ವರೂಪವನ್ನು ಕುರಿತು ಹೇಳುವುದು ಉಚಿತ. ಒಂದು ಸಾಲಿನ ರಚನೆಯಾದ ಗಾದೆಗಳನ್ನು ಬಿಟ್ಟರೆ ಅಚ್ಚಗನ್ನಡ ಛಂದಸ್ಸಿನಲ್ಲಿ ಏಳೆಯೇ ಅತ್ಯಂತ ಚಿಕ್ಕ ಪ್ರಕಾರ. ತ್ರಿಪದಿಯೂ ಏಳೆಯೂ ಒಂದೇ ಗೋತ್ರದವು ಮತ್ತು.

ತಿವಿದಿಯ ನಡುವಣ ಚರಣವ ತೆಗೆದರೆ  
ಸುವಿದಿತ ಏಳೆ ದೊರೆವುದು

ಏಳು ಗಣಗಳುಳ್ಳ ಎರಡು ಸಾಲಿನ ರಚನೆ ಏಳೆಯದು. ಮೊದಲ ಪಾದದಲ್ಲಿ ನಾಲ್ಕು ವಿಷ್ಣು ಗಣಗಳೂ, ಎರಡನೆಯ ಪಾದದಲ್ಲಿ ಮೂರು ಗಣಗಳೂ ಬರುವುವು. ಪ್ರತಿ ಏಳೆಯ ಆರನೇ ಗಣ ಬ್ರಹ್ಮ ಮಿಕ್ಕವು ವಿಷ್ಣು. ಕೆಲವೊಮ್ಮೆ ವಿಷ್ಣುವಿಗೆ ಬದಲಾಗಿ ರುದ್ರವೂ ಬರುವುದು. ಆದಿ ಪ್ರಾಸವೇ ಏಳೆಯ ಜೀವಾಳ. ಮತ್ತು ಎರಡು ವಿಷ್ಣುಗಣಗಳ ಬಳಿಕ ಮೊದಲನೆಯ ಚರಣದಲ್ಲಿ ಆದಿಪ್ರಾಸಕ್ಕನು

ಗುರುವಾದ ಪ್ರಾಸಾಕ್ಷರ ಒಳಪ್ರಾಸವಾಗಿ ಕಾಣಿಸಿಕೊಳ್ಳಬೇಕು. ಒಳಪ್ರಾಸ ಯತಿಯನ್ನು ತೋರಿಸಬೇಕು. ಮುಖ್ಯವಾಗಿ ಹೇಳುವ ವಿಷಯವೆಂದರೆ ಹಿಂದೆ ಅಂಶಗಣವಾಗಿದ್ದ ಕನ್ನಡ ಛಂದಸ್ಸೆಲ್ಲ ಕೊನೆಗೆ ಮಾತ್ರಾಗಣವಾಗಿಯೂ ಪರಿವರ್ತನೆಗೊಂಡವು (ಸಾಂಗತ್ಯವನ್ನು ಬಿಟ್ಟು). ಆದರೆ ಇಲ್ಲಿ 'ಹಳೆ'ಯ ಇಡೀ ಕೃತಿ ಅಂಶಗಣದಿಂದ ಕೂಡಿದೆ. ಇದು ಏಳೆಯ ಸ್ಥೂಲ ಲಕ್ಷಣ.

'ತುಂಬೆ ಹೂವು' ಮತ್ತು 'ಏಳೆ' ಇವೆರಡಕ್ಕೂ ಇರುವ ರೂಪಸಾಮ್ಯ ಮತ್ತು ಕನ್ನಡ ಸಾಹಿತ್ಯದಲ್ಲಿ ಅವುಗಳಿಗೆ ಇರುವ ಸಾಮ್ಯದಿಂದ ಈ ಕೃತಿಗೆ 'ತುಂಬೆ ಹೂವು' ಹೆಸರು ಒಪ್ಪುತ್ತದೆ. ತುಂಬೆ ಹೂವನ್ನು ಕುರಿತು ಈ ಕೃತಿಯನ್ನು ರಚಿಸಿಲ್ಲ. ಆದರೆ ಅದನ್ನು ಹಿನ್ನೆಲೆಯಾಗಿಟ್ಟುಕೊಂಡು ಕೃತಿ ರಚಿತವಾಗಿದೆ ಎಂದರೆ ತಪ್ಪಾಗಲಾರದು. ತುಂಬೆ ಹೂವಿನ ಸಾರ್ಥಕ ಜೀವನ ಇಲ್ಲಿ ಸಂಕೇತ ಮಾತ್ರ. ತುಂಬೆಯಂತೆಯೇ ಮಾನವನೂ ಕೂಡ ಜಗತ್ತಿನ ಸೃಷ್ಟಿಯಲ್ಲಿ ಅಲ್ಪ ಜೀವಿ. ತುಂಬೆ ತನ್ನ ಗುಣದಿಂದ ಶುಭ್ರ. ನಿರಾಡಂಬರ ಜೀವನದಿಂದ ಲೌಕಿಕ ಕವಿ ಸಾಹಿತಿಗಳ ಮನಸ್ಸನ್ನು ಆಕರ್ಷಿಸದಿದ್ದರೂ ಸದಾಶಿವನಿಗೆ ತುಂಬಾ ಪ್ರೀತಿಯ ಪುಷ್ಪವಾಯಿತು. ಇದಕ್ಕಿಂತ ಜೀವನಕ್ಕೆ ಇನ್ನೇನು ಬೇಕು. ಕ್ಷಣಿಕವಾದರೂ ಸಾರ್ಥಕವಾದ ಬಾಳನ್ನು ಬಾಳುವ ತುಂಬೆಯಂತೆ ಮಾನವನೂ ತನ್ನ ಬಾಳಿನ ರೂಕ್ಷತೆಯನ್ನು ಹೋಗಲಾಡಿಸಿಕೊಂಡು ಸುಂದರವಾದ ಬಾಳನ್ನು ಬಾಳಬೇಕೆಂಬುದೇ ಕವಿಯ ಸಂದೇಶ.

ಜೀವನವು ಎಷ್ಟು ವೈವಿಧ್ಯಮಯವೋ ಜೀವನವನ್ನು ಕುರಿತು ಹೇಳಿದ ಕವಿಯ ಮಾತುಗಳೂ ಅಷ್ಟೇ ವೈವಿಧ್ಯಮಯವಾಗಿವೆ. 'ಏಳೆಗಳು' ಆ ಕ್ಷಣದಲ್ಲಿ ಹೊಳೆದ ಭಾವನೆಗಳಿಗೆ ರೂಪುಕೊಟ್ಟ ಆಶುಮುಕ್ತಕಗಳು. ಇವುಗಳೆಲ್ಲವೂ ಏಕವಿಷಯ ನಿರ್ಬಂಧವಾಗಿಲ್ಲದುದರಿಂದ ಮತ್ತು ಬಿಡಿ ಬಿಡಿ ಮುಕ್ತಕಗಳಾದುದರಿಂದ ಏಳುನೂರು ತುಂಬೆಗಳೂ ಏಳುನೂರು ರೀತಿಯಲ್ಲಿ ಇವೆ. ಕವಿಯ ಅನುಭವವೈವಿಧ್ಯದಿಂದ ಈ ಸಿದ್ಧಿಯಾಗಿರಬಹುದು. ಅಷ್ಟು ಏಳೆಗಳ ಸೊಬಗನ್ನೂ ಇಲ್ಲಿ ನಿರೂಪಿಸುವುದು ಅಸಾಧ್ಯ. ಆದ್ದರಿಂದ ಕೆಲವು ಹಂತಗಳಲ್ಲಿ ಅವನ್ನು ಗುರುತಿಸಿ, ಅವುಗಳ ಹಿನ್ನೆಲೆಯಲ್ಲಿ ಕವಿ ಕಂಡ ಜೀವನ ಸೌಂದರ್ಯವೇನೆಂಬುದನ್ನು ನೋಡಬಹುದು.

ವಿಷಯ ಯಾವುದಿದ್ದರೂ ಅದು ಎಷ್ಟರ ಮಟ್ಟಿಗೆ ಕವಿಯ ಅನುಭವದಲ್ಲಿ ಸೌಂದರ್ಯದ ಆನಂದದ ರಸವಸ್ತುವಾಗಿ ಪರಿವರ್ತಿತವಾಗಿದೆ ಎನ್ನುವುದು ಮುಖ್ಯ. ತತ್ತ್ವಶಾಸ್ತ್ರದಂತೆ ಕವಿ ತನ್ನ ತತ್ತ್ವದೃಷ್ಟಿಯನ್ನು ನಿರೂಪಿಸುವುದು ಅದರ ಉದ್ದೇಶವಲ್ಲ. ಕಲೆ ಉದಾತ್ತವಾದ ನೀತಿಯನ್ನೋ ಧಾರ್ಮಿಕ ವಿಚಾರಗಳನ್ನೋ ಹೇಳಬಹುದು. ಆದರೆ ಅದನ್ನು ಸೌಂದರ್ಯದ ವಸ್ತುವನ್ನಾಗಿಸಿ ನಮ್ಮ ಹೃದಯಕ್ಕೆ ತಂದುಕೊಡುವುದು ಅದರ ಉದ್ದೇಶ. ಕವಿದೃಷ್ಟಿಯನ್ನು ಕಾವ್ಯದ ಮಟ್ಟಕ್ಕೇರಿಸಿದ ಅಂಶಗಳನ್ನು ಇಲ್ಲಿ ನಾವು ನೋಡಬಹುದು.

ಭಾವದೀಪ್ತನಾದ ಕವಿಹೃದಯ ತಾನು ಕಂಡ ಅನುಭವ ಸೌಂದರ್ಯವನ್ನು ಸಾಲಂಕೃತ ಭಾಷೆಯಿಂದ ಮೂರ್ತಗೊಳಿಸುವುದರಿಂದ ಮೂಲಭಾವನೆಯೊಂದಿಗೆ ಅವಿನಾಭಾವದಿಂದ ಮೂಡಿದ ದೃಷ್ಟಾಂತ, ಉಪಮೆ, ಪ್ರಾಸ, ಕಥಾಸೂತ್ರ ಮುಂತಾದುವು ಸ್ವೈಜವಾಗಿ ಕಾಣುತ್ತವೆ. ಇದಕ್ಕೆ ಕಾರಣ ಏಳೆಗಳ ಸ್ವರೂಪ. ಇವು ಸಂಕ್ಷಿಪ್ತವಾದುವುಗಳು. ಆದ್ದರಿಂದ ವಿವರಣೆಗಳಿಗೆ ಅವಕಾಶವಿಲ್ಲ. ಸೂತ್ರಾತ್ಮಕವಾದ ಆದರೆ ಕಾವ್ಯಾಂಶದಿಂದ ಕೂಡಿದ ಮಾತುಗಳ ಜೊತೆಗೆ ಏಳೆಗಳಲ್ಲಿ ವಿಚಾರದ ಹೊನಚಿದೆ. ಅವುಗಳಲ್ಲಿ ಕೆಲವನ್ನು ನಾವಿಲ್ಲಿ ನೋಡಬಹುದು.

ಧ್ವನಿ ಪ್ರಚುರವಾದ, ಮನಮುಟ್ಟುವಂತೆ ಹೇಳಿರುವ ಉಪಮೆಗಳನ್ನು ಮೊದಲು ನೋಡೋಣ.

ನೀಚರ ಸಂಗವು ಈಚಲ ರಸದಂತೆ
ದೋಚುವುದೊಳಗಣರಿವನು

ಇವುಗಳಿಗೆ ವ್ಯಾಖ್ಯಾನವೇ ಅನಗತ್ಯವೆನಿಸುತ್ತವೆ. ಅಷ್ಟು ಸರಳವಾದ, ಅಷ್ಟೇ ಆಳವಾದ ಭಾವನೆಯನ್ನು ಇಷ್ಟು ಪುಟ್ಟ ಮಾತಿನಲ್ಲಿ ಎಷ್ಟು ಸುಂದರವಾಗಿ ನಿರೂಪಿಸಿದ್ದಾರೆನ್ನಿಸುತ್ತದೆ. ನೀತಿಯು ಕಾವ್ಯದಲ್ಲಿ ವಿಜೃಂಭಿಸಬಾರದು. ಕಾವ್ಯಲೇಪನದ ಈ ನೀತಿವಾಕ್ಯ ಬಹು ಸುಂದರತಮವಾದುದು.

ಅರಿವಿಲ್ಲದುತ್ಸಾಹ ವಿರುಗುವ ನೊರೆಯಂತೆ
ಗರಿಕೆಯ ಬೆಂಕಿಯುರಿಯಂತೆ

ಎನ್ನುವಲ್ಲಿ ಕ್ಷಣಿಕವಾದ ಉತ್ಸಾಹದ ಚಿತ್ರವನ್ನು ಸಶಕ್ತವಾಗಿ ಕೊಟ್ಟಿವೆ. ದೃಷ್ಟಾಂತಗಳನ್ನು ಕವಿ ಹೇಗೆ ಬಳಸಿದ್ದಾರೆನ್ನುವುದಕ್ಕೆ ಒಂದೆರಡು ಉದಾಹರಣೆಗಳನ್ನು ನೋಡೋಣ.

ಮನಸಿನ ತಾಳನು ಅನುಮಾನ ಕೊರೆವುದು
ಅನುದಿನ ಕುಟ್ಟಿಹುಳುವಾಗಿ

ಮನಸ್ಸನ್ನು ತಾಳಿಗೂ, ಅನುಮಾನವನ್ನು ಕುಟ್ಟೆಹುಳುವಾಗಿ ಒಳಗೊಳಗೆ ಕೊರೆಯುವ ಚಿತ್ರವನ್ನು ಮನಸ್ಸಿಗೆ ತರುತ್ತದೆ. ಅನುಭವ ಎಲ್ಲರಿಗೂ ಸಹಜವಾದರೂ ಈ ರೀತಿಯ ಅಭಿವ್ಯಕ್ತಿ ಎಲ್ಲರಿಗೂ ಬಾರದು. ಕವಿಗೆ ಮಾತ್ರ ಸಾಧ್ಯ.

ಕರುಮವ ಸುಟ್ಟಾತ ಬರುವನೆ ಜನುಮಕೆ
ಹುರಿದರೆ ಬೀಜವೊಳೆವುದೆ?

ಹೀಗೆ ದೃಷ್ಟಾಂತಗಳನ್ನು ಬಳಸಿದ ಕವಿ ಪ್ರಾಸವನ್ನು ಇಡಿ ಏಳುನೂರು ವಳಿಗಳಲ್ಲಿ ಸಹಜವಾಗಿ ತಂದಿದ್ದಾರೆ. ಎಲ್ಲಿಯೂ ಪ್ರಾಸಕ್ಕೆ ಕಷ್ಟಪಟ್ಟಿರುವುದು ಕಾಣದು. ಭಾಷೆಯ ಮೇಲೆ ಹೇಗೆ ಅವರಿಗೆ ಹಿಡಿತವಿದೆಯೋ ಪ್ರಾಸದ ಮೇಲೆಯೂ ಅಷ್ಟೆ ಸಿದ್ಧಿಯನ್ನು ಸಾಧಿಸಿದ್ದಾರೆ.

೧. ಬಾಳಿನ ಗಿಡದ ಆ ನಾಳೆಯ ಹಣ್ಣಿಗೆ
ಪಾಳಿಯೊಳಿಂದು ಕೃಷಿಮಾಡು

೨. ಕೊಂಬು ಕೋಣನ ಹೆಮ್ಮೆ ಚೊಂಬು ಪಾರ್ವನ ಹೆಮ್ಮೆ
ಡೊಂಬರ ಹೆಮ್ಮೆ ಗಣೆಮರ.

೩. ಕುನ್ನಿಯ ಜಗಟವು ಬನ್ನ ಬಡಿಸುವಂತೆ
ನಿನ್ನನ್ನು ಖಳರು ಕೆಡಿಪರು

ಹೀಗೆ ಇಲ್ಲಿ ಪ್ರಾಸಾನುಪ್ರಾಸಗಳ ಹಾಸುಬೀಸನ್ನು ನೋಡಬಹುದು. ಮುಂದೆ ಹಲವು ವಳಿಗಳಲ್ಲಿ ಕಥಾಸೂತ್ರವನ್ನು ತರುತ್ತಾರೆ.

೧. ಅಂಕೆಯಿಲ್ಲದ ಕಪಿ ಲಂಕೆಯ ಸುಟ್ಟಿತು
ಅಂಕೆಯೊಳಿರ್ಪುದೆ ಒಳಿತು

೨. ಹುಸಿಯ ಚರ್ಮದ ಕತ್ತೆ ಬಿಸಿಯೇಟು ತಿಂದಿತು
ಪುಸಿ ದಿಟದೆದುರು ನಿಲುವುದೆ?

೩. ಕುರಿಯ ಚರ್ಮವ ಹೊದ್ದ ಮರೆಯ ತೋಳವಿದೆಂದು
ಕುರುಹು ಹಿಡಿವರು ಹಿರಿಯರು.

ಇವುಗಳಲ್ಲಿ ಮೊದಲ ಸಾಲು ಗಾದೆಯ ಮಾತುಗಳಾಗಿಯೂ ಬಳಕೆಯಲ್ಲಿವೆ. ಇಡಿ ಕಥೆಯನ್ನೇ ಇಲ್ಲಿ ದೃಷ್ಟಾಂತವಾಗಿ ಬಳಸಿಕೊಂಡು ಕಥೆಯ ಹಿನ್ನೆಲೆಯನ್ನು ತಿಳಿಯುವ ಕುತೂಹಲ ಹುಟ್ಟಿಸುತ್ತದೆ. ಜೊತೆಗೆ ನೀತಿಯ ಕೊಂಡಿಯನ್ನು ಕೊನೆಯಲ್ಲಿ ಇಟ್ಟಿದ್ದಾರೆ. ಒಟ್ಟಿನಲ್ಲಿ ವಳಿಗಳು ಒಂದಲ್ಲ ಒಂದು ರೀತಿ ಕವಿಯ ಜೀವನಾನುಭವ, ದರ್ಶನಾನುಭವಗಳನ್ನೂ ಕಾವ್ಯಮಯವಾಗಿ ನಿರೂಪಿಸುತ್ತವೆ.

'ತುಂಬಿಹೂ'ವಿನಲ್ಲಿ ಹೆಚ್ಚಿನವು ದೃಷ್ಟಾಂತಾಲಂಕಾರ ಮತ್ತು ಸ್ವಭಾವೋಕ್ತಿಯ ಜಾತಿಗೆ ಸೇರಿದವು. ಉಪಮಾಲಂಕಾರವನ್ನು ಗೌಣವಾಗಿ ಬಳಸಿದ್ದಾರೆ ಕವಿ. ಪ್ರಾಸದ ಮೋಡಿಯಂತೂ ಕೃತಿಯುದ್ದಕ್ಕೂ ಇದೆ. ಚಿನ್ನಕ್ಕೆ ಪುಟವಿಟ್ಟಂತೆ ಅಂಶಗಣದ ಓಟ ಎಲ್ಲಿಯೂ ತೊಡರದೆ ಹೆಚ್ಚಿನ ಸೊಗಸನ್ನು ತಂದಿದೆ.

ಇನ್ನೊಂದು ಅಂಶವೆಂದರೆ ಕವಿ ಬಳಸಿದ ಪ್ರಾಣಿಪಕ್ಷಿ ರೂಪಕಗಳು. ದಾರ್ಶನಿಕನಾದ ಕವಿಗೆ ಚಿಕ್ಕ ಚಿಕ್ಕ ವಸ್ತುಗಳಲ್ಲಿಯೂ ವಿಶೇಷವನ್ನು ಕಾಣುವ ಶಕ್ತಿ ಇದೆ.

೧. ಸಿಂಗವಾದರೂ ತಾನು ಭಂಗಗೊಳುವುದೈಸೆ
ಅಂಗದೆ ನೊಣವು ಕುಳಿತರೆ.

೨. ಗರಿಚಂದವಿದ್ದರೆ ಮರಿ ಚಂದವೆನಿಸುವುದು
ಸಿರಿತನ ಬಹುದು ಗರಿಯಿಂದೆ.

೩. ಎಲುಬಿಲ್ಲದಿರುವೆಯ ಬಲವನೇವೇಳ್ವುದು
ಬಲು ದೊಡ್ಡ ಕಾಳು ಹೊರುವುದು.

ಔಚಿತ್ಯಪೂರ್ಣವಾಗಿ ಬಳಸಿರುವ ಈ ಪ್ರಾಣಿ ಪಕ್ಷಿರೂಪಕಗಳು ಏಳೆಯ ಸಂಕಲನದಲ್ಲಿ ಯಥೇಚ್ಛವಾಗಿವೆ.

ಇನ್ನು ವೈವಿಧ್ಯಮಯವಾದ ಭಾವನೆಗಳಿಗೆ ಸುಂದರ ಚೌಕಟ್ಟನ್ನು ಹಾಕಿರುವ ಏಳೆಗಳನ್ನು ನೋಡಬಹುದು. ಕವಿಹೃದಯವು ಅನುಭವದ ಮಳೆಯಿಂದ ತುಂಬಿ ತುಳುಕಿ ಕಾವ್ಯವಾಗಿ ಹರಿಯುವುದೆಂಬುದನ್ನು "The poetry is the spontaneous overflow of the powerful feeling" (Wordsworth) ಕವಿವಾಣಿಯಿಂದ ಮನಗಾಣಬಹುದು. ಭಾವದೀಪ್ತವಾದ ಕವಿಯ ಹೃದಯದಿಂದ ತುಳುಕಿದ ಮುತ್ತಿನ ಹನಿ. 'ತುಂಬೆ ಹೂವು' — ಮುಕ್ತಕಗಳ ಭಾವಸಾಮ್ರಾಜ್ಯಕ್ಕೆ ಸೇರಿದುದು. ಲೋಕ ಮಿಡಿದಾಗ ಹೊರಹೊಮ್ಮಿದ ಕವಿಯ ಹೃದಯದ ಇಂಚರ ಈ ಮುಕ್ತಕ. ಒಂದೊಂದು ಏಳೆಯೂ ಪುಟ್ಟ ನೀತಿಯನ್ನೊ, ವಿಡಂಬನೆಯನ್ನೊ ಹಾಸ್ಯವನ್ನೊ ಸ್ವಾನುಭವದ ಇಲ್ಲವೆ ಪರಾನುಭವದ ಮಾತನ್ನೊ ಹೇಳುತ್ತದೆ. ಜೀವನದ ಅರೆಕೊರೆಗಳನ್ನು ನೇರಮಾಡಲು ಇವು ಆವಶ್ಯಕ. ಅಂಕಿಸಿದಲ್ಲದೆ ಝುಂಕಿಸಿದಲ್ಲದೆ ಕೊಂಕು ನೇರವಾದೀತೆ ಎನ್ನುತ್ತಾರೆ. ಅದಕ್ಕೆಂದೆ 'ನಾ ಕಂಡ ಜಗವನು ನಾ ಕಂಡ ತೆರದೊಳು ನೀ ಕಾಣದೆಂದು ಹಾಡುವೆ' ಎನ್ನುತ್ತಾರೆ. 'ಭವನಿಮಜ್ಜನ ಚಾತುರ್ಯ ಮತ್ತು ಲಘಿಮಾಕೌಶಲವಾದ (ಪು. ತಿ. ನ.) ಜಗತ್ತನ್ನು ನಿಷ್ಪಂದಭಾವದಿಂದ ನೋಡಿ ರಸಾನಂದದ ಚಿರಂತನ ಮೌಲ್ಯವನ್ನು ಇಲ್ಲಿ ಮೂರ್ತಗೊಳಿಸಿದ್ದಾರೆ.

The poetry of the earth is never dead (Keats) ಎನ್ನುವಲ್ಲಿ ನಿತ್ಯ ನವನವೋನ್ಮೇಷಶಾಲಿಯಾಗಿ ಕಾಣುವ ಸೌಂದರ್ಯಕ್ಕೆ ಸಾವಿಲ್ಲ. ಆದ್ದರಿಂದಲೇ A thing of beauty is a joy for ever ಎನ್ನುವ ಕವಿವಾಣಿಯು ಸುಂದರವಾದುದಕ್ಕೆಲ್ಲ ಅಮರತ್ವವನ್ನು ಕಲ್ಪಿಸಿದೆ. ಕವಿ ಕಾಣುವ, ಕಾವ್ಯದಲ್ಲಿ ಸೆರೆಹಿಡಿವ ಸೌಂದರ್ಯ ಅಂತಹುದು. ಕವಿಕಾವ್ಯ ಸಹೃದಯ, ಪ್ರಕೃತಿ, ಸುಖದುಃಖ, ಸರಸ, ಹಾಸ್ಯ, ನೋವು, ಬಾಳಿನಲ್ಲಿ ಶ್ರದ್ಧೆ, ಆಶಾವಾದಿತ್ವ, ಹೊಸದೃಷ್ಟಿ, ಹೀಗೆ ನೂರಾರು ವಿಚಾರಗಳನ್ನು ಕುರಿತ ಅನುಭವ ವಿಶೇಷಗಳ ಒಂದು ಪುಟ್ಟ ಪ್ರಪಂಚವನ್ನೇ 'ತುಂಬೆ ಹೂವಿ'ನಲ್ಲಿ ಕವಿ ಎಳೆಎಳೆಯಾಗಿ ಬಿಡಿಸಿದ್ದಾರೆ. ಅದರಲ್ಲೆಲ್ಲಾ ಕವಿಯ ಆಳವಾದ ಜೀವನಾನುಭವ, ಚಿಂತನೆ, ಅದನ್ನು ನಿರೂಪಿಸುವ ಶೈಲಿ, ಭಾಷೆ ಎಲ್ಲವೂ ಹೊಸರೀತಿಯವು.

ಪರಿಸರವನು ಕುರಿತರಿಯುತಲಿರುವುದೆ
ವರಕವಿ ಪಂಥವೆನಿಸಿದೆ.

ಸಮಕಾಲೀನ ಪ್ರಜ್ಞೆಯನ್ನು ಕವಿ ಮೈಗೂಡಿಸಿಕೊಂಡಿದ್ದಾರೆ. ಬರಿಯ ಕನಸುಕಾಣುತ್ತ ಕಲ್ಪನೆಯಲ್ಲಿಯೇ ತೇಲಾಡುವುದಿಲ್ಲ.

೧. ಹೊತ್ತಗೆ ಎನ್ನುವುದು ಹೊತ್ತಿನ ದೀಪವು
ಚಿತ್ತದ ತಮವ ಕಳೆವುದು

೨. ಮಾತಿಗೆ ಮರುಳಾಗದಾತನ ಬಳಿಯೊಳು
ಏತರ ಕವಿತೆಯಾಡುವೆ

೩. ಮನದ ಪಾತ್ರ ತುಂಬ ಕನಸುನೀರನು ತುಂಬಿ
ಕೊನೆಗೆ ಕಣ್ದೆರೆಯೆ ಬಾಯಾರೆ

೪. ಟೀಕೆಯ ಹಣತೆಯ ನೀ ಕೆತ್ತಿಒಡೆಯುವೆ
ಈ ಕಾವ್ಯ ಸೂರ್ಯನೆದುರೊಳು.

ಮುಂತಾದ ಮಾತುಗಳಲ್ಲಿ ಕವಿ ಕಾವ್ಯ, ಸಹೃದಯ ವಿಮರ್ಶಕರನ್ನು ಕುರಿತು ಹೇಳಿದೆ.

'ಜೀವನನಾವನು ಹೂವೊಳು ಕಾಣುವನು ಅವನೇ ಧನ್ಯ. ಹೂವಿನ ತೆರದೊಳು ಜೀವನವರಳಿಸಿ, ಒಪ್ಪುತ ಮಧುವನೆರೆಯುತ' ಎಂಬಲ್ಲಿ ಮತ್ತೊಬ್ಬರಿಗೆ ಸಿಹಿಯನ್ನು ಕೊಡುವ ಸಾರ್ಥಕ ಜೀವನವನ್ನು ಹೂವಿನಲ್ಲಿ ಕವಿ ಕಂಡಿದ್ದಾರೆ.

ಚೆಲುವಿಗೆ ಸಾವಿಲ್ಲ ನಲಿವಿಗೆ ಸೋಲಿಲ್ಲ
ಹೊಲೆ ಎಂಬುದಿಲ್ಲ ಒಲವಿಗೆ.

ಚೆಲುವು, ಆನಂದ, ಪ್ರೇಮಗಳಲ್ಲಿ ಅಮರತ್ವವನ್ನು ಕವಿ ಕಾಣುತ್ತಾರೆ. ಆದ್ದರಿಂದಲೇ ಜೀವನದ ಕಷ್ಟಗಳನ್ನು ನಗುಮುಖದಿಂದ ಎದುರಿಸಿರೆಂದು ಹೇಳುತ್ತಾರೆ. "ಸಾವುಂಟು ಅತ್ತರು ಸಾವುಂಟು ನಕ್ಕರು! ಸಾವಿರಲೆಮಗೆ ನಗುವಾಗ" ನರೆಜರೆಗಳು ಬಂದರೂ ಕರೆ ಬರುವ ತನಕ ನಗುತ್ತಿರು ಎನ್ನುತ್ತಾರೆ ಕವಿ. ಹಳತೆಲ್ಲ ಒಳ್ಳೆಯದು. ಹೊಸತೆಲ್ಲ ಕೆಟ್ಟದೆನ್ನುವ ಕುರುಡು ನಂಬಿಕೆ ಕವಿಗಿಲ್ಲ. ಹಳತನ್ನು ನೆನೆಯುತ ಹಳಬರಾಗಬಾರದು 'ಹಳತರೊಳೊಳಿತನಾಯ್ವುದು'. ಬಡವನ ಬಾಳನ್ನು ಕಂಡು ಹೇಳುವ ಮಾತನ್ನು ನೋಡಿ.

"ಗುಡುಗುಂಟು ಮಿಂಚುಂಟು ಸಿಡಿಲುಂಟು ಮಳೆಯುಂಟು
ಬಡವನ ಬಾಳು ಮಳೆಗಾಲ"

ಕಷ್ಟಗಳೇ ಗುಡುಗು ಸಿಡಿಲೆಂದು ಹೇಳಿ ಅವನ ಬಾಳು ಉದ್ದಕ್ಕೂ ಮಳೆಗಾಲವೆನ್ನುವಲ್ಲಿ ಕವಿಯ ಅನುಕಂಪೆಯನ್ನು ಕಾಣಬಹುದು. ಕಷ್ಟ, ನೋವು, ಯಾರಿಗೂ ತಪ್ಪದು. 'ಬಗೆಯ ಕವಿಯುವ ದುಗುಡವನೋಡಿಸಿ ನಗುವೆನು ನಾನು ನಿತ್ಯವು. ನನ್ನಷ್ಟು ಉಪ್ಪನು ತಿನ್ನದೆ ನೀನೇನು ನನ್ನಂತೆ ಕವನ ಕಟ್ಟುವೆ' ಎಂಬಲ್ಲಿ ಸ್ವಾನುಭವದ ಮಾತುಗಳನ್ನು ಪ್ರಾಮಾಣಿಕವಾಗಿ ಹೇಳುವುದನ್ನು ಕಾಣಬಹುದು.

ಅರಿವೆಂಬ ಕುದುರೆಗೆ ಹುರುಳಿ ತನ್ನನುಭವ
ಹೆರರುಪದೇಶ ಕಡಿವಾಣ

ಅನುಭವ ಅರಿವು ಮತ್ತು ಗುರುಹಿರಿಯರ ಉಪದೇಶದ ಬೆಲೆಯನ್ನು ಇಲ್ಲಿ ಹೇಳಿದ್ದಾರೆ.

ಹುಳುತಿಂದ ಹಕ್ಕಿಯ ಗಳದೊಳು ದೇವನು
ಕೊಳಲಂಥ ದನಿಯನಿಟ್ಟನು

ಎಂದು ದೇವರ ಕಾರ್ಯಕ್ಕೆ ಅಚ್ಚರಿಪಡುತ್ತಾರೆ. ನೀತಿಯನ್ನು ಕುರಿತು

೧. ಮಾತೊಂದು ಬರಿಸೊನ್ನೆ ಏತರ ಬೆಲೆ ಹಿಂದೆ
ನೀತಿಯ ಅಂಕೆ ಇರದಿರೆ
೨. ಕೌಪೀನವಿಲ್ಲದೆ ಕಾಪುರುಷ ತಾನು
ಕ್ಯಾಪಿಲ್ಲದ ಪೆನ್ನಂತೆ

ನೀತಿಗೆ ಜೀವನದಲ್ಲಿ ಹೆಚ್ಚಿನ ಸ್ಥಾನ. ಅದೇ ಜೀವನ ರಕ್ಷೆ. ಜೀವನವೆಂಬುದು 'ಲಂಗರೊಂದಿಲ್ಲದ ಜಂಗಮಹಡಗಿದು, ತಂಗುವುದೆಂತು ಕಡಲೊಳು', 'ಬರಹದ ಮಸಿಹಸಿಯಿರುವಷ್ಟೆ ಕಾಲವು ಧರಣಿಯೊಳೆಮ್ಮ ಬಕ್ಕಲು' ಎನ್ನುವಲ್ಲಿ ಜೀವನದ ಕ್ಷಣಿಕತೆಯನ್ನು ಹೇಳಿದೆ.

ಹಾಸ್ಯದ ನುಡಿಗೆ ಒಂದೆರಡನ್ನು ನೋಡಬಹುದು.

'ಕಾನೂನು ಕತ್ತೆಯ ನೀನೇಕೆ ಕೆಣಕುವೆ
ಮಾನವ ತೂರಿಕೊಳ್ಳುವೆ'
'ಒಲ್ಲೆನೆಂದರು ಬಂದು ಹೊಲ್ಲ ಕೈಕುಲುಕಲು
ಮೆಲ್ಲನೆ ಎಣಿಸು ಬೆರಳನು'

ಇಲ್ಲಿ ತಿಮ್ಮಯ್ಯನ ಹಾಸ್ಯ ತುಳುಕಾಡುತ್ತಿದೆ. 'ನಲ್ಲಿನಲ್ಲಿಯುರಿಹರಿಲ್ಲೊಬ್ಬರಲ್ಲೊಬ್ಬರೆಲ್ಲರು ಗಂಡ ಹೆಂಡರು' ಎಂಬಲ್ಲಿ ಅವನು ಜೀವನದಲ್ಲಿ ಕಂಡ ಸತ್ಯವನ್ನು ನಾವು ಕಾಣಬಹುದು. ಕವಿ ದಾರ್ಶನಿಕನಾಗಿ, ಸಂಸಾರಿಯಾಗಿ, ಗುರುವಾಗಿ, ಅಧಿಕಾರಹೊಂದಿ ಸಾವಿರಾರು ಜನರ ನಡುವೆ ಓಡಾಡಿ ಅನುಭವ ಶ್ರೀಮಂತಿಕೆಯ ದೊಡ್ಡಬಂಡವಾಳವನ್ನೇ ಇಟ್ಟುಕೊಂಡಿದ್ದಾರೆ. ಆದರೂ ವಿನಯವಾಗಿ ಹೇಳಿಕೊಳ್ಳುತ್ತಾರೆ 'ಆಕಾಶ ಗುರುವಾಗಿ ಸಾಕಷ್ಟು ಕಲಿಸಿತು' ಎಂದು.

ಹೇಳುತ್ತಾ ಹೋದಂತೆ ಕೃತಿಯಲ್ಲಿ ಇನ್ನೂ ನೂರಾರು ಪಳಿಗಳನ್ನು ಉದಾಹರಿಸಬೇಕಾದಿತು. ಇಲ್ಲಿ ಹೇಳಿದುದಕ್ಕಿಂತ ಹೇಳದೆ ಬಿಟ್ಟದ್ದು 'ತುಂಬೆಹೂವಿನ'ಲ್ಲಿ ಉಳಿದುಹೋಗಿದೆ ಎನ್ನಬಹುದು. ಇಲ್ಲಿ ಕೃತಿಯ ಬಗ್ಗೆ ಕೇವಲ ಒಂದು ಇಣುಕುನೋಟ ಮಾತ್ರ ನನ್ನದು.

ಕವಿ ಬಳಸಿದ ಭಾಷೆಯ ಬಗ್ಗೆ ಕೆಲವು ವಿಚಾರಗಳನ್ನು ಇಲ್ಲಿ ಹೇಳಲೇಬೇಕಾಗುತ್ತದೆ. ತಮ್ಮ ಭಾವಕ್ಕೆ ತಕ್ಕ ಭಾಷೆಯನ್ನು ಸುರಮ್ಯವಾಗಿ ಬಳಸಿ ಸೊಗಸನ್ನು ತಂದಿದ್ದಾರೆ. ಭಾಷೆಗೆ ಪ್ರಾಸಕ್ಕೆ ಎಲ್ಲೂ ಕವಿ ಕಷ್ಟಪಟ್ಟಿಲ್ಲ. ಭಾಷೆ ಸರಳವೆಂದು ಕಂಡರೂ ಅದನ್ನು ನಿರೂಪಿಸಿದ ಶೈಲಿ ತುಂಬಾ ಸೊಗಸಾದುದು. ವಸ್ತು ಮತ್ತು ಶೈಲಿ ಎರಡರ ಸುಂದರ ಜೋಡಣೆಯನ್ನು ಪಳಿಯ ಎಳಿಗಳಲ್ಲಿ ಕಾಣಬಹುದಾಗಿದೆ. "ಶೀಲದ ಹಾಗೆಯೆ ಶೈಲಿಯೆಂದೆಂಬರು. ಶೈಲಿಯೆ ಮನುಜನೆಂಬರು" ಎನ್ನುವ ಮಾತು ಇಲ್ಲಿ ಅವರಿಗೆ ಅವರ ಕೃತಿಗೆ ಅನ್ವಯಿಸುತ್ತದೆ.

ಕೃತಿಯನ್ನು ಓದಿ ಸವಿದ ಮೇಲೆ ಒಂದು ಅಂಶ ಮನಸ್ಸಿಗೆ ಬಾರದಿರದು. ಕೃತಿಯಲ್ಲಿ ಏಕತಾನತೆ ಬಂದರೂ ಅದು ಅನಿವಾರ್ಯವೆನಿಸುತ್ತದೆ. ಅಷ್ಟು ಪುಟ್ಟ ಪಳಿಯಲ್ಲಿ ವೈವಿಧ್ಯವನ್ನು ತರಲು ಸಾಧ್ಯವಿಲ್ಲ. ಆದರೆ ಭಾವ, ವೈವಿಧ್ಯ, ವಸ್ತು ಮತ್ತು ಶೈಲಿಯ ಸುಂದರ ಜೋಡಣೆ ಮತ್ತು ಲಯದ ಓಟ ಇವು ಆ ಕೊರತೆಯನ್ನು ನೀಗಿಸುತ್ತಿವೆ ಎನ್ನಬಹುದು.

ಅಪವಾದವೆಂಬಂತೆ ಕೆಲವು ಪಳಿಗಳಲ್ಲಿ ಸೊಗಸು ಕಾಣದಿರಬಹುದು ಇಲ್ಲವೇ ಸ್ವಲ್ಪ ಬದಲಾವಣೆ ಯೊಡನೆ ಕೆಲವು ಪಳಿಗಳು ಪುನರಾವರ್ತನೆಯಾಗಿವೆ ಎನಿಸಿದರೂ ಏಳುನೂರು ತುಂಬೆಯ ಹೊಸ ಬಾಸಿಗದ ನಡುವೆ ಅವು ಮರೆಯಾಗಿ ಕೃತಿಯ ಮೌಲ್ಯಕ್ಕೆ ಕುಂದನ್ನು ತರವು. ಹಲವಾರು ದೃಷ್ಟಿಗಳಿಂದ ವಿಶಿಷ್ಟವಾದ ಈ 'ತುಂಬೆ ಹೂವು' ಹಲಕಾಲ ಉಳಿಯುವುದು; ಸವಿದಷ್ಟೂ ಸೊಗಸು ಹಬ್ಬುವುದು.

ಒಟ್ಟಿನಲ್ಲಿ ಏಳಿಯ ಇತಿಹಾಸದಲ್ಲಿ ತುಂಬೆ ಹೂವು ಒಂದು ಮೈಲುಗಲ್ಲು.

# ೨೪. ಸುರಗಿ ಸುರಹೊನ್ನೆ

ಎಂ. ಸಿ. ವಸಂತ ಕುಮಾರ್

ಕನ್ನಡ ಕಾವ್ಯಪ್ರಕಾರಗಳಲ್ಲಿ 'ತ್ರಿಪದಿ'ಗೆ ಹಿರಿದಾದ ಸ್ಥಾನ ಉಂಟು. ಇದು ತುಂಬಾ ಪುರಾತನ ಕಾಲದಿಂದಲೂ ನಡೆದು ಬಂದಿರುವ ಒಂದು ಛಂದೋಪ್ರಕಾರ. ಕನ್ನಡದಲ್ಲಿನ ಕಾವ್ಯಗಳು ದೊರೆಯುವ ಮೊದಲೇ ಶಾಸನಗಳಲ್ಲಿ ಅಂದರೆ ಏಳನೇ ಶತಮಾನದ ಬಾದಾಮಿ ಶಾಸನದಲ್ಲಿಯೂ. ಅನಂತರವೂ ಇದರ ಪ್ರಯೋಗಗಳು ಕಂಡುಬರುತ್ತವೆ. ಪಂಪಾದಿ ಮಹಾಕವಿಗಳೂ ಇದನ್ನು ಅಲ್ಲಿಷ್ಟು ಇಲ್ಲಿಷ್ಟು ಬಳಸಿರುವುದುಂಟು. ಕೆಲವರು ತ್ರಿಪದಿಯಲ್ಲಿಯೇ ಸಮಗ್ರಕೃತಿರಚನೆ ಮಾಡಿರುವುದುಂಟು. 'ಚಂದನೆಯ ಕಥೆ' ಅಕ್ಕಮಹಾದೇವಿಯ 'ಯೋಗಾಂಗ ತ್ರಿವಿಧಿ' ಕೃತಿಗಳನ್ನಿಲ್ಲಿ ನಿದರ್ಶನಕ್ಕಾಗಿ ನೆನೆಯಬಹುದಾಗಿದೆ. ಸರ್ವಜ್ಞನಾದರೋ ತ್ರಿಪದಿ ಛಂದಸ್ಸನ್ನೇ ಮಾಧ್ಯಮವಾಗಿಟ್ಟುಕೊಂಡು ಕನ್ನಡ ಸಾಹಿತ್ಯದಲ್ಲಿ ಅದ್ಭುತವಾದ ಚಳಿ ಚಳಿದ: ಮಾತ್ರವಲ್ಲದೆ ತ್ರಿಪದಿ ಕಾವ್ಯ ಪ್ರಪಂಚದ ಸಾರ್ವಭೌಮನೂ ಆದ.

ಜನಭಾವದ ನುಡಿಮುತ್ತಾದ ಈ ತ್ರಿಪದಿಕನ್ಯೆ ತನ್ನೆಲ್ಲ ಹಾವಭಾವ, ಗತಿ ಗಮಕ, ಬಿಗುವು ಬನ್ನಾಣಗಳನ್ನು ಬಿಂಬಿಸಿದ್ದು ಜನಪದ ಸಾಹಿತ್ಯದಲ್ಲಿ. ಆಕೆ ಇಲ್ಲಿ ಸಂಪೂರ್ಣ ಲಾವಣ್ಯವತಿ. ಅಜ್ಞಾತ ಅಮರಕವಿಗಳ ಸ್ಫೂರ್ತಿಯ ಸೆಲೆಯಲ್ಲಿ ಚಿಮ್ಮಿ ಬಂದ ಆಕೆ ಕಾಲದಿಂದ ಕಾಲಕ್ಕೆ ಬಾಯಿಂದ ಬಾಯಿಗೆ ಹರಿದು ಈ ಶತಮಾನದಲ್ಲಿ ಸಮೃದ್ಧಿಯಾಗಿ ಮೈದೋರಿದ್ದಾಳೆ. ಆಕೆ ಎಷ್ಟೆಷ್ಟು ಪುರಾತನೆಯೋ ಅಷ್ಟಷ್ಟು ವಿನೂತನೆ, ಆದ್ದರಿಂದಲೇ ಆಕೆಯ ಮೇಲೆ ಸಮಕಾಲೀನ ಕವಿಗಳ ಕಣ್ಣು ಬಿದ್ದುದು. ಪುಟ್ಟ ಭಾವನೆಗಳ ಅಚ್ಚುಕಟ್ಟಾದ ಅಭಿವ್ಯಕ್ತಿಗೆ ಈ 'ಪುಟ್ಟ ದೊರೆಸಾನಿ' ಎತ್ತಿದ ಕೈ. ಅನುಭವವನ್ನು ಸಂಕ್ಷೇಪಿಸಿ, ಸಾಂದ್ರವಾಗಿ ಪ್ರತಿಪಾದಿಸುವುದಕ್ಕೆ ಇದು ಹೇಳಿ ಮಾಡಿಸಿದ ಮಾಧ್ಯಮ.

ಸಮಕಾಲೀನ ಕವಿಗಳಲ್ಲಿ ತ್ರಿಪದಿಯಲ್ಲಿ ಕಾವ್ಯರಚನೆ ಮಾಡಿದ ಕೀರ್ತಿ ಜಯದೇವಿ ತಾಯಿ ಲಿಗಾಡೆ ಮತ್ತು ಎಸ್. ವಿ. ಪರಮೇಶ್ವರ ಭಟ್ಟರಿಗೆ ಸೇರಬೇಕು. ಜಯದೇವಿ ತಾಯಿ ಲಿಗಾಡೆ ಅವರ 'ತಾಯಿಯ ಪದಗಳು' ಮತ್ತು 'ಶ್ರೀ ಸಿದ್ಧರಾಮೇಶ್ವರ ಪುರಾಣ' ಕೃತಿಗಳು ಸಂಪೂರ್ಣವಾಗಿ ತ್ರಿಪದಿಯಲ್ಲಿ ರಚಿತವಾದವುಗಳು. ಜ. ದೇ. ತಾ. ಲಿಗಾಡೆ ಅವರದು ತ್ರಿಪದಿ ಸಾಹಿತ್ಯದಲ್ಲಿ ನಿಜಕ್ಕೂ ಒಂದು ಮಹತ್ತರ ಸಾಧನೆ ಎಂದು ಹೇಳಬೇಕು. ಡಾ. ಹಾ. ಮಾ. ನಾಯಕ ಅವರು ತಮ್ಮ 'ಸಮೀಕ್ಷೆ'ಯಲ್ಲಿ "ತಾಯಿಯ ಪದಗಳು" ಕೃತಿಯನ್ನು ಕುರಿತು 'ಜೀವನ ದರ್ಶನವನ್ನು ಕುರಿತು ಅನುಭಾವಪರವಾದ ಸಾವಿರ ಪದಗಳು ಈ ಗ್ರಂಥದಲ್ಲಿವೆ. ಸರಳವೂ ಸುಂದರವೂ ಆದ ಈ ಪದಗಳನ್ನು ಎಷ್ಟೋ ಸಂದರ್ಭಗಳಲ್ಲಿ ಜನಪದ ಕಾವ್ಯವೆಂದೇ ಮೋಸಹೋಗಬಹುದಾಗಿದೆ.... ಈ ಪದಗಳಲ್ಲಿ ಕಂಡುಬರುವ ಆರ್ತತೆ, ಆರ್ದ್ರತೆಗಳು ಜಯದೇವಿ ತಾಯಿಯವರ ಕಾವ್ಯದ ಜೀವಗುಣ'[೧] ಎಂದಿರುವ ಮಾತು ಸಮಂಜಸವಾಗಿದೆ. ಜ. ದೇ. ತಾಯಿಯವರ ಮತ್ತೊಂದು ಬೃಹತ್ ಕೃತಿ ನಾಲ್ಕು ಸಾವಿರದ ನೂರು ತ್ರಿಪದಿಗಳಿಂದ ಕೂಡಿದ 'ಶ್ರೀ ಸಿದ್ಧರಾಮೇಶ್ವರ ಪುರಾಣ.' ಕಥನಗುಣಗಳಿಂದ ಕೂಡಿದ ಬೃಹತ್ ಕಾವ್ಯಕ್ಕೆ ತ್ರಿಪದಿ ಛಂದಸ್ಸು ಸೂಕ್ತ ಮಾಧ್ಯಮವಲ್ಲದ ಕಾರಣ ಶ್ರೀ ಸಿದ್ಧರಾಮೇಶ್ವರ ಪುರಾಣವು ತನ್ನದೇ ಆದ ಇತಿಮಿತಿಗಳೊಂದಿಗೆ ಒಂದು ಉತ್ತಮ ವಿಶಿಷ್ಟ ಕೃತಿ ಎಂದು ಹೇಳಬಹುದು. ಪರಮೇಶ್ವರ ಭಟ್ಟರ 'ಸುರಗಿ ಸುರಹೊನ್ನೆ' ತ್ರಿಪದಿ ಕಾವ್ಯದಲ್ಲಿ ಇಂದಿನ ಮತ್ತೊಂದು ದೊಡ್ಡ ಸಾಧನೆ.

ಪ್ರೊಫೆಸರ್ ಎಸ್. ವಿ. ಪರಮೇಶ್ವರ ಭಟ್ಟರದು ಬಹುಮುಖಿ ಪ್ರತಿಭೆಯ ಸಾಹಿತ್ಯ. ಒಂದು ಸಾಲಿನ ಗಾದೆ, ಎರಡು ಸಾಲಿನ ಏಳೆ, ಮೂರರ ತ್ರಿಪದಿ, ನಾಲ್ಕರ ಸಾಂಗತ್ಯ, ವಚನ, ವಿಮರ್ಶೆ, ಅನುವಾದ. ಬಿಡಿ ಬರಹಗಳು ಹೀಗೆ ಬದುಕಿನ ಸಮೃದ್ಧಾನುಭವಕ್ಕೆ ಅಭಿವ್ಯಕ್ತಿಯ ವಿವಿಧ ಮಾಧ್ಯಮವನ್ನು ಅರಸಿಕೊಂಡು ವೈವಿಧ್ಯವನ್ನು ತರುವುದರ ಜೊತೆಗೆ ವೈಶಿಷ್ಟ್ಯವನ್ನೂ ಮೆರೆದ ಯಶಸ್ಸು ಇವರದು. ಇವರ ಅನುಭವ ಸಮೃದ್ಧವಾದಂತೆ ಸಾಹಿತ್ಯವೂ ಸಮೃದ್ಧವಾಯಿತು. ಸಂಪನ್ನವಾಯಿತು. ಒಬ್ಬನೇ ವ್ಯಕ್ತಿ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಮಾಡಿದ ಸಾಧನೆ. ಕೊಟ್ಟ ಫಲ ಅದ್ಭುತವೇ ಸರಿ.

'ಸುರಗಿ ಸುರಹೊನ್ನೆ' ತ್ರಿಪದಿಕಾವ್ಯ. ಹಳೆಯ ಛಂದಸ್ಸಿನ ಬಗ್ಗೆ ಹುಳಿಭಾವನೆಯನ್ನು ತಾಳುವ ಈ ಕಾಲದಲ್ಲಿ ಹಳೆಯುದರಲ್ಲೆ "ಕಳೆ" ಕಟ್ಟುವ "ಕಲೆ" ಪರಮೇಶ್ವರ ಭಟ್ಟರದು. "ಸುರಗಿ ಸುರಹೊನ್ನೆಯ ಕಥಾನಾಯಕ ಒಬ್ಬ ಗೃಹಸ್ಥ. ಈ ಗೃಹಸ್ಥ ತನ್ನ ಗೃಹಿಣಿಗೆ ಹೇಳಿದ ಮಾತುಗಳು ಈ ತ್ರಿಪದಿಗಳು. ತನ್ನ ಗೃಹಿಣಿಯೊಂದಿಗೆ ಬಾಳುವೆ ಮಾಡಿದ ದಿನಗಳಲ್ಲಿ ಗೃಹಸ್ಥನು ಪಡೆದ ವಿನೋದ, ವಿಷಾದ, ಲಾಭ, ಅಲಾಭ, ಸರಸ, ವಿರಸ, ಜಯ, ಅಪಜಯ, ಇಂತಹ ನೂರಾರು ಅನುಭವಗಳು ಹಾಡಾಗಿ ಇಲ್ಲಿ ಹರಿದಿವೆ. ಸಂಸಾರದ ದಿನನಿತ್ಯದ ಸಂಗತಿಗಳಿಗೆ ಈ ಕಥಾನಾಯಕ ನಾಲಗೆಯಾಗಿ ಒದಗಿ ಬಂದಿದ್ದಾನೆ. ಎಂಬುದೇ ಈತನ ವಿಶೇಷ"[೨]—ಎಂದಿರುವ ಕೃತಿಕಾರರ ಮಾತು ಈ ಕೃತಿಯ ಆಂತರಿಕ ವಿಷಯಗಳಿಗೆ ತೋರ್ಬೆರಳು. ಅಂದ ಮಾತ್ರಕ್ಕೆ ಇಲ್ಲಿನ ವಿಷಯಗಳು ಕೇವಲ ಸಾಂಸಾರಿಕ ಎಂದು ಸೀಮಿತಗೊಳಿಸು ವಂತಿಲ್ಲ. ಕವಿ ಸಮಾಜದಲ್ಲಿ ಪಡೆದ ಅನುಭವಗಳೂ ಸಹ ಇಲ್ಲಿ ಸೇರಿಕೊಂಡಿವೆ. ಸಂಸಾರವು ಸಮಾಜದ ಒಂದು ಅಂಗ ಎಂಬುದನ್ನು ಗಮನದಲ್ಲಿಟ್ಟಾಗ ಅದರ ವಿಶಾಲಾರ್ಥ ಸ್ಫುರಿಸುತ್ತದೆ. ವಾಸ್ತವವಾಗಿ ಪ್ರತಿ ತ್ರಿಪದಿಯಲ್ಲಿ ಉಚ್ಚರಿಸಿರುವ "ಸರಸಿ" ಎಂಬುದು ಕವಿಯ ಎಲ್ಲಾ ಅನುಭವಗಳ ಅಭಿವ್ಯಕ್ತಿಗೆ ಒಂದು ಸಂಬೋಧನಾವಲಂಬನೆ ಮಾತ್ರ.

ಯಾರದೇ ಬದುಕು ಏಕಮುಖಿಯಲ್ಲ. ಸಮತಟ್ಟೂ ಅಲ್ಲ. ಅದು ಸಾಧ್ಯವೂ ಇಲ್ಲ. ಪ್ರತಿ ಯೊಬ್ಬ ಮಾನವನಿಗೂ ಬಾಳಿನಲ್ಲಿ ಅಡೆತಡೆ, ಕಷ್ಟ ಸುಖ, ಏರುಪೇರುಗಳು ಇದ್ದೇ ಇರುತ್ತವೆ. ಇಂತಹ ಸಾಂಸಾರಿಕವಾದ ಕೋಟಲೆಗಳಿಗೆ ಸಿಕ್ಕಿ ಅನಿವಾರ್ಯವಾಗಿ ಕುಗ್ಗಿಯೋ ಹಿಗ್ಗಿಯೋ ಬದುಕುವ ಪ್ರವೃತ್ತಿ ಭಟ್ಟರದಲ್ಲ. ಅಲ್ಲಿ ಸಾಧನೆಗೆ ಅಡ್ಡವಾಗಿ ಬರುವ ಸಾವಿರಾರು ಸಮಸ್ಯೆಗಳ ಮುಳ್ಳು ಬೇಲಿ ಗಳಿಗೆ ಅವರು ಕಂಡುಹಿಡಿಯುವ ಸೂಕ್ತ ಪರಿಹಾರದ ಮಚ್ಚು ಕೊಡಲಿಗಳು ಅಪಾರ. ಆ ಸಮಸ್ಯೆ ಗಳನ್ನು ಹಗುರಾಗಿಸಿ ಗೆದ್ದು ನಿಲ್ಲುವ ಜಾಣ್ಮೆ, ಎದೆಗಾರಿಕೆ, ಕಹಿಯನ್ನೇ ಸಿಹಿ ಆಗಿ ಮಾರ್ಪಡಿಸಿಕೊಳ್ಳುವ ಸವಾಲು, ಕೆಸರಿಗೆ ಬೇರು ಬಿಟ್ಟು ಕಮಲವಾಗಿ ಅರಳಿ ನಿಲ್ಲುವ ಕಲೆ, ಇವುಗಳು ಕವಿಯ ಬದುಕಿನ ಬಗೆ ಎಂಬುದನ್ನು ಇಲ್ಲಿನ ತ್ರಿಪದಿಗಳು ಧ್ವನಿಸುತ್ತವೆ:

> ಕಹಿಯ ಜೀವನದೊಳು ಸಿಹಿಯನ್ನು ಸವಿವರೆ
> ಬಹುವಿಧ ಕಲೆಯ ಸಂಸ್ಕಾರ – ಇರಬೇಕು
> ಇಹದೊಳು ನಮಗೆ ಸರಸಿಯೆ

ಕವಿಗೆ ಸಾಧನೆ ಮುಖ್ಯವೇ ಹೊರತು ಸಂಸಾರವಲ್ಲ ಎಂಬುದನ್ನು ಅವು ಪ್ರತಿಪಾದಿಸುತ್ತವೆ. ಈ ಧ್ಯೇಯವೇ ಉತ್ತಮ ಎಂಬುದನ್ನು ಇತರರಿಗೆ ಬೋಧಿಸುತ್ತವೆ. ಜೀವನದಲ್ಲಿ ಒದಗಿಬರುವ ಕ್ಲೇಶ ದುರ್ಗಂಧದಿಂದ ಈ ಕವಿ ಪಾರಾಗಿರುವುದು ನಗೆಯ ಪರಿಮಳದಿಂದ. ಅದು ಅವರನ್ನು ಶತ್ರು ಗಳಿಂದಲೂ, ಮಾನಸಿಕ ಅಸ್ವಸ್ಥತೆಯಿಂದಲೂ ರಕ್ಷಿಸುವ ಗುರಾಣಿಯೂ ಹೌದು.

> ನಗೆಯ ಗುರಾಣಿಯ ತೆಗೆದೊಡ್ಡಿ ನಿಂತೆನು
> ಬಗೆವನೆ ಈಗ ನೋವಿನ–ಅಸಿಯಿಂದೆ
> ಹಗೆಯೆನ್ನ ಎದೆಯ ಸರಸಿಯೆ

ನಗೆ ಈ ಕವಿಯ ಜೀವದ ಉಸಿರು, ಹಸಿರು. ಜಗವನ್ನು ನಗಿಸುತ್ತ ತಾವೂ ನಗುತ್ತ ಇರಬೇಕು ಎನ್ನುವ ಅವರು 'ನಗೆ' ಇಲ್ಲದ ಮಾನವ ಮೃಗಕ್ಕೆ ಸಮಾನ ಎನ್ನುತ್ತಾರೆ:

> ನಗಿಸುವ ಕಲೆಯಂತೆ ನಗುವುದು ಸಹ ಕಲೆ
> ನಗಿಸುವ ನಗುವ ಕಲೆಯನು–ಮರೆತರೆ
> ಮೃಗ ನಾವು ಕೇಳೆ ಸರಸಿಯೆ

ಭಟ್ಟರು ಸ್ವಭಾವತ: ರಸಿಕ ಕವಿ. ರಸಿಕತೆ ಅವರ ಸಹಜ ಮನೋಧರ್ಮ. ಹಾಸ್ಯ ಶೃಂಗಾರ ಗಳಿಗೂ ರಸಿಕತೆಗೂ ಯಾವಾಗಲೂ ಹತ್ತಿರದ ನಂಟು. ಆ ರಸಿಕತೆಯನ್ನು ಅವರ ತ್ರಿಪದಿಗಳಲ್ಲಿ ನಿಚ್ಚಳ

ವಾಗಿ ಗುರುತಿಸುವುದು ವಾಸ್ತವವೇ ಆಗಿದೆ. ಈ ರಸಿಕತೆಯು ಜೊತೆಗೆ ಕವಿಯ ಕಲ್ಪನಾಶಕ್ತಿಯೂ ಬೆರೆತಿರುವುದರಿಂದ ಅಂತಹ ತ್ರಿಪದಿಗಳ ಸೊಬಗು ಇಮ್ಮಡಿಯಾಗಿರುವುದನ್ನೂ ಕಾಣುತ್ತೇವೆ.

ಮರುಗದ ತೆನೆಗಿಂತ ಮರಳಿಯ ಹೂಗಿಂತ
ಸಿರಿಗಂಧಕಿಂತ ಬಹು ಕಂಪು–ನೀನೆಯೆ
ಮಿರುಗುವ ಮೈಯ ಸರಸಿಯೆ

ತುಟಿಯುಂಟು ಕೆಂಪಗೆ, ಕಟಿಯುಂಟು ತೆಳ್ಳಗೆ
ಮಿಟಿ ಮಿಟಿ ಕಪ್ಪು ಕಣ್ಣುಂಟು–ನೀ ಯಾರೆ
ಪುಟಿಯುವ ಎದೆಯ ಸರಸಿಯೆ

ಇಲ್ಲಿನ ಬಹುಪಾಲು ತ್ರಿಪದಿಗಳಲ್ಲಿ ಕಂಡುಬರುವ ಒಂದು ವೈಶಿಷ್ಟ್ಯವೆಂದರೆ–ಒಂದು ಮುಕ್ತಕವನ್ನು ತೆಗೆದುಕೊಂಡು ಅದಕ್ಕೆ ಇದೂ ಒಂದು ಅರ್ಥ ಎಂದು ಹೇಳಬಹುದೇ ಹೊರತು ಇದೇ ಅರ್ಥ ಎಂದು ನಿಷ್ಕೃಷ್ಟವಾಗಿ ಹೇಳಲಾಗುವುದಿಲ್ಲ. ಏಕೆಂದರೆ ಆ ತ್ರಿಪದಿ ನಾನಾರ್ಥಗಳನ್ನು ಸ್ಫುರಿಸುವ ಸಾಧ್ಯತೆ ಉಂಟು. ಹೀಗೆ ಧ್ವನಿತರಂಗಗಳುಂಟಾಗುವುದು ಅತ್ಯಂತ ಪ್ರತಿಭಾವಂತ ಕವಿಯ ರಚನೆಗಳಲ್ಲಿ ಮಾತ್ರ ಸಾಧ್ಯ. ಈಗ ಒಂದು ಒಳ್ಳೆಯ ತ್ರಿಪದಿ:

ಕಡಲಂಥ ಕೆರೆಯೊಳು ಬಡನಾಯಿ ನೆಕ್ಕಿಯೆ
ಕುಡಿದೀತು ನೀರು ಬೆರಗೇಕೆ – ಅದು ನೀರು
ಕುಡಿವುದೆ ಹಾಗೆ ಸರಸಿಯೆ

ಇಲ್ಲಿ ಕೊಟ್ಟಿರುವ ಚಿತ್ರ ಕವಿ ಪಡೆದ ಯಾವುದೋ ದರ್ಶನಾನುಭವಕ್ಕೆ ಪ್ರತೀಕ. "ಪಾಪಿ ಸಮುದ್ರ ಹೊಕ್ಕರೂ ಮೊಣಕಾಲುದ್ದ ನೀರೇ" ಎಂಬ ಗಾದೆ ಒಂದುಂಟು. ಎಂಥದೇ ಮಹಾತ್ಕಾರ್ಯವಾದರೂ ಅಧಮರು ತಮ್ಮ ಪ್ರವೃತ್ತಿಯನ್ನು ಬದಲಾಯಿಸುವ ಗೋಜಿಗೆ ಹೋಗುವುದಿಲ್ಲ. ಪುಣ್ಯದ ಮಹಾ-ಗರೆಯುತ್ತಿದ್ದರೂ ಪಾಪದ ಪ್ರೊಟರೆಯಲ್ಲೇ ಕುಳಿತು ಸಿಂದಿಸುತ್ತಾರೆಯೇ ಹೊರತು ಸುಕೃತಾನುಭವದಲ್ಲಿ ಭಾಗಿಗಳಾಗುವ ಪ್ರಯತ್ನ ಮಾಡುವುದಿಲ್ಲ. ಅದು ಅವರ ಜಾಯಮಾನಕ್ಕೆ ಒಗ್ಗುವುದೂ ಇಲ್ಲ. ಇಂತಹ ಅರ್ಥವನ್ನು ಸಮೀಕ್ಷಿಸುವ ಒಂದು ಸುಂದರ ಮುಕ್ತಕ ಮೇಲಿನ ತ್ರಿಪದಿ. ಇದನ್ನು ಬೇರೆಯವರು ಬೇರೊಂದು ರೀತಿಯಲ್ಲಿ ವ್ಯಾಖ್ಯಾನಿಸಬಹುದು.

ಈ ಕವಿಗಿರುವ ವಿನಯ, ದೈವದ ನಂಬಿಕೆ, ರಾಷ್ಟ್ರಭಕ್ತಿ, ಮರುಕ, ಕರುಣೆ ಇಲ್ಲಿನ ತ್ರಿಪದಿಗಳಲ್ಲಿ ಅಲ್ಲಲ್ಲಿ ವ್ಯಕ್ತಗೊಂಡಿರುವುದನ್ನು ಕಾಣಬಹುದು. ಅದರಲ್ಲೂ —

ಗೆಲ್ಲಲಿ ಕನ್ನಡ ನಿಲ್ಲಲಿ ಕನ್ನಡ
ಎಲ್ಲೆಡೆಯೊಳಗೆ ಮೆರೆಯಲಿ–ಕಾವ್ಯದ
ಸೊಲ್ಲಾಗಿ ಬೆಳಗಿ ಸರಸಿಯೆ

ಎಂಬ ತ್ರಿಪದಿ ಇವರ ಅನನ್ಯವಾದ ಉಜ್ಜ್ವಲ ಕನ್ನಡಾಭಿಮಾನಕ್ಕೆ ಒಳ್ಳೆಯ ನಿದರ್ಶನವಾಗಿದೆ. ಪ್ರತಿಯೊಬ್ಬ ಕನ್ನಡಿಗನ ತನುಮನಗಳಲ್ಲಿ ಅನುರಣನಗೊಳ್ಳಬೇಕಾಗಿದೆ ಈ ತ್ರಿಪದಿ, ಹಲವಾರು ದೃಷ್ಟಿಗಳಿಂದ.

ಭಟ್ಟರು ಕಾವ್ಯದ ಉಗಮದ ಬಗ್ಗೆ ಹೇಳಿರುವ ಈ ಕೆಳಗಿನ ತ್ರಿಪದಿ ಸ್ವತಃ ಉತ್ತಮ ಕಾವ್ಯಾಂಶದಿಂದ ಕೂಡಿದ್ದು, ಸತ್ತ್ವಸಂಪನ್ನವಾಗಿದೆ; ಔಚಿತ್ಯದಿಂದ ಕೂಡಿದೆ. ಅಲ್ಲದೆ ಅದು ಅವರ 'ಸುರಗಿ ಸುರ-ಹೊನ್ನೆ' ಕೃತಿಗೂ ಅನ್ವಯಿಸುವಂತಹುದಾಗಿದೆ. ಭಟ್ಟರು "ಚಿತ್ತ"ಕ್ಕೆ ಒಳ್ಳೆಯ "ಕಾವು" ಕೊಟ್ಟ ಹೊತ್ತಿನಲ್ಲಿಯೇ ಇಲ್ಲಿನ ತ್ರಿಪದಿಗಳು "ಚಿತ್ತರ"ಗೊಂಡಿವೆ ಎಂಬುದನ್ನು ಅವೇ ಸ್ಪಷ್ಟಪಡಿಸುತ್ತವೆ.

ತಮ್ಮ ವಿಶಾಲಾನುಭವದ ಕ್ಷೀರವನ್ನು ಹೆಪ್ಪು ಹಾಕಿ, ಜ್ಞಾನದ ಕಡೆಗೋಲಿನಿಂದ ಕಡೆದು ಇಲ್ಲಿನ ಮುಕ್ತಕಗಳೆಂಬ ನವನೀತವನ್ನು ತೆಗೆದಿದ್ದಾರೆ. ಬನಿಯಿಂದ ಕೂಡಿದ ಇವು ಅತ್ಯಂತ ರುಚಿಯಾಗಿ

ಮನಸ್ಸಿನ ಆರೋಗ್ಯವರ್ಧಕಗಳಾಗಿವೆ. ಭಾಷೆಯ ದೃಷ್ಟಿಯಿಂದ ನೋಡಿದಾಗ ಸರ್ವಜ್ಞನಲ್ಲಿಯೇ ಆಗಲಿ, ಜಯದೇವಿ ತಾಯಿ ಲಿಗಾಡೆಯವರಲ್ಲಿಯೋ ಆಗಲಿ ಇರುವಂತೆ ಜನಪದ ಸೊಗಡಿನಿಂದ ಕೂಡಿದ ನಾಗರಿಕ ಭಾಷೆಯಾಗಿದೆ. ಕೆಲವೆಡೆಗಳಲ್ಲಿ ಮಾತ್ರ ಪ್ರಾಸದ ವ್ಯಾಮೋಹಕ್ಕೆ ಸಿಕ್ಕಿ ಅರ್ಥಕ್ಕೆ ಅಪ್ರಧಾನತೆ ಉಂಟಾಯಿತೇನೋ ಎನ್ನುವಂತೆ ಭಾಸವಾಗುತ್ತದೆ. ಆದರೆ ಬಹುತೇಕ ತ್ರಿಪದಿಗಳಲ್ಲಿ ಅಥವಾ ಸಮಷ್ಟಿರೂಪದಲ್ಲಿ ಗಮನಿಸಿದಾಗ ಧ್ವನಿಯ ಸಾರ್ವಭೌಮತೆ, ಕವಿಯ ಸ್ವೋಪಜ್ಞಶೀಲತ್ವ, ಅನುಭವ ಸಮೃದ್ಧಿ, ಇವು ಕಾವ್ಯ ಶ್ರೀಮಂತಿಕೆಗೆ ಮೆರಗು ಕೊಡುತ್ತವೆ. ಇಲ್ಲಿನ ತ್ರಿಪದಿಗಳಲ್ಲಿ 'ನೀತಿಯುಂಟು: ನಾತಿಗಾರಿಕೆಯುಂಟು: ಚುಚ್ಚುಂಟು ಮೆಚ್ಚುಂಟು. ನಚ್ಚುಂಟು: ಕೆಚ್ಚು ಉಂಟು.' ಉಪಮೆಗಳುಂಟು. ಪ್ರತಿಮೆಗಳುಂಟು, ವ್ಯಂಗ್ಯ ವಿಡಂಬನೆಗಳುಂಟು. ಶೃಂಗಾರದ ಸೊಬಗುಂಟು, ಹಾಸ್ಯದ ಸವಿಯುಂಟು. ಕರುಣೆ ಮರುಕಗಳುಂಟು. ಬಹುಪಾಲು ಕಾವ್ಯಗುಣಗಳನ್ನು ಮೈದುಂಬಿಕೊಂಡಿರುವ ಈ ಈ ತ್ರಿಪದಿಗಳು ಯಾವೊಬ್ಬ ಸಹೃದಯನಿಂದಲೂ "ಸೈ" ಎನ್ನಿಸಿಕೊಳ್ಳುವಂತಿವೆ. ಹಾಡುಗಬ್ಬವಾದ ಈ ಕೃತಿಯ ಏಳುನೂರು ತ್ರಿಪದಿಗಳಲ್ಲಿ ಐನೂರಕ್ಕೂ ಹೆಚ್ಚು ತ್ರಿಪದಿಗಳು ಶ್ರೀ ಪರಮೇಶ್ವರ ಭಟ್ಟರ ಅನುಭವ ಸಾಗರದಿಂದ ಹೊರತೆಗೆದ ಮುತ್ತುರತ್ನಗಳೆಂದು ನಿಸ್ಸಂಶಯವಾಗಿ ಹೇಳಬಹುದು. ಇವು 'ಚಿತ್ತಾಪಹಾರಿ ಕೃತಿಗಳು' ಎನ್ನುವುದೂ ಸಹ ಸರ್ವಯೋಗ್ಯ.

---

೧. ಡಾ. ಹಾ. ಮಾ. ನಾಯಕ: 'ಒಂದು ದಶಕದ ಕನ್ನಡ ಸಾಹಿತ್ಯ,' "ಸಮೀಕ್ಷೆ" ಪು.೪೪
೨. ಹಿನ್ನುಡಿ; 'ಸುರಗಿ ಸುರಹೊನ್ನೆ'

## ೨೫. ಕನ್ನಡ ಕಾಳಿದಾಸ ಮಹಾಸಂಪುಟ

**ಕೆ. ಸುಬ್ರಹ್ಮಣ್ಯ ಭಟ್ಟ**

"ಭಾಷಾಂತರವೇ. ಅದು ಬಹಳ ಸುಲಭ. ಸಂಸ್ಕೃತದಲ್ಲಿಯೋ, ಇಂಗ್ಲಿಷಿನಲ್ಲಿಯೋ ಅಥವಾ ಗ್ರೀಕ್ ನಲ್ಲೋ–ಅಂತೂ ಅನ್ಯಭಾಷೆಯಲ್ಲಿ ಇದ್ದುದನ್ನು ಕನ್ನಡದಲ್ಲಿ ಹೇಳಿದರಾಯಿತು. ಅದರಲ್ಲಿ ಸ್ವಂತಿಕೆ ಬೇಕಿದೆ? ಕಥೆ, ವರ್ಣನೆಗಾಗಿ ಮಂಡೆ ಬಿಸಿ ಏಕಿದೆ? ಅನುವಾದ ಮಾಡಿದರಾಯಿತು, ತನ್ನ ಹೆಸರು ಹಾಕಿ ಮುದ್ರಿಸಿದರೆ ಹೆಸರೂ ಬೆಳಕಿಗೆ ಬರುತ್ತದೆ....." ಹೀಗೆಲ್ಲಾ ಹಗುರವಾಗಿ ಹರಟುವುದನ್ನು ನಾನು ಕೇಳಿದ್ದೇನೆ. ಆದರೆ ವಸ್ತುತಃ ಭಾಷಾಂತರದ ಕೆಲಸ ಸುಲಭವಲ್ಲ. ಅದರ ಶ್ರಮ ಯಾವುದಾದರೊಂದು ಭಾಷೆಯಿಂದ ಒಂದು 'ಗ್ರಂಥ'ವನ್ನು ಅನ್ಯಭಾಷೆಗೆ ತರಲು ಪ್ರಯತ್ನಿಸಿದ ವ್ಯಕ್ತಿ ನಿಜವಾದ "ಭಾಷಾಂತರದ ಪರಿಶ್ರಮ"ವನ್ನು ತಿಳಿದುಕೊಂಡಾನು. ಭಾಷಾಂತರವನ್ನು ಅವಜ್ಞೆಯಿಂದ ನೋಡುವವರಿಗೆ ನೀನೊಂದು ಭಾಷಾಂತರ ಮಾಡಿ ನೋಡು ಎಂದು ಹೇಳುವುದೇ ಸೂಕ್ತ. 'ನೀನೊಮ್ಮೆ ಒಡಲುಗೊಂಡು ನೋಡಾ ರಾಮನಾಥ' ಎಂದು ಜೇಡರದಾಸಿಮಯ್ಯ ಸಂಸಾರದ ಬನ್ನಣೆಗೆ ಶಿವನನ್ನು ಪಂಥಾಹ್ವಾನಗೈದಂತೆ ಭಾಷಾಂತರವನ್ನು ಲಘುವಾಗಿ ಕಾಣುವವರಿಗೆ ಹೇಳುವುದು ಉಚಿತ. ಮೇಲುನೋಟಕ್ಕೆ ಭಾಷಾಂತರ ಎಂದರೆ Another dialect or version; a translation ಎಂಬ ಅರ್ಥ ಕಂಡುಬಂದರೂ, ನಿಜವಾಗಿ ಭಾಷಾಂತರ ಬಹು ತಾಳ್ಮೆ, ಪಾಂಡಿತ್ಯ ಮುಂತಾದ ಅರ್ಹತೆಗಳಿಂದ ಸಾಧಿಸಬಹುದಾದ ಮಹತ್ತ್ವವುಳ್ಳ ಕಲೆ. ಮೂಲಗ್ರಂಥದ ಸೌಂದರ್ಯಕ್ಕೆ ಸರಿದೊರೆಯಾಗಿ. ಕೆಲವೊಮ್ಮೆ ಮಿಗಿಲಾಗಿಯೂ ಭಾಷಾಂತರ ಬಂದುದು, ಭಾಷಾನ್ತರವು ಮಹತ್ಕಲೆ ಎಂಬುದನ್ನು ಸೂಚಿಸುತ್ತದೆ.

ಭಾಷಾಂತರಕ್ಕೆ ಮೊದಲೇ ಮೂಲಕೃತಿಯಲ್ಲಿ ಬರುವ ವಿಶಿಷ್ಟ ಗುಣಗಳನ್ನು ಭಾಷಾಂತರಕಾರ ಪಟ್ಟಿ ಮಾಡಬೇಕಾಗುತ್ತದೆ. ಮೂಲದ ಧ್ವನಿ, ಶ್ಲೇಷೆ, ವ್ಯಂಗ್ಯ, ಶಬ್ದ ಹಾಗೂ ಅರ್ಥಾಲಂಕಾರಗಳು, ವಾಚ್ಯ ಹಾಗೂ ಸೂಚ್ಯಾರ್ಥಗಳು – ಹೀಗೆ ಕೃತಿಸರ್ವಸ್ವದ ಆಳವಾದ ಜ್ಞಾನವನ್ನು ಪಡೆಯಲೇ ಬೇಕಾಗುತ್ತದೆ. ಒಂದು ಶಬ್ದಕ್ಕೋ ವಾಕ್ಯಕ್ಕೋ ನೇರವಾದ ಅನ್ಯಭಾಷಾಶಬ್ದ ಹಾಕಿದರೆ ಅದು ಖಂಡಿತ ಹಾಸ್ಯಾಸ್ಪದ ಮತ್ತು ಯದ್ವಾತದ್ವಾ ಆಗಿಬಿಡಬಹುದು! ಇಂತಹ ಉದಾಹರಣೆಗಳೂ ಕಡಮೆಯಲ್ಲ. ಸಂಸ್ಕೃತದ ಪಂಚಾನನ (ಸಿಂಹ) ಶಬ್ದವನ್ನು ಪಂಚ=ವಿಸ್ತಾರವಾದ, ಆನನ= ಮುಖ; ಎಂದರೆ ವಿಸ್ತಾರವಾದ ಮುಖವುಳ್ಳ ಪ್ರಾಣಿ, ಸಿಂಹ; ಎಂದು ಭಾಷಾಂತರಿಸಬೇಕಾದ್ದು. ಪಂಚಾನನ='ಐಮೊಗ', ಎಂದಾದುದೂ ಇದೆ. Friendship ಎಂಬುದನ್ನು 'ಗೆಳೆಯ ಹಡಗು' ಎಂದೋ handsome ಎಂಬುದನ್ನು 'ಕೈಕೆಲವು' ಎಂದೋ ಹೇಳಿದರೆ, ಅಥವಾ Canara High school old boys' association ಎಂಬುದನ್ನು "ಕನ್ನಡೆತ್ತರ ಶಾಲೆ ಮುದಿ ಮಕ್ಕಳ ಸಂಘ" ಎಂದು ಭಾಷಾಂತರಿಸಿದಾಗ ಆಗುವ ಅನರ್ಥವನ್ನು ನೋಡಿರಿ. ಕೆಲವೊಮ್ಮೆ ಭಾಷಾಂತರ ಜಟಿಲವೂ ಸಮಸ್ಯಾತ್ಮಕವೂ ಆಗುವುದಿದೆ. ತುಪ್ಪ ಎಂಬುದಕ್ಕೆ ಅರ್ಥ ಘೃತ ಎಂದರೆ, ತುಪ್ಪ ಶಬ್ದವೇ ಗೊತ್ತಿಲ್ಲದಾಗ ಘೃತವೆಂದು ಹೇಳುವುದು ಎಷ್ಟು ಅನುಚಿತ, ಅಪ್ರಯೋಜಕ! ಹಾಗೆಯೇ ಗೌಃ ಎಂದರೆ "ಖುರ ವಿಷಾಣಾದಿಯುತ ಸಾಸ್ನಾದಿ ಲಕ್ಷಣಯುತ ಪ್ರಾಣಿವಿಶೇಷಃ" ಎಂದು ಬಿಟ್ಟರೆ ಆದೀತೇ? ಅಂತೆಯೇ Hotel=ಪಥಿಕಾಶ್ರಮಃ; Indian rubber=ಅತಿಸ್ಥಿತಿಸ್ಥಾಪಕ ವಿಶಿಷ್ಟೋ ಭಾರತದೇಶೀಯ ವೃಕ್ಷ ನಿರ್ಯಾಸಃ; Shuttle Cock=ಲಘುಗುಲಿಕಾ ವಿಶೇಷಯೋ ವಿನೋದಾರ್ಥಂ ದಂಡಾಹತೋ ಭೂತ್ವಾ ಇತಸ್ತತಃ ಪ್ರಕ್ಷಿಪ್ಯತೇ; Duke=ದ್ಯುಕಃ; Sponge=ಸ್ಪಂಜಃ (V. S. Apte-Eng. Sanskrit Dictionary) – ಮೊದಲಾದ ಭಾಷಾಂತರ ಶಬ್ದಗಳು ಕ್ಲಿಷ್ಟವೂ ಮೂಲಪದಕ್ಕಿಂತ ಕಷ್ಟವೂ ಆಗಿಬಿಡುವುದಿದೆ. ಕೆಲವು ಕಡೆ ಮೂಲದ ಗಾಂಭೀರ್ಯ ಸೊಗಸು ಭಾಷಾಂತರದಿಂದ ಅಪ್ರೋಹಗೊಳ್ಳುವುದಿದೆ. "ಪೊಸ ಸುಸಿಲೊಳ್ ನಿವಿರ್ದ ಸವಿರೆಸೆ ಪಸಲೆಯೆಸೆದುದು" ಎಂಬುದನ್ನು

ಹೊಸಗನ್ನಡ ಭಾಷಾಂತರವಾಗಿ–ಹೊಸ ಸಂಗಮದಲ್ಲಿ ಹುಟ್ಟಿಗಾದ ರೋಮಾಂಚ ಹಮಾರು ಹುಟ್ಟಿದೆ ಶೋಭಿಸಿತು–ಎಂದರೆ ಮೂಲದ ಸೊಗಸೂ, ಚೆಲುವೂ ಲೋಪವಾಗುತ್ತದೆ. ಗೀತಗೋವಿಂದ ದಂತಹ ಪದಲಾಲಿತ್ಯದ ಮಧುರ ಕೋಮಲಕಾಂತ ಪದಾವಲಿಯಿಂದ ತುಂಬಿದ ಕಾವ್ಯಗಳನ್ನು ಭಾಷಾಂತರಿಸ ಹೊರಟರೆ ಆಗ ಭಾಷಾಂತರದ ವಾಚಾಮಗೋಚರ ಸಂವೇದನೆ, ಮಾಕರಂದದ ಭಾವನೆ ಮೂಡದಿರದು. "ಕರತಲ ತಾಲತರಲವಲಯಾವಲಿ ಕಲಿತ ಕಲಸ್ವನ ವಂಶೇ" (ಗೀತ ಗೋವಿಂದ) ಇದರಿಂದ ಸುಲಭ ಭಾಷಾಂತರ ಕನ್ನಡದಲ್ಲಿ ತರಲು, ಬರಲು ಸಾಧ್ಯವೇ? ಮೂಲದ ಸೊಗಸಳಿಯದೆ ಭಾಷಾಂತರ ಮಾಡಿದರೆ ಒಂದಕ್ಕೆ ಬದಲಾಗಿ ಇನ್ನೊಂದು ಆಗಿಬಿಡುವುದು ಸಹಜವೇ. ಶಾಕುಂತಲದಲ್ಲಿ ಬರುವ "ವತ್ಸ ! ಪಶ್ಯ ಶಕುಂತ ಲಾವಣ್ಯಂ" ಎಂಬ ಭಾಗವನ್ನು ಇಂಗ್ಲಿ ಭಾಷಾಂತರ ಕಾರರೊಬ್ಬರು ಮೂಲದ ಆಶಯವರಿಯದೆ 'Boy! see the charm of the bird!' ಎಂದು ಭಾಷಾಂತರಿಸಿದ್ದಾರೆ. ಮೂಲದಲ್ಲಿ 'ಶಕುಂತ ಲಾವಣ್ಯಂ' ಎಂಬಲ್ಲಿ ಮಗು, ಹಕ್ಕಿಯ ಸೌಂದರ್ಯ ನೋಡು ಎಂದುದಾದರೂ, ಸರ್ವದಮನನಿಗೆ 'ಶಕುಂತಲಾ' ಎಂಬಷ್ಟೇ ಗ್ರಾಹ್ಯವಾಗಿ 'ಕುತ್ರ ಮೇ ಮಾತಾ?' ಎಲ್ಲಿ ನನ್ನ ತಾಯಿ ಎಂಬ ಮುಂದಿನ ಮಾತಿಗೆ ಕಾರಣವಾಗಿದೆ. ಇಂತಹ ಕಡೆ ಭಾಷಾಂತರ ಎಡವು ತ್ತದೆ. ಉತ್ತಮ ಭಾಷಾಂತರ ಮೂಲಕಾವ್ಯದ ಗುಣ, ಶ್ರೇಷ್ಠತೆಯನ್ನು ಮೆರೆಸುವುದೂ ಕೆಲವೊಮ್ಮೆ ತಾನೇ ಉತ್ತಮವಾಗಿ ಮೂಲದ ಗುಣವನ್ನು ಮರೆಸುವುದೂ ಇದೆ. ಸ್ವತಂತ್ರಕೃತಿ ಎನ್ನುವಷ್ಟು ಸ್ವೋಪಜ್ಞತೆ, ಕಥಾಸಂವಿಧಾನ, ಭಾಷಾಸಿದ್ಧಿ, ತಂತ್ರ, ಸಾಧನೆಗಳು ಕಂಡುಬರುತ್ತವೆ. ಕರ್ಣಾಟಕ ಕಾದಂಬರಿ, ಭಾರತ ಕಥಾಮಂಜರಿ, ತೊರವೆ ರಾಮಾಯಣ. ಬಸವಪ್ಪ ಶಾಸ್ತ್ರಿಗಳ ಕನ್ನಡ ಶಾಕುಂತಲ, ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ ಕಾಳಿದಾಸ ಮಹಾಸಂಪುಟ ಮುಂತಾದುವು ಇದಕ್ಕೆ ತಕ್ಕ ನಿದರ್ಶನ ಗಳು. ಕವಿಯು ಮೂಲದಲ್ಲಿ ಶ್ಲೇಷ ಅಥವಾ ಆ ಭಾಷೆಗೆ ಸಹಜವಾದ ಬಂಧ, ಛಂದದಲ್ಲಿ ಕಾವ್ಯ ಬರೆದಿದ್ದರೆ ಭಾಷಾಂತರಕಾರ ಅದನ್ನೂ ಗ್ರಹಿಸಬೇಕಾಗುತ್ತದೆ. ಸಂಸ್ಕೃತದಲ್ಲಿ ನಾಲ್ಕು ವರ್ಣದವರ ವರ್ಣಾಶ್ರಮ ಧರ್ಮಗಳನ್ನು ತಿಳಿಸುವ ಸೂತ್ರಪ್ರಾಯವಾದ ಮಾತಿದು: "ಸದಾಚರಣತತ್ಪರ." ಎಂದು. ಇದನ್ನು ಬ್ರಾಹ್ಮಣವರ್ಗಕ್ಕೆ "ಸತ್ ಆಚರಣ ತತ್ಪರಃ" ಎಂದೂ, ಕ್ಷತ್ರಿಯ ವರ್ಗಕ್ಕೆ "ಸದಾ ಚ ರಣತತ್ಪರಃ" ಎಂದೂ, ವೈಶ್ಯವರ್ಗಕ್ಕೆ "ಸ ದಾ ಚರಣತತ್ಪರಃ" ಎಂದೂ ಶೂದ್ರ ವರ್ಗಕ್ಕೆ "ಸದಾ ಚರಣತತ್ಪರಃ" ಎಂದೂ ಬಿಂಗಡಿಸಿ ಅರ್ಥವಿಸಬೇಕು. ಆಗ ಆಯಾ ವರ್ಣಗಳ ಪ್ರಧಾನ ಕರ್ಮವನ್ನು ಆ ಸೂತ್ರ ವಿವರಿಸುತ್ತದೆ. ಭಾಷಾಂತರಕಾರ ಅದನ್ನು ಗಮನಿಸದೆ ಬರಿದೆ "ಸದಾ ಚರಣ ತತ್ಪರಃ" ಎಂದರೆ ಸನ್ಮಾರ್ಗನಿರತನೆಂದೋ ಉತ್ತಮ ಆಚಾರ ಸಂಪನ್ನನೆಂದೋ ಕನ್ನಡೀಕರಿಸಿದರೆ ಮೂಲದ ಸ್ವಾರಸ್ಯವಾಗಲೀ, ಉದ್ದೇಶವಾಗಲೀ ಎಲ್ಲಿದೆ? ಇಂಥ ಕಡೆಗಳಲ್ಲಿ ಭಾಷಾಂತರ ಅಶಕ್ತವಾಗುತ್ತದೆ.

ಭಾಷಾಂತರಕಾರ ಮೂಲಪದದ ಅರ್ಥವ್ಯಾಪ್ತಿ ಅರ್ಥಛಾಯೆ. ಸಂದರ್ಭ. ಕವಿಯ ಆಶಯ, ಆ ಪದಕ್ಕಿರುವ ಸ್ವಂತ ಜೀವ. ಶಬ್ದಶಕ್ತಿ ಮುಂತಾದುವುಗಳನ್ನು ಗಮನಿಸಬೇಕು. ಹಾಗೆಯೇ ತಾನು ಭಾಷಾಂತರ ಮಾಡುವ ಭಾಷೆಯ ಸಂಪಾದಿಶಬ್ದ, ಅಭಿಪ್ರಾಯದ ಸಾದೃಶ್ಯ ವೈದೃಶ್ಯಗಳ ಬಗೆಗೆ ಮಾಡುವ ಪದಗಳ ಆಯ್ಕೆ, ಕವಿಯ ಪರಕಾಯ ಪ್ರವೇಶದಷ್ಟು ಕಷ್ಟಸಾಧ್ಯವಾದ ಕೆಲಸದಿಂದ ಲಾದರೂ–ಆಶಯ ಗ್ರಹಣಕ್ಕೆ ತಯಾರಿ, ಮೂಲಭಾಷೆ ಹಾಗೂ ಭಾಷಾಂತರಿಸುತ್ತಿರುವ ಭಾಷೆಗಳಲ್ಲಿ ಅಖಂಡ ಪಾಂಡಿತ್ಯ, ಶಬ್ದಗಳ ಜೇಗುಬಣಿ, ಇತಿಮಿತಿ, ವ್ಯಾಪ್ತಿ, ಧ್ವನಿ, ಸೂಚ್ಯ. ವ್ಯಂಗ್ಯ. ಸಂದರ್ಭೋ- ಚಿತ ಪದಪ್ರಯೋಗ, ಸರಳತೆ, ಸ್ಪಷ್ಟತೆ, ಸರಸತೆ, ಔಚಿತ್ಯ–ಮುಂತಾದ ಯಾವ ಯಾವ ಉತ್ತಮ ಗುಣಗಳನ್ನು ಲೆಕ್ಕಿಸಬಹುದೋ ಅವುಗಳೆಲ್ಲದರಲ್ಲೂ ಪಾರಂಗತನಾಗಿರಬೇಕು, ಲಬ್ಧವರ್ಣನಾಗಿರಬೇಕು; ವಿಚಕ್ಷಣನೂ ಕುಶಲನೂ ಆಗಿರುವುದಂತೂ ಅನಿವಾರ್ಯ. ಓದಿ ಅರ್ಥಮಾಡುವ ರಸಿಕನಿಗಿಂತಲೂ ಇಮ್ಮಡಿ ಶ್ರಮ ಓದಿ, ಆಮೋದಿಸಿ, ಅನುವದಿಸಿ ಬೋಧಿಸುವ ಅನುವಾದಕಾರನಿಗೆ ಅಂದರೆ ಅನ್ಯ ಭಾಷೆಯಲ್ಲಿ ಭಾಷಾಂತರಿಸುವವನಿಗೆ ! ಉತ್ತಮ ಕವಿಯೇ ಉತ್ತಮ ವಿಮರ್ಶಕನೂ, ಉತ್ತಮ ಭಾಷಾಂತರಕಾರನೂ ಆಗಲು ಸಾಧ್ಯ. ಕವಿಯ ಸಂವೇದನೆ, ರಸಸಂವೃತ್ತನ್ನ ಗುಣ, ಆಳವು. ಸಹೃದಯ ಸಂವಾದದ ರೀತಿ, ಅಧೀತಿ, ಬೋಧೆ, ಆಚರಣೆ, ಪ್ರಚಾರಕ್ರಿಯೆ ಮುಂತಾದ ಸಾಹಿತ್ಯಿಕ

ವಿಧಾನಗಳು ಭಾವುಕನಾದ ಕವಿಗೆ ಮಾತ್ರವೇದ್ಯ. ಅಂತೆಯೇ ಕವಿ ಭಾಷಾಂತರಕಾರನಿಗೆ ಅನ್ಯಭಾಷೆಯಲ್ಲಿ ತೆರಲು ಸಾಧ್ಯ. ಭಾಷಾಂತರಕಾರನ ಹುಟ್ಟೆಯಲ್ಲಿದ್ದು ಅನುವಾದಿಸುವ Translator ಉತ್ತಮ ಭಾಷಾಂತರಕಾರನಾಗಲಾರ. ಅಂತಹ ಅರ್ಹತೆ ಪ್ರತಿಭೆಯಂತೆಯೇ ದೈವದತ್ತ. ಪ್ರತಿಭೆಯಂತೆಯೇ ಅಪೂರ್ವನಿರ್ಮಾಣಕ್ಷಮವಾದುದು, ಊರ್ಧ್ವಗಾಮಿಯಾದುದು.

ಪ್ರಿಯ ಗುರುಗಳಾದ ಪ್ರಾಧ್ಯಾಪಕ ಎಸ್. ವಿ. ಪರಮೇಶ್ವರ ಭಟ್ಟರ "ಸಂಭಾವನಾ ಗ್ರಂಥ"ಕ್ಕೆ ಅವರ ಉತ್ಕೃಷ್ಟಕೃತಿಯಾದ "ಕನ್ನಡ ಕಾಳಿದಾಸ ಮಹಾಸಂಪುಟ"ವನ್ನು ಪರಿಚಯಿಸಿ ಕೊಡುವ ಲೇಖನವನ್ನು ಸಂಸ್ಕೃತವೂ ಕನ್ನಡವೂ ಒಲ್ಲವರೇ ಬರೆಯಬೇಕೆಂದು ಮಿತ್ರರಾದ ಕಾರ್ಯದರ್ಶಿಗಳು ಕೇಳಿಕೊಂಡರು; ಅಲ್ಲ, ಒಲ್ಲೆನೆಂದರೂ ಆ ಭಾರದ ಹೊರೆಯನ್ನು ನನಗೇ ಹೊರಿಸಿದರು. ಇಂತಹ ಮಹತ್ಕಾರ್ಯ ನನ್ನಂಥವನಿಂದ ಆಗದ ಮಾತೆಂದು ಎಷ್ಟು ತಲೆಯೊಗೆದರೂ "ಸರ್ವಥಾ ಸಾಧ್ಯವಿಲ್ಲ. ನೀವು ಈ ಕೆಲಸವನ್ನು ಮಾಡಲೇಬೇಕೆಂದು" ಬಲವಂತ ಪಡಿಸಿದರು. ಸಾಧ್ಯವಿಲ್ಲವೆನ್ನಲೇ? "ತದ್ಗುಣೈಃ ಕರ್ಣಮಾಗತ್ಯ ಚಾಪಲಾಯ ಪ್ರಚೋದಿತಃ ಎಂದಂತೆ ಗುರುಗಳ ಅಗಣಿತ ಗುಣಗಳಿಂದ ಅವರ ಬಗ್ಗೆ ಬರೆಯದಿರಲಾರೆ ಎಂದಿತು ಬಗೆ; ಬಗೆದಂತೆ ನಡೆಯಲು ಸಾಧ್ಯವಾಗದಂತಿದೆ ಕೃತಿಯ ಮಹತ್ತು ಬೃಹತ್ತುಗಳ ವ್ಯಾಪ್ತಿ. ಕಾಳಿದಾಸನೇ ರಘುವಂಶದಲ್ಲಿ (ಪ್ರೊ. ಎಸ್. ವಿ. ಪಿ. ಅವರ ಅನುವಾದ)

"ಸೂರ್ಯನಿಂದೊಗೆದ ಕುಲವೆತ್ತಣದು ಅಲ್ಪವಿಷಯಜ್ಞಮತಿಯೆತ್ತಣದಿದು ।
ಮೋಹದಿಂದೆಳಸಿದೆನು ದುಸ್ತರದ ಸಾಗರವ ತೆಪ್ಪದೊಳು ದಾಂಟಲೆಂದು ॥ I–೨

ಕವಿಯ ಜಸವನು ಬಯಸಿದೆಗ್ಗನಿರದಿಂದು ನಾನಪಹಾಸ್ಯಕೆಡೆಯಾದೆನು ।
ಉನ್ನತನಿಗೆಟಕಲಿಹ ಫಲಕೆಳಸಿ ಕೈನೆಗಪಿದಾಕುಳ್ಳಗೆಣೆಯಾದೆನು ॥ ·I–೩

ಎಂದಂತಾದೆನು. ಕನ್ನಡದಲ್ಲಿ ಸಮಗ್ರ ಕಾಳಿದಾಸಕೃತಿಯನ್ನು ಮೂಲಕ್ಕೆ ಭಂಗಬರದಂತೆ ಕಾಳಿದಾಸನಿಗೆ ಸರಿದೊರೆಯೆನಿಸುವ ರೀತಿಯಲ್ಲಿ, ಲಲಿತವೂ, ಸರಳಸಹಜಸುಂದರವೂ, ವಿವಿಧ ವೃತ್ತ ಬಂಧಬಂಧುರವೂ ಆದ 'ಕೇವಲ ಸುಂದರ' ಅವ್ಯಾಜ ಮನೋಹರವಾದ ಶೈಲಿಯಲ್ಲಿ ನಿರ್ದುಷ್ಟ ಭಾಷೆ, ನಿರ್ದಿಷ್ಟ ರೀತಿ, ಹಿತಮಿತ ಗೀತಗುಣ, ಅಂತ್ಯಪ್ರಾಸವಿಟ್ಟುಕೊಂಡು, ಆದರೆ ಎಲ್ಲೂ ಕಷ್ಟಪಟ್ಟು 'ಪ್ರಾಸಕ್ಕಾಗಿ ತ್ರಾಸವಾಗಿದೆ' ಎನ್ನಿಸದೆ, ಓತಪ್ರೋತವಾಗಿ, 'ಸ್ವಯಮೇವಾಗತಾ ಕವಿತಾ' ಆಗಿಯೂ ಸರಸವಾಗಿಯೂ, ಸಹೃದಯ ಹೃದಯಾಹ್ಲಾದಿಯಾಗಿ, ವಾಚಕರಿಗೆ ರೋಚಕವೆನಿಸುವಂತೆ, ರಸ ಪನಪನ ಪನಿಯುವಂತೆ, ಕಾಳಿದಾಸನೇ ಪರಮೇಶ್ವರಾವತಾರದಿಂದ ಬಂದು ಕನ್ನಡಕ್ಕೂ ತನ್ನ ಕೃತಿ ಬರಲೆಂದು ಆಶಿಸಿ ಬರೆದನೋ ಎಂಬಂತಿದೆ 'ಕಾಳಿದಾಸ ಮಹಾಸಂಪುಟ' ಎಂದರೆ, ಥಕ್ಕನೆ 'ಭಟ್ಟರ' ಶಿಷ್ಯನಾದ ಇನ್ನೊಬ್ಬ ಭಟ್ಟ ಹೊಗಳುಭಟ್ಟನ ಕೆಲಸ ಮಾಡಿಬಿಟ್ಟನೇ ಎಂದು ತೋರಿದರೂ ದಿಟ್ಟಿಸಿ ನೋಡಿದರೆ, ಗುಟ್ಟನ್ನು ಭೇದಿಸಿದರೆ, ಒಟ್ಟನ್ನು ಗ್ರಹಿಸಿದರೆ ಇಷ್ಟನ್ನು ಮಾತ್ರ ಭಟ್ಟ ಭಟ್ಟರ ಕೃತಿಗೆ ಹೇಳಿದರೆ ಸಾಲದು ಇನ್ನಷ್ಟು ಹೇಳಬೇಕಿತ್ತು ಎನ್ನಿಸಿದರೆ ಆಗ ಕೃತಿಯ ಬಗ್ಗೆ ಬರೆದ ಲೇಖನ ಸಾರ್ಥಕವೆಂದು ಭಾವಿಸುತ್ತೇನೆ. ಚಲನಚಿತ್ರದ ಮಾದರಿಗಾಗಿ ಒಂದೋ ಎರಡೋ ರೀಲ್‌ಗಳನ್ನು ತೋರಿಸಿದಂತೆ ಈ ಲಘುಬರಹದಲ್ಲಿ, ಪರಮೇಶ್ವರ ಭಟ್ಟರ ಪರಮೇಶ್ವರ ಶಕ್ತಿಯ ದಿಗ್ದರ್ಶನ ಮಾಡಲು ಹವಣಿಸಿದ್ದೇನೆ. ಉತ್ತಮ ಅನುವಾದಕರೆಂದು ಕನ್ನಡ ಸಾಹಿತ್ಯ ಪರಿಷತ್ತು ತನ್ನ ೪೭ನೆಯ ಸಮ್ಮೇಳನ ಹಾಗೂ ಸುವರ್ಣಮಹೋತ್ಸವದಲ್ಲಿ ಶ್ರೀಯುತ ಪರಮೇಶ್ವರ ಭಟ್ಟರನ್ನು ಗೌರವಿಸಿತು. ಅರ್ಥಾತ್ ಕನ್ನಡನುಡಿಗೆ ನಾಡಿಗೆ ಕನ್ನಡದ ದೀಕ್ಷೆ ತೊಟ್ಟ ರಕ್ಷಾಮಣಿಗಳೊಬ್ಬರನ್ನು ಗುರುತಿಸಿ ಸ್ವಾಗತಿಸಿ ಗೌರವಿಸಿತು. ಬಿರುದುಗಳನ್ನು ಹೊರುವುದು ಇಂದಿನ ಕಾಲಕ್ಕೆ ಒಗ್ಗದ ಮಾತು. ಅಲ್ಲದಿದ್ದರೆ "ಅಭಿನವಕಾಳಿದಾಸ" ಎಂಬ ಸಹಜ ಹಾಗೂ ಅರ್ಹ ಬಿರುದು ಪರಮೇಶ್ವರ ಭಟ್ಟರ ಹೆಸರಿನ ಆದಿಯಲ್ಲಿ ಕಾಣಿಸುತ್ತಿತ್ತು. ಕಾಳಿದಾಸನ ಕೆಲವು ಕಾವ್ಯಭಾಗಗಳನ್ನು ಕೆಲವು ನಾಟಕಗಳನ್ನು ಕನ್ನಡದಲ್ಲಿ ಇವರಿಗಿಂತಲೂ ಮೊದಲೇ ಭಾಷಾಂತರಿಸಿದ್ದಾರೆ. ದಿ। ಬಸವಪ್ಪ ಶಾಸ್ತ್ರಿಗಳ ಅಭಿಜ್ಞಾನ ಶಾಕುಂತಲ ನಾಟಕ ಎಷ್ಟರ ಮಟ್ಟಿಗೆ ಅಮೂಲ್ಯ ಗ್ರಂಥ, ಹೃದಯವನ್ನು ಸೂರೆಗೊಂಡ ಭಾಷಾಂತರ ಎಂಬುದು

ರಸಿಕರಿಗೆ ತಿಳಿದಿದೆ. ಶ್ರೀಯುತ ಪರಮೇಶ್ವರ ಭಟ್ಟರು ಕನ್ನಡಿಸಿದ ಕಾಳಿದಾಸ ಮಹಾಸಂಪುಟವನ್ನು ಓದಿದಾತ ನಿಜಕ್ಕೂ "ಸಂಸ್ಕೃತವಿದ್ಯೇನು?" ಎಂದರೆ ಅತ್ಯುಕ್ತಿಯಲ್ಲ. ಅಷ್ಟು ಶೈಲಿಯು ಮೂಲಕ್ಕೆ ಸಮತೋಲವಾಗಿ, ಕಾಳಿದಾಸನ ಮನೋಧರ್ಮಕ್ಕೆ ಒಕ್ಕತನವಾಗಿ, ಸಂಸ್ಕೃತದ ಮೂಲಕ್ಕೆ ಕನ್ನಡದ ಅಮಲ ಕನ್ನಡಿಯಾಗಿ ಕನ್ನಡ ಕಾಳಿದಾಸ ಮಹಾಸಂಪುಟ. ಮಹಾಕವಿಯ ಕೃತಿರತ್ನಗಳಾದ ಅನೇಕ ಕೃತಿಗಳ ಏಕತೆಯ ಜತೆಯೂ ಸಮ್ಮಿಳಿತವಾಗಿ ಅಪೂರ್ವ ಕೊಡುಗೆಯಾಗಿದೆ. ಕನ್ನಡನಾಡಿನ ಅಭಿಮಾನಿಗಳಿಗೆ ಸಮರ್ಪಿಸಿದ ಅಮೂಲ್ಯ ಪಾರಿಜಾತ! ಕಾಳಿದಾಸನ ಋತುಸಂಹಾರ, ಮೇಘದೂತ, ರಘುವಂಶ, ಕುಮಾರಸಂಭವ, ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ ಮತ್ತು ಅಭಿಜ್ಞಾನ ಶಾಕುಂತಲ—ಎಂಬ ಕೃತಿಸಪ್ತಕಗಳನ್ನು, "ಮೂಲದಲ್ಲಿ ಇರುವ ಯಾವುದನ್ನೂ ಬಿಡದೆ ಇಲ್ಲದ ಯಾವುದನ್ನೂ ಸೇರಿಸದೆ ಮೂಲಕ್ಕೆ ತುಂಬ ಹತ್ತಿರದಲ್ಲಿ ಇರುವಂತೆ ಈ ಅನುವಾದವನ್ನು ಅಳವಡಿಸಿದ್ದಾರೆ." ಕಾಳಿದಾಸನ ಬಗೆಗೆ ಹಾಗೂ ತನ್ನ ನಿಗರ್ವ ವ್ಯಕ್ತಿತ್ವದ ಮುನ್ನುಡಿಯಲ್ಲಿಯ ಅವರ ಮಾತುಗಳು ಮುನ್ನುಡಿಯಿರಬೇಕಾದ ಸ್ಥಳದಲ್ಲಿ 'ಬಿನ್ನಹ'ವಾಗಿ ಹೀಗಿವೆ: "ಕಾಳಿದಾಸನನ್ನು ಕನ್ನಡಕ್ಕೆ ತರುವುದು ಕಷ್ಟ. ಭಾಷಾಂತರದ ಇತಿಮಿತಿಗಳನ್ನು ನಾನು ಬಲ್ಲೆ. ಕಳೆದ ಇಪ್ಪತ್ತು ವರುಷಗಳಿಂದ ಇಂಗ್ಲಿಷ್ ಮತ್ತು ಸಂಸ್ಕೃತದ ಕೃತಿಗಳನ್ನು ಕನ್ನಡಿಸುವ ಉದ್ಯಮದಲ್ಲಿ ನಾನಿದ್ದೇನೆ. ಮೂಲದ ಅರ್ಥ ಆಶಯಗಳನ್ನು ಚೆನ್ನಾಗಿ ತಿಳಿದುಕೊಳ್ಳುವುದಕ್ಕೆ ಅನುವಾದವೂ ಒಂದು ಉಪಾಯ ಎನ್ನುವುದು ನನ್ನ ಭಾವನೆ. ಈ ದೃಷ್ಟಿಯಿಂದ ಅನುವಾದಕಾರ್ಯವನ್ನು ಆರಂಭಿಸಿದೆ. ಒಂದೊಂದು ತಲೆಮೊರೆಯವರೂ ಇಂತಹ ಮಹಾಕೃತಿಗಳನ್ನು ತಮ್ಮ ತಮ್ಮ ಕಾಲದ ಬರಹದ ಭಾಷೆಗೆ ಹಾಕಬೇಕಾದುದರ ಅಗತ್ಯವಿದೆ. ಹಿಂದಿನ ಸಾಹಿತ್ಯವನ್ನು ಇಂದಿನ ಜನತೆಗೆ ಮುಟ್ಟಿಸುವ ಒಂದು ಸಾಧನ ಇದು. ಈ ದೃಷ್ಟಿಯಿಂದಲೂ ನನ್ನ ಅನುವಾದಕಾರ್ಯ ನಡೆದಿದೆ. ಮೂಲದಲ್ಲಿರುವ ಯಾವುದನ್ನೂ ಬಿಡದೆ ಯಾವುದನ್ನೂ ಸೇರಿಸದೆ ಮೂಲಕ್ಕೆ ತುಂಬ ಹತ್ತಿರದಲ್ಲಿ ಇರುವಂತೆ ಈ ಅನುವಾದವನ್ನು ಅಳವಡಿಸಿದ್ದೇನೆ. ಏನು ಮಾಡಿದರೂ ಮೂಲ ಮೂಲವೇ, ಅನುವಾದ ಅನುವಾದವೇ. ಆದರೆ ಮೂಲದಲ್ಲಿ ಕಾಳಿದಾಸನಂತಹವರ ಕೃತಿಗಳನ್ನು ಓದುವುದಕ್ಕೆ ಆಗದೆ ಇರುವವರಿಗೆ ಈ ಅನುವಾದ ಆ ಮಹಾಕವಿಯ ವ್ಯಕ್ತಿತ್ವ ಮತ್ತು ಕೃತಿಗಳ ವಿಷಯದಲ್ಲಿ ತಕ್ಕ ಮಟ್ಟಿಗೆ ತಿಳಿವನ್ನು ನೀಡಬಹುದೆಂಬ ಸಮಾಧಾನದಿಂದ ಈ ಕಾರ್ಯದಲ್ಲಿ ನಿಮಿತ್ತಮಾತ್ರನಾದ ನಾನು ಲೇಖನಿಯನ್ನು ಕೆಳಗಿಡುತ್ತಿದ್ದೇನೆ." ಹೀಗೆ ಬಹಳ ತೂಕದ ನಮ್ರಾನತೋಕ್ತಿಗಳಿಂದ ಹೇಳಿರುವ ಮಾತುಗಳು ಅವರ ವ್ಯಕ್ತಿತ್ವಕ್ಕೆ ನಿದರ್ಶನ. ಶಬ್ದಗಳ ಜೀವಾಳವರಿತು, ಅರ್ಥಪುಷ್ಟವಾಗಿ, ಭಾವದೀಪ್ತವಾಗಿ, ಧ್ವನಿಪ್ರಚುರವಾಗಿ ಬಳಸುವ ಕಲೆ ಶಬ್ದಬ್ರಹ್ಮನ ಉಪಾಸನೆ ಸುಲಭಸಾಧ್ಯವೇನಲ್ಲ. "ಶಬ್ದಪಾರಮಾರ್ಗಮಶಕ್ಯಂ." ಎಷ್ಟೋ ನಮ್ಮ ಮನಸ್ಸಿನ ಅನಿಸಿಕೆಗಳನ್ನೇ ನಾವು ವಾಚಾ ತಿಳಿಸುವುದಕ್ಕೆ, ಅಮೂರ್ತಭಾವನೆಗಳಿಗೆ ವಾಗ್ರೂಪದ ಹೊದಿಕೆಯನ್ನು ತೊಡಿಸುವುದಕ್ಕೆ, ನಮ್ಮ ಸ್ವಾನುಭವಗಳನ್ನು ಶಬ್ದಶಕ್ತಿಮುಖೇನ ಇತರರಿಗೂ ತಿಳಿಸುವುದಕ್ಕೆ ಬಹಳ ಕಷ್ಟವುಂಟಾಗುತ್ತದೆ. ಸಾಧಾರಣವಾಗಿ ನಾವು ಎಷ್ಟು ಅರ್ಥಮಾಡಿಕೊಳ್ಳಬಲ್ಲೆವೊ ಅದರ ಹತ್ತನೇ ಒಂದರಷ್ಟು ನಾವೇ ಸ್ವತಃ ಹೇಳಬಲ್ಲೆವು ಎನ್ನಿಸುತ್ತದೆ. ಹಾಗಿರುವಾಗ ಇತರರ ಹೃದ್ಗತ ಭಾವನೆಗಳನ್ನು ಅನ್ಯಭಾಷೆಯ ಅದರಲ್ಲೂ ದೇವಭಾಷೆಯೆಂದು ಪರಿಗಣಿತವಾದ ಸಂಸ್ಕೃತದ ವಾಗ್ಭಂಡಾರದ ಮುದ್ರೆಯನ್ನೊತ್ತಿದ ಸರಸ್ವತಿಯ ಅವತಾರವಾದ ಕಾಳಿದಾಸನ "ಅರ್ಥ" ಸರ್ವಸ್ವವನ್ನೂ ತಮ್ಮ ಕನ್ನಡ ಕಾಳಿದಾಸ ಮಹಾಸಂಪುಟದಲ್ಲಿ ತುಂಬಿಟ್ಟುದು ಶ್ರೀಪರಮೇಶ್ವರ ಭಟ್ಟರ ವಾಙ್ಮಯ ತಪಸ್ಸಿನ ಅಮೃತ ಅಕ್ಷಯ ಫಲಸಿದ್ಧಿ. ಕನ್ನಡಿಗರಿಗೆ ಇದೊಂದು ತವನಿಧಿ! ಅಕ್ಷಯ ಪಾತ್ರೆ! ಸಾಹಿತ್ಯಕ್ಷೇತ್ರದ ಚಿನ್ನದ ಬೆಳೆಯನ್ನು ಬೆಳೆದು, ಶಾರದೆಯ ದೇಗುಲದ ಪೂಜ್ಯಪೂಜಾರಿಯಾಗಿ, ಸರಸ್ವತಿಯನ್ನು ಸ್ತುತಿಸಿ ವಾಣಿಯ ವೀಣೆಯಲ್ಲಿ ಪಲುಕು ಪರೇಕುಗಳನ್ನು ನುಡಿಸಿ, ಸಕಲವಿದ್ವಜ್ಜನ ಮಾನ್ಯರಾದ ಶಾರದೆಯ ವರಪುತ್ರರು ಶ್ರೀ ಗುರು ಪರಮೇಶ್ವರ ಭಟ್ಟರು. ಆದರ್ಶ ಅಧ್ಯಾಪಕರಾಗಿ, ಸರಸಕವಿಗಳಾಗಿ, ಉತ್ತಮ ವಾಗ್ಮಿಗಳಾಗಿ, ದಕ್ಷ ಆಡಳಿತಗಾರರಾಗಿ ಸುಸಂಸ್ಕೃತ ಕನ್ನಡ ಪುರುಷರಾಗಿ ಬಹುಮುಖಿ ಸೇವೆ ಅವರ ಜೀವನದ ಹೆಗ್ಗುರಿ! ಕಾಳಿದಾಸನನ್ನು ಕನ್ನಡಿಸುವ ಪಾಂಡಿತ್ಯ, ಪ್ರತಿಭೆ,

ಪರಿಚಯ, ಅವಿರತಶ್ರಮ, 'ಎಂಟೆರ್ದೆ' ಅಪರಿಗಿದೆ. ರಸನಿರ್ಭರ ಸೂಕ್ತಿಗರ್ಭ ಅವ್ಯಾಜಸುಂದರ ವಾಗ್ಸ್ಫೋರಣೆ; ಮಾತಿನ ಸರಣಿಗೆ ಅನುರಣಿಸುವ ಕಿರುಗೆಜ್ಜೆಯ ಗುಂಜಾರವದಂತೆ ಗುಂಜನಕೂಜನಗೈಯುವ ಪದಗುಂಫನಕ್ರಮ; ಶ್ರುತಿಸುಭಗತೆಯಿಂದ ಕೂಡಿದ ಸಂಧಿ, ಛಂದೋಬಂಧಗಳು ನಿಜಕ್ಕೂ ಅಪೇಕ್ಷಣೀಯ. ತರ್ಜುಮೆಯಲ್ಲಿ ತರ್ಜನಿಯಿಂದ ತೋರಿಸಲೇಬೇಕಾದ, ವರ್ಜ್ಯವೆನ್ನುವ ಭಾಗ ಕಣ್ಣಿಗೆ ಕಣ್ಣಿಟ್ಟು ನೋಡಿದರೆ ಒಂದೋ ಎರಡೋ ಸಿಗಬಹುದು. ಆದರೆ 'ಬಹುಗುಣಗಳಿರಲೊಂದು ದೋಷವಿದ್ದರು ಕೂಡ ಅಡಗುವುದು ಚಂದ್ರಕರಗಳಲಿ ಕಲೆಯಂತೆ' ಎಂದಂತೆ ಕಾಳಿದಾಸನ ಸಮಗ್ರ ಕೃತಿಗಳ ಈ ಪ್ರಪ್ರಥಮ ಕನ್ನಡ ಅನುವಾದ ನಿಜಕ್ಕೂ ಗ್ರಾಹ್ಯ, ಸೇವ್ಯ. ಕನ್ನಡ ನಾಡಿಗೆ ಸಾಹಿತ್ಯಕ್ಕೆ ನಿಜಕ್ಕೂ ಇದೊಂದು ಅಮೇಯ ಮಹಿಮೆಯ ಅಮೂಲ್ಯ ಕೊಡುಗೆ!

ನಿರರ್ಗಳವಾಗಿ ಸಹಜಸುಂದರತೆಯಿಂದ ಅಹಮಹಮಿಕೆಯಿಂದ ಮೈವೆತ್ತು ಬಂದ ಅನವದ್ಯ ಅಮೋಘ ಭಾಷಾಂತರದ ಕುರಿತು ರಸಿಕರ ಮನಸ್ಸು ನಲಿನಲಿದಾಡುವುದು. "ಸಂಸ್ಕೃತವನ್ನೋದಿಲ್ಲ; ಕಾಳಿದಾಸನನ್ನು ಅರ್ಥವಿಸುವುದೆಂತು" ಎಂದು ಯಾರೂ ಕಿಂಕುರ್ವಾಣಪ್ರವಣರಾಗಿ ಕಾಂದಿಶೀಕರಾಗಬೇಕಾಗಿಲ್ಲ. "ಕನ್ನಡಿ" ಎಂದರೇನು? "ದರ್ಪಣ" ಎಂದರೇನು? ಪದಮಾತ್ರ ಕನ್ನಡ–ಸಂಸ್ಕೃತವೆಂದಲ್ಲದೆ ವಸ್ತುವೊಂದೇ ಎಂದು ಚಾಟು ವಿಠಲನಾಥ ಕನ್ನಡ ಭಾಗವತದ ಆದಿಯಲ್ಲಿ ತಿಳಿಸಿ, ಸಂಸ್ಕೃತ ಕನ್ನಡವೆಂಬ ಭಾಷಾವ್ಯಾಮೋಹ, ಅಥವಾ ಯಾವುದಾದರೊಂದು ಭಾಷೆಯತ್ತ ಅಪರೀಕ್ಷಿತ ಪಕ್ಷಪಾತದತ್ತ ವಾಲುವಿಕೆಯನ್ನು ಮಾಡಲಾಗದೆಂದಿದ್ದಾನೆ. ಈ ನಿಟ್ಟಿನಿಂದಲೂ ನಾವು ಕಾಳಿದಾಸ ಮಹಾ ಸಂಪುಟದತ್ತ ಅವಜ್ಞೆಯಿಂದಿರಲಾಗದು. ಮೂಲದ ಸೊಗಸೇ ಸಿಗುವುದಿಲ್ಲವೆನ್ನಿ; ಆದರೆ ಕಾಳಿದಾಸನ ರೂಪರೇಷೆಗಳನ್ನು ಅರಿಯಲೆಳಸುವ ಜಿಜ್ಞಾಸುಗಳು, ಶ್ರೀಭಟ್ಟರ ಭಾಷಾಂತರದತ್ತ ಬನ್ನಿ! ಕಠಿನಶಬ್ದಗಳ ಪೇರಣೆಯಾಗಲೀ, ಭಾಷೆಯ ದುರುದುಂಬಿತನದ ದುಂದುಬಳಕೆಯ ಗೊಂದಲ ದಾಂಧಲೆಗಳಾಗಲೀ ಇಲ್ಲಿ ಬಂದಿಲ್ಲ. ಮೂಲಪದ್ಯಗಳ ಭಾವಶ್ರೀಮಂತಿಕೆಗೆ ಅನುವಾದದಲ್ಲಿ ಅಕಿಂಚನತೆಯ ಚಿಂತೆಯಾಗಲೀ ಬಂದಿಲ್ಲ. ಒಬ್ಬ ಕವಿಯ ಎಲ್ಲಾ ಕೃತಿಗಳನ್ನೂ 'ಹೇಳಿಮಾಡಿಸಿದಂತೆ' ಎನ್ನುವಷ್ಟು ಸುಂದರವಾಗಿ. ಒಬ್ಬ ಕವಿಯಿಂದಲೇ, ಒಂದೇ ಸಂಪುಟದಲ್ಲಿ ಕನ್ನಡ ಸಾಹಿತ್ಯದಲ್ಲೇ 'ನವೋನವ', 'ಇದಂ ಪ್ರಾಥಮ್ಯೇನ' ಎಂಬಂತೆ, ಅದ್ಯತನವಾಗಿಯೂ ಅನವದ್ಯಗುಣಗಳಿಂದ ಅಭಿನಂದನೀಯ ಹಾಗೂ ಅಭಿವಂದನೀಯವಾಗಿ ಬಂದಿರುವುದು ಕನ್ನಡನಾಡಿನ, ನುಡಿಯ, ಜನತೆಯ ಭಾಗ್ಯಫಲೋದಯ! 'ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾರನ್' ಎಂದು ಹೇಳಿದಿರೆ ಹೆಚ್ಚಾದೀತೇ? ವಿಸ್ತರಕ್ಕೆ ಅವಕಾಶವಿಲ್ಲದ ಈ ಲಘುಬರಹದಲ್ಲಿ, "ಸ್ಥಾಲೀಪುಲಾಕನ್ಯಾಯ"ದಂತೆ; ಅಲ್ಲಿಂದೊಂದು, ಇಲ್ಲಿಂದೊಂದು ಎಂದು ದಿಙ್ಮಾತ್ರ ಸೂಚಿಸಿ, ಆ ಮಹತ್ತು ಬೃಹತ್ತುಗಳಿಂದ ಕೂಡಿದ ಕಾಳಿದಾಸ ಮಹಾಸಂಪುಟದತ್ತ ಸಾಗಲು ತೋರುಗಂಬದಂತೆ ನನ್ನ ಈ ಒಣ ಬರಹದ ಮೂಲಕ, ಗುರುಋಣದ ಕಣಭಾಗವಾದರೂ ಸಂದಾಯವಾಗುವುದಾದರಾಗಲಿ ಎಂಬ ಎಣಿಕೆಯ ಹವಣಿಕೆ ನನ್ನದು!

ಈ ಲೇಖನವನ್ನು ಕಾಳಿದಾಸ ಮಹಾಸಂಪುಟದ ಕೂಲಂಕಷ ಆಮೂಲಾಗ್ರ ವಿಮರ್ಶೆಯೆಂದು ಭಾವಿಸಲಾಗದು. ಅಂತಹ ವಿಮರ್ಶೆಯನ್ನು ಬಯಸುವವರು ಕನ್ನಡದಲ್ಲಿ ಬಂದಿರುವ 'ಕಾಳಿದಾಸ ಮಹಾಕವಿ'—ಸಿ. ಕೆ. ವೆಂಕಟರಾಮಯ್ಯ; 'ಕಾಳಿದಾಸ'—ಎಂ. ಲಕ್ಷ್ಮೀನರಸಿಂಹಯ್ಯ; 'ಕಾಳಿದಾಸನ ಉಪಮೆಗಳು'—ಎಂ. ರಾಜಗೋಪಾಲಾಚಾರ್ಯ, 'ಕಾಳಿದಾಸನ ಕಾವ್ಯಗಳು'—ಎಸ್. ರಾಮಚಂದ್ರ ರಾವ್ ಮುಂತಾದವರ ಪುಸ್ತಕಗಳನ್ನು ಓದಬಹುದು. ಅಂತೆಯೇ ಇಂಗ್ಲಿಷಿನಲ್ಲೂ ಹಲವಾರು ಗ್ರಂಥಗಳಿವೆ. ಹೆಚ್ಚೇಕೆ ಪ್ರಪಂಚದ ಎಲ್ಲಾ ಭಾಷೆಗಳಲ್ಲೂ ಕಾಳಿದಾಸನನ್ನು ಕುರಿತ ಉಲ್ಲೇಖಗಳಿವೆ; ಅವುಗಳನ್ನು ಓದಬಹುದು.

**ಋತುಸಂಹಾರ:**

ವರಕವಿಯೂ ಕವಿವರನೂ ಆದ ಕಾಳಿದಾಸ ತಾನು ಕಂಡು ಅನುಭವಿಸಿದ ಆರು ಋತುಗಳ ವರ್ಣನಾತ್ಮಕ ಗೀತೆಗಳನ್ನು ಸಂಕಲಿಸಿ ಋತುಸಂಹಾರವೆಂಬ ಖಂಡಕಾವ್ಯವನ್ನು ರಚಿಸಿದ್ದಾನೆ. ಈ ಲಘು

ಕಾವ್ಯದಲ್ಲಿ ಆರುಸರ್ಗಗಳು, ಕ್ರಮವಾಗಿ ಗ್ರೀಷ್ಮ, ಪ್ರಾವೃಟ್, ಶರತ್, ಹೇಮಂತ, ಶಿಶಿರ, ವಸಂತ ಕಾಲಗಳನ್ನು ಕುರಿತು ವರ್ಣಿಸಿರುವ ವಿವಿಧ ವೃತ್ತಗಳಿಂದ ಕೂಡಿ ಮನೋಜ್ಞವಾಗಿ ಚಿತ್ರಿತವಾಗಿದೆ. ಋತುಗುಣಕ್ಕನುಗುಣವಾಗಿ ಆಚಾರ, ವಿಚಾರ, ವೇಷ ಭೂಷಣಗಳು, ಪಾನೀಯಪಾನ ಕ್ರಿಯೆಗಳು, ಆಸೆ ಆಕಾಂಕ್ಷೆಗಳು, ವಿಶೇಷ ಕಾಮನೆಗಳು, ಕಾಮಿಜನದ ಬಯಕೆಗಳು, ಸುಸೂಕ್ಷ್ಮವಾಗಿ ಎಲ್ಲಾ ವಿಚಾರ ವಿಶ್ಲೇಷಣೆಗಳು ಕಾಳಿದಾಸನ ಪ್ರಜ್ಞಾಕುಂಚಿಕೆಯಿಂದ ಪ್ರತಿಭಾರಂಜಿತವಾಗಿ ಚಿತ್ರಿತವಾಗಿದೆ. ರಸಿಕ ಮನೋರಂಜನಿಯಾಗಿ, ತಟಿದ್ವಿಲಸನ ವಿಭ್ರಮದಂತೆ ಅನೂಹ್ಯ, ಅಮೇಯ, ಅಚಿಂತ್ಯ ಚಮತ್ಕೃತಿ ಯಿಂದ, ಜಾಜ್ವಲ್ಯಮಾನವಾದ ಜ್ವಲಂತ ಉಪಮಾನ, ವಿಷಯನಿರೂಪಣೆ, ವೈವಿಧ್ಯವಾಗಿ ನಿರೂಪಿಸುವ ಪರಿಪಾಠಿ, ಸ್ವೋಪಜ್ಞ ವಿಷಯಗಳ ಕಂಡರಣೆಯ ಕುಶಲ ಕೈವಾಡಿಸುವಿಕೆ 'ನ ಭೂತೋ ನ ಭವಿಷ್ಯತಿ' ಯಾದುದು. ಮೂಲದ ಸೊಗಸು ಅನುವಾದದ ಕನ್ನಡಿಯ ಮುಖಾಂತರವಾಗಿ ನಿಮ್ಮ ಮನೋ ಮಂದಿರಗಳಲ್ಲಿ ಪ್ರತಿಫಲಿಸಲಿ. ಅದಕ್ಕೆ ಕನ್ನಡಿಹಿಡಿಯುವ ಯತ್ನವನ್ನು ಯಥಾಶಕ್ತಿ ಮಾಡುತ್ತಿದ್ದೇನೆ.

* * * *

"ಅಸಹ್ಯವಾತೋದ್ಧತರೇಣುಮಂಡಲಾ
ಪ್ರಚಂಡ ಸೂರ್ಯಾತಪತಾಪಿತಾ ಮಹೀ ।
ನ ಶಕ್ಯತೇ ದ್ರಷ್ಟುಮಪಿ ಪ್ರವಾಸಿಭಿಃ
ಪ್ರಿಯಾವಿಯೋಗಾನಲದಗ್ಧಮಾನಸೈಃ ॥"

ಭರದೆ ಸುಂಟರಗಾಳಿ ಬೀಸಿತು ರೇಣುಮಂಡಲ ಕವಿಯಿತು
ಚಂಡಸೂರ್ಯನ ತಾಪದೊಳು ಈ ಧರಣಿಮಂಡಲ ಸುಟ್ಟಿತು ।
ನಲ್ಲೆಯಗಲಿಕೆ ಬೆಂಕೆಯೊಳು ಆ ಪಥಿಕಜನಮನ ಬೆಂದಿತು
ತನ್ನ ನಿಡುಪಯಣದೊಳು ಮುಂದಿನ ದಾರಿಕಾಣದೆ ನೊಂದಿತು ॥

ಮಳೆಗಾಲದ ನದಿಯ ಓಟ:

"ನಿಪಾತಯಂತಃ ಪರಿತಃ ತಟದ್ರುಮಾನ್
ಪ್ರವೃದ್ಧವೇಗೈಃ ಸಲಿಲೈರನಿರ್ಮಲೈಃ ।
ಸ್ತ್ರಿಯಃ ಪ್ರದುಷ್ಟಾ ಇವ ಜಾತವಿಭ್ರಮಾಃ
ಪ್ರಯಾಂತಿ ನದ್ಯಃ ತ್ವರಿತಂ ಪಯೋನಿಧಿಂ ॥"

ವೇಗವಾಗಿ ಹರಿದುಬರುವ ಕೊಳೆಯ ನೀರು ಸೆಳೆಯಲು
ದಡದ ಬದಿಯ ಮರಗಳೆಲ್ಲ ಕೊಚ್ಚಿ ಉರುಳಿ ಬೀಳಲು ।
ಭ್ರಮಿತ ದುಷ್ಟ ಕಾಂತೆಯಂತೆ ಅಮಿತ ವೇಗಗಾಮಿನಿ
ರಭಸದಿಂದ ಧಾವಿಸುತಿದೆ ಕಡಲ ಕಡೆಗೆ ವಾಹಿನಿ ॥

ಪ್ರಣಯಿಜನರ ಪ್ರಾಣ, ಕಾಮನೆಗಳ ಕಾಮಧೇನು ಹರ್ಷವರ್ಷಾಕಾಲ:

"ಬಹುಗುಣರಮಣೀಯಃ ಕಾಮಿನೀಚಿತ್ತಹಾರೀ
ತರುವಿಟಪಲತಾನಾಂ ಬಾಂಧವೋ ನಿರ್ವಿಕಾರಃ ।
ಜಲದಸಮಯ ಏಷ ಪ್ರಾಣಿನಾಂ ಪ್ರಾಣಭೂತೋ
ದಿಶತು ತವಹಿತಾನಿ ಪ್ರಾಯಶೋ ವಾಂಛಿತಾನಿ ॥"

ತರುಲತೆಗಳ ಬಂಧುವೆನಿಸಿ
ಖಗಮೃಗಗಳ ತ್ರಾಣವೆನಿಸಿ
ಪ್ರಣಯಿಜನರ ಪ್ರಾಣವೆನಿಸಿ
ಅಮಿತಗುಣಗಳಿಂದಲೆಸೆದು
ಕಾಮಿನಿಯರ ಮನವ ಸೆಳೆದು
ನಲಿಸಲಿರುವ ವರ್ಷಋತುವು
ಕಾಂತೆ ನಿನ್ನ ಮನಸಿನೆಲ್ಲ
ಕಾಮನೆಗಳ ಸಲಿಸಲಿ.

* * * *

'ಭ್ರಮಿತ ಮಷ್ಟಕಾಂತೆಯಂತೆ ಅಮಿತವೇಗಗಾಮಿನಿ'ಯಾದ ನದಿ, ಶರತ್ಕಾಲದಲ್ಲಿ,

"ಚಂಚನ್ಮನೋಜ್ಞಶಫರೀರಸನಾಕಲಾಪಾಃ
ಪರ್ಯಂತಸಂಸ್ಥಿತಸಿತಾಂಡಜಪಙ್ಕ್ತಿಹಾರಾಃ ।
ನದ್ಯೋ ವಿಶಾಲಪುಲಿನಾಂತ ನಿತಂಬಬಿಂಬಾ
ಮನ್ದಂ ಪ್ರಯಾನ್ತಿ ಸಮದಾಃ ಪ್ರಮದಾ ಇವಾದ್ಯ ॥"

ಹೊಳೆಯುವ ಸುಂದರಮರಿಮೀನುಗಳೇ
ಚಿನ್ನದ ಹೊಸಕಟಿಸೂತ್ರವೆನೆ
ದಡದಲಿ ಕುಳಿತಿಹ ಬೆಳ್ಳಕ್ಕಿಗಳೇ
ಮುತ್ತಿನ ನವಮಣಿಹಾರವೆನೆ
ಹಸರಿಸಿ ತೋರುವ ಪುಳಿನವಿತಾನವೆ
ಸುಂದರ ತೋರ ನಿತಂಬವೆನೆ
ಮಂದಗಮನದಲಿ ಹರಿವಳು ವಾಹಿನಿ
ಪ್ರೇಮೋನ್ಮಾದದ ಯುವತಿಯೆನೆ.

ಶರದಋತು ಮೈಗರೆದು ಹೇಮನ್ತ ಮೈದಳೆದಾಗ,

"ಸ್ತ್ರೀಣಾಂ ವಿಹಾಯ ವದನೇಷು ಶಶಾಂಕಲಕ್ಷ್ಮೀಂ
ಕಾಮಂ ಚ ಹಂಸವಚನಂ ಮಣಿನೂಪುರೇಷು ।
ಬಂಧೂಕಕಾನ್ತಿಮಧರೇಷು ಮನೋಹರೇಷು
ಕಾಪಿ ಪ್ರಯಾತಿ ಸುಭಗಾ ಶರದಾಗಮಶ್ರೀಃ ॥"

ರಮಣಿಯರ ವದನದಲಿ ಚಂದಿರನ ಕಳೆಯಿರಿಸಿ
ಕಾಲಿನಂದುಗೆಗಳಲಿ ಅಂಚೆಯುಲಿಯಿರಿಸಿ ।
ಅವರ ಚೆಂದುಟಿಗಳಲಿ ಬಂಧೂಕ ಕಳೆಯಿರಿಸಿ
ಶಾರದ ಶ್ರೀಕಾಂತೆ ಮೈಗರೆದಳರಸಿ.

* * * *

ಹೇಮನ್ತಕಾಲದ ಏಕಾನ್ತಸುಖದ ವರ್ಣನೆ ಕವಿಗಳ ಮುಖದಿಂದಲೇ ಕೇಳಿರಿ:

"ಗಾತ್ರಾಣಿ ಕಾಲೇಯಕಚರ್ಚಿತಾನಿ
ಸಪತ್ರಲೇಖಾನಿ ಮುಖಾಂಬುಜಾನಿ ।
ಶಿರಾಂಸಿ ಶಾಲಾಗುರುಧೂಪಿತಾನಿ
ಕುರ್ವನ್ತಿ ನಾರ್ಯಃ ಸುರತೋತ್ಸವಾಯ ॥"

ಸೋಗೆವೊಲು ಸೊಂಪಾದ ತಮ್ಮ ಸಿರಿಮುಡಿ ಬಿಚ್ಚಿ
ಅಗರುಧೂಪದ ಹೊಗೆಯ ಕಂಪನೆರೆದು
ಕಮಲದೊಲು ಸೊಗಸಾದ ತಮ್ಮ ನಗೆಮೊಗಮೆಚ್ಚಿ
ಮಕರಿಕಾಪತ್ರಗಳನೊಲಿದು ಬರೆದು
ಪತಿಗಳಾಲಿಂಗನದ ಅಮೃತದಾನಂದವನು
ಸವಿದು ನಲಿವಾತುರದಿ ಸತಿಯರಿಂದು
ಪ್ರಿಯರ ಬಳಿಗೈತಹರು ಪ್ರೇಮಪುಳಕಿತರಾಗಿ
ಕಾತರತೆಯೊಡಮೂಡಿ ವಿವಶರಾಗಿ ॥

ಇಂತಹ ಕಾಮಿನಿಯರು ಯಾಮಿನೀವಿಹಾರವಮುಗಿಸಿ ತ್ರಿಯಾಮಾವಸಾನದಲ್ಲಿ.

"ಅನ್ಯಾಪ್ರಿಯೇಣ ಪರಿಭುಕ್ತಮವೇಕ್ಷ್ಯಗಾತ್ರಂ
ಹರ್ಷಾನ್ವಿತಾವಿರಚಿತಾಧರಚಾರುಶೋಭಾ ।
ಕೂರ್ಪಾಸಕಂ ಪರಿದಧಾತಿ ನಖಕ್ಷತಾಂಗೀ
ವ್ಯಾಲಂಬಿನೀಲಲಲಿತಾಲಕಕುಂಚಿತಾಕ್ಷೀ ॥"

ಓಪ ಭೋಗಿಸಿದಂಗವನು ಸಲೆ ನೋಡಿಕೊಳ್ಳುತಲಿತ್ತ ಕಾಮಿನಿಯೊರ್ವಳು
ತನ್ನ ಚೆಲುವಿನ ತುಟಿಯ ಬಿರಿಯಿಸಿ ತಿದ್ದುತದರೊಳು ನಗೆಯ ಮೂಡಿಸುತಿರುವಳು
ತಾನು ಮತ್ತೆ ನಖಕ್ಷತಂಗಳಿನೆಸೆವ ಕುಚದೊಳು ಕುಪ್ಪಸವ ಸಹ ತೊಡುವಳು
ನೀಲ ಲಲಿತಾಲೋಲ ಚಿಕುರಗಳೋಳಿ ಮುಚ್ಚಿದ ಕಂಗಳಿಂದಿವಳೆಸೆವಳು ॥

* * * *

ಮುಂದೆ ಬಂದ 'ಪ್ರಕಾಮಕಾಮಂ ಪ್ರಮದಾಜನಪ್ರಿಯಂ' ಎನಿಸಿದ ಶಿಶಿರದ ವರ್ಣನೆಯಂತೂ, ಅದರಲ್ಲೂ ಶಯ್ಯಾಗೃಹಸಮುತ್ಸುಕರಾದ ನವಯುವತಿಯರ ವಿಭೂಷಣಾದಿಗಳು ಕಾಮಿಜನರ ಹೃನ್ಮಂದಿರವಲ್ಲಿ ರಿಂಗಣಕುಣಿಕುಣಿದಾಡುವುವು. ವಿಲಾಸಿಗಳ ಚಳಿಗಾಲದ ನಿದ್ರಾಕ್ರಮ ಹೀಗಿದೆ:

"ಪಯೋಧರೈಃ ಕುಂಕುಮರಾಗಪಿಂಜರೈಃ
ಸುಖೋಪಸೇವ್ಯೈಃ ನವಯೌವನೋಷ್ಮಭಿಃ ।
ವಿಲಾಸಿನೀಭಿಃ ಪರಿಪೀಡಿತೋರಸಃ
ಸ್ವಪನ್ತಿ ಶೀತಂ ಪರಿಭೂಯ ಕಾಮಿನಃ ॥"

ಚಾರುಕುಂಕುಮರಾಗರಂಜಿತ ಕುಚವನುಪಧಾನದೊಲು ಬಳಸುತಲಿನಿಯರು ।
ಯೌವನದ ಹೊಸ ಕಾವಿನೊಳು ಸಲೆ ಚಳಿಯನಣಕಿಸಿ ಸೊಗದೆ ನಿದ್ರಿಸುತಿರುವರು ॥

ಚಳಿಗೆ ಬಳಲಿದ ಲಲಿತಾಂಗಿಯರು ರಮಣರ ಅಪರಾಧವನ್ನು ಮರೆತರಂತೆ!

"ಕೃತಾಪರಾಧಾನ್ ಬಹುಶೋಪಿತರ್ಜಿತಾನ್
ಸವೇಪಥೂನ್ ಸಾಧ್ವಸಲುಪ್ತಚೇತಸಃ ।
ನಿರೀಕ್ಷ್ಯ ಭರ್ತೄನ್ ಸುರತಾಭಿಲಾಷಿಣಃ
ಸ್ತ್ರಿಯೋಪರಾಧಾನ್ ಸಮದಾವಿಸಸ್ಮರುಃ ॥"

ತಮ್ಮ ಹೃದಯೇಶ್ವರರ ಮುನ್ನಿನಪರಾಧಗಳ
ಮರೆತು ಮನ್ನಿಸಿ ಮತ್ತೆ ಪ್ರೀತರಾಗಿ ।

ಬಳಿಗೆ ಬಹ ಸುದತಿಯರ ನಲ್ಲರಾದರಿಸುವರು
ಪ್ರೇಮಪೂಜೆಗೆ ಮೊದಲೆ ಸಿದ್ಧರಾಗಿ ॥

*　　　　*　　　　*　　　　*

'ಋತೂನಾಂ ಕುಸುಮಾಕರಃ' ಎಂದ ವಸಂತಕಾಲದ ವರ್ಣನೆಯಾದರೋ "ಸರ್ವಂ ಪ್ರಿಯೇ! ಚಾರುತರಂ ವಸನ್ತೇ" ಎನ್ನುವಂತಹದು!

"ದ್ರುಮಾಃ ಸಪುಷ್ಪಾಃ ಸಲಿಲಂಸಪದ್ಮಂ ಸ್ತ್ರಿಯಃಸಕಾಮಾಃ ಪವನಃ ಸುಗಂಧಿಃ ।
ಸುಖಾಪ್ರದೋಷಾಃ ದಿವಸಾಶ್ಚರಮ್ಯಾಃ ಸರ್ವಂಪ್ರಿಯೇ ಚಾರುತರಂ ವಸನ್ತೇ ॥"

'ಕವಿಹೃದಯ ತಾದಾತ್ಮ್ಯಪತ್ತಿಯೋಗ್ಯತೆಯ' ಅನುವಾದವಿದು:

ಕುಸುಮಭರಿತತರುಗಳಿಂದ ಕಮಲವನದ ಕೊಳಗಳಿಂದ
ಕಂಪುಸೂಸುವೆಲರಿನಿಂದ ಸೊಬಗುವೆರೆದ ಸಂಜೆಯಿಂದ
ರಮ್ಯವಾದ ದಿನಗಳಿಂದ ರಾಗಭರಿತವಧುಗಳಿಂದ
ಸಂತಸವನು ಈವ ಈ ವಸಂತ ಅತಿಮನೋಜ್ಞವಾಗಿದೆ.

"ಸಪತ್ರಲೇಖೇಷು ವಿಲಾಸಿನೀನಾಂ ವಕ್ತ್ರೇಷು ಹೇಮಾಂಬುರುಹೋಪಮೇಷು ।
ರತ್ನಾನ್ತರೇ ಮೌಕ್ತಿಕಸಂಗರಮ್ಯಃ ಸ್ವೇದಾಗಮೋ ವಿಸ್ತಾರತಾಮುಪೈತಿ ॥"

ಹೊಂದಾವರೆವೊಲು ಮೆರೆಯುವ ಮೊಗದಲಿ
ಬೆವರಿನ ಹನಿಗಳ ಮಣಿಮಾಲೆ ।
ಮಿರುಗುತಲಿರುವುದು ರತ್ನಾಭರಣದೊ-
ಳೊಪ್ಪುವ ಮುತ್ತಿನ ಮಣಿವೋಲೆ ॥

ಋತುಸಂಹಾರದ ಕೊನೆಯ ಪದ್ಯ ಮತ್ತು ಅದರ ಅನುವಾದ:

"ಆಮ್ರೀಮಂಜುಲಮಂಜರೀವರಶರಃ ಸತ್ಕಿಂಶುಕಂ ಯದ್ಧನುಃ
ಜ್ಯಾಯಸ್ಯಾಲಿಕುಲಂ ಕಲಂಕರಹಿತಂ ಛತ್ರಂ ಸಿತಾಂಶುಃ ಸಿತಂ ।
ಮತ್ತೇಭೋ ಮಲಯಾನಿಲಃ ಪರಭೃತೋ ಯದ್ಬಂದಿನೋ ಲೋಕಜಿತ್
ಸೋಯಂ ವೋ ವಿತರೀತರೀತು ವಿತನುರ್ಭದ್ರಂ ವಸನ್ತಾನ್ವಿತಃ ॥"

ಮಾಮರದ ಚಾರುತರ ಮಂಜರಿಯೆ ಶರವೆನಲು
ಶೋಭಿಸುವ ಕಿಂಶುಕವೆ ಚಾಪವೆನಲು
ಮೊರೆವ ಭೃಂಗಾವಳಿಯೆ ಮೆರೆವ ಶಿಂಜಿನಿಯೆನಲು
ಅಕಳಂಕ ಚಂದಿರನೆ ಛತ್ರಿಯೆನಲು
ಸುಳಿವ ಮಲಯಾನಿಲನೆ ಮತ್ತವಾರಣವೆನಲು
ಕುಕಿಲಿಡುವ ಪರಭೃತವೆ ವಂದಿಯೆನಲು
ತ್ರಿಜಗವನು ಗೆಲ್ದ ತನು ಚೈತ್ರನೊಡನೈತರಲಿ
ಕಾಂತೆ ನಿನಗಾವಗಂ ಮುದವೀಯಲಿ.

*　　　　*　　　　*　　　　*

**ಮೇಘದೂತ:**

ಮೇಘದೂತ ಅಥವಾ ಮೇಘಸಂದೇಶ ಕಾಳಿದಾಸನ ಇನ್ನೊಂದು ಖಂಡಕಾವ್ಯ. ಮಂದಾಕ್ರಾನ್ತಾ ವೃತ್ತದಲ್ಲೇ ಬರೆದ ಒಂದು ಅತ್ಯುತ್ತಮ ಭಾವಗೀತೆ. 'ಮಾಘೇ ಮೇಘೇ ಗತಂವಯಃ' ಎಂದು

ಪ್ರಸಿದ್ಧ ವ್ಯಾಖ್ಯಾನಕಾರ ಮಲ್ಲಿನಾಥ 'ಮೇಘಸಂದೇಶವನ್ನೋದುತ್ತಾ ಆಯುಷ್ಯವೇ ಹೋಗಿಹೋತು' ಎಂದಿದ್ದಾನೆ. ಅಷ್ಟು ರಸಪರಿಪ್ಲಾವಿತವಾಗಿ, ರಸಪರಿಪುಷ್ಟವಾಗಿ ರಸಿಕರ ಕೈಬೀಸಿ ಕರೆಯುತ್ತಿದೆ ಈ ವಿಪ್ರಲಂಭ ಶೃಂಗಾರವನ್ನು ವರ್ಣಿಸುವ ಖಂಡಕಾವ್ಯ ಮೇಘದೂತ 'ಅತಸ್ಮ್ರಪಥ' ರೂಪವಾದ ಪ್ರಣಯಿಗಳ ಹಿರಿಯ ಕಿರಿಯರನ್ನೂ ಕೆರಳಿಸುತ್ತದೆ. ಯಕ್ಷನ ಕಾರ್ಯಲೋಪದ ಫಲವಾಗಿ ತನ್ನ ಪ್ರೇಯಸಿಯಿಂದ ದೂರವಾಗಿ ರಾಮಗಿರಿಯ ಆಶ್ರಮದಿಂದ ಮೇಘವೊಂದರ ಮೂಲಕ ಸಂದೇಶ ಕಳುಹಿಸಿದ ವಿಚಾರವೇ ಈ ಕಾವ್ಯದ ಮೂಲಸಂಗತಿ. 'ನಿಸ್ಸಮಾಭ್ಯಧಿಕ' ರೀತಿಯಿಂದ ವರ್ಣಿಸಿದ ವಿರಹವೃತ್ತಾಂತ ದೇಶಾಂತರವನ್ನು, ನಿರಂತರ ಕಾವ್ಯವೆನಿಸಿದೆ. ಅನ್ಯಾದೃಶ ಕಥನರೀತಿ, ನಿರುಪಮ ವಾಗ್ವೈಖರಿ, ಯಕ್ಷನ ಅಸಹಾಯ ಸ್ಥಿತಿ, ಕಾಮಿ ಜನರ ಯಾಚಕ ಮನೋವೃತ್ತಿ, ಬಿಸುಮಾಡಲಿ ಎಂತು ಪ್ರಿಯೆಯೊಡಗೂಡಲಿ ಎಂತು ಬಾಳಿರುವ ಅಂತ ರಾಯ ವಾರವಾಣದಿಂದ ವಿಮುಕ್ತನಾಗಿ ಸ್ವಾಂತ:ಸುಖೈಕಸಾಧನವಾದ ಮನದನ್ನೆಯನ್ನು ಪಡೆಯಲಿ ಎಂದು ಕಾತರಿಸಿ, ಸಂಗಮಲಾಲಸನಾದ ಯಕ್ಷನ ಮೇಘಯಾಚನೆ, ಸಂದೇಶ ಸಂವಹನೆಗಾಗಿ "ಯಾಚ್ಞೆ" ಎಲ್ಲವೂ ಕೇವಲ ಸುಂದರ! ಅಪೇಕ್ಷಣೀಯ! ಆಷಾಢಮಾಸದ ಪ್ರಥಮದಿನಗಳಲ್ಲಿ ಮೇಘಾಶ್ಲಿಷ್ಟ ಸಾನುಪ್ರದೇಶಗಳನ್ನು ಕಂಡ ಯಕ್ಷನ ರಣರಣಕ ಕರುಣಾಕ್ರಂದನ, ಅಶರಣ ಪರಿಸ್ಥಿತಿ, ನಿರನುರೋಧ ಕಾಮನೆ, ಶಾಪದ ತಾಪ, ವಿರಹದ ಸಂತಾಪ ಯಾರನ್ನೂ ಅಯ್ಯೋ ಹೀಗಾಗಬಾರದಿತ್ತು ಎನ್ನಿಸದಿರದು! "ಪ್ರಣಯಿನಿಜನೇ ಕಿಂ ಪುನರ್ದೂರ ಸಂಸ್ಥೇ" ಎಂದು ಊಹಾಪೋಹೆಗೆ ಬಿಡುವ ಕಾಳಿದಾಸನ ಭಾವೋ ದ್ಘಾಟನ ರೀತಿ, ರೀತಿಯಲ್ಲಿ ಸಂಕ್ಷೇಪವಾಗಿದೆ, ಕ್ರಮದಲ್ಲಿ ಸುಂದರವಾಗಿದೆ, ಅರ್ಥಸಾರ್ಥವಾಹಕತೆಯಲ್ಲಿ ವೈಪುಲ್ಯ ಪಡೆದಿದೆ. "ಕಾನ್ತೋದಸ್ತಃ ಸುಹೃದುಪನತಃ ಸಂಗಮಾತ್ಕಿಂಚಿದೂನಃ" ಎನ್ನುವ ಅನುಭವ ಪ್ರಣಯಸರಸಿಯಲ್ಲಿ ಓಲಾಡುವ ಯಾವ ರಾಜಹಂಸನಿಗೂ ತಿಳಿಯುವ ವಿಚಾರ! 'ಅನುಭವವು ಸವಿ ಯಲ್ಲ ಅದರ ನೆನಪೇ ಸವಿಯು' ಎಂದಂತೆ ಯಕ್ಷನ ಹಿಂದಿನ ಅನುಭವ ನಿವೇದನೆ, ಇಂದಿನ ಅನುಭವ ಹಾಗೂ ಸಂವೇದನೆ. ಮುಂದಿನ ಆಕಾಂಕ್ಷೆ ಹೊಂಗನಸು ಎಲ್ಲವೂ ಸರ್ವಥಾ ಸುಂದರ, ಕಮನೀಯ!

ಮೇಘವನ್ನುದ್ದೇಶಿಸಿ ಅಲಕಾಪುರದಲ್ಲಿರುವ ತನ್ನ ಪ್ರೇಯಸಿಗೆ ಸಂದೇಶವನ್ನು ತಿಳಿಸುವಂತೆ ಕೇಳಿ ಕೊಳ್ಳುವ ಕೇಳಿಕೆಯಿದು:

"ಸಂತಪ್ತಾನಾಂ ತ್ವಮಸಿ ಶರಣಂ ತತ್ಪಯೋದ ! ಪ್ರಿಯಾಯಾಃ
ಸಂದೇಶಂ ಮೇ ಹರ ಧನಪತಿ ಕ್ರೋಧವಿಶ್ಲೇಷಿತಸ್ಯ ।
ಗಂತವ್ಯಾತೇ ವಸತಿರಲಕಾ ನಾಮ ಯಕ್ಷೇಶ್ವರಾಣಾಂ
ಬಾಹ್ಯೋದ್ಯಾನಸ್ಥಿತಹರಶಿರಶ್ಚಂದ್ರಿಕಾಧೌತಹರ್ಮ್ಯಾ ॥"

ಸಂತಪ್ತರಾದರಿಗೆ ನೀನೆ ಶರಣಾಗಿರುವೆ
ಹೇ ಪಯೋದನೆ ಅಂತೆ ನಿನ್ನನೆರೆವೆ
ಧನಪತಿಯ ಕೋಪದಿಂದಗಲಿ ಬಂದಿರುವೆನ್ನ
ಸಂದೇಶವಿದನೊಯ್ದು ಪ್ರಿಯೆಗೆ ತಿಳಿಸು
ಅಲ್ಲಿ ಬಹಿರುಪವನದಿ ನೆಲೆನಿಂದ ಪರಶಿವನ
ಶಿರದ ಶಶಿಕಳೆಯ ಬೆಳ್ದಿಂಗಳಿಂದೆ
ಹೊಳೆವ ಹರ್ಮ್ಯಗಳಿರುವ ಯಕ್ಷರೊಡೆಯನು ವಸಿಪ
ಹೆಸರಾದ ಅಲಕೆಯನು ಕುರಿತು ತೆರಳು

ಹೀಗೆ ಹೋಗುವಾಗ ಬಳಸುದಾರಿಯಾದರೂ ಉಜ್ಜಯಿನಿಯನ್ನು ನೋಡದಿದ್ದರೆ. ಅಲ್ಲಿನ ಲೋಲಾ ಪಾಂಗೆಯರ ಕೊಲ್ಮಿನೋಟವನ್ನು ದಿಟ್ಟಿಸದಿದ್ದರೆ ನೀನು ನಿಜಕ್ಕೂ ವಂಚಿತನಾದಂತೆಯೇ.

"ವಕ್ರಃಪಂಥಾಃ ಯದಪಿ ಭವತಃ ಪ್ರಸ್ಥಿತಸ್ಯೋತ್ತರಾಶಾಂ
ಸೌಧೋತ್ಸಂಗಪ್ರಣಯವಿಮುಖೋ ಮಾ ಸ್ಮ ಭೂರುಜ್ಜಯಿನ್ಯಾಃ ।
ವಿದ್ಯುದ್ದಾಮಸ್ಫುರಿತಚಕಿತೈಸ್ತತ್ರಪೌರಾಂಗನಾನಾಂ
ಲೋಲಾಪಾಂಗೈರ್ಯದಿ ನ ರಮಸೇ ಲೋಚನೈರ್ವಂಚಿತೋಽಸಿ ॥"

ಉತ್ತರದ ದೆಸೆಗೆಂದು ಪಯಣ ಬೆಳೆಸುವ ನಿನಗೆ
ಉಜ್ಜಯಿನಿಯಾ ದಾರಿ ಬಳಸಾದರುಂ
ಅಲ್ಲಿನ ಮಹೋತ್ತುಂಗ ಸೌಧದರಮನೆಗಳಲಿ
ಸ್ನೇಹವಿರಹಿತನೆನಿಸಿ ಮೊಗದಿರುಹದೆ
ಬಳ್ಳಿಮಿಂಚಿನ ಬೆಳಗಿಗಿರದೆ ಭಯದಿಂ ಬೆದರಿ
ಚಲಿಸುತಿರುವಾ ನಗರದಂಗನೆಯರ
ಚಕಿತಲೋಲಾಪಾಂಗ ಲೋಚನಂಗಳ ನೋಡಿ
ನೀನಲ್ಲಿ ರಮಿಸದಿರೆ ವಂಚಿತನಹೆ

ಮುಂದೆ ಬಹುರಮ್ಯವಾಗಿ ಬರುವ ಅಲಕಾನಗರದ ವರ್ಣನೆ ರಮ್ಯೋಜ್ಜ್ವಲವಾಗಿದೆ. ಅಲ್ಲಿ ಯಕ್ಷನ ಮನೆಯ ಗುರುತನ್ನು ಕೇಳಿ:

"ತತ್ರಾಗಾರಂ ಧನಪತಿಗೃಹಾನುತ್ತರೇಣಾಸ್ಮದೀಯಂ
ದೂರಾಲ್ಲಕ್ಷ್ಯಂ ಸುರಪತಿಧನುಶ್ಚಾರುಣಾ ತೋರಣೇನ ।
ಯಸ್ಯೋಪಾನ್ತೇಕೃತಕತನಯಃ ಕಾನ್ತಯಾ ವರ್ಧಿತೋ ಮೇ
ಹಸ್ತಪ್ರಾಪ್ಯಸ್ತಬಕನಮಿತೋ ಬಾಲಮನ್ದಾರವೃಕ್ಷಃ ॥"

ಅಲ್ಲಿ ಧನಪತಿಯ ಗೃಹದುತ್ತರದೊಳೆನ್ನ ಮನೆ
ದೂರದೊಳೆ ತೋರುವುದು ಕಣ್ಗೆಸೆಯುತೆ
ಸುರಪತಿಯ ಧನುವಿನಂತತಿಚಾರುತರಮಾದ
ಮಕರತೋರಣದಿಂದೆ ಮನಸೆಳೆಯುತೆ
ಅದರುಪಾಂತದೊಳಿಹುದು ಕೃತಕತನಯನ ತೆರದೊ-
ಳೆನ್ನ ಕಾಂತೆಯು ಮೋಹದಿಂದ ಬೆಳಸೆ
ಕೈಗೆ ನಿಲುಕುವ ತೆರದೆ ಪೂಗೊಂಚಲಿಂ ಬಾಗಿ
ನಿಂದೊಂದು ಬಾಲಮಂದಾರತರುವು.

ಅಲ್ಲಿ,

"ತನ್ವೀ ಶ್ಯಾಮಾ ಶಿಖರಿದಶನಾ ಪಕ್ವಬಿಂಬಾಧರೋಷ್ಠೀ
ಮಧ್ಯೇಕ್ಷಾಮಾ ಚಕಿತಹರಿಣೀಪ್ರೇಕ್ಷಣಾ ನಿಮ್ನನಾಭಿಃ ।
ಶ್ರೋಣೀಭಾರಾದಲಸಗಮನಾ ಸ್ತೋಕನಮ್ರಾ ಸ್ತನಾಭ್ಯಾಂ
ಯಾತತ್ರಸ್ಯಾದ್ಯುವತಿವಿಷಯೇ ಸೃಷ್ಟಿರಾದ್ಯೇವಧಾತುಃ ॥"

ತೆಳುಮೆಯ್ಯ ಪೊಗರುಗುವ ನಡುಹರೆಯದಂಗನೆ
ಸುಲಿಪಲ್ಲ ಸತಿ ಪಕ್ವಬಿಂಬಾಧರೆ
ಚಕಿತಹರಿಣಿಯ ತೆರದಿ ಚಪಲನೇತ್ರಾಲೋಕೆ
ನಿಮ್ನನಾಭಿಯ ಸುಂದರಿ ಕೃಶೋದರಿ

ಶ್ರೋಣೀಭರದ ಕತದೆ ಮಂದಗಾಮಿನಿಯುಳಿಸೆ
ಕುಚಭರದೆ ತಾನೀಷದವನತೆಯೆನಿಸೆ
ಇಲ್ಲಿರುವಳೆನ್ನ ಸತಿ ಯುವತಿಯರ ವಿಷಯದಲಿ
ಧಾತೃವಿನ ಮೊದಲನೆಯ ಸೃಷ್ಟಿಯಂತೆ.

ಇರುವ ತನ್ನ ಮನದನ್ನೆಯ ವಿರಹಸ್ಥಿತಿಯನ್ನು ಯಕ್ಷ ಊಹಿಸುತ್ತಾನೆ :

"ತಾಂ ಜಾನೀಥಾಃ ಪರಿಮಿತಕಥಾಂ ಜೀವಿತಂ ಮೇ ದ್ವಿತೀಯಂ
ದೂರೀಭೂತೇ ಮಯಿ ಸಹಚರೇ ಚಕ್ರವಾಕೀಮಿವೈಕಾಂ ।
ಗಾಢೋತ್ಕಂಠಾಂ ಗುರುಷು ದಿವಸೇಷ್ವೇಷು ಗಚ್ಛತ್ಸು ಬಾಲಾಂ
ಜಾತಾಂ ಮನ್ಯೇ ಶಿಶಿರಮಥಿತಾಂ ಪದ್ಮಿನೀಂ ವಾನ್ಯರೂಪಾಂ ॥"

ಅವಳ ಸಹಚರನೆನಿಸಿದಾನಿಂತು ದೂರವಿರೆ
ಚಕ್ರವಾಕಿಯ ತೆರದೊಳೊಂಟಿಯಾಗಿ
ಪರಿಮಿತಾಲಾಪೆಯೆನೆಕೊರಗುವಬಲೆಯನವಳ
ನನ್ನ ಎರಡನೆ ಜೀವವೆಂದು ಬಗೆಯೌ
ಗುರುವಿರಹಭಾರದಲಿ ನಿಡಿದಾಗಿ ಸಾಗುವೀ
ಮಳೆಯ ದಿನಗಳಲಾಕೆ ಬೇರೆ ರೂಪಿಂ
ಬಾಲೆ ಗಾಢೋತ್ಕಂಠೆ ಶಿಶಿರಪೀಡಿತಳಾದ
ಪದ್ಮಿನಿಯ ತೆರನಿರುವಳೆಂದರಿವೆನು.

ಈ ರೀತಿ ಇರಬಹುದಾದ ತನ್ನ ವಿರಹವಿಹ್ವಲೆಯನ್ನು ಕುರಿತು, ತನ್ನ ಅವಸ್ಥೆಯನ್ನು ಸಂದೇಶರೂಪವಾಗಿ ಮೇಘದೊಡನೆ ಯಕ್ಷ ನಿರವಿಸಿಕೊಳ್ಳುತ್ತಾನೆ. ಉರಿಯಲ್ಲಿ ಬೆಂದು, ಕಣ್ಣೀರಿನಲ್ಲಿ ನಾಂದು ಮನದಲ್ಲಿ ನೊಂದು ಸೊರಗಿ ಕೊರಗುತ್ತಿರುವ ಯಕ್ಷನ ಪರಿಸ್ಥಿತಿ ಕರುಣಾಕ್ರಂದವಾಗಿದೆ !

"ಅಂಗೇನಾಂಗಂ ಪ್ರತನುತನುತಾ ಗಾಢತಪ್ತೇನ ತಪ್ತಂ
ಸಾಸ್ರೇಣಾಶ್ರು ದ್ರುತಮವಿರತೋತ್ಕಂಠಮುತ್ಕಂಠಿತೇನ ।
ಉಷ್ಣೋಚ್ಛ್ವಾಸಂ ಸಮಧಿಕತರೋಚ್ಛ್ವಾಸಿನಾ ದೂರವರ್ತಿ
ಸಂಕಲ್ಪೈಸ್ತೈರ್ವಿಶತಿ ವಿಧಿನಾ ವೈರಿಣಾರುದ್ಧಮಾರ್ಗಃ ॥"

ತನ್ನ ಮಾರ್ಗವ ತಡೆದು ತನಗೆ ವೈರಿವೊಲಿರುವ
ವಿಧಿವಶದೆ ದೂರವಿಹ ನಿನ್ನ ಪತಿಯು
ತೆಳುವಾಗಿ, ಕಡುತಾಪದಲಿ ಬೆಂದು ನಿಡಿದುಸಿರು
ಬಿಡುತೆ, ಕಣ್ಣೀರಿನಲಿ ನಾಂದು ನೊಂದು;
ಬಿಸಿಯುಸಿರು ಬಿಡುತಿರುವ ಪರಿತಾಪಗೊಳುತಿರುವ
ಕಡುನೊಂದು ಕಂಬನಿಯ ಕರೆಯುತಿರುವ
ಬಡವಾಗೆ ಸೊರಗಿರುವ ನಿನ್ನಂಗಸಂಗವನು
ತನ್ನ ಮನದೆಣಿಕೆಯೊಳೆ ಪೊಂದುತಿಹನು.

ವಿಧಿದುರ್ವಿಲಸನದಿಂದ ನಿನ್ನ ಭಾವಚಿತ್ರ ಬರೆದಾದರೂ ವಿರಹದ ಬೇಗೆಯನ್ನು ನೀಗುವಂತಿಲ್ಲ. ಘಾತುಕ ಕೃತಾಂತನ ಅಸಹನೆಯನ್ನು ತಿಳಿಸುತ್ತಾ,

"ತ್ವಾಮಾಲಿಖ್ಯ ಪ್ರಣಯಕುಪಿತಾಂ ಧಾತುರಾಗೈಃ ಶಿಲಾಯಾಂ
ಆತ್ಮಾನಂತೇ ಚರಣಪತಿತಂ ಯಾವದಿಚ್ಛಾಮಿ ಕರ್ತುಂ ।

ಅಸ್ರೈಸ್ತಾವನ್ಮುಹುರುಪಚಿತೈರ್ದೃಷ್ಟಿರಾಲುಪ್ಯತೇ ಮೇ
ಕ್ರೂರಸ್ತಸ್ಮಿನ್ನಪಿ ನ ಸಹತೇ ಸಂಗಮಂ ನಾಕೃತಾಂತಃ ॥"

ಧಾತುರಾಗಗಳಿಂದೆ ಗಿರಿಯ ಶಿಲೆಗಳ ಮೇಲೆ
ಪ್ರಣಯಕುಪಿತಳವೋಲು ನಿನ್ನ ಬರೆದು
ನಿನ್ನ ಚರಣಾಗ್ರದಲಿ ಕೆಡೆದವನವೋಲೆನ್ನ
ಬರೆಯಲೆಂದಾಶಿಸಿದ ಆ ಕ್ಷಣದೊಳೆ
ಸಲಸಲಕೆ ಉರುಳಿ ಬರುವಶ್ರುಬಿಂದುಗಳಿಂದ
ಕಣ್ಣು ಹನಿಗೂಡುವುದು ನೋಟ ಮಸುಳೆ
ಘಾತುಕ ಕೃತಾಂತನಾ ಚಿತ್ರದೊಳಗಾದರುಂ
ನಮ್ಮೊಂದು ಸಂಗವನು ಸಹಿಸನಲ್ತೆ !

ಇದಿರು ಬಂದು ನಿಂದ ಭಯಕ್ಕಿಂತಲೂ ಊಹಾರೂಪದ ಚಿಂತೆ, ಭಯಗಳಿಗೆ ಪ್ರಖರತೆ ಹೆಚ್ಚು. ಆದರೆ ವಿಧಿಯ ಆಟದಲ್ಲಿ ಅವುಗಳಿಗೆ ನಿಖರತೆಯಿಲ್ಲ. ವಿರಹ ನಿರವಧಿಯೇನಲ್ಲ, ವರುಷಕಾಲ ಪರಿಮಿತ ವಾದುದು ! ಚಿಂತೆಯ ಕಾತರತೆ ಇಂದಾದರೆ, ಸಂತಸದ ನಿರತೆ. ಆನಂದದ ಒರತೆ ಮುಂದಾಗಲಿದೆ ಎಂದು ಸಂತಯಿಸುವನು ಯಕ್ಷ.

"ನನ್ವಾತ್ಮಾನಂ ಬಹು ವಿಗಣಯನ್ನಾತ್ಮನೈವಾವಲಂಬೇ
ತತ್ಕಲ್ಯಾಣಿ ! ತ್ವಮಪಿ ನಿತರಾಂ ಮಾಗಮಃ ಕಾತರತ್ವಂ ।
ಕಸ್ಯಾತ್ಯಂತಂ ಸುಖಮುಪನತಂ ದುಃಖಮೇಕಾಂತತೋ ವಾ
ನೀಚೈರ್ಗಚ್ಛತ್ಯುಪರಿ ಚ ದಶಾ ಚಕ್ರನೇಮಿಕ್ರಮೇಣ ॥"

ಬಹುವಿಧದೆ ಚಿಂತಿಸುತೆ ನಾನೆ ನನ್ನಾತ್ಮವನು
ಸಂತಯಿಸಿ ಜೀವವನು ಧರಿಸಿರುವೆನು.
ನನ್ನ ಕುಶಲವ ಕೇಳಿ ಇನ್ನಾದರೂ ನೀನು
ಕಾತರಂಗೊಳ್ಳದಿರು ಕಲ್ಯಾಣಿಯೆ !
ಅತ್ಯಂತ ಸುಖವಿರುವುದಾರಿಗೀ ಲೋಕದಲಿ
ಅತ್ಯಂತ ದುಃಖವಿನ್ನಾರಿಗಿಹುದು.
ಒಂದಾದ ಮೇಲೊಂದು ಸುಖದುಃಖಗಳು ಬಂದು
ಚಕ್ರನೇಮಿಕ್ರಮದೆ ಪೊರಳುತಿಹವು.

"ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ" ಎನ್ನುವ ಭಾವನೆ ಯಕ್ಷನದು. ಅಂತೂ ತನ್ನ ಪ್ರಿಯತಮೆಗೆ ಸಂದೇಶವನ್ನು ತಿಳಿಸಿ ಯಕ್ಷ ಮೇಘವನ್ನು ಬೀಳ್ಕೊಡುತ್ತಾನೆ. ಮೇಘದೂತದ ಅಂತ್ಯ ಪ್ರಾರ್ಥನಾ ಪದ್ಯ:

"ಏತತ್ಕೃತ್ವಾ ಪ್ರಿಯಮನುಚಿತಪ್ರಾರ್ಥನಾವರ್ತಿನೋ ಮೇ
ಸೌಹಾರ್ದಾದ್ವಾ ವಿಧುರ ಇತಿ ವಾ ಮಯ್ಯನುಕ್ರೋಶಬುದ್ಧ್ಯಾ ।
ಇಷ್ಟಾನ್ದೇಶಾನ್‌ಜಲದ ! ವಿಚರ ಪ್ರಾವೃಷಾ ಸಂಭೃತ ಶ್ರೀಃ
ಮಾ ಭೂದೇವಂ ಕ್ಷಣಮಪಿ ಚ ತೇ ವಿದ್ಯುತಾ ವಿಪ್ರಯೋಗಃ ॥"

ಗೆಳೆಯನಿವನೆಂದೆನುವ ಸೌಹಾರ್ದಭಾವದಿಂ–
ದಲ್ಲದಿರೆ ವಿಧುರನೆಂದೆನುವ ಕತದೆ

ಕನಿಕರದೊಳೆಸಗು ನೀನೆನ್ನ ಪ್ರಿಯಕಾರ್ಯವನು
ಅನುಚಿತವಿದೆಂಬುದನು ಪರಿಗಣಿಸದೆ.
ಇಷ್ಟವಾದೆಡೆಗಳಲಿ ಬಳಿಕ ನೀಂ ಸಂಚರಿಸು
ವರ್ಷಋತು ಸಂಭೃತ ಶ್ರೀಕನಾಗಿ.
ಕ್ಷಣಕಾಲಮಾದರುಂ ವಿದ್ಯುತ್ಕಳತ್ರದಿಂ
ನಿನಗಿಂಥ ವಿರಹ ಸಂಘಟಿಸದಿರಲಿ.

ಹೀಗೆ ನಿದರ್ಶನಗಳನ್ನು ಬೆಳೆಸಬಹುದು. ಆದರೆ ಅತಿವಿಸ್ತರಕ್ಕೆ ಇಲ್ಲಿ ಎಡೆಯಿಲ್ಲ. ಮೂಲದ ಭಾವಗ್ರಹಣ ಎಷ್ಟು ಚೆನ್ನಾಗಿ ಬಂದು ಅತ್ಯುತ್ತಮ ಅನುವಾದವಾಗಿದೆ ಎಂದು ನೋಡಬಹುದು. 'ಭಾಷಾಂತರವಲ್ಲವಿದು ಭಾವಗ್ರಹಣ'. ಮೂಲದ ಭಾವದ ತಿರುಳು ಹುರುಳು, ಛಾಯೆ ರಸ ಬನಿ ಎಲ್ಲಾ ಸಮ್ಮಿಳಿತವಾಗಿ ಇದು ಅಕ್ಷರಶಃ ಭಾಷಾಂತರವಲ್ಲ; ನುರಿತ ಸಂಗೀತಗಾರನಿಗೆ ಕುಶಲನಾದ ಹಾಗಿದ ಅನುವಾದಕನು ಸರಿಯಾಗಿ ಸ್ವರಮಾಡಿದ ವೀಣೆಯ ಪಲುಕಿನ ಹಿಮ್ಮೇಳವಿತ್ತಂತೆ. ಮೂಲಕವಿಯಷ್ಟೇ ಪ್ರತಿಭಾವಂತರೂ ಸಂಸ್ಕೃತ ಕನ್ನಡಗಳ ಜಾಯಮಾನಗಳನ್ನು ಚೆನ್ನಾಗಿಬಲ್ಲ ಸಹೃದಯರಾಗಿ ಶ್ರೀ ಪರಮೇಶ್ವರ ಭಟ್ಟರು ಕಾಳಿದಾಸನ ಮೇಘಸಂದೇಶವನ್ನು ಕನ್ನಡಿಗರಿಗಿತ್ತಿದ್ದಾರೆ. ಶ್ರೀ ಬೇಂದ್ರೆಯವರ ಮೇಘಸಂದೇಶ ತನ್ನದೇ ಆದ ಭಾವಗ್ರಹಣದಿಂದ, ನಿರೂಪಣೆಯಲ್ಲಿ, ಕಥನ ಪ್ರಭಾವ ಪ್ರಕ್ರಮದಲ್ಲಿ ವಿಕ್ರಮವನ್ನು ಸಾಧಿಸಿದೆ. ಆದರೆ ಅದರ ನಿಲುವೇ ಬೇರೆ. ಒಂದೇ ಮೂಲಕ್ಕೆ ಎರಡು ಅನುವಾದ ಬಂದಾಗಲೂ ಎಂತಹ ಆಸ್ವಾದ್ಯಕರ ವೈವಿಧ್ಯಗಳಿಂದ, ಸ್ವೋಪಜ್ಞ ವೈದುಷ್ಯದಿಂದ, ಅನುವಾದವಾದರೂ ಸ್ವಂತ ಎನ್ನುವಷ್ಟು ಮಟ್ಟಿಗೆ ವಿರಾಜಿಸುತ್ತದೆ ಎಂಬುದನ್ನು ಸಹೃದಯರೇ ಮನಗಾಣಬೇಕು.

ಸಂಸ್ಕೃತ ನಾಟಕ ಸಾಹಿತ್ಯಕ್ಕೆ ಅನರ್ಘ್ಯವಾದ ಮೂರು ನಾಟಕಗಳನ್ನು ದಯಪಾಲಿಸಿದವನು ಕಾಳಿದಾಸ. ಮಾಲವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಅಭಿಜ್ಞಾನ ಶಾಕುಂತಲಗಳೆಂಬ ಈ ಮೂರು ನಾಟಕಗಳಲ್ಲೂ ದಾಂಪತ್ಯ ಜೀವನದ ಉಜ್ಜ್ವಲ ಪ್ರೇಮದ ನಿರೂಪಣೆಯನ್ನು ಮಾಡಿದ್ದಾನೆ. 'ನಾಟಕಾಂತಂ ಕವಿತ್ವಂ' ಎಂಬ ಮಾತು ಕಾಳಿದಾಸನ ಕವಿತಾಸಾಮರ್ಥ್ಯಕ್ಕೆ ನಾಟಕ ಹೊಸೆಯುವ ಚಾತುರ್ಯಕ್ಕೆ, ದೃಶ್ಯಸಂಯೋಜನೆ, ಪಾತ್ರಚಿತ್ರಣಾದಿ ಕಲಾವಿಧಾನಕ್ಕೆ ಬಹಳವಾಗಿ ಒಪ್ಪುವ ಮಾತು. 'ಕವಿ ಕಾಳಿದಾಸಃ' ಎಂದು ಶ್ರೇಷ್ಠತೆಯನ್ನು ಗುರುತಿಸಿ "ಕಾವ್ಯೇಷು ನಾಟಕಂ ರಮ್ಯಂ ತತ್ರರಮ್ಯಾ ಶಕುಂತಲಾ। ತತ್ರಾಪಿ ಚ ಚತುರ್ಥೋಂಕಃ ತತ್ರ ಶ್ಲೋಕಚತುಷ್ಟಯಂ" ಎನ್ನುವ ವಿಮರ್ಶೆಯೊಂದು ಪ್ರಚಲಿತವಾಗಿದೆ. ಭಾರತೀಯ ಸಂಸ್ಕೃತಿಯನ್ನೇ ಕಾಳಿದಾಸನ ಕೃತಿಗಳು ಪ್ರತಿಫಲಿಸುತ್ತವೆ. ಪ್ರತಿನಿಧಿಸುತ್ತವೆ ಎಂದು ಪಾಶ್ಚಾತ್ಯ ವಿದ್ವಾಂಸರೇ ಮುಕ್ತಕಂಠರಾಗಿ ಹೊಗಳಿದ್ದಾರೆ. ಅದರಲ್ಲೂ ಶಾಕುಂತಲದ ನಾಲ್ಕನೆಯ ಅಂಕವನ್ನು ಯಾವ ಸಹೃದಯನಾದರೂ ಮನಸಾ ಕೊಂಡಾಡದೆ ಇರಲಾರ. ಬಹುಶಃ ಕಾಳಿದಾಸನ ಪರಿಣತಾವಸ್ಥೆಯ ಪರಿಪಕ್ವ ಫಲವಾಗಿದೆ ಈ ನಾಟಕರತ್ನ.

ಕಾಳಿದಾಸನ ಮೂರೂ ನಾಟಕಗಳನ್ನು ಪ್ರತ್ಯೇಕವಾಗಿ ಅನುವದಿಸಿದ ಪಂಡಿತರಿದ್ದಾರೆ. ಆದರೆ ಆ ಮೂರೂ ನಾಟಕಗಳನ್ನು ಒಬ್ಬರೇ ಸರಳ ಸುಂದರ ರೀತಿಯಲ್ಲಿ ಅನುವದಿಸಿದವರು ಪರಮೇಶ್ವರ ಭಟ್ಟರೊಬ್ಬರೇ ಎಂದು ನನ್ನ ಎಣಿಕೆ. 'ನಾಮೂಲಂ ಲಿಖ್ಯತೇ ಕಿಂಚಿತ್ ನಾನಪೇಕ್ಷಿತಮುಚ್ಯತೇ' ಎನ್ನುವ ಮಲ್ಲಿನಾಥನ ಮಾತಿನಂತೆಯೇ ಶ್ರೀ ಭಟ್ಟರು ಕೂಡ ಜಾಗ್ರತೆ ವಹಿಸಿದ್ದಾರೆ. ಕನ್ನಡದ ನುಡಿಯಲ್ಲಿ ಕಾಳಿದಾಸನ ಅಂತರಾರ್ಥವನ್ನು ತುಂಬಿಡಲು ತುಂಬ ಪ್ರಯತ್ನಿಸಿದ್ದಾರೆ.

## ಮಾಲವಿಕಾಗ್ನಿಮಿತ್ರ:

ಕಾಳಿದಾಸನ ಮೊದಲ ನಾಟಕವಿದು. ಅಗ್ನಿಮಿತ್ರನೆಂಬ ರಾಜ ಮಾಲವಿಕೆಯೆಂಬವಳಲ್ಲಿ ಅನುರಕ್ತನಾಗಿ ಅವರ ವಿವಾಹವಾಗುವುದರಲ್ಲಿ ಕಥೆ ಪರ್ಯವಸಾನಗೊಳ್ಳುತ್ತದೆ. ಒಂದು ದೃಷ್ಟಿಯಿಂದ ಲೌಕಿಕ ಪ್ರೇಮ. ಆದರೆ ರಾಜ-ರಾಣಿಯರ ಪ್ರಣಯವೃತ್ತಾಂತವಷ್ಟೇ ಇಲ್ಲಿ ಮುಖ್ಯವಾದುದು.

ಅನುವಾದದ ಉದಾಹರಣೆಗಾಗಿ ಒಂದೆರಡು ತುಣುಕುಗಳು: ಹಳತು ಹೊಸತುಗಳ ಹಾನೋಪಾದಾನದ ಬಗ್ಗೆ ಕಾಳಿದಾಸನ ವಿಮರ್ಶಕ ಪ್ರಜ್ಞೆ:

"ಪುರಾಣಮಿತ್ಯೇವ ನ ಸಾಧು ಸರ್ವಂ
ನ ಚಾಪಿ ಕಾವ್ಯಂ ನವಮಿತ್ಯವದ್ಯಂ ।
ಸಂತಃ ಪರೀಕ್ಷ್ಯಾನ್ಯತರದ್ಭಜಂತೇ
ಮೂಢಃ ಪರಪ್ರತ್ಯಯನೇಯ ಬುದ್ಧಿಃ ॥"

ಹಳತೆಂದ ಮಾತ್ರದೊಳೆ ಎಲ್ಲವೂ ಒಳಿತಲ್ಲ
ಹೊಸತೆಂದ ಮಾತ್ರದೊಳೆ ಕೃತಿ ಕೆಟ್ಟುದಲ್ಲ ।
ಪರಿಕಿಸಿದ ಮೇಲೊಂದನೊಲಿದಪರು ಬುಧಜನರು
ಪರರು ಪೇಳ್ದಂದದೊಳು ನಡೆದಪರು ಮೂಢಜನರು ॥

ನಾಲ್ಕನೆಯ ಪಾದವೂ ಉಳಿದ ಮೂರು ಪಾದಗಳ ಧಾಟಿಯಲ್ಲೇ ಬಂದರೆ ಇನ್ನೂ ಸುಂದರವಾಗುತ್ತಿತ್ತು. ಆದರೆ ವೈವಿಧ್ಯಕ್ಕಾಗಿ ಈ ಉದ್ದದ ಪಾದ ಬಳಸಿದರೋ ಏನೋ, ಅನುವಾದದಲ್ಲಿ.

ಕುಲವಿದ್ಯೆಯ ಮಹತ್ತ್ವವನ್ನು ಹೇಳುತ್ತಾ ನಾಟ್ಯದ ಪ್ರಾಮುಖ್ಯವನ್ನು ತಿಳಿಸುವ ಈ ಪದ್ಯದ ಅನುವಾದವನ್ನು ಗಮನಿಸಿ:

"ದೇವಾನಾಮಿದಮಾಮನಂತಿ ಮುನಯಃ ಕಾನ್ತಂ ಕ್ರತುಂ ಚಾಕ್ಷುಷಂ
ರುದ್ರೇಣೇದಮುಮಾಕೃತವ್ಯತಿಕರೇ ಸ್ವಾಂಗೇ ವಿಭಕ್ತಂ ದ್ವಿಧಾ ।
ತ್ರೈಗುಣ್ಯೋದ್ಭವಮತ್ರ ಲೋಕಚರಿತಂ ನಾನಾರಸಂ ದೃಶ್ಯತೇ
ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ ॥"

ಸುರರ ನಯನಮನೋಹರಕ್ರತುವೆನುವರಿದನಾ ಮುನಿಗಳು
ತೋರ್ದನೀಶನುಮುಮೆಯನಪ್ಪಿದ ಮೈಯೊಳಿದನಿರ್ತೆರದೊಳು ।
ಮೂರುಗುಣಗಳಿನೊಗೆದ ನಾನಾರಸದ ಲೋಕದ ಚರಿತೆಯ
ತೋರ್ಪ ನಾಟ್ಯವೆ ಭಿನ್ನರುಚಿಗಳಿಗೇಕಮಾತ್ರಾರಾಧನಾ !

ಮೂಲಕ್ಕೆ ಸರಿಯಾಗಿ ಸುಂದರ ಅನುವಾದವಾಗಿ ಈ ಪದ್ಯ ಬಂದಿದೆ! ಜಾಣ ಅಧ್ಯಾಪಕ ಚತುರ ವಿದ್ಯಾರ್ಥಿಗೆ ಕಲಿಸಿದ ವಿದ್ಯೆಯು ಸಫಲವಾಗುತ್ತದೆ. ಯೋಗ್ಯ ವಿದ್ಯಾರ್ಥಿಯು ಕಲ್ಪಿ ಗುರುಶಿಷ್ಯರ ಮೇಲ್ಮೆಗೆ ದಾರಿ.

"ಪಾತ್ರವಿಶೇಷೇನ್ಯಸ್ತಂ ಗುಣಾನ್ತರಂ ವ್ರಜತಿ ಶಿಲ್ಪಮಾಧಾತುಃ ।
ಜಲಮಿವ ಸಮುದ್ರಶುಕ್ತೌ ಮುಕ್ತಾಫಲತಾಂ ಪಯೋದಸ್ಯ ॥"

ಮೆರೆವುದೋಜರ ಶಿಲ್ಪ ಸತ್ಪಾತ್ರದೊಳು ಸಂದಹ ಸಲೆ ಗುಣಾಂತರದೆ ।
ಕಡಲಚಿಪ್ಪಿನೊಳಿಳಿದ ಮುಗಿಲಿನ ಹನಿಯು ಮುತ್ತಾದಂತೆ ತಾಂ ಭರದೆ ॥

ಇಲ್ಲಿ ಕೊನೆಯ 'ತಾಂ ಭರದೆ' ಎಂಬ ಭಾಗ '—ಣಾಂತರದೆ'ಗೆ ಪ್ರಾಸಕ್ಕಾಗಿಯೇ ಬಂದಿದೆ. ಮೂಲದಲ್ಲಿ ಆ ಅಂಶವಿಲ್ಲ. ಉಳಿದ ಭಾಗ ಕಳೆದುಳಿದ ರನ್ನ, ಕಾಂತಿಸಂಪನ್ನ.

ಸಬಲನಾದರೂ ಸಹಾಯನ ಸಾಹಾಯ್ಯದಿಂದಲೇ ವಸ್ತುವನ್ನು ಪಡೆಯಲು ಸಾಧ್ಯವಾಗುವುದು. ಕತ್ತಲಿನ ದೃಶ್ಯವು ದೃಷ್ಟಿಗೆ ನೋಟದ ಶಕ್ತಿಯಿದ್ದರೂ ಬೆಳಕನ್ನು ಆಶ್ರಯಿಸುವುದರ ಮೂಲಕವೇ ಆಗಬೇಕು.

"ಅರ್ಥಂ ಸಪ್ರತಿಬಂಧಂ ಪ್ರಭುರಧಿಗಂತುಂ ಸಹಾಯವಾನೇವ ।
ದೃಶ್ಯಂತಮಸಿ ನ ಪಶ್ಯತಿ ದೀಪೇನ ವಿನಾ ಸಚಕ್ಷುರಪಿ ॥"

ಹಲವು ತೊಡರುಗಳರ್ಥವನು ಸಲೆ ಗಳಿಸಲಾರ್ಪನು ಹೆರರ ನೆರವಿರುವಾತನೆ ।
ಕಣ್ಗಳಿದ್ದರು ಕತ್ತಲೆಡೆಯೊಳು ದೀಪರಹಿತನು ದೃಶ್ಯವನು ತಾ ಕಾಂಬನೆ ॥

ನವಾಂಗನೆಯರ ಮದನ ವಿಷಯಾವತಾರವು ರಮಣೀಯವಂತೆ!

"ಹಸ್ತಂ ಕಂಪವತೀರುಣದ್ಧಿ ರಶನವ್ಯಾಪಾರಲೋಲಾಂಗುಲಿಂ
ಹಸ್ತೌ ಸ್ವೌನಯತಿಸ್ತನಾವರಣತಾಮಾಲಿಂಗ್ಯಮಾನಾಬಲಾತ್ ।
ಪಾತುಂ ಪಕ್ಷ್ಮಲ ಚಕ್ಷುರುನ್ನಮಯತಃ ಸಾಚೀಕರೋತ್ಯಾನನಂ
ವ್ಯಾಜೇನಾಪ್ಯಭಿಲಾಷಪೂರಣಸುಖಂ ನಿರ್ವರ್ತಯತ್ಯೇವ ಮೇ ॥"

ಡಾಬಿನೆಡೆಯೊಳು ಬೆರಳನಾಡಿಸುವೆನ್ನ ಕೈಯನು ನಡುಗುತಾಪಾ ತಡೆವಳು ।
ಸೆಳೆದು ಬಿಗ್ಮೆಯಿನಪ್ಪಲೀಸುತ್ತೊದಾವ ಕೈಗಳನೆದೆಯ ಮರೆಗೈದಿರುವಳು ॥
ಮುತ್ತನಿಡಲಿರೆ ತಿರುಗಿಸುವಳಾ ತುರುವಲೆವೆಗಳ ಕಂಗಳೊಪ್ಪುವ ಮೊಗವನು ।
ಬಿಟ್ಟಿದಪಳಿದ ತೀರ್ಚನೀತಿನೆವದಿಂದಲೆನ್ನಭಿಲಾಷಪೂರಣ ಸುಖವನು ॥

ಇದೂ ಉತ್ತಮ ಅನುವಾದಸಿದ್ಧಿಗೆ ಎದ್ದು ಕಾಣುವ ನಿದರ್ಶನ. ಪದ್ಯಗಳನ್ನು ಮಾತ್ರ ಇಲ್ಲಿ ಎತ್ತಿ ತೋರಿಸಲಾಗಿದೆ. ನಾಟಕದ ಮಾತುಗಳ ಅನುವಾದ ಕೇವಲ ನಿರ್ದುಷ್ಟವಾಗಿದೆ ಎಂದರೆ ಎಲ್ಲವನ್ನೂ ತಿಳಿಸಿದಂತಾಯಿತೆಂದು ನನ್ನ ಎಣಿಕೆ. ಇದು ಸರ್ವಂಕಷವಾದ ಅಥವಾ ಸವಿಸ್ತರ ವಿಮರ್ಶೆಯಲ್ಲ. ಹಾಗಾಗಿ ಕೂಲಂಕಷ ವಿಮರ್ಶೆಯಾಗಲೀ, ಅಮೂಲಚೂಲ ಕೃತಿ ಸಮೀಕ್ಷೆಯಾಗಲೀ, ಸೌಂದರ್ಯ ನಿರ್ದೇಶನ, ಸಾರಗ್ರಹಣ ವಿಮರ್ಶಾನಿಕಷ ಪರೀಕ್ಷೆ ಇಲ್ಲಿ ನಡೆದಿಲ್ಲ.

### ವಿಕ್ರಮೋರ್ವಶೀಯ:

ನಾಟಕದ ಹೆಸರೇ ಸೂಚಿಸುವಂತೆ ವಿಕ್ರಮ ಮತ್ತು ಊರ್ವಶಿಯರ ಪ್ರಣಯವೃತ್ತಾಂತ ಕಥಾವಸ್ತು. ಮಾನವ ದೇವಲೋಕಗಳ ಒಂದು ವಿಶಿಷ್ಟ ಸಂಬಂಧ ಈ ಪ್ರೇಮಕಥೆಯಲ್ಲಿ ಚಿತ್ರಿತವಾಗಿದೆ. ಸ್ವರ್ಗಮರ್ತ್ಯಗಳ ಸಂಗಮವನ್ನು ಕಾಳಿದಾಸ ಈ ದಾಂಪತ್ಯಚಿತ್ರಣದಲ್ಲಿ ನಿರೂಪಿಸಿ. ಇಳಾ–ಬುಧರ ಪುತ್ರನಾದ ಪುರೂರವ ಸರ್ವಲೋಕನಮಸ್ಕೃತನಾಗಿದ್ದವನು; ಲಕ್ಷ್ಮಿಯ ಭೂಮಿಕೆಯಲ್ಲಿದ್ದ ಊರ್ವಶಿ ಪುರುಷೋತ್ತಮನೆಂದು ನುಡಿಯುವುದರ ಬದಲು ಪುರೂರವನೆಂದ ಕತದಿಂದ ಭರತನ ಶಾಪಕ್ಕೆ ಗುರಿಯಾಗಿ ಭೂಲೋಕದಲ್ಲಿ ಜನಿಸಿದ ಊರ್ವಶಿಯನ್ನು ಸ್ವೀಕರಿಸಿದ್ದೇ ಕಥೆಯ ಮೂಲ.

ಈ ನಾಟಕದ ಆದಿಮಶ್ಲೋಕ:— ನಾಂದೀಪದ್ಯ—"ನಾದಸಂಪತ್ತಿನಿಂದಲೂ ಅರ್ಥಸಂಪತ್ತಿನಿಂದಲೂ ಕೂಡಿದೆ; ಅಲ್ಲದೆ ಅದು ತನ್ನದೇ ಆದೊಂದು ರೀತಿಯಲ್ಲಿ ಸ್ನಿಗ್ಧ ಗಂಭೀರ ಸಮುದ್ರ ಘೋಷವನ್ನು ನೆನಪಿಗೆ ತರುತ್ತದೆ." (ಸಿ. ಕೆ. ವೆಂಕಟರಾಮಯ್ಯ—"ಕಾಳಿದಾಸ ಮಹಾಕವಿ.")

- "ವೇದಾಂತೇಷು ಯಮಾಹುರೇಕ ಪುರುಷಂ ವ್ಯಾಪ್ಯ ಸ್ಥಿತಂ ರೋದಸೀ
ಯಸ್ಮಿನ್ನೀಶ್ವರ ಇತ್ಯನನ್ಯ ವಿಷಯಃ ಶಬ್ದೋ ಯಥಾರ್ಥಾಕ್ಷರಃ ।
ಅಂತರ್ಯಶ್ಚ ಮುಮುಕ್ಷುಭಿರ್ನಿಯಮಿತ ಪ್ರಾಣಾದಿಭಿರ್ಮೃಗ್ಯತೇ
ಸ ಸ್ಥಾಣುಃ ಸ್ಥಿರಭಕ್ತಿಯೋಗ ಸುಲಭೋ ನಿಃಶ್ರೇಯಸಾಯಾಸ್ತು ವಃ ॥"

ವೇದಾಂತಮಾವನನು ಭೂವ್ಯೋಮವೆಲ್ಲವನು
ವ್ಯಾಪಿಸಿಯುಮುಳಿದೇಕಪುರುಷನೆನುತಿಹುದು
ಪೆರರಿಗನ್ವಯಿಸದೀಶ್ವರಶಬ್ದ ವಾವನೊಳು
ತಾಂ ಯಥಾರ್ಥಾಕ್ಷರತೆವಡೆದೆಸೆಯುತಿಹುದು
ಪ್ರಾಣಾದಿ ನಿಯಮದೆ ಮುಮುಕ್ಷುಜನಮಾವನನು
ಹೃದಯಾಂತರಾಳದೊಳು ತಾಮರಸುತಿಹುದು
ಸ್ಥಿರಭಕ್ತಿಯೋಗಕತಿಸುಲಭನೆನುವಾ ಸ್ಥಾಣು
ನಿಃಶ್ರೇಯಮಂ ಕುಡುಗೆ ನಿಮಗೆಂದುಮೊಲಿದು.

ಮೂಲದ ಭಾವಕ್ಕೆ ತಕ್ಕಂತೆ ಹಾಸತವಾದ ಅನುವಾದವಾಗಿದೆ. 'ಸ್ನಿಗ್ಧ ಗಂಭೀರ ಸಮುದ್ರ ಘೋಷ' ಕೇಳಿಬರುವುದೋ ಇಲ್ಲವೋ ನಾವಬ್ರಹ್ಮರೇ ವಿಚಾರಿಸಬೇಕು. ಭಾವದ ಬೆಸುಗೆ ಸೊಗಸಾಗಿದೆ, ಹಸುರಾಗಿದೆ, ನವುರಾಗಿದೆ.

ವೇದಾಭ್ಯಾಸಜಡನಾದ ಬ್ರಹ್ಮ ಊರ್ವಶಿಯನ್ನು ಖಂಡಿತ ಸೃಷ್ಟಿಸಿಲ್ಲವಂತೆ:

"ಅಸ್ಯಾಃ ಸರ್ಗವಿಧೌ ಪ್ರಜಾಪತಿರಭೂಚ್ಚಂದ್ರೋನುಕಾನ್ತಿಪ್ರದಃ
ಶೃಂಗಾರೈಕರಸಃ ಸ್ವಯಂನು ಮದನೋ ಮಾಸೋನು ಪುಷ್ಪಾಕರಃ ।
ವೇದಾಭ್ಯಾಸಜಡಃ ಕಥಂ ನು ವಿಷಯವ್ಯಾವೃತ್ತ ಕೌತೂಹಲೋ
ನಿರ್ಮಾತುಂ ಪ್ರಭವೇನ್ಮನೋಹರಮಿದಂ ರೂಪಂ ಪುರಾಣೋಮುನಿಃ ॥"

ಇವಳ ಸೃಷ್ಟಿಯೊಳೇನು ಕಾಂತಪ್ರಭನು ಚಂದ್ರನು ಆದನೇ ದಾತಾರನು
ತಾನೆ ಶೃಂಗಾರೈಕರಸನೆನಿಪಂಗಜನು ನಿರ್ಮಾಣಗೈದನೊ ಇವಳನು
ಸವೆದನೋ ಮೇಣರಲ ಪೆಂಪಿನೊಳೊಪ್ಪುತಿರುವಾ ಚೈತ್ರನೀಯಪ್ಸರೆಯನು
ಬರಿಯ ವೇದಾಧ್ಯಯನಜಡನಾದವನು ಸುಖನಿಸ್ಪೃಹನು ತಾಪಸವೃದ್ಧನು
ಈ ಮನೋಹರ ರೂಪರಾಶಿಯನಾಹ ತಾನಿನ್ನೆಂತು ನಿರ್ಮಿಸಲಾಪನು?

ಭಾಷಾಂತರಸಿದ್ಧಿಗೆ, ಭಾವಗ್ರಹಣಪ್ರವಣತೆಗೆ, ಉಕ್ತಿಯ ಸಮರ್ಥಾಭಿವ್ಯಕ್ತಿಗೆ ಕವಿತಾಶಕ್ತಿಗೆ ಇದು ಉತ್ತಮ ನಿದರ್ಶನ. ಸಾರೋದ್ಧಾರವಾದ ಸಾರೋದ್ಧಾರ, ಅಭಾವವಾಗದ ಸ್ವಭಾವವಾದ ಭಾವಭಾವುಕತೆ, ಸಂಸ್ಕೃತದ ಮೂಲಕ್ಕೆ ಸುಸಂಸ್ಕೃತ ಕನ್ನಡ ಭಾಷೆಯ ವಾರವಾಣ ಜೋಡಣೆ, ನವ್ಯರೀತಿಯ ಪ್ರಗುಂಫನ ಪ್ರಣೀತಿಪ್ರತಾನ, ತಾನಗಾನ ಗುಣಗಳ ಅನೂನ ಗಮನ–ಎಲ್ಲವೂ ಮಿಗಿಲಾಗಿದೆ. ಊಪಾತ್ಮಕವಾದ ಸೌಂದರ್ಯಾಧಿದೇವತೆಯ, 'ದ್ವಿತೀಯಂ ಹೃದಯಂ' ಎಂದ ಹೃದಯೇಶ್ವರಿಯನ್ನು ಭಾವಿಸುವ ಭಾವಹೃದಯಂಗಮವಾಗಿದೆ. ಭಾವುಕರ ಬಗೆಗೆ ಮಿಗಿಲೆನ್ನುವಂತಿದೆ. "ಉಪಮಾಕಾಲಿದಾಸಸ್ಯ" ಎಂಬುದು ಕಾಳಿದಾಸನ ಹೆಗ್ಗಳಿಕೆ. ಹಾಗೆಯೇ ಆತನ ಕಾವ್ಯಗಳಲ್ಲಿ ಇತರ ಕಡೆಯಲ್ಲಿಯೂ ಕಾಣಸಿಗದ ಒಂದು ವಿಶಿಷ್ಟ ಉತ್ಪ್ರೇಕ್ಷಾಲಂಕಾರ ವಿಕ್ರಮೋರ್ವಶೀಯದಲ್ಲಿದೆ:

"ತರಂಗ ಭ್ರೂಭಂಗಾಕ್ಷುಭಿತವಿಹಗಶ್ರೇಣಿರಸನಾ
ವಿಕರ್ಷನ್ತೀ ಫೇನಂ ವಸನಮಿವ ಸಂರಂಭಶಿಥಿಲಮ್ ।
ಯಥಾವಿದ್ಧಂ ಯಾನ್ತೀ ಸ್ಖಲಿತಮಭಿಸಂಧಾಯ ಬಹುಶೋ
ನದೀ ಭಾವೇನೇಯಂ ಧ್ರುವಮಸಹನಾ ಸಾ ಪರಿಣತಾ ॥"

ಊರ್ಮಿಮಾಲೆಯೆ ಮುರಿದ ಪುರ್ಬೆನೆ
ಕ್ಷುಭಿತವಿಹಗಶ್ರೇಣಿಯೇ ಮೇಖಲೆಯೆನೆ
ಅತುಳ ಸಂಭ್ರಮ ಶಿಥಿಲವಸನದೊ-
ಲಿರುವ ಬೆಳ್ನೊರೆ ನಿರಿಯ ಸೆಳೆಸೆಳೆದಾರುತೆ
ನೆನೆದು ತಪ್ಪನು ಎಡಹುತಡಿಗಡಿ-
ಗೋಡಿಹೋಗುವ ಕರುಬಿದವಳನು ಪೋಲುತೆ
ಪರಿವಳತ್ತಿಂದಿತ್ತ ತಡೆಗಳ—
ನೆಡಹಿ ಹಾರುತೆ ತಿರುವುಮುರಿವನು ಬಳಸುತೆ
ಅಹುದು ನನ್ನೊಳು ಮುನಿದ ಕಾಂತೆಯೆ
ಪರಿವಳೀತೆರ ತೊರೆಯ ರೂಪವನಾನುತೆ

ಈ ಪದ್ಯದ ಬಳುಕುನಡಿಗೆ ನದಿಯ ಹದಪ್ರವಾಹದಂತೆಯೇ ಮುಂಬರಿಯುತ್ತದೆ. 'ಆರುತೆ' 'ಪೋಲುತೆ' 'ಬಳಸುತೆ' 'ಆನುತೆ'ಗಳು ಅಂತ್ಯದಲ್ಲಿ ಪ್ರಾಸವಾಗಿ ಬಂದು, ತ್ರಾಸಕೊಡುತ್ತಿರುವ ಅತಿ

ಸರ್ವಾಂತರ್ಯಾಮಿಯಂತೆ ಸರ್ವತ್ರ, ನೇರವಾಗಿ ಓರೆಯಾಗಿ, ಹೊರಳಿ ಮರಳಿ ಮಿರುಗುವ ಮರಿ ಮಿಂಚಿನಂತೆ ಪ್ರತಿಭೆ ಸಂಚರಿಸಿ, ವಿದ್ಯುದುನ್ಮೇಷದ, ವಿಯಚ್ಚುಂಬಿಯಾದ, ಬಿಂಬ ಪ್ರತಿಬಿಂಬ ಭಾವ ವೆಂಬಂತೆ ಇಂಬಿನಿಂದ ತುಂಬಿಬಂದ ಬಂಧುರ ಬಂಧಭಂದ ಸ್ವಚ್ಛಂದವಾಗಿ, ಅಮಂದವಾಗಿ ಆನಂದ ಕಂದನಂತೆ, ರಸನಿಷ್ಯಂದಿಯಾಗಿ, ಕವಿ–ಸಹೃದಯರ ಹೃನ್ಮಂದಿರಗಳಲ್ಲಿ ಮನಬಂದಂತೆ ಸರಿದು, ಕಾವ್ಯಾನುಶೀಲನಮನಸ್ಕರನ್ನು ತನ್ನ ನಿಯತಿಕೃತ ನಿಯಮರಹಿತ ಸಂಹಿತೆಯಲ್ಲಿ ಬಂದಿಪಿಡಿದು ರಸ ಪರಿಪ್ಲಾವಿತರನ್ನಾಗಿ ಮಾಡಿ. ಬ್ರಹ್ಮಾನಂದ ಸಬ್ರಹ್ಮಚಾರಿಯಾದ ಆನಂದೈಕಘನ ರಸಾನುಭೂತಿಗೆ, ವರ್ಣನದ ಸಿದ್ಧಿಗೆ ಮುಟ್ಟಿಸುವ ಆಸ್ತರದ ವಿಸ್ತಾರಕ್ಕೆ ಎತ್ತರಕ್ಕೆ ಕರೆದೊಯ್ಯುವ ಕಾಳಿದಾಸ ಹಾಗೂ ಅವನ ಅನುವಾದಕರಾದ ಶ್ರೀ ಪರಮೇಶ್ವರ ಭಟ್ಟರ ಕೃತಿಕಳಸಗಳು ಸಾಹಿತ್ಯ ಸರಸ್ವತಿಯ ಮಂದಿರದ ಅಮಲಮಂಗಳಮಯಕಲಧೌತಕಳಶಗಳು. ಸ್ಪರ್ಶಶಿಲೆಯಂತೆ, ಸಿದ್ಧರಸದಂತೆ ಅಮಿತ ಶಕ್ತಿಯುತ ಭಾಷೆ. ಭಾಷಾಂತರಕಾರನ ಭಾಷಾಶ್ರೀಮಂತಿಕೆ ಹಾಗೂ ಭಾಷಾಂತರಿಸುವ ಭಾಷೆಯಲ್ಲಿ ಪ್ರಭುತ್ವ, ಸೂಕ್ಷ್ಮ ಸಂವೇದನೆ, ಹೃದಯಸ್ಪಂದನೆ, ತದೇಕಧ್ಯಾನ ನಿಷ್ಠೆಯಿಂದ, ಅಷ್ಟಾಂಗ ಯೋಗಾನುಷ್ಠಾನ ನಿಷ್ಠನ ಕರ್ಮಠ ಹಠಯೋಗದಂತೆ ಮೂಲದ ಸಾರಸರ್ವಸ್ವ ನಿಷ್ಪೀಡನೆಗೆ, ಸಹಜಸುಂದರವೋ ಎಂಬಂತೆ ಉದ್ಯುಕ್ತನಾಗಿ, ಶಕ್ತವಾಗಿ, ವ್ಯಕ್ತವಾಗಿ ಅಭಿವ್ಯಕ್ತಿಗೊಳಿಸಿದ ಉಕ್ತಿವೈಚಿತ್ರ್ಯಗಳಲ್ಲಿ ಅನುರಕ್ತಿಯನ್ನೂ, ಭಾಷೆಯಲ್ಲಿ ಆಸಕ್ತಿಯನ್ನೂ, ಅತಿರೇಕವಿರಕ್ತಿಯನ್ನೂ, ಅರ್ಥಮುಕ್ತ, ಭಾವದೀಪ್ತ, ಧ್ವನಿಪ್ರಚುರತೆಗಳನ್ನೂ ಸಾಧಿಸಿದೆ ಭಾಷಾಂತರದ 'ಭಾಷೆ' !

ಪದವರಿತು ಪದವರಿತು ನಿಯತವಾಗಿ ಬರುವ ಸಂಗೀತದ ಗತಿಯನ್ನು ಇಲ್ಲಿ ಗುರುತಿಸಬಹುದು:

"ತವಾಸ್ಮಿಗೀತರಾಗೇಣ ಹಾರಿಣಾ ಪ್ರಸಭಂ ಹೃತಃ ।
ಏಷ ರಾಜೇವ ದುಷ್ಯಂತಃ ಸಾರಂಗೇಣಾತಿರಂಹಸಾ ॥"

ಮನಸೆಳೆಯುವ ⁝ ಈ*ರಾಗದೆ ⁝ ಹೃತನಾ*ದೆನು ⁝ ಭರದೆ ।
ಅತಿವೇಗದ ⁝ ಸಾ*ರಂಗದೆ ⁝ ದುಷ್ಯ*ಂತನ ⁝ ತೆರದೆ ॥

'ದೆ'ಕಾರಗಳ ಮೇಲಿನ ಒತ್ತು ಅಲ್ಲಿ ನಿಂತು ಮುಂಬರಿವ ಗತಿಕ್ರಮ ರಾಗತಾಳ ಲಯಗತಿಗಳ ಜತೆಯಲ್ಲಿದ್ದು ಮನೋಹರ ಗೀತವಾಗಿದೆ. 'ಭರದೆ,' 'ತೆರದೆ' ಎಂಬ ಮುಕ್ತಾಯದ ರೀತಿ ಮನೋಜ್ಞವಾಗಿದೆ.

ಇನ್ನೊಂದು ಮನೋಹರ ಉದಾಹರಣೆ:

"ಸರಸಿಜಮನುವಿದ್ಧಂ ಶೈವಲೇನಾಪಿ ರಮ್ಯಂ
ಮಲಿನಮಪಿ ಹಿಮಾಂಶೋರ್ಲಕ್ಷ್ಮ ಲಕ್ಷ್ಮೀಂ ತನೋತಿ ।
ಇಯಮಧಿಕಮನೋಜ್ಞಾ ವಲ್ಕಲೇನಾಪಿ ತನ್ವೀ
ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ ॥"

ಸುತ್ತ ಹಾವಸೆ ಹಬ್ಬಿದರು ಸಹ ಶೋಭಿಸುವುದಹ ತಾವರೆ
ಮಲಿನವಿದ್ದರು ಕಲೆಯಿನೆಸೆವುದು ತಳೆದು ಕಾನ್ತಿಯನೆಳವರೆ ।
ತನ್ವಿನಾರುಡೆಯಾಂತರೂ ಹೊಸಸೊಬಗಿನಿಂದಿವಳೆಸೆವಳು
ಭೂಷಣವು ತಾನಾವುದಾಗದು ಮಧುರಮಾವಾಕೃತಿಯೊಳು ॥

ಈ ಪದ್ಯದ ಗತಿಯನ್ನು ಗಮನಿಸಿದಾಗ ೩ + ೪ | ೩ + ೪ | ೩ + ೪ | ೩ + ಗು. = ಸುತ್ತ | ಹಾವಸೆ | ಹಬ್ಬಿ | ದರುಸಹ | ಶೋಭಿ | ಸುವುದಹ ⁝ ತಾವರೆ ॥ ಮೂರು ನಾಲ್ಕು ಮೂರು ನಾಲ್ಕು ಮೂರು ನಾಲ್ಕು ಕೊನೆಗೆ ಗುರು; ಹೀಗೆಯೇ ಉಳಿದ ಮೂರೂ ಚರಣಗಳು ಬಂದು ಸುಂದರವಾದ ಗೇಯಗುಣ ಕೂಡಿದ ಬಂಧವಾಗಿದೆ ಅನುವಾದ. ಮೊದಲ ಎರಡು ಪಾದಾಂತ್ಯದಲ್ಲಿ 'ರೆ' ಪ್ರಾಸವೂ, ಮೂರು ನಾಲ್ಕು–ಈ ಪಾದಗಳಲ್ಲಿ 'ಳು' ಪ್ರಾಸವೂ ಬಂದು ಪ್ರಾಸದಲ್ಲಿ ವೈವಿಧ್ಯವನ್ನೂ ತಂದಿದ್ದಾರೆ.

'ತತ್ರ ಶ್ಲೋಕ ಚತುಷ್ಟಯಂ' ಎಂದು ವಿಮರ್ಶಕರು ಹೊಗಳಿದ ಅಭಿಜ್ಞಾನ ಶಾಕುಂತಲದ ನಾಲ್ಕನೆಯ ಅಂಕದಲ್ಲಿ ಕಣ್ವಮುನಿಗಳು ಹೇಳುವ ನಾಲ್ಕು ಶ್ಲೋಕಗಳನ್ನು ಇವುಗಳ ಅನುವಾದಗಳನ್ನೂ ಗಮನಿಸಿ:

"ಯಾಸ್ಯತ್ಯದ್ಯ ಶಕುಂತಲೇತಿ ಹೃದಯಂ ಸಂಸ್ಪೃಷ್ಟಮುತ್ಕಂಠಯಾ
ಕಂಠಃ ಸ್ತಂಭಿತಬಾಷ್ಪವೃತ್ತಿಕಲುಷಃ ಚಿನ್ತಾಜಡಂ ದರ್ಶನಮ್ ।
ವೈಕ್ಲವ್ಯಂ ಮಮ ತಾವದೀದೃಶಮಪಿ ಸ್ನೇಹಾದರಣ್ಯೌಕಸಃ
ಪೀಡ್ಯಂತೇ ಗೃಹಿಣಃ ಕಥಂ ನ ತನಯಾ ವಿಶ್ಲೇಷದುಃಖೈರ್ನವೈಃ ॥"

ತಾನಿಂದು ತೆರಳಿದಪಳೀ ಶಕುಂತಳೆಯೆಂದು
ಕಳವಳದೊಳೆದೆನೊಂದು ತುಡಿಯುತಿಹುದು
ಒತ್ತಿ ಬಹ ಬಾಷ್ಪದೊಳು ಕೊರಳು ಗದ್ಗದಿಸುವುದು
ಚಿಂತೆಯೊಳು ನೋಟವಿದು ಮಸುಳುತಿಹುದು
ಕಾಡಿನೊಳು ನೆಲಸಿರುವ ನನಗುಮೀತೆರನಳಲು
ಕಟ್ಟೆರಕದಿಂದೆನ್ನೊಳೊಗೆದುದೆನಲು
ಪೆತ್ತ ಪೆಣ್ಮಕ್ಕಳನು ಕಳುಹುವ ಗೃಹಸ್ಥರನು
ಅಗಲಿಕೆಯ ಹೊಸ ದುಗುಡವೆಂತುರಿಪುದೊ !

ಕರತಲಾಮಲಕದಂತೆ ಸುಸ್ಪಷ್ಟವಾದ ಈ ಭಾವನಿರೂಪಣೆಗೆ ನನ್ನ ಕೃತಕ ವಿವರಣೆಯು ಅಗತ್ಯವೇ ಇಲ್ಲ. ಎರಡನೆಯ ಪ್ರಖ್ಯಾತ ಶ್ಲೋಕವಿದು:

"ಪಾತುಂ ನ ಪ್ರಥಮಂ ವ್ಯವಸ್ಯತಿ ಜಲಂ ಯುಷ್ಮಾನ್ ಸ್ವಪೀತೇಷು ಯಾ
ನಾದತ್ತೇ ಪ್ರಿಯಮಂಡನಾಽಪಿ ಭವತಾಂ ಸ್ನೇಹೇನ ಯಾ ಪಲ್ಲವಂ ।
ಆದ್ಯೇವಃ ಕುಸುಮಪ್ರಸೂತಿಸಮಯೇ ಯಸ್ಯಾ ಭವತ್ಯುತ್ಸವಃ
ಸೇಯಂ ಯಾತಿ ಶಕುಂತಲಾ ಪತಿಗೃಹಂ ಸರ್ವೈರನುಜ್ಞಾಯತಾಂ ॥"

ಮೊದಲು ನಿಮಗೆಲ್ಲರಿಗುಮೆರೆದಲ್ಲದಂಬುವನು
ಜಲಪಾನಕಿನ್ನಾವಳೆಳಸದಿಹಳು
ಸಿಂಗರದೊಳರ್ತಿ ತನಗಿರ್ದುಮೆಳಕುಡಿಗಳನು
ಅಳ್ಕರಿಂದಿನ್ನಾವಳಾಯದಿಹಳು
ನೀವು ನನೆಕೊನೆವೋದ ಮೊದಲ ದಿವಸದೊಳೊಲಿದು
ಉತ್ಸವಂಗಳನಾವಳೆಸಗಿದಪಳು
ಆ ಶಕುನ್ತಳೆಯಿಂದು ಪತಿಯ ಮನೆಗೈದುವಳು
ನೀವೆಲ್ಲರೊಲಿದೀವುದನುಮತಿಯನು

ಇದೂ ವ್ಯಾಖ್ಯಾನಾನಪೇಕ್ಷಿತ ಅವಿಚಾರಿತ ರಮಣೀಯ ಸುಂದರಬಂಧದ ಪದ್ಯ. ಮೂರನೆಯ ಪದ್ಯವಿದು:

"ಅಸ್ಮಾನ್ಸಾಧು ವಿಚಿನ್ತ್ಯ ಸಂಯಮಧನಾನ್ ಉಚ್ಚೈಃ ಕುಲಂಚಾತ್ಮನಃ
ತ್ವಯ್ಯಸ್ಯಾಃ ಕಥಮಪ್ಯಬಾಂಧವ ಕೃತಾಂ ಸ್ನೇಹಪ್ರವೃತ್ತಿಂ ಚ ತಾಮ್ ।
ಸಾಮಾನ್ಯ ಪ್ರತಿಪತ್ತಿ ಪೂರ್ವಕಮಿಯಂ ದಾರೇಷು ದೃಶ್ಯಾ ತ್ವಯಾ
ಭಾಗ್ಯಾಯತ್ತಮತಃಪರಂ ನ ಖಲು ತದ್ವಾಚ್ಯಂ ವಧೂಬಂಧುಭಿಃ ॥"

ಹಿರಿದು ಬಗೆದೆಮ್ಮವನು ಸಂಯಮಧನರ್ಕಳನು ನಿನ್ನ ಕುಲದುನ್ನತಿಯನು
ನೆಂಟರ ನೆರಂಬಡೆಯದೆಯೆ ನಿನ್ನೊಳಿವಳೊಲುಮೆ ಪರಿದುದನು ನೆನೆದು ನೀನು ।
ನಿನ್ನ ಒಳ್ವೆಂಡಿರೊಳು ಸರಿಗಾಣುತಿಕೆಗೆಣೆ ಮನ್ನಣೆಯನೀವುದಿಂದು
ಮತ್ತಿನವು ಬಗೆಯೆ ಭಾಗ್ಯಾಧೀನ ತಗದು ಗಡ ಬಂಧುಜನರದನೊರೆವುದು ॥

ಇಲ್ಲಿ ಕವಿಯು ಸಾಲಿನಲ್ಲಿ ಬಂದ 'ತಗದು ಗಡ' ಎನ್ನುವ ಕನ್ನಡ ಜಾಯಮಾನವನ್ನು ಮೈಗೊಂಡ ವಿಶೇಷಾರ್ಥದ ನಿರ್ಧಾರ ಮಾತಿನ ಮೋಡಿ, "ಮತ್ತಿನವು ಬಗೆಯೆ ಭಾಗ್ಯಾಧೀನ ತಗದು ಗಡ" ಎಂಬಲ್ಲಿ ವರೆಗೆ ನೆಗೆದು ಕುಪ್ಪಳಿಸುವಂತೆ ಬರುವ ಭಾವದ ಭಂಗಿಯು ಸೊಗಸಿನ ನೆಗಸು ನೆಗ್ಗಿಸಿನಂತೆ ದಿವ್ಯ ರಮಣೀಯ ಸಂಸ್ಕೃತ ಕನ್ನಡಗಳ ಸರಸದಾಂಪತ್ಯ, ಭಾವರೀತಿಗಳ ಸಮತೋಲ ಕಲಬೆರಕೆ, ಅಕೃತಕವಾಗಿ ಗಿರಿಯ ಝರಿಯಂತೆ ಇಳಿದುಬಂದು ಹೊಸಲಾಗಿ ಹರಿದು ನಲಿನಲಿದು ಉಲಿದುಲಿದು ಮುಂಬರಿವುದನ್ನು ನಾವು ಕಾಣಬಹುದಾಗಿದೆ. ಆಗಲಿಕೆಯ ಒಳತೋಟಿಯ ಮೂಕಮರ್ಮರ ಇಲ್ಲಿದೆ.

ನಾಲ್ಕನೆಯ ಪದ್ಯ — ಶಕುಂತಲೆಗೆ ಉಪದೇಶರೂಪವಾಗಿದ್ದುದಾದರೂ ಪ್ರತಿಯೊಬ್ಬ ತಂದೆ ತನ್ನ ಪ್ರಿಯಕುಮಾರಿಯನ್ನು 'ಪತಿಮೇಕಾದಶಂಕೃಧೀಃ' ಎಂದೋ — "ಅಕೃಷ್ಣಭಾಂಡೇ ಸ್ಥಿತತಂಡುಲಾನಾಂ ಪಕ್ವೇಪ್ಯಶಕ್ತಾ ಕಿಮುತಾನ್ಯಕೃತ್ಯೇ । ತಥಾಪ್ಯನಲ್ಪಕ್ಷಮಯಾತ್ವಯ್ಯೆಷಾ ಅಂಗೀಕೃತಾ ಸಾ ಪರಿಪಾಲನೀಯಾ ॥" ಎಂದೋ 'ಪುತ್ರವತ್ ಪಾಲಿತಂ ಮಯಾ, ಇದಾನೀಂ ತವ ದಾಸ್ಯಾಮಿ' ಎಂದೋ ತಿಳಿಸಿ ಕಳುಹಿಸುವಂತೆಯೇ. ಶಕುಂತಲೆಯ ಸಾಕುತಂದೆ ಕಣ್ವಮಹರ್ಷಿಗಳು ತಿಳಿಸಿದ ಸತೀಧರ್ಮದ ಸಾರ ಸರ್ವಸ್ವರೂಪ ಈ ಶ್ಲೋಕ. ವಾಮಪಂಥವನ್ನನುಸರಿಸುವ ವಾಮೆಯರು ಕುಲವನ್ನು ಬೆಳಗಿಸುವ ಕುಡಿಯಾಗದೆ, ಕುಲವನ್ನು ಉರಿಸುವ ಕಿಡಿಯಾಗಿ, ಆಧಿರೂಪವಾಗುವರೆಂಬುದನ್ನೂ, ಮನಮೆಚ್ಚುವ ಮಡದಿಯಾಗಿ ಬಾಳಿದರೆ ಮಾತ್ರ ಯುವತಿಯರ ಗೃಹಿಣೀಪದ – "ಗೃಹಿಣೀಗೃಹಮುಚ್ಯತೇ" ಎಂದ ಅಂತ 'ಮಿತ್ರಂ ಹ ಜಾಯಾ' ಎಂದ ತತ್ತ್ವ ನೆಲೆನಿಲ್ಲುವುದೆಂಬುದನ್ನೂ ಈ ಪದ್ಯದಲ್ಲಿ ಕಾಳಿದಾಸ ಕ್ರೋಡೀಕರಿಸಿದ್ದಾನೆ. "ರಾಜಾನೋ ಬಹುವಲ್ಲಭಾಃ" ಎಂಬುದು ಸಾಮಾನ್ಯ ವಾಡಿಕೆ. ಅಲ್ಲಿ ಗೃಹಿಣೀಪದಸ್ಥಾಪನೆಗೆ ಆಗತ್ಯವಾದ ಅಂಶಗಳಿವು:

> "ಶುಶ್ರೂಷಸ್ವ ಗುರೂನ್ ಕುರು ಪ್ರಿಯ ಸಖೀವೃತ್ತಿಂ ಸಪತ್ನೀಜನೇ
> ಭರ್ತುರ್ವಿಪ್ರಕೃತಾಪಿ ರೋಷಣತಯಾ ಮಾ ಸ್ಮ ಪ್ರತೀಪಂ ಗಮಃ ।
> ಭೂಯಿಷ್ಠಂಭವ ದಕ್ಷಿಣಾ ಪರಿಜನೇ ಭಾಗ್ಯೇಷ್ವನುತ್ಸೇಕಿನೀ
> ಯಾನ್ತ್ಯೇವಂ ಗೃಹಿಣೀಪದಂ ಯುವತಯೋ ವಾಮಾಃ ಕುಲಸ್ಯಾಧಯಃ ॥"

> ಹಿರಿಯರನು ಓಲೈಸು ಮತ್ತೆ ನೀಂ ಪ್ರಿಯ ಸಖಿಯ ತೆರದೊಳಿರು ಸವತಿಯರೊಳು
> ಮುಳಿದು ನೀಂ ಪ್ರತಿಕೂಲೆಯಾಗದಿರು ಅಪಚಾರವೆಸಗಿದರು ಪತಿಯ ಹಳಿದು ।
> ಪರಿಜನರ ವಿಷಯದೊಳು ದಾಕ್ಷಿಣ್ಯವಶಳೆನಿಸು ಭಾಗ್ಯದೊಳು ಬೀಗದಿರು ನೀನು
> ಪೆಣ್ಗಳಿಂತಿರ್ಪವರು ಗರತಿಯರು ತಾವಹರು ಕುಲಪೀಡರಿನ್ನನ್ಯರು ॥

ಕಂಠಗದ್ಗದವಾದಾಗ ಬರುವ ಬಿಡಿಮಾತುಗಳಂತೆ ಪ್ರತಿಪಾದವೂ ಮೂರು ಅಂಶಗಳಾಗಿ— ಹಿರಿಯರನು ಓಲೈಸು । ಮತ್ತೆನೀಂ ಪ್ರಿಯಸಖಿಯ । ತೆರದೊಳಿರು ಸವತಿಯರೊಳು । — ಹೀಗೇ ಉಳಿದ ಪಾದಗಳೂ ಬರುವ ವಿಶಿಷ್ಟ ರೀತಿ, "ರೀತಿರಾತ್ಮಾ ಕಾವ್ಯಸ್ಯ" ಎಂಬುದನ್ನು ತೋರಿಸುವಂತಿದೆ. 'ಹಿರಿಯರನು ಓಲೈಸು' 'ಭಾಗ್ಯದೊಳು ಬೀಗದಿರು' ಇಂತಹ ಗಾದೆಯಂತಹ ಹಿತಮಿತಸಾರವಚನ ಆಪ್ಯಾಯಮಾನವೆನಿಸುತ್ತದೆ. ಸುಲಲಿತ ಅನಾಯಾಸ ಸಲಿಲ ಸಲೀಲ ಬಂಧ ನಿರಾಭರಣ ಸುಂದರಿಯ ಸಹಜಮನೋಹರ ಅವ್ಯಾಜಸೌಂದರ್ಯದಂತೆ ಆಕರ್ಷಣೀಯವಾಗಿದೆ. ಸಾರ್ವಕಾಲೀನ ಸನಾತನ ಸತ್ಯದಂತೆ, ಉಪದೇಶದಂತೆ ಸುಲಭಗ್ರಾಹ್ಯವಾಗಿ ಸದಾಸ್ಮರಣೀಯವಾಗಿ ಮೂಲಭಾಷಾಂತರಗಳಲ್ಲಿ ಬಂದಿದೆ.

ಒತ್ತೆಯನ್ನು ಹಿಂದಿರುಗಿಸಿದವನ ಚಿತ್ತಸ್ವಾಸ್ಥ್ಯದಂತೆ "ಪರಕೀಯ ಅರ್ಥವೆನ್ನಿಸಿಕೊಂಡ ಕನ್ನೆಯನ್ನು ಪತಿಗೃಹಕ್ಕೆ ಕಳುಹಿಸಿದ ಕಣ್ವರ ಮಾತನ್ನು ಕೇಳಿ.

> "ಅರ್ಥೋ ಹಿ ಕನ್ಯಾ ಪರಕೀಯ ಏವ
> ತಾಮದ್ಯ ಸಂಪ್ರೇಷ್ಯ ಪರಿಗ್ರಹೀತುಃ ।
> ಜಾತೋ ಮಮಾಯಂ ವಿಶದಃ ಪ್ರಕಾಮಂ
> ಪ್ರತ್ಯರ್ಪಿತನ್ಯಾಸ ಇವಾನ್ತರಾತ್ಮಾ ॥"

ಬೆರಸೊಡವೆ ಕನ್ಯೆ ಬಿಡು ಪತಿಯ ಬಳಿಗಾಕೆಯನು ಕಳುಹಿ ಮಾಡುವುದು ।
ತನ್ನೊಳಿಟ್ಟೊಡವೆಯನು ಮಗುಳಿತ್ತನಂದದೊಳು ನಿರ್ಮಲಿರೆಂಬೆನಿದು ॥

ಅರ್ಥಸುಸ್ಪಷ್ಟತೆಯ ಈ ಪದ್ಯಕ್ಕೆ ವ್ಯರ್ಥ ನನ್ನ ಕ್ಲಿಷ್ಟ ವಿವರಣೆ!

ಮುಟ್ಟಿದರೆ ಮುಳಿದೀತು. ಹಳಿದೀತು. ಅಳಿದೀತು ಎನ್ನುವಷ್ಟು 'ಮಧುರ ಕೋಮಲಕಾಂತ ಪದಾವಳಿ'ಯುಳ್ಳ ಮೂಲ ಹಾಗೂ, ಅಷ್ಟೇ ಲಲಿತ ಕನ್ನಡ ಅನುವಾದವನ್ನೂ ಪರಿಭಾವಿಸಿ:

"ಭವನ್ತಿನಮ್ರಾಃ ತರವಃ ಫಲಾಗಮೈಃ
ನವಾಂಬುಭಿರ್ಭೂರಿ ವಿಲಂಬಿನೋ ಘನಾಃ ।
ಅನುದ್ಧತಾಃ ಸತ್ಪುರುಷಾಃ ಸಮೃದ್ಧಿಭಿಃ
ಸ್ವಭಾವ ಏವೈಷ ಪರೋಪಕಾರಿಣಾಂ ॥"

ಹಣ್ಣುಗಳ ¦ ಹೊರೆಯಿಂದೆ ¦ ಬಾಗುವುದು ¦ ಮರವು ¦
ತಗ್ಗಿನೊಳೆ ¦ ತೂಗುವುದು ¦ ಹೊಸನೀರ ¦ ಮುಗಿಲು ¦ ।
ತಲೆವಾಗಿ ¦ ನಡೆದಪುದು ¦ ಸಿರಿಯಿಂದೆ ¦ ಜನವು ¦
ಇದು ಹೆರರಿ ¦ ಗುಪಕಾರ ¦ ವೆಸಗುವರ ¦ ಪರಿಯು ¦ ॥

ಈ ಪದ್ಯದಲ್ಲಿ ಯಕ್ಷಗಾನ ಪದ್ಯದ ಧಾಟಿಯನ್ನೂ ಗಮನಿಸಬಹುದು! ಇದರ ಗತಿ: ೫ ¦ ೫ ¦ ೫ ¦ ೩ (ಅಥವಾ ಕೊನೆಯ ಗುರು ಸೇರಿಸಿದರೆ ೪).

ಇತ್ತಚಿತ್ತವಿಸಿರಿ:

"ಉದೇತಿಪೂರ್ವಂ ಕುಸುಮಂ ತತಃ ಫಲಂ ಘನೋದಯಃ ಪ್ರಾಕ್ತದನಂತರಂ ಪಯಃ ।
ನಿಮಿತ್ತನೈಮಿತ್ತಿಕಯೋರಯಂಕ್ರಮಸ್ತವಪ್ರಸಾದಸ್ಯ ಪುರಸ್ತು ಸಂಪದಃ ॥"

ಮೊದಲು ಹೂ ಬಂದಪುದು ಬಳಿಕ ಹಣ್ಣಹುದು
ಮೊದಲು ಮುಗಿಲಾಡುವುದು ಬಳಿಕ ಮಳೆಬಹುದು
ಪಾಳಿಕಾರಣ ಕಾರ್ಯಕಾದರೇನಿಂತು
ನಿಮ್ಮ ದಯೆಗಿಂ ಮೊದಲು ಸಂಪದವು ಬಂತು

ಈ ಲಲಿತ ಅನುವಾದದ ಗತಿ, ಅಂತ್ಯಪ್ರಾಸ, ಅರ್ಥದ ನೈಜನಾಜೂಕಿನ ರೂಪ ದ್ರಾಕ್ಷಾಪಾಕದಂತೆ. ಅದೆಷ್ಟು ರುಚಿಕರವಾಗಿದೆ! ರಸನಾಗ್ರನರ್ತಿಯಾಗಿದೆ!

ನಾಟಕದ ಮಾತುಗಳು ಅರ್ಥಾತ್ ಗದ್ಯಭಾಗಗಳ ಅನುವಾದವೂ 'ಗದ್ಯಂ ಹೃದ್ಯಂ' ಎನ್ನಿಸಿವೆ. ಅವಕಾಶವಿಲ್ಲದ್ದರಿಂದ ಗದ್ಯಭಾಗಗಳ ಪೃಥಕ್ಕರಣೆ, ಉದಾಹರಣೆಗಳ ಗೋಜಿಗೆ ಹೋಗಿಲ್ಲ. ಜಿಜ್ಞಾಸುಗಳು ಕನ್ನಡ ಕಾಳಿದಾಸ ಸಂಪುಟವನ್ನು ಓದಿ ಆನಂದಿಸಬಹುದು.

### ಕಾಳಿದಾಸನ ಕಾವ್ಯಗಳು: ಕುಮಾರಸಂಭವಂ, ರಘುವಂಶಂ:

ಸಂಸ್ಕೃತದ 'ಪಂಚ ಮಹಾಕಾವ್ಯ'ಗಳೆನ್ನಿಸಿದ ರಘುವಂಶ, ಕುಮಾರ ಸಂಭವ, ಕಿರಾತಾರ್ಜುನೀಯ, ಶಿಶುಪಾಲವಧ (ಮಾಘ), ನೈಷಧ–ಗಳಲ್ಲಿ ಮೊದಲ ಎರಡು ಮಹಾಕಾವ್ಯಗಳೂ ಕಾಳಿದಾಸನಿಂದಲೇ ಬರೆಯಲ್ಪಟ್ಟವು. ರಘುವಂಶ ಆತನ ಮಹಾಕೃತಿರತ್ನ. ಪರಿಣತವಯಸ್ಸಿನ ಪಕ್ವಫಲ. ರಘುಕುಲದ ಚರಿತ್ರೆ—ರಾಮಾಯಣದ ಕಥೆ ಇದರ ನಿರೂಪಣೆಯ ಪ್ರಧಾನವಸ್ತು. ಕಾಳಿದಾಸನ ಉಪಮಾನಗಳಿಗೆ, ಆತನ ವೈದರ್ಭೀರೀತಿಯ ಮಧುರಬಂಧದ ಆಕರ್ಷಣೆಗೆ ಮಾರುಹೋಗದ ರಸಿಕರಿಲ್ಲ. ಮಧುರ ರಸಾರ್ದ್ರವಾದ ಆತನ ನವುರಾದ ಬರೆವಣಿಗೆಯನ್ನು ಪ್ರತಿನಿಧೀಕರಿಸುವ ಅದ್ವಿತೀಯ ಕಾವ್ಯ ರಘುವಂಶ. ಅಂತೆಯೇ ತಾರಕಾಸುರವಧೆಗಾಗಿ ಸುರಸೇನಾನಿಯಾದ ಕುಮಾರಸ್ವಾಮಿಯ ಸಂಭವ ವೃತ್ತಾಂತವೇ ಕುಮಾರಸಂಭವದ ಕಥಾವಸ್ತು. ಕಾಳಿದಾಸನ ನವನವೋನ್ಮೇಷಶಾಲಿನಿಯಾದ ಪ್ರತಿಭೆಯ

ಉದ್ಘೋರ್ಣಾರ್ಥ್ಯಗಮನವನ್ನು ನಾವು ಈ ಎರಡೂ ಕಾವ್ಯಗಳಲ್ಲಿ ಧಾರಾಳ ಕಾಣಬಹುದು. ರಘುವಂಶದ ಮೇಲ್ಮೆಯನ್ನು ಸೂಚ್ಯವಾಗಿ ಕವಿ ಹೀಗೆ ಹೇಳಿಕೊಂಡಿದ್ದಾನೆ:

"ಗುರ್ವರ್ಥಮರ್ಥೀ ಶ್ರುತಪಾರ ದೃಶ್ವಾ
ರಘೋಃ ಸಕಾಶಾತ್ ಅನವಾಪ್ಯ ಕಾಮಮ್ ।
ಗತೋವದಾನ್ಯಾನ್ತರಮಿತ್ಯಯಂ ಮೇ
ಮಾ ಭೂತ್ಪರೀವಾದ ನವಾವತಾರಃ ॥" (ಸರ್ಗ ೫; ಶ್ಲೋಕ ೨೪)

ಅರ್ಥಗೌರವವನ್ನು, ಅಂದರೆ ಧ್ವನಿ, ದರ್ಶನ, ವ್ಯಂಗ್ಯ, ಸೂಚ್ಯ, 'ವಕ್ರೋಕ್ತಿ' ಮುಂತಾದುವನ್ನು ಪಂಡಿತರು ಬಯಸುವುದಾದರೆ ಅದು ರಘುವಿನಲ್ಲಿ ಅಂದರೆ ರಘುವಂಶದಲ್ಲಿ ಸಿಗಲಿಲ್ಲವೆಂಬ ಅಪವಾದ ನನಗೆ ಬಾರದಿರಲಿ ಎಂಬುದನ್ನೂ, ವಿದ್ವಾಂಸನಾದ ಕೌತ್ಸ ತನ್ನ ಗುರುವಾದ ವರತನ್ತುವಿಗೆ ಗುರುದಕ್ಷಿಣೆಯನ್ನು ಯಾಚಿಸುವ ಸಂದರ್ಭದಲ್ಲಿ ಕಾಳಿದಾಸ ಸೂಚ್ಯವಾಗಿ ತಿಳಿಸಿದ್ದಾನೆ. ಆತನಿಗೆ ಬಂದ 'ದೀಪಶಿಖಾ ಕಾಳಿದಾಸಃ' ಎಂಬ ಬಿರುದು ಆತನ ವರ್ಣನಾವೈಖರಿಗೆ ಎತ್ತಿದ ರನ್ನದೀವಿಗೆ; ಅಮರ ಸ್ಮಾರಕಗೋಪುರ! ಸರಸ್ವತಿಯ ಅಪರಾವತಾರವೆನ್ನುವ ಕಾಳಿದಾಸನ ಮಾತುಗಳ ಸಾರವನ್ನು ಸೂರೆಗೈಯುವುದು ಸುಲಭದ ಸಾಧನೆಯಲ್ಲ. "ರತ್ನಂ ಸಮಾಗಚ್ಛತು ಕಾಂಚನೇನ" ಸ್ತ್ರೀರತ್ನವು ಅನುರೂಪವಾದ ವರನೆಂಬ ಸುವರ್ಣದೊಡನೆ ಸೇರಲಿ ಎನ್ನುವಲ್ಲಿ ಇರುವ ಭಾವ ಅದೆಷ್ಟು ಮನೋಹರ! ಚಿನ್ನ ರತ್ನಗಳ ಅವಿನಾಭಾವಿ ಕೂಡುವಿಕೆಯಂತೆ ಸ್ತ್ರೀರತ್ನ-ಪುರುಷಕಾಂಚನ ಸಂಬಂಧವಿರಬೇಕೆಂದೂ ಆದಿದ್ದರೇ ಶೋಭೆ ಎನ್ನುವುದನ್ನೂ ಗಮನಿಸಿದಾಗ ಆತನ ವರ್ಣನಾಕೌಶಲ ಕಂಡುಬರುತ್ತದೆ. ಬಹುವಿಧದ ಶಾಸ್ತ್ರಪಾಂಡಿತ್ಯದಿಂದ 'ಬಹುಜ್ಞತಾ ಏವ ಪಾಂಡಿತ್ಯಂ' ಎನ್ನುವುದೂ, ಆತನ ಬಹುಶ್ರುತ ಪಾಂಡಿತ್ಯಕ್ಕೆ ತರತರದ ಉಪಮಾನ ನಿದರ್ಶನಗಳೂ ಆತನ ಕಾವ್ಯದುದ್ದಕ್ಕೂ ಹರಡಿವೆ. ಒಂದೇ ಒಂದು ನಿಪಾತ ಅವ್ಯಯಗಳೂ 'ಚ-ವೈ-ತು-ಹಿ'ಗಳು ವ್ಯರ್ಥವಾಗಿ, ಅಸ್ಥಾನದಲ್ಲಿ ಪಾದಪೂರಣೆಗಾಗಿ ಬಂದಿಲ್ಲ; ಅರ್ಥಗೌರವದಿಂದ ಬಾಗಿ ಬಳುಕುತ್ತವೆ. ಪದಪುಂಜಗಳು, ಅರ್ಥಗೌರವಗಳು 'ಹೃದಯಮಿವ ಪ್ರವಿಶನ್ತಃ ಸರ್ವಾಂಗೀಣಮಿವಾಲಿಂಗಂತಃ' ಎಂಬಂತೆ ಅಮಿತಮಹಿಮೆಯಿಂದ ಸಹೃದಯರನ್ನು ಮುಗ್ಧಗೊಳಿಸಿ ರಸಸ್ತರಕ್ಕೆ ಏರಿಸಿ ಬಿಡುತ್ತವೆ!

**ಕುಮಾರಸಂಭವಂ:**

ಮಹಾಶಿವಪುರಾಣಾಂತರ್ಗತ ಪಾರ್ವತೀಖಂಡದಲ್ಲಿ ಬರುವ ಕಥೆಯನ್ನು ಅಳವಡಿಸಿಕೊಂಡು ಮಹಾಕವಿ ಕಾಳಿದಾಸ ಕುಮಾರಸಂಭವವನ್ನು ಬರೆದನಂತೆ. ತಾರಕಾಸುರವಧೆಯ ವರೆಗೆ ಲಂಬಿಸಿರುವ ಈ ಕಾವ್ಯದಲ್ಲಿ ಹದಿನೇಳು ಸರ್ಗಗಳಿವೆ. ಕಾಳಿದಾಸನು ಕೇವಲ ಎಂಟು ಸರ್ಗಗಳನ್ನೇ ಬರೆದನೆಂದೂ, ಕುಮಾರೋತ್ಪತ್ತಿ ವರೆಗಿನ ಕಥೆ ಅಲ್ಲಿ ಅಡಕವಾಗಿರುವುದರಿಂದ ಗ್ರಂಥದ ಹೆಸರೂ ಕುಮಾರಸಂಭವವಲ್ಲದೆ ತಾರಕಾಸುರವಧೆ ಎಂದಾಗಲಿಲ್ಲ. ತಾರಕಾಸುರವಧೆಯ ವರೆಗೆ ಕತೆ ಹರಡಿ, 'ಶಿಶುಪಾಲ ವಧೆ' ಎಂದಂತೆ, ನಾಮಕರಣಗೊಂಡಿಲ್ಲ. ಇದಿನ್ನೂ ವಿವಾದಾಸ್ಪದ ವಿಷಯ. ಶ್ರೀ ಪರಮೇಶ್ವರ ಭಟ್ಟರು ಮೊದಲ ಎಂಟೇ ಸರ್ಗಗಳ ಕನ್ನಡ ಅನುವಾದವನ್ನು ಮಾಡಿದ್ದಾರೆ. ಇವರಿಂದ ಮೊದಲೇ ಶ್ರೀ ಅಮ್ಮೆಂಬಳ ಶಂಕರನಾರಾಯಣ ನಾವಡರು ಐದು ಸರ್ಗಗಳ ವರೆಗೆ ಅನುವದಿಸಿದ್ದರು.

"ಭಾರತೀ ಕಾಲಿದಾಸಸ್ಯ ದುರ್ವ್ಯಾಖ್ಯಾ ವಿಷಮೂರ್ಚ್ಛಿತಾ" ಎಂದು ಮಲ್ಲಿನಾಥನು ತಿಳಿಸುತ್ತಾನೆ. ಆದರೆ ಭಾವತಲಸ್ಪರ್ಶಿಯಾಗಿ, ಶಬ್ದದ ಜೀವಾಳವನ್ನು ಗುರುತಿಸಿ, ದನಿಬನಿಗನುಸಾರವಾಗಿ ಕನ್ನಡದಲ್ಲಿ ಮೂಡಿಬಂದ ಭಾವಾನುವಾದಕ್ಕೆ ಮೇಲಿನ ಮಾತು ಸಲ್ಲದು. ವಸ್ತುನಿರ್ದೇಶರೂಪದ ಮಂಗಳ ಪದದಲ್ಲಿ ಕಾಳಿದಾಸನು ಹಿಮಾಲಯ ಪರ್ವತರಾಜನನ್ನು ಭೂಮಿಯ ಅಳತೆಗೋಲಿನಂತಿರುವನೆಂದು ಉತ್ಪ್ರೇಕ್ಷಿಸಿದ್ದಾನೆ. 'ಹಿಮಾಲಯ', 'ನಗಾಧಿರಾಜ' ಮೊದಲಾದ ಪದಗಳಲ್ಲೇ ಕಾಳಿದಾಸ ಹಿಮವತ್ಪರ್ವತದ ಔನ್ನತ್ಯ, ಉದ್ದ, ಹರಹುಗಳನ್ನು ಸೂಚಿಸಿದ್ದಾನೆ.

"ಅಸ್ತ್ಯುತ್ತರಸ್ಯಾಂ ದಿಶಿದೇವತಾತ್ಮಾ
ಹಿಮಾಲಯೋ ನಾಮನಗಾಧಿರಾಜಃ ।
ಪೂರ್ವಾಪರೌತೋಯನಿಧೀ ವಗಾಹ್ಯ
ಸ್ಥಿತಃ ಪೃಥಿವ್ಯಾ ಇವ ಮಾನದಂಡಃ ॥"

ಅಲ್ಲಿ ಉತ್ತರದಿಶೆಯೊಳಿರುವನು ಹಿಮಾಲಯನು
ದೇವತಾತ್ಮನು ತಾನು ಪರ್ವತೇಶ್ವರನು ।
ಪೂರ್ವಪಶ್ಚಿಮ ಶರಧಿಗಡಿ ಚಾಚಿನಿಂದಿಹನು
ಪೃಥ್ವಿಯ ಮಹಾಮಾನದಂಡದಂತಿಹನು ॥

ಇದು ಪರಮೇಶ್ವರ ಭಟ್ಟರ ಅನುವಾದ. ಪಾರ್ವತೀದೇವಿಯ ಪಾದಾದಿಕೇಶಾಂತ ವರ್ಣನೆಯನ್ನು ಮಾಡಿ ಕಾಳಿದಾಸ, 'ಕಿಂಬಹುನಾ' ಹೆಚ್ಚು ಹೇಳುವುದೇನು:

"ಸರ್ವೋಪಮಾದ್ರವ್ಯಸಮುಚ್ಚಯೇನ
ಯಥಾ ಪ್ರದೇಶಂ ವಿನಿವೇಶಿತೇನ ।
ಸಾ ನಿರ್ಮಿತಾ ವಿಶ್ವಸೃಜಾ ಪ್ರಯತ್ನಾತ್
ಏಕಸ್ಥ ಸೌಂದರ್ಯ ದಿದೃಕ್ಷಯೇವ ॥"

ಎಂದು ಮುಗಿಸಿಬಿಡುತ್ತಾನೆ. ಇದರ ಅನುವಾದ ಹೀಗಿದೆ:

ಎಲ್ಲ ತೆರನುಪಮಾನ ಕರಣಗಳನಳವಡಿಸಿ
ಎಡೆಯರಿಯುತನುಗೊಳಿಸಿ ನೋಂತು ಶ್ರಮಿಸಿ ।
ವಿಧಿಯವಳ ಸೃಜಿಸಿದನು ಸರ್ವಸೌಂದರ್ಯವನು
ಒಂದೆಡೆಯೆ ತಾನೊಮ್ಮೆ ನೋಡಲೆಳಸಿ ॥

ಮೂಲದಲ್ಲಿ ಕಾಳಿದಾಸ 'ವಿಶ್ವಸೃಜಾ' ಎಂಬ ಪದದಲ್ಲಿ ತನ್ನ ಭಾವ-ಅರ್ಥ ಸೂಕ್ಷ್ಮಗಳನ್ನು ಇಟ್ಟಿದ್ದಾನೆ. ಅನುವಾದದಲ್ಲಿ 'ವಿಧಿ' ಎಂದು ಬಂದು ಮೂಲದ ಶಬ್ದಸೂಕ್ಷ್ಮಭಾವಕ್ಕೆ ಸ್ವಲ್ಪ ಭಂಗ ಬಂದರೂ, ಭಾವಾನುವಾದ ಚೆನ್ನಾಗಿಯೇ ಬಂದಿದೆ.

ಮುಂದೆಬರುವ ತಾರಕಾಸುರನ ಪೀಡಾವರ್ಣನೆ ಸುಂದರವಾಗಿ ಮೂಡಿಬಂದಿದೆ. ಮನ್ಮಥನ ದಾಹ, ರತಿವಿಲಾಪವೂ ಕೇವಲ ಸುಂದರವಾಗಿವೆ. ಮನ್ಮಥನನ್ನು ಉರಿಸಿದ ಬಗೆ:

"ತತಃ ಪರಾಮರ್ಶ ವಿವೃದ್ಧ ಮನ್ಯೋಃ
ಭ್ರೂಭಂಗದುಷ್ಪ್ರೇಕ್ಷ್ಯ ಮುಖಸ್ಯ ತಸ್ಯ ।
ಸ್ಫುರನ್ನುದರ್ಚಿಃ ಸಹಸಾ ತೃತೀಯಾತ್
ಅಕ್ಷ್ಣಃ ಕೃಶಾನುಃ ಕಿಲ ನಿಷ್ಪಪಾತ ॥"

ತತ್ಪರಾಸ್ಕಂದನದಿನತಿಕುಪಿತನಾದವನ
ಭ್ರೂಭಂಗದಿಂದಾದ ದುಷ್ಪ್ರೇಕ್ಷ್ಯಮುಖನ ।
ಆ ತೃತೀಯಾಕ್ಷಿಯಿಂದುರ್ಚಿದುದು ಫಕ್ಕನಂ-
ದುನ್ಮುಖಜ್ವಾಲಾಗ್ನಿದೇದೀಪ್ಯಮಾನಂ ! ॥

ಆಗ ದೇವತೆಗಳು, "ಸಂಹರಿಸು ಸಂಹರಿಸು, ಹೇಪ್ರಭೂ, ಕ್ರೋಧಮಂ!" ಎಂದರೂ ಕಾರ್ಯ ಮಿಂಚಿತ್ತು! ನವವೈಧವ್ಯದ ಅಸಹ್ಯವೇದನೆಯಿಂದ ಕಂದಿದ ರತಿವಿಲಾಪ 'ವಿಯೋಗಿನೀ'ವೃತ್ತದಲ್ಲಿ ಮೂಲದಲ್ಲಿ ಮನಕರಗುವಂತೆ ಮಾಡುವ ಸನ್ನಿವೇಶ. ಕನ್ನಡದಲ್ಲಿ ಭಾವಕ್ಕೆ ತಕ್ಕ ಛಂದವನ್ನು ಅಳವಡಿಸಿ

ಕೊಳ್ಳಲು ಸರ್ವತ್ರ ಸಾಧ್ಯವಾಗುವುದಿಲ್ಲ. ಸಂಸ್ಕೃತದಲ್ಲಾದರೆ ದೀರ್ಘಸಮಾಸ, ಪರುಷಾಕ್ಷರ, ನಿಪಾತ, ಉಪಸರ್ಗಗಳಿಂದ ಭಾವಕ್ಕೆ ತಕ್ಕ ಬಂಧವನ್ನೂ, ಛಂದವನ್ನೂ ತರಬಹುದು. ಕನ್ನಡದ ಏಕಾಕ್ಷರ ಶಬ್ದಗಳು, ಧಾತುಗಳು, ಎರಡೋ ಮೂರೋ ವರ್ಣಗಳ ಸಣ್ಣ ಪದಗಳು, ದೇಸಿ ನುಡಿಗಳು ಈ ಕೆಲಸವನ್ನು ಮಾಡಲು ಸುಸಮರ್ಥಗಳಾಗಿಲ್ಲ. ಆದರೂ ಸಾಧ್ಯವಾದಷ್ಟು ಮಟ್ಟಿಗೆ ಮೂಲದ ಛಾಯೆಯನ್ನು, ಭಾವವನ್ನು, ಧ್ವನಿಸೂಚ್ಯ ಅಂಶಗಳನ್ನು ರಸಪೋಷರುವಂತೆ ಅನುವಾದಿಸಿದ್ದಾರೆ.

'ರತಿಪ್ರಿಯ'ನಾದ ಮನ್ಮಥನ ಅಳಿವಿನಿಂದ ಅಳಲಿ ಬಳಲಿ ತೊಳಲಿದ ಕಿಂಕರ್ತವ್ಯತಾವಿಮೂಢಳಾದ ರತಿ, ಆನೆ ಧ್ವಂಸಮಾಡಿದ ಎಳಲತೆಯಂತಾಗಿ, ಪ್ರಾಣತ್ಯಾಗಕ್ಕೆ ಉದ್ಯುಕ್ತಳಾದಾಗ ಕೇಳಿಬಂದ ಆಕಾಶವಾಣಿಯಿದು: 'ಕುಸುಮಾಯುಧನ ಪತ್ನಿಯೇ! ನಿನ್ನ ಪತಿ ದುರ್ಲಭನೆಂದು ತಿಳಿಯದಿರು. ಈಗ ಹರನೇತ್ರಾಗ್ನಿಯಲ್ಲಿ ಶಲಭದಂತೆ ನಾಶಹೊಂದಿದರೂ, ಪಾರ್ವತಿಯನ್ನು ಶಿವ ವಿವಾಹವಾಗುವನು, ಪುನಃ ನಿನ್ನ ಪತಿಯನ್ನು ಆತ ಶರೀರದಿಂದ ಯೋಜಿಸುವನು." ಇದರಲ್ಲಿ ಭರವಸೆ ತಾಳಿ ರತಿ:

> "ಅಥ ಮದನವಧೂರುಪಪ್ಲವಾನ್ತಂ
> ವ್ಯಸನಕೃಶಾ ಪರಿಪಾಲಯಾಂ ಬಭೂವ ।
> ಶಶಿನ ಇವ ದಿವಾತನಸ್ಯ ಲೇಖಾ
> ಕಿರಣಪರಿಕ್ಷಯಧೂಸರಾ ಪ್ರದೋಷಮ್ ॥"

> ವ್ಯಸನಕೃಶೆಯನಂಗವಧು ನಿರೀಕ್ಷಿಸುತ್ತಲಿರ್ದಳಂದುಪಪ್ಲವಾಂತಮಮ್ ।
> ಕಿರಣಕಂದಿ ಮಲಿನಗೊಂಡು ದಿವದೊಳೊಗೆದ ಶಶಿಯ ಲೇಖೆ ಪಾರುವೊಲ್ ಪ್ರದೋಷಮಂ' ॥

ಕಾಳಿದಾಸನ ಉಪಮಾನಿಪುಣತೆಯನ್ನು ಗಮನಿಸಬೇಕು ಇಲ್ಲಿ! ಮುಂದೆ ಪಾರ್ವತಿಯ ತಪಸ್ಸು ಅಸ್ವಾದ್ಯಶವೆನಿಸುವಂತೆ ನಿರಪಿಸಿದ್ದಾನೆ ಕಾಳಿದಾಸ. ಆತನ ಪ್ರತಿಭೆ ಮುಗಿಲೆತ್ತರಕ್ಕೆ ಏರಿ ವ್ಯೋಮ ವಿಹಾರಿಯಾಗಿ ವಿಹರಿಸುತ್ತದೆ! ಪಾರ್ವತಿಯ ಉಗ್ರ ತಪಸ್ಸು, ಕಪಟ ಬ್ರಹ್ಮಚಾರಿ ಸಂವಾದ, ಶಿವ ಪ್ರತ್ಯಕ್ಷ — ಎಲ್ಲವೂ ಇನ್ನಿಲ್ಲ ಎನ್ನುವಂತೆ ಒಪ್ಪಓರಣವಾಗಿ, ಹದ ಹಾಳತ ರೀತಿಯಿಂದ ಕಾಳಿದಾಸ ನಿರೂಪಿಸಿದ್ದಾನೆ. ಈ ಪದ್ಯ ಪಾರ್ವತಿಯ ತಪಸ್ಸಿಗೊಲಿದ ಶಿವನ ಮಾತು:

> "ಅದ್ಯಪ್ರಭೃತ್ಯವನತಾಂಗಿ! ತವಾಸ್ಮಿ ದಾಸಃ
> ಕ್ರೀತಸ್ತಪೋಭಿರಿತಿ ವಾದಿನಿ ಚಂದ್ರಮೌಲೌ ।
> ಅಹ್ನಾಯ ಸಾ ನಿಯಮಜಂ ಕ್ಲಮಮುತ್ಸಸರ್ಜ
> ಕ್ಲೇಶಃ ಫಲೇನ ಹಿ ಪುನರ್ನವತಾಂ ವಿಧತ್ತೇ" ॥

> ಇಂದಿನಿಂದಲವನತಾಂಗಿ ನಾನು ನಿನ್ನ ದಾಸನು
> ಕ್ರೀತ ನಿನ್ನ ತಪದಿನೆಂದು ಚಂದ್ರಮೌಳಿ ನುಡಿದನು ।
> ಒಡನೆ ತನ್ನ ನಿಯಮಜನ್ಯ ಸೇದೆಯಳಿದಳಗಸುತೆ
> ಕ್ಲೇಶಕಹುದು ಸಫಲತೆಯಲಿ ದಿಟ ಪುನರ್ನವೀನತೆ! ॥

ಅನುವಾದ ವ್ಯಾಖ್ಯಾನ ನಿರಪೇಕ್ಷವಾದುದು. ಮೂಲಕ್ಕೆ ಸರಿತೂಕವಾದುದು! ಆರನೆಯ ಸರ್ಗದಲ್ಲಿ ವರ್ಣಿತವಾದ ಉಮಾಪ್ರದಾನ ಹಿಂದೂ ಸಂಸ್ಕಾರದಂತೆ ವಿವಾಹ ಪದ್ಧತಿಯನ್ನು ತಿಳಿಸುವ ಉತ್ತಮ ಭಾಗ. "ಸ್ತ್ರೀ ಪುಮಾನಿತ್ಯನಾಸ್ಥೈಷಾ ವೃತ್ತಂ ಹಿ ಮಹಿತಂ ಸತಾಂ" ('ಹೆಣ್ಣು ಗಂಡೆಂದೆನ್ನರೊಳ್ಳೆಯವರೆಣಿಸುವುದು ದಲ್ ನಡತೆಯೊಂದೆ') ಎನ್ನುವ ಕಾಳಿದಾಸನ ನಿಲುವು, ಅಂತೆಯೇ—"ಕ್ರಿಯಾಣಾಂ ಖಲು ಧರ್ಮ್ಯಾಣಾಂ ಸತ್ಪತ್ನ್ಯೋ ಮೂಲಕಾರಣಮ್" ('ಧರ್ಮ ಕ್ರಿಯಂಗಳೊಳು ಸತ್ಪತ್ನಿಯರು ವಲಂ ಮೂಲಕಾರಣರು') ಎನ್ನುವುದು ಧರ್ಮಾವಿರುದ್ಧ ಮಾತೇ!

ಉಮಾಪರಿಣಯ ಏಳನೆಯ ಸರ್ಗದಲ್ಲಿ ವ್ಯಾವರ್ಣಿತವಾಗಿದೆ. ಮಂಗಳಸ್ನಾತಳಾದ ಪಾರ್ವತಿ

ಮದುವೆಗಳಾಗಿ ಹೇಗಿದ್ದರೆಂದೂ, ಶಿವನ ಶೃಂಗಾರ ವರ್ಣನೆ, ಏಕಾಂತ ವರ್ಣನೆ—ಮುಂತಾದುವನ್ನು ಕಾಳಿದಾಸ ಬಹು ಮನೋಜ್ಞವಾಗಿ ಚಿತ್ರಿಸಿದ್ದಾನೆ.

ಭಾರತೀಯ ಅಲಂಕಾರಿಕರು ಆಕ್ಷೇಪವೆತ್ತಿದ 'ಉಮಾಸುರತ ವರ್ಣನೆ' ಎಂಟನೆಯ ಸರ್ಗದ ವರ್ಣನೀಯ ವಿಷಯ. ವಿವರವನ್ನು ಬಯಸುವ ರಸಿಕರು ಎಂಟನೆಯ ಸರ್ಗವನ್ನೋದಬಹುದು. ಇದರಲ್ಲಿ ಹರ್ಷವೃದ್ಧಿಗೆ ಕಾರಣವಾದ ಶೃಂಗಾರರಸವನ್ನು ಹಗಲಿರುಳೆನ್ನದೆ ಸೇವಿಸುತ್ತಿದ್ದ ಶಿವನು 'ತಾನಂದದೃಶ್ಯನೆನಲಾದನಂತೆ !' ಹೀಗೆ,

"ಸಮದಿವಸನಿಶೀಥಂ ಸಂಗಿನಸ್ತತ್ರ ಶಂಭೋಃ
ಶತಮಗಮದೃತೂನಾಂ ಸಾಗ್ರಮೇಕಾ ನಿಶೇವ ।
ನ ತು ಸುರತಮುಖೇಭ್ಯಃ ಛಿನ್ನತೃಷ್ಣೋ ಬಭೂವ
ಜ್ವಲನ ಇವ ಸಮುದ್ರಾನ್ತರ್ಗತಸ್ತಜ್ಜಲೌಘೈಃ ॥"

ಹಗಲು ರಾತ್ರಿಯನೊಂದೆಸಮನೆಂದೆಣಿಸಿ ತಾನನುರಕ್ತ ಶಂಭುವು
ಅಲ್ಲಿ ಕಳೆದನು ನೂರು ಮೇಲದರರ್ಧಋತುಗಳನೇಕರಾತ್ರಿವೊಲು ।
ತಜ್ಜಲೌಘಗಳಿಂದಲೆಂದುಂ ಆರದಿರುವಾ ಕಡಲಿನೊಳಗಣ
ಬಾಡಬಾಗ್ನಿಯವೋಲು ಸುರತದೊಳಾರದಿರ್ದನು ತನ್ಮಹೇಶ್ವರನು ॥

ಇಲ್ಲಿಗೆ ಕಾಳಿದಾಸನ ಕುಮಾರಸಂಭವದ ಎಂಟನೆಯ ಸರ್ಗದ ಕನ್ನಡ ಅನುವಾದ ಮುಕ್ತಾಯಗೊಂಡಿದೆ. ಉಳಿದ ಸರ್ಗಗಳನ್ನು ಶ್ರೀ ಭಟ್ಟರು ಯಾಕೆ ಅನುವದಿಸಲಿಲ್ಲವೋ ತಿಳಿಯದು. ಲೇಖನ ವಿಸ್ತರ ಭಯದಿಂದ ಅನೇಕ ಉಲ್ಲೇಖನೀಯ ಸ್ವಾರಸ್ಯಾಂಶಗಳನ್ನು ಕೈಬಿಡಬೇಕಾಗಿ ಬಂದಿದೆ. ಮೂಲ ಗ್ರಂಥದ ಮಾದರಿಗಾಗಿ ಮಾತ್ರ ಈ ಪ್ರಯತ್ನವಾದ್ದರಿಂದ ಕುಮಾರಸಂಭವದ ವಿಚಾರವನ್ನು ಇಲ್ಲಿಗೇ ನಿಲ್ಲಿಸಬೇಕಾಗಿದೆ.

## ರಘುವಂಶಂ:

ಕಾಳಿದಾಸನ ಪರಿಣತ ವಯಸ್ಸಿನ ಪರಿಪಕ್ವ ಪಾಂಡಿತ್ಯದ ಫಲವಾಗಿ ಈ ರಸಭರಿತ ಕಾವ್ಯ ಉಂಟಾಗಿದೆ. ರಸಿಕರಿಗೆ 'ರಘೋಃ ಸಕಾಶಾತ್ ಅನವಾಪ್ಯ ಕಾಮ'ವಾವುದೂ ಇಲ್ಲವೆಂದು ಕಾಳಿದಾಸನೇ ಹೇಳಿದ್ದಾನೆ. ಸೂರ್ಯವಂಶಜರ ಚರಿತ್ರೆ ಬಹು ಕುಶಲರೀತಿಯಿಂದ ಪಾಂಡಿತ್ಯಪೂರ್ಣವಾಗಿ, ರಮ್ಯೋಜ್ಜ್ವಲವಾಗಿ, ಕಾಳಿದಾಸನ ಮಹಾಕವಿತ್ವವನ್ನು ಸಾರುವ ಸಾರ್ವಕಾಲಿಕ ಪ್ರತಿನಿಧಿಯಂತೆ, ಆತನ ಕವಿತಾಶಕ್ತಿಯ ಅವಿಸ್ಮರಣೀಯ ಅವಿನಶ್ವರ ಸ್ಮಾರಕವೆಂಬಂತೆ ಈ ಕೃತಿರತ್ನ ಜಾಜ್ವಲ್ಯಮಾನವಾಗಿದೆ. ತನ್ನ ನಮ್ರಾನತ ವ್ಯಕ್ತಿತ್ವಕ್ಕೆ ತಕ್ಕಂತೆ, 'ತಾನೆಲ್ಲಿ ಸೂರ್ಯವಂಶವೆಲ್ಲಿ ವೃಥಾ ಅಪಹಾಸ್ಯಕ್ಕೀಡಾಗುವೆನಲ್ಲಾ' ಎಂದು ನಿಗರ್ವದ ಮಾತನ್ನು ಗ್ರಂಥಾರಂಭದಲ್ಲಿ ಆಡಿದ್ದರೂ, ಸಮರ್ಥರೀತಿಯಿಂದ, ಸಾರವತ್ತಾಗಿ ಸಾರಾಂಶಗಳನ್ನು ಬಿಡದೆ, ನೂತನವೆನಿಸುವಂತೆ ಕೃತಿರಚನೆಯನ್ನು ಮಾಡಿದ್ದಾನೆ ಕಾಳಿದಾಸ. ಪ್ರತಿಯೊಂದು ಪದ, ಉಪಮಾನ, ವರ್ಣನೆಗಳನ್ನೂ ತೂಗಿನೋಡಿ ಬಳಸಿದಂತೆ, ಟಂಕಸಾಲೆಯಿಂದ ಮುದ್ರಿತ ಚಲಾವಣೆಯ ನಾಣ್ಯಗಳಂತೆ 'ಬೆಲೆಯುಳ್ಳ'ವುಗಳನ್ನಾಗಿ ಕಾಳಿದಾಸ ಮಾಡಿದ್ದಾನೆ! ಮೃದುಮಧುರವಾದ ಸೂಕ್ತಿ ನಿರ್ಭರವಾದ ಕಾಳಿದಾಸನ ವಾಣಿ ಮಧುರಸಾರ್ದ್ರವಾಗಿ ರಸಿಕರಿಗೆ ಅಚ್ಚುಮೆಚ್ಚಿನದ್ದಾಗಿದೆ! ರಸಿಕ ಸಹೃದಯರ ತೃಪ್ತಿಗೆ ರಸಕವಳವನ್ನು ಸಾಕೆಂಬಷ್ಟು ಬಡಿಸುವ ರಸಪಾಕದ ಭೋಜನದ ಜೇವಣಸಾಲೆಯಾಗಿದೆ ರಘುವಂಶ ಕಾವ್ಯ. ಸಂಸ್ಕೃತಾಭ್ಯಾಸಿಗಳಿಗೆ ಕಾವ್ಯಪ್ರಪಂಚಕ್ಕೆ ಬಾಲಬೋಧೆಯಾಗಿದೆ ಈ ಸರಳಸುಂದರ ನಿರವದ್ಯಹೃದ್ಯ ಪದ್ಯಗಳಿಂದ ಕೂಡಿದ ರಘುವಂಶ ಕಾವ್ಯ !

ಕಾವ್ಯಮೀಮಾಂಸೆಯಲ್ಲಿ ಶಬ್ದಾರ್ಥಗಳ ಅವಿಭಾಜ್ಯವೆನಿಸಿದ ಅವಿನಾಭಾವಿಸಂಬಂಧ ಪ್ರಧಾನವಾದುದು. ಅದನ್ನು ಸೂಚಿಸಲೋ ಎಂಬಂತೆ ಕಾಳಿದಾಸ ರಘುವಂಶದ ಮಂಗಳಪದದಲ್ಲಿ ಪಾರ್ವತೀಪರಮೇಶ್ವರರ ಒಡವೆರೆದು ಶೋಭಿಸುವ ರೀತಿಯನ್ನು ತಿಳಿಸುತ್ತಾ ಈ ರೀತಿ ಹೇಳಿದ್ದಾನೆ:

"ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವನ್ದೇ ಪಾರ್ವತೀಪರಮೇಶ್ವರೌ ॥"

ವಾಗರ್ಥದಂತನಿಕಟವೊಡವೆರೆದು ಶೋಭಿಸುವ ಜಗದ ತಾಯ್‌ತಂದೆಯರನು ।
ಪಾರ್ವತೀಪರಮೇಶ್ವರರ್ಕಳನು ವಾಗರ್ಥದರಿವಿಗೆಂದೆರಗಿದಪೆನು ॥

ಇದು ಪರಮೇಶ್ವರ ಭಟ್ಟರ ಅನುವಾದ. ಮೂಲದ ಸರಳ ಪ್ರಸಾದಗುಣಕ್ಕೆ ಭಾಷಾಂತರ ಬರಲಿಲ್ಲ. ಇದಕ್ಕೆ ಕಾರಣವಿಲ್ಲದಿಲ್ಲ. ಅತಿ ಸರಳ ಮಾತುಗಳನ್ನು ಭಾಷಾಂತರಿಸುವಾಗ, ಅರ್ಥ ವಿವರಣೆ ಮಾಡುವಾಗ ಕ್ಲಿಷ್ಟತೆಗೆ ದಾರಿಯಾಗುತ್ತದೆ. ಉದಾಹರಣೆಗೆ, ಈ ಮೊದಲೇ ನೋಡಿದ, 'ಲಲಿತಲವಂಗಲತಾಪರಿಶೀಲನಕೋಮಲಮಲಯ ಸಮೀರೇ' ಎಂಬ ಭಾಗವನ್ನು ಕನ್ನಡಿಸಿ ಸುಲಭ ವಾಗಿ ಮೂಲಕ್ಕಿಂತ ಸರಳ ಎನ್ನುವಂತೆ ತಿಳಿಸಲು ಸಾಧ್ಯವೇ? ಅಥವಾ ತುಪ್ಪ, ನೀರು-ಮುಂತಾದ ಸರಳ ಶಬ್ದಗಳಿಗೆ ಬೇರೊಂದು ಸುಲಭಪದವನ್ನಾಗಲೀ. ಅರ್ಥವನ್ನಾಗಲೀ ತಿಳಿಸುವುದು ಸಾಧ್ಯವೇ? ಅಂತೂ ಮೂಲದ ಆಶಯಕ್ಕೆ ಭಾಷಾಂತರ ಅಪೋಹ ತಂದಿಲ್ಲ. ಸರಳತೆಗೆ, ಪ್ರಸಾದಗುಣಕ್ಕೆ ಅನಿವಾರ್ಯವಾದ ಕೊರತೆ ಭಾಷಾಂತರದಲ್ಲಿ ಬಂದೇ ಬರುವುದು. ಯಾರು ಭಾಷಾಂತರಿಸಿದರೂ ಇದು ಅನಿವಾರ್ಯ. ಮೂಲವೇ ಸಹಜಸುಂದರ ಬಂಧಬಂಧುರವಾದಾಗ ಭಾಷಾನ್ತರ ಸೋಲದೆ ಗತ್ಯಂತರವಿಲ್ಲ.

ಸೂರ್ಯವಂಶದ ದೊರೆಗಳಾದ ರಘುಕುಲದ "ಸಾಮಾನ್ಯ" ಗುಣಗಳನ್ನೆಲ್ಲಾ ತಿಳಿಸಿ ಅವರ ರಾಜ್ಯಭಾರ ದಲ್ಲಿ 'ಕಳವು' ಶಬ್ದವು ಕರ್ಣಾಕರ್ಣಿಕೆಯಾಗಿತ್ತಲ್ಲದೆ ರಾಜ್ಯವು ಚೋರಭಯವಿಮುಕ್ತವಾಗಿತ್ತೆಂದು ವರ್ಣಿಸಿದ್ದಾನೆ. ರಾಜರು ತಂದೆಯಂತೆ ಪ್ರಜಾನುರಾಗಿಗಳಾಗಿ ರಕ್ಷಣೆಯನ್ನೀಯುತ್ತಿದ್ದರು – ಎಂದು ಮುಂತಾಗಿ ಆದರ್ಶ ರಾಜ್ಯಭಾರ ಪದ್ಧತಿಯ ವಿಹಂಗಮ ನೋಟವನ್ನು ಕೊಟ್ಟು ಕಾಳಿದಾಸ ದಿಲೀಪನ ವೃತ್ತಾಂತವನ್ನು ತಿಳಿಸುತ್ತಾನೆ. ಆತನು ಪುತ್ರಸಂತಾನವಿಲ್ಲದೆ ರಾಜ್ಯವು ಅರಾಜಕವಾಗುವುದೆಂದೂ, ತಾನು ಸದ್ಗತಿಯಿಂದ ವಂಚಿತನಾದೇನು ಎಂದೂ ಭಾವಿಸಿ, ತಮ್ಮ ಕುಲಪುರೋಹಿತರಾದ ವಸಿಷ್ಠರಲ್ಲಿಗೆ ಸಪತ್ನೀಕನಾಗಿ ಹೋಗುವನು. ಅಲ್ಲಿ ರಾತ್ರಿ ತಂಗುತ್ತಾನೆ.

"ನಿರ್ದಿಷ್ಟಾಂ ಕುಲಪತಿನಾ ಸ ಪರ್ಣಶಾಲಾ-
ಮಧ್ಯಾಸ್ಯ ಪ್ರಯತ ಪರಿಗ್ರಹದ್ವಿತೀಯಃ ।
ತಚ್ಛಿಷ್ಯಾಧ್ಯಯನನಿವೇದಿತಾವಸಾನಾಂ
ಸಂವಿಷ್ಟಃ ಕುಶಶಯನೇ ನಿಶಾಂ ನಿನಾಯ ॥"

ಕುಲಪತಿ ತೋರಿಸಿದೆಲೆವನೆಯೊಳು ಆ ನರಪ ದಿಲೀಪನು ಪುಗುತಂದು
ಪತ್ನಿ ಸುದಕ್ಷಿಣೆಯೊಡನೆ ಕುಶಾಂಕುರತಲ್ಪದೊಳಿರುಳನು ತಾಂ ಕಳೆದು ।
ಶಿಷ್ಯರ ವೇದಾಧ್ಯಯನದ ಘೋಷದೆ ನಿಶಿ ಕೊನೆಗೊಂಡುದ ಸಲೆ ತಿಳಿದು
ಮುದದಿಂ ಸತಿವೆರಸೊಡನೆಳ್ಚತ್ತನು ನೇಸರಿನುದಯದೊಳಂತಂದು ॥

ಹಂಸತೂಲಿಕಾತಲ್ಪದಲ್ಲಿ ಪವಡಿಸಿ, ಮಂಗಲತೂರ್ಯದೊಡನೆ ಉಪ್ಪವಡಿಸುವ ದಿಲೀಪ, ಕುಲಪತಿಯ ಆಶ್ರಮದಲ್ಲಿ ದರ್ಭಶಯನದಲ್ಲಿ ಮಲಗಿ, ವೇದಘೋಷವೊಳಗುವಾಗ, ಬೆಳಗಾದಾಗ, ಪತ್ನೀದ್ವಿತೀಯ ನಾಗಿ, ಎಚ್ಚತ್ತನು ಎಂದು, ಔಚಿತ್ಯವನ್ನೂ, ಆಶ್ರಮಾವಿರುದ್ಧ ನಿರಾಡಂಬರ ಸಂಸ್ಕೃತಿಯನ್ನೂ ತಿಳಿಸುವ ಈ ಭಾಗದ ಅನುವಾದವೂ ನಿರಾಡಂಬರವಾಗಿ ಬಂದಿದೆ. ಮೂಲದ ಕುಶಶಯನ ಅನುವಾದದಲ್ಲಿ ಕುಶಾಂಕುರಶಯನವಾಗಿ ಬಂದು, ಮೈಗೆ ನಾಟುವ ಅಂಕುರಗಳಿಂದೊಡಗೂಡಿದ ಮೃದುವಲ್ಲದ, ಹಾಸಿಗೆ ಎಂದು ತಿಳಿಸುವ ಮಾತು ಇನ್ನಷ್ಟು ಪ್ರಭಾವ ಪ್ರಕರ್ಷತೆಯಿಂದ ಕೂಡಿದೆಯೇ ಹೊರತು ಅನಪೇಕ್ಷಿತವಾಗಿ ಬರಲಿಲ್ಲ.

ಸುರಧೇನುವಿನ ಶಾಪದಿಂದಾಗಿ ದಿಲೀಪನಿಗೆ ಸಂತತಿಯಾಗಲಿಲ್ಲವೆಂದು ನುಡಿದು, ವಸಿಷ್ಠರು ಶಾಪ ನಿವಾರಣೆಗಾಗಿ ನಂದಿನೀವರಪ್ರಸಾದವನ್ನು ಪಡೆಯಲು ಉಪದೇಶಿಸಿದರು. ದರ್ಭಶಯನದಿಂದ ಉಪ್ಪವಡಿಸಿದ ರಾಜ.

“ಅಥಪ್ರಜಾನಾಮಧಿಪಃ ಪ್ರಭಾತೇ
ಜಾಯಯಾ ಪ್ರತಿಗ್ರಾಹಿತಗಂಧಮಾಲ್ಯಾಮ್ ।
ವನಾಯ ಪೀತಪ್ರತಿಬದ್ಧವತ್ಸಾಂ
ಯಶೋಧನೋ ಧೇನುಮೃಷೇರ್ಮುಮೋಚ ॥ ”

ಪೊಳ್ತರೆಯೊಳಾ ಬಳಿಕ ಗಂಧಮಾಲೆಯ ತಂದು
ಜಾಯೆ ಗೋಪೂಜೆಯನು ಮಾಡಿದಂದು ।
ಮೊಲೆಯುಂಡ ಕರುಕಟ್ಟಿ ಅದನಡವಿಗಟ್ಟಿದನು
ಜನಪನು ಯಶೋಘನನು ಮೇಯಲೆಂದು ॥

ಕಾಳಿದಾಸ ಮೂಲದಲ್ಲಿ 'ಜಾಯಯಾ' ಪದವನ್ನು ಬಹು ಅರ್ಥಗರ್ಭಿತವಾಗಿ ಬಳಸಿದ್ದಾನೆ. ಇದೇ ಸ್ಥಳದಲ್ಲಿ 'ಪತ್ನೀ', 'ಭಾರ್ಯಾ' ಪದಗಳನ್ನು ಬಳಸಿದರೂ ಛಂದಸ್ಸಾಗಲೀ ಮೇಲ್ನೋಟದ ವಾಚ್ಯಾರ್ಥವಾಗಲೀ ಕೆಡುವುದಿಲ್ಲ. ಆದರೆ ಜಾಯಾ ಎಂದರೆ ಮುಂದೆ ಇವಳಿಂದ ಸಂತಾನವಾಗಲಿದೆ. ಇವಳು ತಾಯಿಯಾಗಲಿರುವಳು ಎಂಬ ಸೂಚನೆಗೆ ಇಲ್ಲಿ ದಾರಿಮಾಡಿದ್ದಾನೆ ಕವಿ. ಅನುವಾದದಲ್ಲೂ 'ಜಾಯೆ' ಎಂದೇ ಬರೆದಿದ್ದಾರೆ! ಈ ಸ್ಥಳದಲ್ಲಿ 'ಸತಿ' 'ಮಡದಿ' 'ಭಾರ್ಯೆ' 'ಪತ್ನಿ' ಮುಂತಾದ ಪದಗಳನ್ನುಳಿಸದೆ, ಮೂಲದ ಭಾವ, ಸೂಕ್ಷ್ಮಧ್ವನಿಗಳನ್ನು ಗ್ರಹಿಸಿ 'ಜಾಯೆ'ಯನ್ನೇ ಬಳಸಿದ್ದು, ಅನುವಾದಕರ ಗ್ರಹಣ, ಗ್ರಹಣ ಶಕ್ತಿಗಳಿಗೆ, ಸಹೃದಯತೆಗೆ, ಸೂಕ್ಷ್ಮ ಸಂವೇದನೆಗೆ, ಭಾವತಲಸ್ಪರ್ಶಿಯಾದ ಅನುವಾದ ಕಲಾ ಸ್ಪರ್ಶನಕ್ಕೆ ಉತ್ತಮನಿದರ್ಶನ!

ನೆಳಲಿನಂತೆ ಅನುಸರಿಸಿ ನಂದಿನಿಯಿಂದ ವರವನ್ನು ಪಡೆದ ದಿಲೀಪ. ಸುದಕ್ಷಿಣೆಯು ಗರ್ಭವತಿಯಾದಳು. ತನ್ನ ಜಾಯೆ ವೇಲಾವಪ್ರವಲಯವಾದ ಸಾಗರಾಂಬರೆಯೆನಿಸಿದ ಭೂದೇವಿಯನ್ನು ವರಿಸುವ ಕುವರನನ್ನು ಧರಿಸಿದ ಅಂತರ್ವತ್ನಿಯೆಂದರಿತ ದಿಲೀಪ:

“ನಿಧಾನಗರ್ಭಾಮಿವ ಸಾಗರಾಂಬರಾಂ
ಶಮೀಮಿವಾಭ್ಯಂತರಲೀನಪಾವಕಾಂ ।
ನದೀಮಿವಾಂತಃಸಲಿಲಾಂ ಸರಸ್ವತೀಂ
ನೃಪಃ ಸಸತ್ವಾಂ ಮಹಿಷೀಮಮನ್ಯತ ॥ ”

ನಿಕ್ಷೇಪಗರ್ಭೆಯಹ ಕಡಲುಡೆಯ ತಿರೆಯು
ಪಾವಕನು ಮಧ್ಯೆ ತಾನಡಗಿರುವ ಶಮಿಯು ।
ಒಳಗೊಳಗೆ ಜಲ ಪರಿಯುವಾ ಸರಸ್ವತಿಯು
ಎಣೆಯೆಂದು ಎಣಿಸಿದನು ನೃಪನು ಗರ್ಭಿಣಿಯ ॥

ತನ್ನ ಕುಟುಂಬಿನಿಯು 'ಸಸತ್ವಳೆಂದು' ಬಗೆದ ದಿಲೀಪನ ಮನಸ್ಸನ್ನು ಕವಿ ಉಪಮಾನಗಳಿಂದ ಅನುಪಮವಾಗಿ ಬರೆದಿದ್ದಾನೆ. ಶುಭಮುಹೂರ್ತದಲ್ಲಿ ಕುಮಾರಜನನವಾದಾಗ,

“ನ ಸಂಯತಸ್ತಸ್ಯ ಬಭೂವ ರಕ್ಷಿತುಃ
ವಿಸರ್ಜಯೇದ್ಯಂ ಸುತ ಜನ್ಮಹರ್ಷಿತಃ ।
ಋಣಾಭಿಧಾನಾತ್ ಸ್ವಯಮೇವ ಕೇವಲಂ
ತದಾ ಪಿತೃಣಾಂ ಮುಮುಚೇ ಸ ಬಂಧನಾತ್ ॥ ”

ವರರಾಜ್ಯ ಭಾರದೊಳಗಿಲ್ಲದಿರೆ ಸೆರೆಯು
ತಾನಾರ ಬಿಡಿಸುವನು ಸುತಜನ್ಮ ಸುಖಿಯು ! ।
ತಂದೆ ತಾತದಿರೊಂದು ಋಣದ ಸೆರೆಯಿಂದೆ
ತಾನೊಬ್ಬ ಬಿಡುಗಡೆಯ ಪಡೆದನಹ ಭರದೆ ! ॥

ಎಂತಹ ಉದಾತ್ತ ರಾಜ! ಪುತ್ರೋತ್ಸವದ ಹರ್ಷಾತಿರೇಕವೆಷ್ಟು! ಮನೋರಥದ ಸಿದ್ಧಿಯ ಆನಂದಾತಿ-ರೇಕವನ್ನು ಇದಕ್ಕಿಂತ ಚೆಲುವಾಗಿ ಮಿತಮಿತವಾಗಿ ಬರೆದು ತಿಳಿಸಲು ಸಾಧ್ಯವೇ? 'ರಘು'ವೆಂದು ನಾಮಕರಣ ಮಾಡಿದ ದಿಲೀಪ. ರಘುವಿನ ವಿದ್ಯಾಭ್ಯಾಸ ಶೈಶವ ಕಳೆದು ಯೌವನಪ್ರಾಪ್ತಿ, ದಿಗ್ವಿಜಯವರ್ಣನೆ ಎಲ್ಲವೂ ಸುಂದರ ಭಾಗಗಳು. ಯುವರಾಜಾಧಿಕಾರವನ್ನು ರಘು ಪಡೆದುದು ಹೀಗೆ ವರ್ಣಿತವಾಗಿದೆ:

"ಸರಾಜ್ಯಂ ಗುರುಣಾ ದತ್ತಂ ಪ್ರತಿಪದ್ಯಾಧಿಕಂ ಬಭೌ ।
ದಿನಾನ್ತೇ ನಿಹಿತಂ ತೇಜಃ ಸವಿತ್ರೇವ ಹುತಾಶನಃ ॥"

ಗುರುವಿತ್ತ ರಾಜ್ಯವನು ಪಡೆದಧಿಕಕಾಂತಿಯಿಂದೆಸೆದ ನಂದವನು ।
ಸಂಜೆಯೊಳು ಸವಿತಾರನಿರಿಸಿರ್ದ ತೇಜದಿಂದಗ್ನಿಯೆಸೆವಂತೆ ॥

ಕಾಳಿದಾಸ ಉಪಮೆಯನ್ನು ಕೊಡುತ್ತಲೇ ಪ್ರಕೃತಿಯನ್ನೂ, ನಿತ್ಯಸತ್ಯದ ಅಗನ್ನೂ ಜತೆಗೊಳಿಸಿ ಒಂದು ಅನುಷ್ಟುಪ್ ವೃತ್ತದಲ್ಲಿ ಅಳವಡಿಸಿದ ಜಾಣ್ಮೆನೋಡಿರಿ. ಮೂಲವನ್ನು ಛಾಯೆಯಂತೆ ಅನುಸರಿಸಿದೆ ಅನುವಾದ.

ವಿಶ್ವವಿಜಯಿಯಾದ ರಘುಮಹಾರಾಜ 'ವಿಶ್ವಜಿತ್' ಯಜ್ಞವನ್ನು ಮಾಡಿದನಂತೆ! ರಘುವಿನ ಮಗ ಅಜ. ಈತನ ಶೌರ್ಯಾದಿ ವರ್ಣನೆಯೂ ಅನುಪಮೇಯ ಭಾಗವಾಗಿದೆ. ಕಾಳಿದಾಸನ ವರ್ಣನಾವಿಸ್ತಾರ ಪ್ರಾರಂಭವಾಗುತ್ತದೆ. ಐದು ಆರು ಏಳನೆಯ ಸರ್ಗಗಳಲ್ಲಿ ಅಜಸ್ವಯಂವರಾಭಿಗಮನ, ಸ್ವಯಂವರ ವರ್ಣನೆ, ಅಜಪಾಣಿಗ್ರಹಣಗಳ ವರ್ಣನೆಯಿದೆ. ಈ ಭಾಗದಲ್ಲಿ ಬರುವ, ಕಾಳಿದಾಸನಿಗೆ "ದೀಪಶಿಖಾ ಕಾಳಿದಾಸ" ಎಂಬ ಬಿರುದನ್ನು ತಂದ ಒಂದೇ ಒಂದು ಶ್ಲೋಕ ನಿದರ್ಶನಕ್ಕಾಗಿ,

"ಸಂಚಾರಿಣೀ ದೀಪಶಿಖೇವ ರಾತ್ರೌ
ಯಂಯಂ ವ್ಯತೀಯಾಯ ಪತಿಂವರಾ ಸಾ ।
ನರೇಂದ್ರಮಾರ್ಗಾಟ್ಟ ಇವ ಪ್ರಪೇದೇ
ವಿವರ್ಣಭಾವಂ ಸ ಸ ಭೂಮಿಪಾಲಃ ॥"

ಇರುಳಿನಲಿ ಸಂಚರಿಪ ದೀಪಾಂಕುರಂಬೋಲು
ಆವಾವ ದೊರೆಗಳನು ಅವಳುಳಿದಳು ।
ಆ ಆ ನೃಪೋತ್ತಮರು ಕುಸಿದರು ವಿವರ್ಣದೊಳು
ರಾಜಪಥದಿರ್ಕೆಲದ ಸೌಧಗಳೊಲು ॥

"ಸರ್ವಃಕಾನ್ತಮಾತ್ಮೀಯಂ ಪಶ್ಯತಿ" ಎಂದಂತೆ ಸ್ವಯಂವರಕ್ಕೆ ಬಂದ ರಾಜಕುಮಾರರು, ಕನ್ಯೆ ತಮ್ಮ ಸಮೀಪಕ್ಕೆ ಬಂದಾಗ ಇನ್ನೇನು ತಮ್ಮ ಕೊರಳಿಗೆ ವರಣಮಾಲಿಕೆ ಬಿದ್ದಂತೆಯೇ ಎಂದು ಭಾವಿಸಿ ಕಳೆಯೇರಿ, ಮರುಕ್ಷಣದಲ್ಲೇ ತಮ್ಮನ್ನುಳಿದು ಮುಂದುವರಿದಾಗ, ತಮ್ಮ 'ಛಾನ್ಸು' ತಪ್ಪಿತೆಂದು ಕಳೆಗುಂದುವ ಮುಖದ ವರ್ಣನೆಯನ್ನು ಮಾಡುವಾಗ, ರಾತ್ರಿ ರಾಜಬೀದಿಯಲ್ಲಿ ಗ್ಯಾಸ್‌ಲೈಟೊಂದನ್ನು ಧರಿಸಿದ ಒಬ್ಬ ಹೋಗುತ್ತಿರುವ ವ್ಯಕ್ತಿಯನ್ನು ಸ್ಮರಿಸಿಕೊಂಡರೆ ಬೆಳಕು ತನ್ನಿದಿರಿದ್ದಾಗ ಆ ಸೌಧ ಬೆಳಗಿ ಮುಂಬರಿದಾಗ ಕಳಾವಿಹೀನವಾಗುವುದನ್ನು ನಾವು ನಿತ್ಯವೆಂಬಂತೆ ಕಾಣುತ್ತಿದ್ದೇವೆ. ಕವಿಯ ಸೂಕ್ಷ್ಮಸಂವೇದನೆ, ಉಪಮಾನ ಪ್ರತಿಭೆಗೆ ಇದು ಉತ್ತಮ ನಿದರ್ಶನ. ಮೂಲದ ಸೌಂದರ್ಯಶ್ರೀಯನ್ನು ತನ್ನ ಮೆಯ್ಸಿರಿಯಲ್ಲಿ ಅಳವಡಿಸಿದ ಅನುವಾದವು ಮೂಲಕ್ಕೆ ಸರಿದೊರೆಯೆನಿಸಿದೆ.

ನಾರದನು ಆಕಾಶದಲ್ಲಿ ಹೋಗುತ್ತಿದ್ದಾಗ ಆತನ ವೀಣೆಯಲ್ಲಿದ್ದ ಮಾಲೆಯೊಂದು ಇಂದುಮತಿಯ ಕುಚಾಗ್ರದ ಮೇಲೆ ಬಿದ್ದು ಆಕೆ ಪರಂಧಾಮವನ್ನೈದಿದಳು ಆಗ,

"ವಪುಷಾ ಕರಣೋಜ್ಝಿತೇತ ಸಾ
ನಿಪತಂತೀ ಪತಿಮಪ್ಯಪಾತಯತ್ ।

ನನುತೈಲನಿಷೇಕ ಬಿಂದುನಾ
　　　　　ಸಹ ದೀಪಾರ್ಚಿರುಪೈತಿ ಮೇದಿನೀಂ ॥"

ಕರಣಂಗಳುಡುಗುತಿರಲೊರಗಿದೊಡಲುರುಳಿದುವೆರೆಯನುಮನಾಮ ।
ಪಂಜಿನಿಂದಿಳಿದುಬರುವೆಣ್ಣೆಹನಿಯುರಿಯುಮಿಳೆಗೆರಗುವಂತೆ ॥

ಈ ಅನುವಾದ ಮೂಲದ ಅರ್ಥವನ್ನು ತಿಳಿಸುವುದು: ಸರಿ. ಆದರೆ ವಿಯೋಗಿನೀವೃತ್ತದಲ್ಲಿ ಮೂಲದಲ್ಲಿ ಮೂಡಿದ ಧಾಟಿಗೆ ಹಿತವಾಗಿ ಬಂದ ವೃತ್ತದ ಗತಿ ಇಲ್ಲಿಲ್ಲ. ಕಾಳಿದಾಸ ಮಧುರ ದಾಂಪತ್ಯದ ಬೆರಕೆ, ಅನ್ಯೋನ್ಯತೆ ಎಂತಹದೆಂದು ಇಲ್ಲಿ ಸೂಚಿಸಿದ್ದಾನೆ. ಇಂದುಮತಿ ಮೂರ್ಛಿತಳಾಗಿ ಧರೆಗುರುಳಿದಾಗ ಒಡನಿದ್ದ ಅಜನೂ ಭೂಮಿಗೆ ಬಿದ್ದನಂತೆ! ದೀಪದಿಂದುದುರುವ ಎಣ್ಣೆಯೊಡನೆ ದೀಪದ ಜ್ವಾಲೆಯೂ ಭೂಮಿವರೆಗೆ ಬಂದು ಬೀಳುತ್ತದೆ. ಇಲ್ಲಿ ದೀಪದ ಬೆಳಕು ಮತ್ತು ಎಣ್ಣೆಯ ಅವಿನಾಭಾವ ಸಂಬಂಧ, ಇಂದುಮತಿ ಕುಲದೀಪಕಳು; ಅಜ ಆಕೆಯ ಪೋಷಕ. ಎಣ್ಣೆಯಂತೆ ದೀಪಕ್ಕೆ; ಕುಲದೀಪಕಳಾದ ಇಂದುಮತಿಯೆಂಬ ಜ್ಯೋತಿ ಆರಿದಾಗ ಎಣ್ಣೆ ಮಾತ್ರ ಉಳಿದೇನು ಫಲ? ಎಣ್ಣೆಗೆ 'ಸ್ನೇಹ' ಎಂದು ಸಂಸ್ಕೃತದಲ್ಲಿ ಹೆಸರು. ಪ್ರಕಾಶ ಆರಿಹೋದರೂ 'ಸ್ನೇಹ' ಉಳಿದಿದೆ. ಎಂದರೆ ಇಂದುಮತಿ ಮರೆಯಾದರೂ ಅವಳಿಗಾಗಿದ್ದ ಸ್ನೇಹ ಇನ್ನೂ ಅಜನಲ್ಲಿ ಬಾಕಿಯಿದೆ. ಹೀಗೆ ಊಹಿಸಿದಷ್ಟೂ ದಾಂಪತ್ಯದ ಅನ್ಯೋನ್ಯತೆ ಇಲ್ಲಿ ಸಂಗ್ರಹೀತವಾಗಿದೆ. ಇಂದುಮತಿ ಗೃಹಿಣಿಯಾಗಿ, ಸಚಿವೆಯಾಗಿ, ಗೆಳತಿಯಾಗಿ, ಲಲಿತಕಲೆಗಳನ್ನು ಕಲಿಯುವ ವಿದ್ಯಾರ್ಥಿನಿಯಾಗಿ ಇದ್ದಳು. ಅವಳನ್ನು ಅಪಹರಿಸಿದ ವಿಧಿ ತನ್ನ ಸರ್ವಾಪಹಾರವನ್ನೂ ಮಾಡಿತು! 'ವದ ಕಿಂ ನ ಮೇ ಹೃತಂ' ಎನ್ನುವ ಮಾತು ಮಾರ್ಮಿಕವಾಗಿದೆ. ವಿರಹದಿಂದ ಪ್ರಾಯೋಪವೇಶವನ್ನು ಕೈಗೊಂಡು ಇಹಲೋಕವ್ಯಾಪಾರವನ್ನು ಮುಗಿಸಿದ ಕಥೆ ವ್ಯಥೆಯಲ್ಲಿ ಪರ್ಯವಸಾನವಾಗುತ್ತದೆ.

ಒಂಬತ್ತನೆಯ ಸರ್ಗ ಮೃಗಯಾವರ್ಣನೆ. ಕಾಳಿದಾಸ ಇಲ್ಲಿ ಯಮಕ ಶಬ್ದಾಲಂಕಾರಗಳನ್ನು ಉಪಯೋಗಿಸಿದ್ದಾನೆ. ಸಂಸ್ಕೃತಕ್ಕೆ ಸಹಜವಾಗಿ ಬರುವ ಈ ಶಬ್ದಾಲಂಕಾರ ಕನ್ನಡಕ್ಕೆ ಒಗ್ಗುವುದಿಲ್ಲ. ಹಾಗಾಗಿ ಈ ಸರ್ಗದ ಭಾಷಾಂತರ ಶಬ್ದಾಲಂಕಾರದ ದೃಷ್ಟಿಯಿಂದ ಹಿಂದುಳಿದಿದೆ. ಇದು ಕನ್ನಡ ಭಾಷಾಂತರದ ಕೊರತೆಯಲ್ಲ; ಸಂಸ್ಕೃತ ಕನ್ನಡಕ್ಕೆ ತನ್ನದೇ ಜಾಯಮಾನವಿರುವುದರ ಫಲ!

ದಶರಥನ ಬೇಟೆಯ ಅವಸಾನ ಆತನ ದಾರುಣ ಅವಸಾನಕ್ಕೆ ಕಾರಣವಾಗುವ ಒಂದು ಶಾಪದ ಪೊರ್ದುಗೆಯಿಂದ ಕೊನೆಗೊಳ್ಳುತ್ತದೆ. ಈ ಸರ್ಗದಲ್ಲಿ ಕೆಲವು ಭಾಮಿನೀ ಷಟ್ಪದಿಗಳನ್ನು ಬಳಸಿದ್ದಾರೆ. ಕವಿಗಳು ತಮ್ಮ ಕನ್ನಡದ ಅನುವಾದದಲ್ಲಿ. ಆದರೆ ದ್ವಿತೀಯಾಕ್ಷರಪ್ರಾಸವನ್ನು ಅನುಸರಿಸಿಲ್ಲ. ಮಾದರಿಗಾಗಿ,

"ಪ್ರಾಪ್ತಾನುಗಃ ಸಪದಿ ಶಾಸನಮಸ್ಯ ರಾಜಾ
　　　　ಸಂಪಾದ್ಯ ಪಾತಕವಿಲುಪ್ತ ಧೃತಿರ್ನಿವೃತ್ತಃ ।
ಅಂತರ್ನಿವಿಷ್ಟಪದಮಾತ್ಮ ವಿನಾಶಹೇತುಂ
　　　　ಶಾಪಂಧಧತ್ ಜ್ವಲನಮೌರ್ವಮಿವಾಂಬುರಾಶಿಃ ॥"

ಕೂಡಿಕೊಳಲನುಚರರು ರಾಜನು
ಜವದೆ ಮುನಿಶಾಸನವನಡುತೆ
ಪಾಪಕೃತ್ಯದೊಳಳಿದ ಧೃತಿಯೊಳು ರಾಜಧಾನಿಯನು ।
ಮುಂದಣಾತ್ಮ ವಿನಾಶಕಾರಣ
ವೆನಿಪ ಶಾಪವನಾಂತು ಎದೆಯೊಳು
ಔರ್ವನನು ತಳೆದಂಬುರಾಶಿ ವೋಲವನು ಸಾರಿದನು ॥

ಬಡಬಾನಲ ಸಮುದ್ರವನ್ನು ನಾಶಮಾಡುವ ಅಗ್ನಿ, ಅದು ಕಡಲಿನ ಒಡಲಿನಲ್ಲಿರುತ್ತದೆ. ದಶರಥನ ಕುಲಾಂಬುಧಿಯ ನಾಶಕ್ಕೆ ಋಷಿಯ ಶಾಪವೆಂಬ ಬಡಬಾನಲ ಕಾರಣವಾಗಿ ದಶರಥನ ಒಳಗೊಳಗೇ ಜ್ವಲಿಸುತ್ತಿತ್ತು. ಅಂತಹ ಅನಪೇಕ್ಷಿತವನ್ನು, ಆದರೂ ಕಳೆದುಳಿಯಲಾಗದೆ—ಚಿಂತಾಭಾರದಿಂದ ದಶರಥ ತನ್ನ ರಾಜಧಾನಿಯತ್ತ ಸಾಗಿದನೆಂಬ ಮಾತು ಅರ್ಥಗರ್ಭಿತವಾಗಿದೆ; ಉಪಮೆ ನಿರುಪಮ ವಾಗಿದೆ!

ರಾಮಾವತಾರ ಪತ್ತನೆಯ ಸರ್ಗದ ಕಥಾವಸ್ತು. ಇಷ್ಟರ ವರೆಗೆ ವರ್ಣನೆಗೆ ಪ್ರಾಶಸ್ತ್ಯವಿತ್ತ ಕಾಳಿದಾಸ ಇಲ್ಲಿಂದ ಮುಂದೆ ಕಥೆಯ ಸಂಕ್ಷೇಪಕ್ಕೆ ತ್ವರಿತ ಗತಿಗೆ ಗಮನವೀಯುತ್ತಾನೆ. ಹನ್ನೊಂದನೆಯ ಸರ್ಗ ಸೀತಾವಿವಾಹ. ವಿಶ್ವಾಮಿತ್ರನೊಡನೆ ತೆರಳುವ ರಾಮಲಕ್ಷ್ಮಣರಿಗೆ ದಾರಿಯಲ್ಲಿ ತಾಟಕೆ ಇದಿರಾದಳು; ರಾಮಶರದಿಂದ ಗತಾಸುವಾದಳು. ಇಲ್ಲಿ ಕಾಳಿದಾಸ ನಿಶಾಚರಿಯು ಅಭಿಸಾರಿಕೆಯಂತೆ 'ಜೀವಿತೇಶ ವಸತಿಗೆ' ತೆರಳಿದಳೆಂದು ವರ್ಣಿಸಿದ್ದಾನೆ.

> "ರಾಮಮನ್ಮಥಶರೇಣ ತಾಡಿತಾ ದುಃಸಹೇನ ಹೃದಯೇ ನಿಶಾಚರೀ ।
> ಗಂಧವದ್ರುಧಿರಚಂದನೋಕ್ಷಿತಾ ಜೀವಿತೇಶವಸತಿಂ ಜಗಾಮ ಸಾ ॥"

> 'ರಾಮಮನ್ಮಥನಂಬು ಸಹಿಸಲರಿದೆನುವಂತೆ
> ಹೃದಯವನು ಹೊಕ್ಕಂದು ಆ ನಿಶಾಚರಿಯು ।
> ಅರುಣರಸಗಂಧವನು ತನುವಿನೊಳು ಧರಿಯಿಸುತೆ
> ಜಿವೇಶವಸತಿಯನು ಕುರಿತು ತೆರಳಿದಳು ॥

ಇಲ್ಲಿ ಶಬ್ದಶಕ್ತಿಧ್ವನಿ ಪ್ರಕೃತಾಪ್ರಕೃತ ವರ್ಣನೆಯಲ್ಲಿ ಸಮಾವಿಷ್ಟವಾಗಿದೆ. ನಿಶಾಚರಿ = ರಾಕ್ಷಸಿ, ಅಭಿಸಾರಿಕೆ; ಹೃದಯ = ಎದೆ, ಮನಸ್ಸು; ಗಂಧವತ್ = ದುರ್ಗಂಧ, ಪರಿಮಳಯುಕ್ತ; ರುಧಿರ ಚಂದನ = ರಕ್ತವೆಂಬ ಚಂದನ, ರಕ್ತಚಂದನ (ಕೆಂಪು ಗಂಧ); ಜೀವಿತೇಶ = ಯಮ, ಪ್ರಾಣೇಶ್ವರ—ಹೀಗೆ ತಾಟಕಾ ವೃತ್ತಾಂತಕ್ಕೂ, ಅಭಿಸಾರಿಕಾ ವೃತ್ತಾಂತಕ್ಕೂ ಸಂಬಂಧವಿದೆ. ಇಲ್ಲಿ ಅನುವಾದಕಾರರು ತುಂಬ ಜಾಗ್ರತೆ ಯಿಂದ ಕವಿಯ ಆಶಯವನ್ನು (ಮೂಲದ ಪದಗಳನ್ನೇ ಬಳಸಿಯಾದರೂ) ಉಳಿಸಿಕೊಂಡಿದ್ದಾರೆ. 'ಆ ನಿಶಾಚರಿಯು' ಎಂಬಲ್ಲಿ 'ರಕ್ಕಸಿ ತಾಟಕೆ' ಎಂದೋ, 'ಜಿವೇಶ ವಸತಿಯನು' ಎಂಬಲ್ಲಿ 'ಅಂತಕನ ವಸತಿಯನು' ಎಂದೋ ಕನ್ನಡಿಸಿದ್ದರೆ ಮೂಲದ ಸ್ವಾರಸ್ಯವೇ ಇಂಗಿಹೋಗುತ್ತಿತ್ತು! ಆದರೆ ಮೂಲದ ಆಶಯವನ್ನು ಗ್ರಹಿಸಿದ ಅನುವಾದಕರು ಸಂಸ್ಕೃತ ಪದಗಳನ್ನುಳಿಸಿಕೊಂಡು, ತಮ್ಮ ಅನುವಾದದ ಬೆಲೆ, ಕಳೆಯನ್ನು ಬೆಳೆಸಿ ಉಳಿಸಿಕೊಂಡು ಬಂದಿದ್ದಾರೆ. ಇಂಥಲ್ಲಿ ಅನುವಾದಕರ ಸಿದ್ಧಹಸ್ತದ ಕುಶಲ ಕುಸುರಿಕಾರ್ಯ ಗೋಚರವಾಗುತ್ತದೆ.

ದಶರಥನು ಶ್ರೀರಾಮನಿಗೆ ಪಟ್ಟಕಟ್ಟುವ ಆಲೋಚನೆಯಿಂದ ಮೊದಲ್ಗೊಂಡು, ರಾಮನು ರಾವಣ ಸಂಹಾರಗೈದು ಅಯೋಧ್ಯೆಗೆ ಬರುವ ವರೆಗಿನ ಕಥೆ ಈ ಸರ್ಗದಲ್ಲಿ ಕೇವಲ ೧೦೪ ಶ್ಲೋಕಗಳಲ್ಲಿ ಸಂಗ್ರ ಹೀತವಾಗಿದೆ. ಮಾದರಿಗಾಗಿ ಈ ಸರ್ಗದಿಂದ ೧೦೪ನೆಯ ಪದ್ಯ—ಅನುವಾದ.

> "ರಘುಪತಿರಪಿ ಜಾತವೇದೋವಿಶುದ್ಧಾಂ ಪ್ರಗೃಹ್ಯಪ್ರಿಯಾಂ
> ಪ್ರಿಯಸುಹೃದಿ ವಿಭೀಷಣೇ ಸಂಗಮಯ್ಯ ಶ್ರಿಯಂ ವೈರಿಣಃ ।
> ರವಿಸುತ ಸಹಿತೇನ ತೇನಾನುಯಾತಃ ಸ ಸೌಮಿತ್ರಿಣಾ
> ಭುಜವಿಜಿತವಿಮಾನರತ್ನಾಧಿರೂಢಃ ಪ್ರತಸ್ಥೇ ಪುರೀಂ ॥"

> ರಘುಪತಿಯುಮಾಜಾತವೇದನಿಂ ಶುದ್ಧಳಾದಿನಿಯಳೊಡವೆರೆದು
> ಪ್ರಿಯಸಖ ವಿಭೀಷಣನಿಗರಿಯ ಸಿರಿಯೊಡೆತನವ ತೋಷದಿಂದೆರೆದು ॥
> ಸುಗ್ರೀವ ಸೌಮಿತ್ರಿ ಮೇಣ್ ವಿಭೀಷಣರ ಜತೆಗೊಂಡಯೋಧ್ಯೆಯನು
> ಸಾರಲೆಂದೇರಿದನು ಭುಜವಿಜಿತಪುಷ್ಪಕವಿಮಾನರತ್ನವನು ॥

ಮೂಲದ ಮೆಯ್ಸಿರಿಯಿಂದ ಶೋಭಿಸುವ ಅನುವಾದದ ಸೌಂದರ್ಯಕ್ಕೆ ವ್ಯಾಖ್ಯಾನದ ಕೃತಕ ತೊಡಿಗೆಯ ಅಲಂಕಾರ ಅನಗತ್ಯವೆನಿಸುತ್ತದೆ!

'ದಂಡಕ ಪ್ರತ್ಯಾಗಮನ' ಹಿಂದಿನ ವೃತ್ತಾಂತದ ಮೇಲೆ ಬೆಳಕುಚೆಲ್ಲುವ ಒಂದು ಸಿಂಹಾವಲೋಕನ. ಸೀತಾಪರಿತ್ಯಾಗದ ಕಥೆಯೂ ಜನಜನಿತವಾದ್ದೇ. ಏಕಪತ್ನೀವ್ರತಸ್ಥನಾದ ಶ್ರೀರಾಮನಿಗೆ ಭೂಕಾಂತೆ ಯೊಬ್ಬಳೇ ಭೋಗ್ಯಳಾದಳಂತೆ!

> "ಕೃತಸೀತಾಪರಿತ್ಯಾಗಃ ಸ ರತ್ನಾಕರ ಮೇಖಲಾಂ ।
> ಬುಭುಜೇ ಪೃಥಿವೀಪಾಲಃ ಪ್ರಥಿವೀಮೇವ ಕೇವಲಾಂ ॥"

> ಸೀತಾಪರಿತ್ಯಾಗಮಂ ಗೈದು ಪೃಥ್ವಿಪನು ರಾಮನಂದು ।
> ತೋಯನಿಧಿ ಮೇಖಲೆಯ ಮೇದಿನಿಯನೊರ್ವಳನೆ ಭೋಗಿಸಿದನೊಲಿದು ॥

ಶ್ರೀರಾಮನ ಸ್ವರ್ಗಾರೋಹಣದ ವರ್ಣನೆಯಿದು:

> "ನಿರ್ವರ್ತ್ಯೈವಂ ದಶಮುಖಶಿರಚ್ಛೇದಕಾರ್ಯಂ ಸುರಾಣಾಂ
> ವಿಷ್ವಕ್ಸೇನಃ ಸ್ವತನುಮವಿಶತ್ ಸರ್ವಲೋಕ ಪ್ರತಿಷ್ಠಾಂ ।
> ಲಂಕಾನಾಥಂ ಪವನತನಯಂ ಚೋಭಯಂ ಸ್ಥಾಪಯಿತ್ವಾ
> ಕೀರ್ತಿಸ್ತಂಭದ್ವಯಮಿವ ಗಿರೌ ದಕ್ಷಿಣೇ ಚೋತ್ತರೇ ಚ ॥"

> ದಶಮುಖ ದೈತ್ಯನ ಶಿರವನು ತರಿದನು
> ಅಮರರ ಕಾರ್ಯವನೆಸಗಿದನು
> ಉತ್ತರ ಗಿರಿಯೊಳು ಲಂಕೇಶ್ವರನನು
> ದಕ್ಷಿಣಗಿರಿಯೊಳು ಹನುಮನನು
> ಈಶ್ವರನಂತಾ ವಿಶ್ವಕ್ಸೇನನು
> ಕೀರ್ತಿಸ್ತಂಭದೊಲಿರಿಸಿದನು
> ಲೋಕಸಮಸ್ತವ ಪೊರೆಯುವ ತನುವನು
> ಆ ಬಳಿಕಾತನು ಸೇರಿದನು

ಈ ಅಷ್ಟಪದಿ ಪ್ರತಿಯೊಂದು ಚರಣದ ಅಂತ್ಯಪ್ರಾಸದೊಡನೆ ಮಂಜುಳವಾಗಿ ಸುಲಲಿತವಾದ ಓದಿಗೆ ಅನುಕೂಲವೆನಿಸುವಂತೆ, ಕಿಲಕಿಲನೆ ಶಬ್ದಿಸುವ ಹೊನಲಿನುಲಿಯಂತೆ; ಹಾಡುವ ಕಂಠಕ್ಕೆ ಹತ್ತಿರವಾಗಿ ಕೇಳುವ ಕಿವಿಗೆ ಸನಿಹವಾಗಿ ಉತ್ತಮ ಭಾಷಾಂತರವಾಗಿ ಮೆರೆಯುತ್ತದೆ!

ಮುಂದಿನ ಮೂರು ಸರ್ಗಗಳಲ್ಲಿ, ರಘುವಂಶದವರ ಕಥೆಯನ್ನು ಹೇಳಬಯಸಿದ ಕಾಳಿದಾಸ, ರಾಮನ ತರುವಾಯ ಪಟ್ಟಕ್ಕೆ ಬಂದ ಕುಶ. ಅತಿಥಿ, ನಿಷಧ, ನಲ, ನಭ, ಪುಂಡರೀಕ. ಕ್ಷೇಮಧನ್ವಾ, ದೇವಾನೀಕ, ಅಹೀನಗು, ಪಾರಿಯಾತ್ರ, ಶಿಲ, ಉನ್ನಾಭ, ಶಂಖಣ, ವ್ಯುಷಿತಾಶ್ವ, ವಿಶ್ವಸಹ. ಹಿರಣ್ಯನಾಭ, ಕೌಶಲ್ಯ, ಪುತ್ರ. ಪೌಷ್ಯ, ಧ್ರುವಸಂಧಿ, ಸುದರ್ಶನ—ಈ ರಾಜರ ಚರಿತ್ರೆಯನ್ನು ಒಂದು ಸೂಚಿಕೆಯೆಂಬಂತೆ ತಿಳಿಸಿ ಕೊನೆಗೆ ಅಗ್ನಿವರ್ಣನ ಆಳ್ವಿಕೆ, ಹಾಗೂ ಅನಪತ್ಯನಾದ ಆತನ ಅವಸಾನ. ಪಟ್ಟಕ್ಕೆ ರಾಜರಿಲ್ಲದಾಗ. ಆತನ ರಾಣಿ ಗರ್ಭಿಣಿಯೊಬ್ಬಳಿಗೆ ರಾಜ್ಯಾಭಿಷೇಕವಾಗುವುದೆಂದು ತಿಳಿಸುತ್ತಾನೆ.

ಉಪಮಾಲೋಲ ಕಾಳಿದಾಸ ಬಹು ಅರ್ಥಗರ್ಭಿತವಾದ ಒಂದು ಉಪಮಾನದಿಂದ ರಘುವಂಶವನ್ನು ಮುಕ್ತಾಯಗೊಳಿಸಿದ್ದಾನೆ:

> "ತಂ ಭಾವಾರ್ಥಂ ಪ್ರಸವಸಮಯಾಕಾಂಕ್ಷಿಣೀನಾಂ ಪ್ರಜಾನಾಂ
> ಅಂತರ್ಗೂಢಂ ಕ್ಷಿತಿರವ ನಭೋಬೀಜಮಷ್ಟಿಂ ದಧಾನಾ ।
> ಮೌಲೈಃ ಸಾರ್ಧಂ ಸ್ಥವಿರ ಸಚಿವೈರ್ಹೇಮ ಸಿಂಹಾಸನಸ್ಥಾ
> ರಾಜ್ಞೀ ರಾಜ್ಯಂ ವಿಧಿವದಶಿಷದ್ಭರ್ತುರವ್ಯಾಹತಾಜ್ಞಾ ॥"

ಪ್ರಸವಸಮಯಾಕಾಂಕ್ಷಿಯಾದಾಪ್ರಜರ ಸಂಪದದೇಳ್ಗೆ ಸಾಧಿಪ ಬಗೆಯೊಳು
ಶ್ರಾವಣದೊಳೂರಿರುವ ಪಿಡಿಬೀಜವನು ತಳೆದಿಳೆಯಂತೆ ಗರ್ಭವ ತಳೆದು ತನ್ನಾಪೊಡೆಯೊಳು ।
ಮಣಿಸಿ ತನ್ನಾಣತಿಯೊಳೆಲ್ಲರನಂದು ವೃದ್ಧಾಮಾತ್ಯವೃಂದದ ನೆರವೊಳು
ಹೇಮಸಿಂಹಾಸನವನೇರಿದ ರಾಣಿ ತನ್ನಾಪತಿಯ ರಾಜ್ಯವ ಕ್ರಮದಿನಾಳುತೆ ಪೊರೆದಳು ॥

* * * *

"ಕಾಲಿದಾಸಗಿರಾಂ ಸಾರಂ ಕಾಲಿದಾಸ: ಸರಸ್ವತಿ । ಚತುರ್ಮುಖೋಥವಾ ಸಾಕ್ಷಾದ್ವಿದುರ್ನಾನ್ಯೇತು ಮಾದೃಶಾ:" ಎಂಬ ಕಾಳಿದಾಸನ ಗ್ರಂಥಗಳ ವ್ಯಾಖ್ಯಾನಕಾರನಾದ ಮಲ್ಲಿನಾಥನ ಮಾತು. ಕಾವ್ಯರಸ ಸಹೃದಯತೆಯಿಂದ ಅನುಭವಿಸತಕ್ಕದ್ದು: ಅದು ವಾಚಾಮಗೋಚರ. ನೇಮಿಚಂದ್ರ ಅರ್ಧನೇಮಿ ಪುರಾಣದಲ್ಲಿ,

ಕಡುಕಂಪಂ ಪಿಡಿಕೆಯ್ಸಿ ಬರ್ಕುಮೆ ಬಟಿಲ್ದೈತಂದ ತಂಗಾಳಿಯಂ
ಪಿಡಿಯಲ್ ಬರ್ಕುಮೆ ತೃಷ್ಣೆಗೊರ್‌ಕುಡಿತೆಯಿಂ ಕೊಂಡಚ್ಚವೆಳ್ದಿಂಗಳಂ ।
ಕುಡಿಯಲ್ ಬರ್ಕುಮೆ ಕೊರ್ವಿತೆಂದು ತರುಣೀಸಂಭೋಗಸೌಖ್ಯಂಗಳಂ
ನುಡಿಯಲ್ ಬರ್ಕುಮೆ ಬಾರದಿಂತುಟೆ ವಲಂ ಕಾವ್ಯಾಮೃತಾಸ್ವಾದನಂ ॥

ಎಂದಿದ್ದಾನೆ. ಅಲ್ಲದೆ – "ಬೆಲೆಯಿಂದಕ್ಕುಮೆ ಕೃತಿ ? ಗಾವಿಲ ! ಭುವನದ ಭಾಗ್ಯದಿಂದಮಕ್ಕುಂ ।" ಎನ್ನುವ ಮಾತು ಅವನದೇ. ಕಾಳಿದಾಸ ಮಹಾಸಂಪುಟದಂತಹ ಮಹತ್ತಿನ ಬೃಹತ್ತಿನ ಕೃತಿ ಮೂಡಿ ಬಂದುದು ಕನ್ನಡಕ್ಕೆ, ಕನ್ನಡ ಜನತೆಗೆ ಶುಭಸೂಚಕದ ಹರ್ಷಸಂಗತಿ. ಎಷ್ಟೋ ಪ್ರಕಾಂಡ ಪಂಡಿತರ ಪಾಂಡಿತ್ಯ ಕಾಟ್ಪುರದಂತೆಯೋ, 'ಜೀರ್ಣಂ ಅಂಗೇ' ಎಂಬಂತೆಯೋ ಇದ್ದು ತನಗೂ ಇಲ್ಲ ಪರರಿಗಂತೂ ನಾಸ್ತಿ ಎನ್ನುವಂತಿರುತ್ತದೆ. ಆದರೆ ಶ್ರೀ ಪರಮೇಶ್ವರ ಭಟ್ಟರು ತಮ್ಮ ಪೂರ್ಣಪಾಂಡಿತ್ಯದಿಂದ ಕನ್ನಡ ಸರಸ್ವತಿಗೆ 'ಪೂರ್ಣಪಾತ್ರ'ದ ದಾನವನ್ನೇ ಅರ್ಪಿಸಿ ಕೃತಕೃತ್ಯರಾಗಿದ್ದಾರೆ. ಪಾಶ್ಚಾತ್ಯರು ಇಂಡಿಯದ ಕಾಳಿದಾಸನನ್ನು ತಮ್ಮ ಪ್ರತಿಭಾವಂತ ಕವಿ ಶೇಕ್ಸ್‌ಪಿಯರ್‌ನೊಡನೆ ಹೋಲಿಸಿ, ಕಾಳಿದಾಸನ ಮಹತ್ತ್ವವನ್ನು ಬಿತ್ತರಿಸಿದ್ದಾರೆ. ಇಂತಹ ಜಾಗತಿಕ ಪ್ರಸಿದ್ಧ ಕವಿಯನ್ನು ಕವಿಕೃತಿಯನ್ನು ಸಂಪೂರ್ಣ ತಿಳಿದು, ಭಾವಕ್ಕೆ ಭಂಗ ಬರದಂತೆ, "ಹೆಚ್ಚೇನೂ ಹೇಳದೆ, ಇರುವುದನ್ನು ಬಿಡದೆ" ಕಡೆವರೆಗೆ ಈ ನಿಯಮವನ್ನೇ ಸಾಧಿಸಿ ಶ್ರೀ ಎಸ್. ವಿ. ಪರಮೇಶ್ವರ ಭಟ್ಟರು ಯಶಸ್ವಿಗಳಾಗಿದ್ದಾರೆ! ಸಂಸ್ಕೃತವನ್ನರಿಯದೆ ಕಾಳಿದಾಸನನ್ನು ತಿಳಿಯಲಾರೆವಲ್ಲಾ ಎನ್ನುವವರಿಗೆ ಇನ್ನುಮುಂದೆ ಆ ಕಳಕಳಿ ಬೇಡ. ಮನೆ–ಮನಗಳಲ್ಲಿ ಇರಲೇ ಬೇಕಾದ ಕಾಳಿದಾಸ ಮಹಾಸಂಪುಟವನ್ನು ಕೊಂಡುಕೊಂಡು (ಕ್ರಯಕ್ಕೆ) ಓದಿ ಕನ್ನಡಿಗರು ಕೃತಾರ್ಥರಾಗಬಹುದು.

ನನ್ನ ಈ ಬಾಲಬರಹ. ಮಂದಬುದ್ಧಿಯ ನೋಟ "ಉಗುರೊಳು ಬಾಜಿಪ ಬೀಣೆಗೊನಕೆಗೊಂಬ" ಪರಿಯಾಗಿದೆ. ನಾನು ಇಲ್ಲಿ ಕೃತಿವಿಮರ್ಶಕನಿಗಿಂತಲೂ ಈ ಕೃತಿಯತ್ತ ಬನ್ನಿ, ಓದಿ, ಆನಂದಿಸಿರಿ ಎಂದು ತಿಳಿಸುವ ಕಾಯಕ ಮಾಡಿ, ಚಲಚ್ಚಿತ್ರದ ಜಾಹೀರಾತು ತೋರಿಸಿದಂತೆ ಒಂದೆರಡು ಮಾದರಿಗಳನ್ನು ಕಾಳಿದಾಸನ ಮೂಲಶ್ಲೋಕದೊಡನೆ ಪರಮೇಶ್ವರ ಭಟ್ಟರ ಅನುವಾದ ಸಹಿತ ಕೊಟ್ಟಿದ್ದೇನೆ. ಈ ಪ್ರಬಂಧಕ್ಕಾಗಿ ಮೂಲವನ್ನು ಅವಲೋಕಿಸುವ, ಕಾಳಿದಾಸನ ಎಲ್ಲಾ ಕೃತಿಗಳ 'ಪಕ್ಷಿನೋಟ'ಕ್ಕೆ ಅವಕಾಶ ಸಿಕ್ಕಿದೆ. ಶ್ರೀಸಾಮಾನ್ಯನೊಬ್ಬ ಯಕ್ಷಗಾನ ಆಟ—"ರಾಮಾಯಣ" ನೋಡಿದನೆನ್ನಿ. ಆತನೊಡನೆ ವೇಷಗಳ ವಿಮರ್ಶೆ ಕೇಳಿ. "ರಾಮನೋ ? " 'ಒಳ್ಳೇದಾಗಿದೆ,' "ಲಕ್ಷ್ಮಣ? " 'ಚೆನ್ನಾಗಿದೆ.' "ಶೂರ್ಪಣಖಿ? " 'ಫಸ್ಟುಕ್ಲಾಸಾಗಿದೆ.' "ಹನುಮಂತ? " 'ಪಸಂದ್.' "ರಾವಣ?" (ತಲೆಯಲ್ಲಾಡಿಸಿ ಕೈಕರಣ ಸಹಿತ ಕುಣಿದು) 'ನಾನು ಈ ವರೆಗೆ ನೋಡಿಲ್ಲ. ಅಷ್ಟು ಫಸ್ಟು, 'ಕ್ಲಾಸ್' 'ಗ್ರ್ಯಾಂಡ್'... ಚೆನ್ನಾಗಿದೆ.' "ಹಾಸ್ಯಗಾರ ?" "ಛೆ! ಭಾರಿ ಒಳ್ಳೆದು ! "......ಹೀಗೆ ಎಲ್ಲಾ ಒಳ್ಳೆದೇ ಎನ್ನುವಂತೆ, ನನ್ನ ಈ ಕೃತಿವಿಮರ್ಶೆಯೂ ಇದೆ! ಒಂದೆರಡು ದೋಷಗಳನ್ನು ನಾನು ಕಂಡಂತೆ ವಿವರಿಸಿದ್ದೇನೆ. ನನ್ನ ನಿಲುವಿನಂತೆ ಹೇಳುವುದಾದರೆ ಅನುವಾದ ದೋಷರಹಿತವೂ, ಸಮರ್ಪಕವೂ, ಆಗಿದ್ದು ಕನ್ನಡ

ಭಾಷೆಯ ಜಾಯಮಾನಕ್ಕೊಗ್ಗುವಂತೆ ಸಹೃದಯರಿಗೆ ಹಿಡಿಸುವಂತೆ ಮೂಲಕ್ಕೆ ಸಂವಾದಿಯಾದ ಸಾದೃಶ್ಯ ಶ್ರೀಯನ್ನು ಮಾಧುರ್ಯವನ್ನು ವಾಗ್ವೈಖರಿಯನ್ನು ಪ್ರಸಾದ ಗುಣವನ್ನು ತಳೆದು ತಾತಳಿಸಿ ಕನ್ನಡ ನುಡಿಯಲ್ಲಿ ಮೂಡಿ ಬಂದಿದೆ. ಮೂಲದಲ್ಲಿ ಕಂಡುಬರುವ ಭಾವಾನುಸಾರಿ ಛಂದಸ್ಸು ಮಾತ್ರ ಅನುವಾದದಲ್ಲಿ ಸರ್ವತ್ರ ಬಂದಿಲ್ಲ. ಅದಕ್ಕೆ ಕನ್ನಡ ಭಾಷೆಯ ಸ್ವರೂಪ, ಇತಿಮಿತಿ ಕಾರಣಗಳು.

ಕಾಳಿದಾಸನ ಕೆಲವು ಕೃತಿಗಳನ್ನೋ, ಕೃತಿಭಾಗಗಳನ್ನೋ, ನಾಟಕಗಳನ್ನೋ, ಬಿಡಿ ಶ್ಲೋಕಗಳನ್ನೋ ಭಾವಗಳನ್ನೋ ಕನ್ನಡೀಕರಿಸಿದ್ದಾರೆ. ಆದರೆ ಸಮಗ್ರಕೃತಿಯನ್ನು ಏಕತ್ರ ಅನೂದಿಸಿಲ್ಲ. ಅದರಲ್ಲೂ ವಿಶ್ವಮಾನ್ಯ ಮಹಾಕವಿಯ ಕೃತಿಯನ್ನು ಕನ್ನಡಿಸಿದ ಅಮರ ಯಶಸ್ಸು ಪ್ರಿಯ ಗುರುಗಳಾದ ಶ್ರೀಯುತ ಎಸ್. ವಿ. ಪರಮೇಶ್ವರ ಭಟ್ಟರದು. ಕನ್ನಡವಿರುವ ವರೆಗೆ ಕನ್ನಾಡು ಇರುವ ವರೆಗೆ ಈ ಕೃತಿ ಅಕ್ಷಯವಾಗಿ 'ಆಚಂದ್ರತಾರಂಬರಂ' ಮೆರೆದು ನಿಲ್ಲುವುದು. ಕಾಲಪುರುಷನನ್ನು ಎದುರಿಸಬಲ್ಲ ಕೃತಿಯಾಗಿ, "ಕಾವ್ಯಂ ಯಶಸೇ ಅರ್ಥಕೃತೇ......" ಮುಂತಾದ ಪ್ರಯೋಜನಗಳಿಗೆ ಮಾದರಿಯಾಗಿ, ಮಹತ್ತು ಬೃಹತ್ತುಗಳಿಂದ ಕೂಡಿ, ಎಂದೆಂದೂ ನಿಲ್ಲಬಲ್ಲ, ಹಿಂದೆಂದೂ ಬರದ, ಶ್ರೇಷ್ಠ ಅನುವಾದವಾಗಿ ಕನ್ನಡದಲ್ಲಿ ಕಾಳಿದಾಸ ಮಹಾಸಂಪುಟ ಮೂಡಿಬಂದಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ—ಈ ಶ್ಲಾಘನೆಗೆ ಪರಮೇಶ್ವರಭಟ್ಟರು ಪಾತ್ರರು:

"ಇಂದುವರಮಾರುಮೀ ತೆಜಿ-
ದಿಂದಂ ಕನ್ನಡದೊಳಾರ್ಯರಾ ಎಂಬಿನಮೊ- ।
ಳ್ಪಿಂದೆ ನಿರವಿಸಿದುದಿಲ್ಲೆನೆ
ಚಂದದೆ ಬಿಚ್ಚಳಿಸಿ ರಚಿಸಿದಂ ಪರಮೇಶಂ ॥"

ಶಿಷ್ಯವಾತ್ಸಲ್ಯಸಂಪೂರ್ಣಂ ಶ್ರೀಗುರುಂ ಪರಮೇಶ್ವರಂ ।
ಲಬ್ಧವರ್ಣಂ ಕವಿಶ್ರೇಷ್ಠಂ ದಂಡನತ್ಯಾ ಭಜಾಮಹೇ ॥

## ೨೬. ಗಾಥಾಸಪ್ತಶತಿ

ಎಸ್. ಶ್ರೀಧರ ಭಟ್ಟ

ಭಾರತೀಯ ಪ್ರಾಚೀನಸಾಹಿತ್ಯವೆಲ್ಲ ಶ್ರೀಮಂತಕಲ್ಪನೆಯ, ಕವಿಸಮಯಗಳ, ಅಲಂಕಾರ ಆಡಂಬರಗಳ, ಆಧ್ಯಾತ್ಮಿಕ ತತ್ತ್ವಬೋಧನೆಯ ವಸ್ತುಸಪ್ರಹಾಲಯವಷ್ಟೇ ವಿನಾ ಲೌಕಿಕಮೌಲ್ಯಗಳ ಜನಸಾಮಾನ್ಯ ಸಂವೇದನೆಯ ವಿವಿಧಮುಖಗಳನ್ನು ಪ್ರತಿಬಿಂಬಿಸುವಂತಹುದಲ್ಲ, ಇದ್ದರೂ ಅವಶ್ಯ ಕತೆಗಿಂತ ಅಲ್ಪಪ್ರಮಾಣದಲ್ಲಿದೆ ಎಂದು ಭಾವಿಸುವ ಈ ಕಾಲದಲ್ಲಿ, ಪ್ರಾಚೀನ ಕಾಲದಲ್ಲಿ ಈ ದಿಶೆಯತ್ತ ವಿಚಾರ ಹರಿಸಿದ ಕವಿಗಳಿದ್ದರೆಂಬ ಸೂಚನೆಯು ಹಾಲನ ಸಂಕಲಿತ ಕೃತಿ ಗಾಥಾಸಪ್ತಶತಿಯನ್ನೋದಿ ಮನನ ಮಾಡಿದಾಗ ತಿಳಿದುಬರುತ್ತದೆ. ಶೃಂಗಾರರಸವೇ ಜೀವಾಳವಾಗಿರುವ ಮುಕ್ತಕಗಳೆನ್ನಬಹು ದಾದರೂ ಜೀವನದ ಆನಂದ ವಿಲಾಸಗಳ, ದುಃಖ ವಿಷಾದಗಳ ಸನಾತನ ನೀತಿ ನಡೆವಳಿಕೆಗಳ ಪ್ರಬೋಧಾತ್ಮಕ ಸುಂದರ ಚಿತ್ರಗಳನ್ನು ಇದರಲ್ಲಿ ಕಾಣಬಹುದಾಗಿದೆ.

ಗಾಥಾಸಪ್ತಶತಿಯು ಪ್ರಾಕೃತಭಾಷೆಯಲ್ಲಿ ರಚಿತವಾದ ಮುಕ್ತಕಗಳಿಂದ ಕೂಡಿದ್ದು ಇದೊಂದು 'ಗಾಥಾ ಸಂಕಲನ' ಗ್ರಂಥವೆಂದು ಪ್ರಥಮ ಶತಕದ ಮೂರನೆಯ ಪದ್ಯದಿಂದ ತಿಳಿದುಬರುತ್ತದೆ.

"ಸಂದ ಅಲಂಕಾರದಿಂದೊಪ್ಪುವಂತಹ
ಗಾಥೆಯ ಕೋಟಿಯೊಳಾಯ್ದು
ಕವಿಜನವಾತ್ಸಲ್ಯದಿಂದೇಳುನೂರನು
ಹಾಲನು ಕಟ್ಟಿದನಿದನು"

ಕವಿಯ ಹೆಸರಿನ ಕುರಿತೇ ಕವಿಗಳಲ್ಲಿ ಹಲವಾರು ಭಿನ್ನಾಭಿಪ್ರಾಯಗಳಿದ್ದರೂ, ಶಾತವಾಹನ-ಸಾಲ ವಾಹನ-ಸಾಲಹಣ-ಹಾಲಾಹಣ ಮೊದಲಾದ ರೂಪಗಳನ್ನು ತಾಳಿರುವ ಹೆಸರನ್ನೊಳಗೊಂಡ ಹಸ್ತ ಪ್ರತಿಗಳು ದೊರಕಿರುವುದರಿಂದ ಸಾತವಾಹನ ಹಾಲನೇ ಇದರ ಸಂಕಲನಕಾರನೆಂದೂ ಕ್ರಿಸ್ತಾಬ್ದ ಪ್ರಥಮ ಶತಕದಲ್ಲೇ ಇದರ ಸಂಗ್ರಹಕಾರ್ಯ ನಡೆದಿದೆಯೆಂದೂ ಅಭಿಪ್ರಾಯಪಟ್ಟಿದ್ದಾರೆ. ಇದರ ರಚನಾ ಕಾಲವು ಪ್ರಥಮ ಹಾಗೂ ತೃತೀಯ ಶತಮಾನದ ನಡುವಿನ ಕಾಲವೆಂದು ವೇಬರ್ ಅವರು ಅಭಿಪ್ರಾಯಿಸಿದರೆ ಡಾ. ಭಂಡಾರ್‌ಕರ್ ಅವರು ಆರನೆಯ ಶತಮಾನವಿರಬಹುದೆಂಬ ತೀರ್ಮಾನಕ್ಕೆ ಬಂದಿದ್ದಾರೆ. ವೇಬರ್ ಅವರ ಸಂಶೋಧನೆಯಂತೆ, ಗಾಥಾಸಪ್ತಶತಿಯ ಏಳು ಹಸ್ತಪ್ರತಿಗಳೂ ಹದಿಮೂರು ಟೀಕಾಗ್ರಂಥಗಳೂ ಉಪಲಬ್ಧವಿವೆಯೆಂದು ತಿಳಿಯಲಾಗಿದೆ. ಗಾಥಾಸಪ್ತಶತಿಯಲ್ಲದೆ ಗಾಥಾಕೋಶ ಎನ್ನುವ ಬೃಹತ್‌ಗಾತ್ರದ ಒಂದು ಸಂಕಲನಗ್ರಂಥವಿತ್ತೆಂಬ ಅಭಿಪ್ರಾಯದೊಡನೆ ಗಾಥಾ ಸಪ್ತಶತಿಯೇ ಅದೆಂದೂ, ಇವೆರಡೂ ಭಿನ್ನವಾದುವುಗಳೆಂದೂ ವಿದ್ವಾಂಸರು ಭಿನ್ನಾಭಿಪ್ರಾಯಗಳನ್ನು ಸೂಚಿಸಿದ್ದಾರೆ.

ಗಾಥಾಸಪ್ತಶತಿಯನ್ನು ಪೂರ್ಣರೂಪದಲ್ಲಿ ಪ್ರಥಮವಾಗಿ ೧೮೮೧ ರಲ್ಲಿ ವೇಬರ್ ಅವರು ಪ್ರಕಟಿ ಸಿದರು. ಆದರೆ 'ಕಾವ್ಯಮಾಲಾ' ಸಂಪಾದಕರಾಗಿದ್ದ ಪಂಡಿತ ದುರ್ಗಾಪ್ರಸಾದ ಶರ್ಮ ಮತ್ತು ಪಣಶೀಕರ ಶಾಸ್ತ್ರಿಗಳು ಗಂಗಾಧರ ಭಟ್ಟನ 'ಭಾವಲೇಶ ಪ್ರಕಾಶಿಕಾ' ಎನ್ನುವ ಟೀಕೆಯೊಡನೆ ೧೮೮೯ ರಲ್ಲಿ ಪ್ರಕಾಶಿಸಿದರು. ೧೯೧೧ ರಲ್ಲಿ ಪಂಡಿತ ಮಥುರಾನಾಥ ಶಾಸ್ತ್ರಿಗಳಿಂದ ಈ ಪ್ರಾಕೃತ ಗಾಹೆಗಳ ಸಂಸ್ಕೃತ ಶ್ಲೋಕರೂಪ ಹಾಗೂ ಟೀಕುಗಳಿಂದ ವಿಸ್ತಾರವಾದ ಪ್ರಸ್ತಾವನೆಯೊಡನೆ ನಿರ್ಣಯಸಾಗರ ಪ್ರೆಸ್ ನಲ್ಲಿಯೇ ಪುನರ್ಮುದ್ರಣಗೊಂಡಿತು.

ಪ್ರಾಕೃತ ಭಾಷೆಯಲ್ಲಿದ್ದ ಇಂತಹ ಒಂದು ಗುಪ್ತಸಾಹಿತ್ಯನಿಧಿಯನ್ನು ಬೆಳಕಿಗೆ ತರಲು ವಿದ್ವಾಂಸರು ಇದನ್ನು ಸಂಸ್ಕೃತಕ್ಕೆ ಪರಿವರ್ತಿಸಿದರು. ಪ್ರಾಕೃತ ಭಾಷೆಯು ಸಂಸ್ಕೃತಕ್ಕಿಂತಲೂ ಇಂಪೆಂದೂ, ಪ್ರಾಚೀನ ಕಾಲದಿಂದಲೇ ಜನಸಾಮಾನ್ಯರ ವ್ಯಾವಹಾರಿಕ ಭಾಷೆಯಾಗಿದ್ದು ಬಹು ಶ್ರೇಷ್ಠವಾದುದೆಂಬ ಅಭಿಪ್ರಾಯ

ವನ್ನೂ ಕೆಲವು ಕವಿಗಳು ಕೊಟ್ಟಿದ್ದಾರೆ. ರಾಜಶೇಖರನು ಕೂಡ ತನ್ನ 'ಕರ್ಪೂರಮಂಜರಿ'ಯಲ್ಲಿ ಪ್ರಾಕೃತ ಸಂಸ್ಕೃತಗಳನ್ನು ತುಲನೆ ಮಾಡುತ್ತ ಪ್ರಾಕೃತದಲ್ಲೇ ಹೇಳಿದ ಮಾತೊಂದರ ಸಂಸ್ಕೃತದ ರೂಪ ಅಲ್ಲಿದೆ.

> ಪ್ರರುಷಾ ಸಂಸ್ಕೃತ ಗುಂಫಾ ಪ್ರಾಕೃತ ಗುಂಫ್ಹೋsಪಿ ಭವತಿ ಸುಕುಮಾರಃ
> ಪುರುಷ ಮಹಿಲಾನಾಂ ಯಾವದಿಹಾಂತರಂ ತೇಷು ತಾವತ್ ॥

ಗಾಥಾಸಪ್ತಶತಿಯಲ್ಲೇ ಒಂದು ಗಾಹೆಯು ಈ ಅಭಿಪ್ರಾಯವನ್ನೇ ಧ್ವನಿಸುವಂತೆ ತೋರುತ್ತದೆ.

> ಸುಧೆಯಂಥ ಪ್ರಾಕೃತಕಾವ್ಯವನೋದಲು
> ಕೇಳಲುಮರಿಯದಂಥವರು
> ಮತ್ತೆ ಮನ್ಮಥತತ್ತ್ವಚಿಂತನೆಗೈವರು
> ತಾವೆಂತು ಲಜ್ಜಿಸದಿಹರು.

ಈ ಗಾಥೆಗಳ ಛಂದೋಬಂಧ ಕೂಡ ಅವುಗಳ ಶಬ್ದಮಾಧುರ್ಯಕ್ಕೆ ಅರ್ಥಪುಷ್ಟಿಗೆ ಪೂರಕವಾಗಿದ್ದು ಸರ್ವಮಾನ್ಯತೆಗೆ ಕಾರಣವಾಗಿರುವಂತೆ ತೋರುತ್ತದೆ. ಗಾಥಾಛಂದದ ಲಕ್ಷಣವನ್ನು ಕೆಳವೆಡೆ ಹೀಗೆ ಹೇಳಲಾಗಿದೆ.

> ಪ್ರಥಮಂ ದ್ವಾದಶ ಮಾತ್ರಾಃ ದ್ವಿತೀಯೇ ಅಷ್ಟಾದಶಭಿ ಸಂಯುಕ್ತಾ ।
> ಯಥಾ ಪ್ರಥಮಂ ತಥಾ ತೃತೀಯಂ ದಶಪಂಚ ವಿಭೂಷಿತಾ ಗಾಥಾ ॥

ಗಾಥಾಸಪ್ತಶತಿಯು ರಸಿಕ ವಿದ್ವಜ್ಜನರಿಂದ ಯಾವುದೋ ಒಸ್ನೆಲೆಯನ್ನುಳ್ಳ ವಸ್ತು, ವಿಷಯ, ಸ್ವಭಾವಾರ್ಥ ಉದ್ಧರಿಸಲ್ಪಟ್ಟ ಛಂದೋಬದ್ಧವಾದ ಗಾದೆ, ಸಾಮತಿಗಳ ಒಂದು ಸಂಕಲನ ಗ್ರಂಥ ವಾಗಿದೆ. ಇದು ಒಂದೆಡೆಯಿಂದ ಜನಜೀವನದ ನೇರ ಸಂಬಂಧಾನುಭವವನ್ನು ನೀಡುವುದರಲ್ಲಿ ಸಶಕ್ತವಾಗಿದ್ದರೆ ಇನ್ನೊಂದೆಡೆಯಿಂದ ಮಾನವ ಮಾನಸದ ವಿವಿಧ ಪ್ರವೃತ್ತಿಗಳ ಸ್ವರೂಪದರ್ಶನಕ್ಕೆ. ಸಾರ್ವಕಾಲಿಕ ಸಮಾನವೆನ್ನಿಸುವ ಮಾನವಸ್ವಭಾವದ ಸಹಜ ಪ್ರತಿಬಿಂಬಕ್ಕೆ ದರ್ಪಣದಂತಿದೆ.

ಇಲ್ಲಿ ಭಾರತೀಯ ಗ್ರಾಮೀಣ ಜನರ ಜೀವನದ ರಸಕಸಗಳ ನೋವುನಲಿವುಗಳ, ಏಳು ಬೀಳುಗಳ, ತತ್ಕಾಲೀನವಾದರೂ ಇಂದಿಗೂ ಅಹುದೆನ್ನಿಸಿ ಮನಃಪಟಲದಲ್ಲಿ ಸುಳಿದು ಸುರುಳಿಯಾಗುಳಿವ ಚಿತ್ರ ಗಳನ್ನು ಕಾಣಬಹುದು. ಇತ್ತೀಚಿನ ಸಾಹಿತ್ಯ ಪ್ರಕಾರದಲ್ಲಿ ನಾವು ಯಾವ ಒಂದು ಅಶಾಂತಿ, ತಳಮಳ ವನ್ನು ಕಾಣುತ್ತಿದ್ದೇವೆಯೋ ಅದರ ಮೂಲೋದ್ದೇಶವೂ ಇದೇ ಎಂಬಂತೆ ಭಾಸವಾಗುತ್ತದೆ. ಇಂದು ವಿಕೃತವಾಗಿ ಭಾಸವಾಗುವ ಸಹಜ ಸ್ವರೂಪದ ನಿಜನಿರೂಪಣೆಗೆ, ಮೌಲ್ಯವಿವೇಚನೆಗೆ ಯಾವೊಂದು ಪ್ರಯೋಗಶೀಲತೆ ಬೆಳೆದುಬಂದಿದೆಯೋ ಆ ಕಾಲದಲ್ಲೂ ತತ್ಕಾಲೀನ ಸಾಹಿತ್ಯಪಥಕ್ರಾಂತವಾದ ಒಂದು ಪ್ರಾಯೋಗಿಕ ಕೃತಿಯಂತಿದೆ ಈ ಗಾಥಾಸಪ್ತಶತಿ. ಸುಸಂಸ್ಕೃತ ಸಮಾಜವು ಯಾವುದನ್ನು ಅಂದು ಅಶ್ಲೀಲ ಬಳಕೆಯವೆಂದು ಕರೆಯುತ್ತಿತ್ತೋ ಅವುಗಳು ತತ್ಕಾಲೀನ ಜನರ ನಿತ್ಯಪರಿಚಯದ ಅನುಭವದ ವಿಷಯಗಳಾಗಿದ್ದುವೆಂದು ತಿಳಿದಾಗ ಸಾಹಿತ್ಯದಲ್ಲಿ ಈ ಮನೋಭಾವ, ದ್ವಂದ್ವ ಅಂದಿನಿಂದ ಇಂದಿನ ತನಕವೂ ಉಳಿದುಕೊಂಡು ಬಂದಿರುವುದನ್ನು ಕಾಣುತ್ತಿದ್ದೇವೆ.

ಗಾಥಾಸಪ್ತಶತಿಯು ಶೃಂಗಾರರಸಪ್ರಧಾನವಾದ ಮುಕ್ತಕಗಳ ಒಂದು ಸಮುಚ್ಚಯವಾಗಿದೆ. ತತ್ಕಾಲೀನ ಜನರ ಕೌಟುಂಬಿಕ ಜೀವನದ ವಿವಿಧ ಮುಖಗಳನ್ನು ದಿಗ್ದರ್ಶಿಸಿದ ಚಾತುರ್ಯಪೂರ್ಣ ಉಕ್ತಿಗಳನ್ನು ಇಲ್ಲಿ ಕಾಣುತ್ತೇವೆ. ವಿರಹ ವಿಲಾಪಗಳ, ಸಂಯೋಗ ಸಂಭ್ರಮಗಳ ಸರಳ ನಿರೂಪಣೆ ಯಿದೆ. ಮನುಷ್ಯಸ್ವಭಾವ ಸಾರ್ವಕಾಲಿಕ ಸಮಾನವಿರುವುದೆಂಬ ಅಂಶವನ್ನು ಗ್ರಹಿಸಿದಾಗ ಈ ಗ್ರಂಥವೂ ಸಾರ್ವಕಾಲಿಕ ಮೌಲ್ಯವನ್ನುಳ್ಳದೆಂಬುದನ್ನು ಅಲ್ಲಗಳೆಯುವಂತಿಲ್ಲ.

ಈ ರೀತಿ ಸಾಹಿತ್ಯ ಮೂಲಭೂತ ಉದ್ದೇಶಗಳನ್ನು ವಿಶಿಷ್ಟವಾಗಿ ಸಾಧಿಸಿಕೊಂಡಿದ್ದು ಪ್ರಾಕೃತ–ಸಂಸ್ಕೃತಗಳಲ್ಲಿ ಮೆರೆದು ವಿದ್ವಾಂಸರ ಮೆಚ್ಚುಗೆಗೆ ಕಾರಣವಾಗಿದ್ದ ಈ ಅಮೂಲ್ಯ ಸಾಹಿತ್ಯ ನಿಧಿಯ

ಇರವಿನ ಅರಿವು ಕನ್ನಡದ ಸಹೃದಯ ರಸಿಕಲೋಕಕ್ಕೂ ಆಗಲೆಂದು ಒಬ್ಬಿಬ್ಬರು ವಿದ್ವಾಂಸರು ಈ ಕಡೆಗೆ ದೃಷ್ಟಿ ಹರಿಸಿದ್ದರು. ದಿ. ಪ್ರೊ. ತೀ. ನಂ. ಶ್ರೀ. ಯವರ 'ಒಲುಮೆ' ಹಾಗೂ ಶ್ರೀಯುತ ಮಂಜುನಾಥ ಭಟ್ಟರ 'ಪ್ರೇಮಪೂಜೆ' ಎನ್ನುವ ಇವೆರಡೂ ಕೃತಿಗಳು ಗಾಥಾಸಪ್ತಶತಿಯ ಆಂಶಿಕ ಅನುವಾದಗಳಾಗಿ ಕನ್ನಡ ಸಾಹಿತ್ಯಲೋಕಕ್ಕೆ ಕಿರುಕಾಣ್ಕೆಗಳಾಗಿ ಬಂದವುಗಳಾಗಿವೆ. ಆದರೆ ಇಂತಹ ಮಹತ್ತ್ವಪೂರ್ಣ ಕೃತಿಯ ಭಾಷಾಂತರವನ್ನು ರಸಋಷಿ ಎಸ್. ವಿ. ಪರಮೇಶ್ವರ ಭಟ್ಟರು ನೆರವೇರಿಸಿದ್ದು, ಅದು ಸಮಗ್ರವೂ ಸರಳ ಸುಂದರವೂ ಆಗಿದ್ದು ಕನ್ನಡ ವಿದ್ವಜ್ಜನರ ಪ್ರಶಂಸೆಗೆ ಪಾತ್ರವಾಗಿದೆ. ಇವರ ಕೃತಿಯ ಮೊದಲ ಮುದ್ರಣವು ೧೯೬೭ರಲ್ಲಾಗಿದ್ದು ಈ ದಿಶೆಯಲ್ಲಿ ಈ ತನಕ ಇನ್ನೊಬ್ಬರು ಕೈಹಚ್ಚಿದುದು ಕಂಡುಬಂದಿಲ್ಲ.

ಇದೊಂದು ಲೌಕಿಕ ಶೃಂಗಾರಜೀವನದ ಭಗವದ್ಗೀತೆಯಂತಿದೆ. ಪ್ರಕೃತ ಇಲ್ಲಿ ಗಾಥಾಸಪ್ತಶತಿಯ ಒಂದು ಸಂಕ್ಷಿಪ್ತಪರಿಚಯ ಹಾಗೂ ಕನ್ನಡದಲ್ಲಿ ಅದು ಮೊಗವಡೆದ ರೀತಿಯನ್ನಷ್ಟೇ ತಿಳಿಸುವ ಉದ್ದೇಶವಿದ್ದು ಅನುವಾದಿತ ಪದ್ಯಗಳು ಮೂಲಪದ್ಯಗಳ ಭಾವವನ್ನು ಎಷ್ಟರಮಟ್ಟಿಗೆ ತೃಪ್ತಿಕರವಾಗಿ ನೀಡಲು ಸಮರ್ಥವಾಗಿವೆ ಎಂಬುದರ ಅವಗಾಹನೆಗೆ ಸಹಾಯಕವಾಗುವಂತೆ ಪ್ರಾಕೃತ ಪದ್ಯಗಳ ಸಂಸ್ಕೃತ ಶ್ಲೋಕರೂಪಗಳನ್ನೂ ಕೊಡಲಾಗಿದೆ. ವಿಸ್ತಾರ ಭಯದಿಂದ ಸ್ವಾರಸ್ಯ ಧ್ವನಿಯುಕ್ತ ಮುಕ್ತಕಗಳಲ್ಲಿ ಕೆಲವನ್ನು ಮಾತ್ರ ಆಯ್ದುಕೊಳ್ಳಲಾಗಿದೆ.

ಪತಿಪತ್ನಿಯರು ಪರಸ್ಪರ ಮುನಿಸುಗೊಂಡಿದ್ದರೂ ಮಗುವು ಆ ಗಂಭೀರತೆಯನ್ನು ಹೇಗೆ ಕ್ಷಣದಲ್ಲಿ ಮಾಯವಾಗಿಸುವುದೆಂಬ ಒಂದು ಕೌಟುಂಬಿಕ ಚಿತ್ರವಿಲ್ಲಿದೆ.

> ಪಾದ ಪತಿತಸ್ಯ ಪತ್ಯುಃ ಪೃಷ್ಠಂ ಪುತ್ರೇ ಸಮಾರುಹತಿ ।
> ದೃಢ ಮನ್ಯು ದೂನಾಯಾ ಅಪಿ ಹಾಸೋ ಗೃಹಿಣ್ಯಾನಿಷ್ಕ್ರಾಂತಃ ॥

> ಅಡಿಗಳಿಗೆರಗಿರುವೆರೆಯನ ಬೆನ್ನನು
> ಹಿಡಿದೇರಿ ಮಗನಾಡುತಿರಲು
> ಕಡುಕೋಪವಿಳಿಯದಿದ್ದರು ಕೂಡ ಗೃಹಿಣಿಯ
> ಮೊಗದೊಳು ಮೂಡಿತು ನಗೆಯು

ಬಾಳಿನ ಬೀಳಿಗೆ ಬಡತನವೇ ಕಾರಣವೆನ್ನುವುದು ಸರಿಯಲ್ಲವೆಂಬ ಅಭಿಪ್ರಾಯವನ್ನು ಇಲ್ಲಿ ಕಾಣಿಸಲಾಗಿದೆ.

> ಚತ್ವರ ಗೃಹಿಣೀ ಪ್ರಿಯದರ್ಶನಾ ಚ ತರುಣೀಪ್ರೋಷಿತ ಪತಿಕಾ ಚ ।
> ಅಸತೀ ಪ್ರತಿವೇಶಿನೀ ದುರ್ಗತಾ ಚ ನಖಲು ಖಂಡಿತಂ ಶೀಲಂ ॥

> ಚಂದದ ರೂಪವು ತುಂಬಿದ ಹರೆಯವು
> ನಲ್ಲನು ಊರೊಳಗಿಲ್ಲ.
> ನೆರೆಮನೆ ಹೆಂಗಸು ಅಸತಿಯಾಗಿದ್ದರು
> ಚೌಕದ ಬಡವಿ ಕೆಡಲಿಲ್ಲ.

ಪ್ರೇಮದಲ್ಲೂ ತ್ರಿಕೋಣಪ್ರಣಯದ (Triangular love) ಒಂದು ಚಿತ್ರವನ್ನು ಕವಿ ಕೊಟ್ಟಿರುವುದು ಅತ್ಯಂತ ಸ್ವಾರಸ್ಯವಾಗಿದೆ.

> ಸಾ ತವ ವಲ್ಲಭಾ ತ್ವಮಸಿ ಮಮದ್ವೇಷ್ಯೋಽಸಿ ತಸ್ಯಾಸ್ತವಾಹವಮ್ ।
> ಬಾಲಕ ಸ್ಫುಟಂ ಭಣಾಮಃ ಪ್ರೇಮಕಿಲ ಬಹುವಿಕಾರಮಿತಿ ॥

> ಆಕೆ ತಾ ನಿನ್ನನೆ ಒಲ್ಲೆನೆಂದೆನುವಳು
> ಅವಳೆಯೆ ನನಗಿಷ್ಟವೆನುವೆ
> ನನಗೆ ನೀನಿಷ್ಟನು ನೀನೊಲ್ಲೆಯೆನ್ನುವೆ
> ನೋಡುವೊಡೊಲುಮೆಯೆ ಕೊಂಕು

ದಿನವಿಡೀ ದುಡಿದು ಬಸವಳಿದುದು ಮಾತ್ರವಲ್ಲದೆ ಪತಿಯ ಕಠಿಣ ಮಾತುಗಳಿಂದ ಅವಮಾನಿತಳಾಗಿ ದುಃಖಚಿಂತಿತಳಾಗಿ ಆಕ್ರೋಶಗೊಂಡರೂ ತನ್ನ ಕುರಿತು. ಆಕೆಯ ಹೃದಯದಲ್ಲಿದ್ದ ಗೌರವ, ಕೊನೆಗೆ ಅವಳು ನಡೆದುಕೊಂಡ ರೀತಿಯನ್ನು ಸ್ಮರಿಸುತ್ತಾ ಪತ್ನೀವಿರಹವನ್ನು ಅನುಭವಿಸುವ ಬಡ್ಡ ಪತಿಯು ಹೀಗೆ ಮರುಗುತ್ತಾನೆ.

ದಿವಸಂ ರೋಷಮೂಕಾಯಾಸ್ತಸ್ಯಾಃ ಕೃತ್ವಾ ಗೇಹವ್ಯಾಪಾರಮ್ ।
ಗುರುಕೇऽಪಿ ಮನ್ಯುದುಃಖೇಸ್ಮರಾಮಃ ಪಾದಾಂತಸುಪ್ತಸ್ಯ ॥

ದಿನವಿಡಿ ದುಡಿದಿಂತು ಘನರೋಷಮೂಕಳು
ಕೋಪದುಃಖಗಳುಕ್ಕುತಿರಲು
ಬಂದು ಕಾಲ್ದೆಸೆಯೊಳು ಮಲಗಿದ್ದಳೆಂಬುದನು
ಎಂದಿಗೂ ಮರೆಯೆನು ನಾನು

'ಕಾವ್ಯಸ್ಯಾತ್ಮಾ ಧ್ವನಿಃ' ಎಂದು ಸಾರಿದ 'ಧ್ವನ್ಯಾಲೋಕ'ಕಾರನು ವಿಷ್ಟೋ ಪದ್ಯಗಳನ್ನುದಾಹರಿಸಿ ಧ್ವನಿಯ ಪ್ರಾಮುಖ್ಯ, ಅರ್ಥಚಮತ್ಕಾರವನ್ನು ತೋರಿದ್ದಾನೆ. ಗಾಥಾಸಪ್ತಶತಿಯು ಇಂತಹವುಗಳಿಗೆ ಆಕರವಾಗಿದೆ.

ಹೊಸತಾಗಿ ಮನೆಗೆ ಬಂದ ಪಾಂಥನು ರಾತ್ರಿಯಲ್ಲಿ, ಕತ್ತಲಲ್ಲಿ ದಾರಿತಪ್ಪಿ ತನ್ನ ಹಾಸುಗೆಯ ಬಳಿ ಬೀಳಬಾರದೆಂದು ಬಹಿರಂಗವಾಗಿ ಆತನನ್ನು ಎಚ್ಚರಿಸುತ್ತ ಪ್ರಕಾರಾಂತರವಾಗಿ ಆತನನ್ನು ತನ್ನ ಹಾಸಿನ ಬಳಿಗೇ ಬರುವಂತೆ ನಿರ್ದೇಶಿಸುವ ಸೂಚನೆ ಈ ಮಾತುಗಳಲ್ಲಿ ಬಿಂಬಿಸುತ್ತದೆ.

ಅತ್ರ ನಿಮಜ್ಜತಿ ಶ್ವಶ್ರೂರತ್ರಾಹಮತ್ರ ಪರಿಜನಃ ಸಕಲಃ
ಪಥಿಕ ರಾತ್ರ್ಯಂಧಕ ಮಾ ಮಮಶಯನೇ ನಿಮಂಕ್ಷ್ಯಸಿ ॥

ಅತ್ತೆ ಮಲಗುವರಿಲ್ಲಿ ನಾನು ಮಲಗುವೆನಿಲ್ಲಿ
ಉಳಿದೆಲ್ಲ ಸೇವಕರಿಲ್ಲಿ
ಪಥಿಕನೆ ಕಾಣದು ಕಣ್ಣು ನಿನಗಿದಿರೊಳು
ಕೆಡೆಯದಿರೆನ್ನ ಸೆಜ್ಜೆಯೊಳು

ಧ್ವನಿಗೆ ಹೆಚ್ಚಿನ ಪ್ರಾಮುಖ್ಯವಿರುವ ಇನ್ನೊಂದು ಪದ್ಯವಿದು.

ಅವಿಭಕ್ತ ಸಂಧಿಬಂಧಂ ಪ್ರಥಮರಸೋದ್ಭೇದಪಾನಲುಬ್ಧಃ
ಉದ್ವೇಲ್ಲಿತುಂ ನ ಜಾನಾತಿ ಖಂಡಯತಿ ಕಲಿಕಾಮುಖಂ ಭ್ರಮರಃ ॥

ಸುಮದೊಳು ಮಧುಪವು ಮೊದಲು ರಸೋದಯ
ವಾಯಿತೆಂದೈತಂದಿತಲ್ಲಿ
ಸಂಧಿಯ ಬಂಧವು ಬಿರಿಯದ ಕಳಿಕೆಯ
ಉರಿಯಿಸುವವಿಲ್ಲವಲ್ಲ

ಗಾಥಾಸಪ್ತಶತಿ ಕೇವಲ ಪ್ರಣಯ, ಜಾರತನ ಮುಂತಾದ ವಿಷಯನಿರೂಪಣೆಯ ಸಂಗ್ರಹ ಮಾತ್ರವಲ್ಲ; ನೀತಿ, ವರ್ಣನೆ ಮೊದಲಾದುವುಗಳನ್ನೂ ಅತ್ಯುತ್ಕೃಷ್ಟವಾಗಿ ಬಹು ಸರಳವಾಗಿ ಮುಷ್ಟಿಗ್ರಾಹ್ಯವಾಗುವಂತೆ ಇರುವ ಪದ್ಯಗಳನ್ನೂ ಒಳಗೊಂಡಿದೆ.

ಕುಲವಧುಗಳ ಲಕ್ಷಣವನ್ನೂ ಇಲ್ಲಿ ಸಂಕ್ಷೇಪವಾಗಿ ಕೊಟ್ಟಿರುವುದು ಗಮನಾರ್ಹವಿದೆ.

ಹಸಿತಮದೃಷ್ಟದಂತಂ ಭ್ರಮಿತಮನಿಷ್ಕ್ರಾಂತ ದೇಹಲೀದೇಶಮ್ ।
ದೃಷ್ಟಮನುತ್ಕ್ಷಿಪ್ತ ಮುಖಮೇಷ ಮಾರ್ಗಃಕುಲವಧೂನಾಮ್ ॥

ಹೊಸಲಿನಾಚೆಗೆ ದಾಟಿ ಹೋಗದ ಗಮನವು
ಹಲ್ಲು ಕಾಣಿಸದಂಥ ನಗುವು
ಮೊಗವನು ಮೇಲೆತ್ತಿ ನೋಡದ ನೋಟವು
ಕುಲವಧುಗಳ ಸುಲಕ್ಷಣವು

ಲೋಕನೀತಿಯನ್ನೂ ಮಿತವಾದ ನುಡಿಗಳಲ್ಲಿ ಹಿತವಾಗುವ ರೀತಿಯಲ್ಲಿ ಹೇಳಿರುವುದನ್ನು ಕಾಣಬಹುದು.

ಸೋರ್ಥೋ ಯೋ ಹಸ್ತೇ ತನ್ಮಿತ್ರಯನ್ನಿರಂತರಂ ವ್ಯಸನೇ
ತದ್ರೂಪಂ ಯತ್ರ ಗುಣಾಸ್ತದ್ವಿಜ್ಞಾನಂ ಯತ್ರ ಧರ್ಮಃ ॥

ಆಪತ್ತಿಗಾದವನಾತನೆ ಬಂಧುವು
ಕೈಯೊಳಗಿರುವುದೆ ಹಣವು
ಧರ್ಮದಿಂದೊಡಗೂಡಿದರಿವೆ ವಿಜ್ಞಾನವು
ಗುಣವಿರುವಾತನೆ ಚೆಲುವು

ಕವಿಯ ದೃಷ್ಟಿಯಾವುದನ್ನೂ ಬಿಟ್ಟಿಲ್ಲ:

ಮುಖಪುಂಡರೀಕಚ್ಛಾಯಾಯಾಂ ಸಂಸ್ಥಿತೌ ಪಶ್ಯತ ರಾಜಹಂಸಾವಿವ ।
ಕ್ಷಣ ಪಿಷ್ಟಕುಟ್ಟನೋಚ್ಛಲಿತ ಧೂಲಿಧವಲೌಸ್ತನೌ ವಹತಿ ॥

ಹಬ್ಬದ ದಿನದೊಳು ಹಿಟ್ಟನು ಕುಟ್ಟಲು
ಹುಡಿ ಹಾರಿ ಎದೆ ಬೆಳ್ಳಗಿರಲು
ಜೋಡು ಹಂಸಗಳಂತೆ ತೋರ್ಪುವು ಕುಚಗಳು
ಮುಖ ನಳಿನದ ನೆರಳಿನೊಳು

ಗಾಥಾಸಪ್ತಶತಿಯು ಪ್ರಾಕೃತದಲ್ಲಿ ಮಾಧುರ್ಯ, ನಯನಡಿಗೆಗೆ ಮೀಸಲಾದ ಯಾವೊಂದು ಗಾಥಾ ಛಂದೋಲಯವನ್ನು ಪಡೆದು ಮೆರೆಯುತ್ತಿತ್ತೋ ಅಂತಹುದನ್ನು ಕನ್ನಡಸಾಹಿತ್ಯಮಂದಿರಕ್ಕೆ ಕರೆತಂದಾಗ ಕವಿ ಅದಕ್ಕೆ ತಕ್ಕುದಾದ ಚೊಕ್ಕ ಹಾಗೂ ಒಪ್ಪುವ ಅಚ್ಚಗನ್ನಡ ಸಾಂಗತ್ಯ ಛಂದೋಲಯದ ಆಸನವನ್ನಿತ್ತು ನವ್ರರಾದ ಶಬ್ದಗಳಿಂದ ಉಪಚರಿಸಿದ್ದಾರೆ. ಇಲ್ಲಿ ಎಸ್. ವಿ. ಪರಮೇಶ್ವರ ಭಟ್ಟರು ತಾವು ಆರಿಸಿಕೊಂಡ ಛಂದೋಲಯಕ್ಕೆ ತಮ್ಮ ಗುರುಗಳೇ ಮಾರ್ಗದರ್ಶನ ಮಾಡಿದ್ದೆಂಬುದನ್ನು ಸ್ಮರಿಸುತ್ತ "ಈ ಛಂದೋರೂಪ ಇಂತಹ ಕೃತಿಗಳ ಅನುವಾದಕ್ಕೆ ಹೇಳಿ ಮಾಡಿಸಿದಂತಿದೆ" ಎಂದಿದ್ದಾರೆ.

ಗಾಥಾಸಪ್ತಶತಿಯು ಪ್ರತಿಪದ್ಯಕ್ಕೂ ತನ್ನದೇ ಆದ ಒಂದು ಹಿನ್ನೆಲೆಯಿದ್ದು ಇವುಗಳನ್ನು ಕುರಿತು ತಮ್ಮ ಗ್ರಂಥದಲ್ಲಿ "ಗಾಥಾಸಪ್ತಶತಿಯ ಏಳುನೂರು ಪದ್ಯಗಳಲ್ಲಿ ಒಂದೊಂದೂ ಒಂದೊಂದು ಬಿಡಿಮುತ್ತು. ಒಂದೊಂದೂ ಸರ್ವತಂತ್ರ ಸ್ವತಂತ್ರ. ಭಾವಪ್ರಖರತೆ, ರಸಾರ್ದ್ರತೆ, ಧ್ವನಿಪ್ರಖರತೆಗೆ ಇವು ಹೆಸರಾಗಿವೆ" ಎಂದಿದ್ದಾರೆ. ಪ್ರಾಕೃತ ಗಾಥಾಸಪ್ತಶತಿಯನ್ನು ಸಂಸ್ಕೃತಶ್ಲೋಕಗಳಲ್ಲಿ ಭಾಷಾಂತರಿಸಿ ಅವುಗಳಿಗೆ ಸಾಂದರ್ಭಿಕ ಹಿನ್ನೆಲೆಯನ್ನು ಕೊಡುವ ಸಾಹಸವನ್ನೂ ಸಂಸ್ಕೃತ ಪಂಡಿತರು ಮಾಡಿದ್ದಾರೆ. ಪ್ರಾಕೃತ ಕನ್ನಡ ಗಾಥಾಸಪ್ತಶತಿಯಲ್ಲಿ ಅಂತಹ ಕೆಲಸ ನಡೆದಿಲ್ಲವಾದರೂ ಅಂತಹ ಒಂದು ಬಯಕೆಯನ್ನು ತಮ್ಮ ಪುಸ್ತಕದ ಆರಂಭದಲ್ಲೇ ಹೀಗೆ ಪ್ರಕಟಿಸಿದ್ದಾರೆ. "ಈ ಕುರಿತು ವಿಸ್ತಾರವಾದ ವಿಮರ್ಶೆ ಬರೆಯಬೇಕೆಂಬ ಸಂಕಲ್ಪವಿದೆ. ದೈವಾನುಗ್ರಹವಿದ್ದರೆ ಈಡೇರುವುದನ್ನೇ ನಾವೂ ಉತ್ಸುಕತೆಯಿಂದ ಇದಿರು ನೋಡುತ್ತೇವೆ, ಹಾರೈಸುತ್ತೇವೆ.

ಭಾಷಾದೃಷ್ಟಿಯಿಂದ ಭಾಷಾಂತರವು ಪರಿಪೂರ್ಣವೆಂದೆನಿಸುತ್ತಿದೆಯಾದರೂ ಒಂದೆರಡು ಮೂಲ

ಪದ್ಯಗಳ ಭಾವ ಅನುವಾದದಲ್ಲಿ ವ್ಯತ್ಯಸ್ತಗೊಂಡಿರುವುದನ್ನು ಗಮನಿಸಬಹುದಾಗಿದೆ. ಉದಾಹರಣೆಗಾಗಿ ಮೂರನೇ ನೂರರ ಕೆಳಗಿನ ಮೂಲಪದ್ಯ, ಸಂಸ್ಕೃತರೂಪಗಳಿಂತಿವೆ.

ತಹಸೋಣ್ಣಾಯಿ ಪ್ರಲಯಿಯಿ ದರವಲಿ ಅಂತದ್ದ ತಾರಅಂ ಪಹಿಓ ।
ಜಹ ವಾರಿಓ ವಿ ಘರಸಾಮಿಏಣ ಓಲಿಂದ ಏ ವಸಿ ಓ ॥

ತಥಾಸ್ನುಷಯಾ ಪ್ರಲೋಕಿತೋದರವಲಿತಾರ್ಧ ತಾರಕಂ ಪಥಿಕಃ ।
ಯಥಾವಾರಿತೋಽಪಿ ಗೃಹ ಸ್ವಾಮಿನಾ ಅಲಿಂದಕೇ ಸುಪ್ತಃ ॥

ಇಲ್ಲಿ, ಮನೆಗೆ ಬಬ್ಬ ದಾರಿಗನನ್ನು ಸೊಸೆಯು ಇಣುಕಿ ನೋಡಿದಾಗಿನ ಆ ನೋಟವು ಆ ಪಥಿಕನನ್ನು, ಮನೆಯಲ್ಲಿ ಸ್ಥಳವಿಲ್ಲವೆಂದು ಯಜಮಾನನು ಅವನನ್ನು ತಡೆದರೂ ಜಗಲಿಯಲ್ಲೇ ಪಟ್ಟು ಹಿಡಿದು ಮಲಗುವಂತೆ ಮಾಡಿತು ಎಂಬ ಅರ್ಥವನ್ನೇ ಕೊಡುತ್ತದೆ. ಇಲ್ಲಿನ ಕನ್ನಡ ಅನುವಾದವು ಹೀಗಿದೆ.

ಬೇಡವೆಂದರು ಮನೆಯೊಡೆಯನು ಮಾವನು
ನಿಶ್ಚಿಂತನಾಗಿ ದಾರಿಗನು
ಜಗುಲಿಯ ಮೇಲೊರಗಿರಲೋರೆಗಣ್ಣೊಳು
ಸೊಸೆ ಬಂದು ಇಣುಕಿ ನೋಡಿದಳು.

ಇಲ್ಲಿ ಆ ಪಥಿಕನು ಜಗುಲಿಯನ್ನಾಶ್ರಯಿಸಿದ ತರುವಾಯ ಸೊಸೆ ಬಂದು ಇಣುಕಿದಳೆಂಬ ಅರ್ಥವಾಗುತ್ತದೆ. ಮೂಲದ ಅರ್ಥ ಹೆಚ್ಚು ಸಾರಸ್ಯವಾಗಿದೆ.

ಎಸ್. ವಿ. ಪರಮೇಶ್ವರ ಭಟ್ಟರನ್ನು ಬಿಟ್ಟು, ಕಾಳಿದಾಸನ ಸಮಸ್ತ ಕೃತಿಗಳನ್ನು ಸಮಗ್ರವಾಗಿ ಇನ್ನೊಂದು ಭಾಷೆಗೆ ಒಬ್ಬನೇ ಭಾಷಾಂತರಿಸಿದ ವ್ಯಕ್ತಿ ಕಂಡುಬಂದಿಲ್ಲ. ಈ ರೀತಿಯಿಂದ ಅನುವಾದ ಕಾರ್ಯದಲ್ಲಿ ಪಳಗಿದ ಕೈಯ, ಪರಿಪಕ್ವ ಶೈಲಿಯನ್ನುಳ್ಳ ಇವರು ಗಾಥಾಸಪ್ತಶತಿಯನ್ನು ಭಾಷಾಂತರಿಸಿದುದು ಯೋಗ್ಯವಾಗಿದೆ. ಸಂಸ್ಕೃತ ಭಾಷೆಯ ಶಬ್ದಮಾಧುರ್ಯ, ಕೋಮಲತೆಯನ್ನು ಪ್ರತಿಬಿಂಬಿಸುವ ಶೃಂಗಾರ ರಸದ ಧುನಿಯಾಗಿರುವ ಗೀತಗೋವಿಂದವನ್ನು ಕನ್ನಡಕ್ಕಿಳಿಸಿ, ಕನ್ನಡ ಶಬ್ದಸಂಪತ್ತನ್ನು, ನುಡಿಯ ನಯವನ್ನು ಸಶಕ್ತವಾಗಿ ಮಾಡಿದ್ದಾರೆ. ಅಮರುಶತಕವನ್ನು ಕನ್ನಡದಲ್ಲಿ ಪ್ರೇಮಾರಾಧನವನ್ನಾಗಿ ಮಾಡಿ ಈ ಕ್ಷೇತ್ರದಲ್ಲಿ ಸರ್ವಸಮರ್ಥರೆನ್ನಿಸಿ ಸಹೃದಯರ ಮನಸ್ಸನ್ನು ಸೂರೆಗೊಂಡ ಇವರಿಂದ ಗಾಥಾಸಪ್ತಶತಿಯಂತಹ ಶೃಂಗಾರರಸಪ್ರಧಾನವಾದ ಕೃತಿಯು ಸಮಗ್ರವಾಗಿ ಬೆಳಕು ಕಂಡುದು ಕನ್ನಡಿಗರ ಭಾಗ್ಯವೆನ್ನಬೇಕು.

ಗಾಥಾ ಸಪ್ತಶತಿಯ ಸಮಗ್ರರೂಪದ ಅನುವಾದವು ಇವರ ಕೃತಿಯೊಂದನ್ನು ಬಿಟ್ಟು ಬೇರೆ ಕಾಣಸದಿರುವುದರಿಂದ ಭಾಷೆ, ಛಂದಸ್ಸುಗಳ ದೃಷ್ಟಿಯಿಂದ ಇದು ಎಷ್ಟರ ಮಟ್ಟಿಗೆ ಸಾರ್ಥಕವಾಗಿದೆ ಎನ್ನುವುದು ಕಷ್ಟಸಾಧ್ಯ. ಈ ದೃಷ್ಟಿಯಿಂದ ವಿಚಾರಿಸಿದಾಗ ತಮ್ಮ ಕೃತಿಯ ಗುಣದೋಷವನ್ನರಿಯಲು ರಸಿಕ ವಿದ್ವಜ್ಜನರಿಗೆ ಅವಕಾಶವೊದಗಲೆಂದು ಶ್ರೀ ಎಸ್. ವಿ. ಪರಮೇಶ್ವರ ಭಟ್ಟರ ಗಾಥಾಸಪ್ತಶತಿಯ ಈ ಪದ್ಯವನ್ನೇ ಉದ್ಗರಿಸಬಹುದೇನೋ ಎನ್ನಿಸುತ್ತದೆ.

ಬೇರೊಂದು ಹೆಣ್ಣನು ಬಯಸುವಂತಿನಿಯನು
ದೇವರೆ ಕರುಣಿಸು ಮತಿಯ
ಗುಣದೋಷದಂತರವೇನೆಂದು ತಿಳಿವನು
ಅಂತಾದರೋಷನು ತಾನು.

ಅಂತೂ ಕನ್ನಡದಲ್ಲಿ ಬಹುಕಾಲದಿಂದ ಕಂಡುಬರುತ್ತಿದ್ದ ಈ ಕೊರತೆ ಇಲ್ಲವಾಗಿದೆ. ಅಲ್ಲಲ್ಲಿ ಒಂದೆರಡು ನುಡಿಮುತ್ತುಗಳನ್ನು ಚಪ್ಪರಿಸುತ್ತಿದ್ದವರಿಗೆ ಪುಷ್ಕಳ ರಸಕವಳಕ್ಕೆ ಅನುವುಮಾಡಿ ಕೊಟ್ಟಿದ್ದಾರೆ.

# ೨೭. "ಮಾಚಯ್ಯ" ಒಂದು ವಿವೇಚನೆ

ಎಸ್. ಎನ್. ರಂಗೇಗೌಡ

ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಸಾಹಿತ್ಯದ, ಮುಖ್ಯವಾಗಿ ಅವರ ವ್ಯಕ್ತಿತ್ವದ ಪ್ರಭಾವದಿಂದ ಪ್ರೇರಿತರಾಗಿ ಅನೇಕ ತರುಣಕವಿಗಳು ಹೊಸ ಕಾವ್ಯಸೃಷ್ಟಿಯಲ್ಲಿ ತೊಡಗಿದರು. ಶ್ರೀಯವರೇ ಅನುವಾದ ಮಾಡಿದ ಕೆಲವು ಕಥನ ಕವನಗಳು ಸ್ವತಂತ್ರ ಕವನಗಳ ರಚನೆಗೆ ಪ್ರೇರಣೆಕೊಡುತ್ತವೆ. ಈ ಪ್ರಕಾರದಲ್ಲಿ ಸಿದ್ಧಿಯನ್ನು ಪಡೆದವರು ಶ್ರೀಮಾನ್ ವೆಂಕಟೇಶ ಅಯ್ಯಂಗಾರ್, ಶ್ರೀ ಕುವೆಂಪು, ಶ್ರೀ ಕಡೆಂಗೋಡ್ಲು ಶಂಕರ ಭಟ್ಟರು ಮುಂತಾದವರು. ಕಥನ ಕವನಗಳನ್ನು ಬೇರೆ ಭಾಷೆಯಿಂದ ಆಗಾಗ ಅಲ್ಲಲ್ಲಿ ಅನುವಾದಿಸುವವರು ಕಂಡುಬರುತ್ತಾರೆ. ಕಥನ ಕವನದ ಅನುವಾದಕ್ಕೆ ಕೈಹಾಕಿ ಸಂಪೂರ್ಣ ಯಶಸ್ವಿಯಾದವರಲ್ಲಿ ಶ್ರೀ ಎಸ್. ವಿ. ಪರಮೇಶ್ವರ ಭಟ್ಟರೂ ಒಬ್ಬರು.

ಇಂಗ್ಲಿಷ್ ಸಾಹಿತ್ಯದಲ್ಲಿ ವಿಲಿಯಂ ವರ್ಡ್ಸ್‌ವರ್ತ್ ಪ್ರಸಿದ್ಧನಾದ ಕವಿ. ಆತನ ಹಿಂದಿನ ಶತಮಾನದ ಕವಿಗಳು ಸಾರಸ್ವತಲೋಕದಲ್ಲಿ ನಗರ ಜೀವನವನ್ನೇ ಅಧಿಕವಾಗಿ ಆರಾಧಿಸುತ್ತಿದ್ದ ಕಾಲದಲ್ಲಿ ಇಂಗ್ಲಿಷ್ ಸಾಹಿತ್ಯಕ್ಕೆ ನೈಜ ನೂತನವಾದ ಜೀವಕಳೆಯನ್ನು ತುಂಬಲು ಕಾರಣರಾದವರಲ್ಲಿ ವರ್ಡ್ಸ್‌ವರ್ತ್ ಮುಖ್ಯ ವ್ಯಕ್ತಿ. ಕಡುಬಡತನದ ಕುಟುಂಬವೊಂದರಲ್ಲಿ ಅವನು ೧೭೭೦ರಲ್ಲಿ ಲೇಕ್ ಜಿಲ್ಲೆಯಲ್ಲಿ ಜನಿಸಿದ. ಸಾವಿರಾರು ಸಂಕಷ್ಟಗಳ ನಡುವೆ ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯದಲ್ಲಿ ಪದವಿಪಡೆದ ಅನಂತರ ಸಾಹಿತ್ಯಸೇವೆಯಲ್ಲಿ ತೊಡಗಿದ. ಶ್ರೇಷ್ಠದರ್ಜೆಯ ಕಾವ್ಯಗಳನ್ನು ಮುಂದಿನ ಪೀಳಿಗೆಗೆ ಕೊಟ್ಟು ಅವರ ಆರಾಧ್ಯ ಮೂರ್ತಿಯಾದ. ಹಳ್ಳಿಯ ಕಡುಬಡವರ ಜೀವನದಲ್ಲಿರುವ ಕಷ್ಟಸಹಿಷ್ಣುತೆ, ನಿರಹಂಕಾರ ನಿರಾಡಂಬರ ಜೀವನದ ಸತ್ತ್ವವನ್ನು ಹಳ್ಳಿಯ ಸೌಂದರ್ಯವನ್ನು ಸರಳ ಶೈಲಿಯಲ್ಲಿ ಚಿತ್ರಿಸಿ ಸತ್ಕವಿಯಾದವನು ಕವಿ ವರ್ಡ್ಸ್‌ವರ್ತ್ 'ಗೊಲ್ಲಕಾವ್ಯ' (pastoral poem)ವನ್ನು ಸೃಷ್ಟಿಸುವುದರಲ್ಲಿ ಹೇಗೆ ತನ್ನ ಅನುಭವ ತೀವ್ರತೆಯನ್ನು ವ್ಯಕ್ತಪಡಿಸಬಲ್ಲನೆಂಬುದಕ್ಕೆ ಅವನ "ಮೈಕೆಲ್" ಕವನ ಉತ್ತಮ ಉದಾಹರಣೆಯಾಗಿದೆ. ಇಂಗ್ಲೆಂಡಿನ ಲೇಕ್ ಜಿಲ್ಲೆಯ ಪರ್ವತಶ್ರೇಣಿಯಲ್ಲಿ ಕಣಿವೆಯೊಂದಿದೆ. ಅದೇ ಕುರುಬರ ಕಣಿವೆ (Land of shepherd) ಪ್ರಕೃತಿ ಕವಿ ವರ್ಡ್ಸ್‌ವರ್ತ್‌ನಿಗೆ ಸಹಜವಾದ ಕುತೂಹಲ, ಭಯಂಕರ ಕಣಿವೆಯಲ್ಲಿ ವಾಸವಾಗಿದ್ದ ಕುರುಬನ ನೋಲೆ ಅಪಾರವಾಗಿದೆ. ಈ ಕವನದಲ್ಲಿ ಎಂಭತ್ತು ವರ್ಷ ವಯಸ್ಸಾದ ಮೈಕೆಲ್ ದೈಹಿಕ ಮತ್ತು ಮಾನಸಿಕವಾಗಿ ಎಂಥವರನ್ನೂ ನಾಚಿಸುವ ಸಾಮರ್ಥ್ಯ ಉಳ್ಳವನು. ಇಷ್ಟು ವರ್ಷಗಳವರೆಗೆ ತನ್ನ ಜೀವನದಲ್ಲಿ ಬಂದ ಯಾವುದೇ ಕಷ್ಟವನ್ನು ಲೆಕ್ಕಿಸದೆ ಪ್ರಚಂಡ ಬಿರುಗಾಳಿಯಲ್ಲೂ ತನ್ನ ಕುರಿಗಳ ಯೋಗಕ್ಷೇಮದಲ್ಲಿ ನಿರತನಾಗಿರುವ ಕರ್ತವ್ಯಪರ. ಇಷ್ಟು ವರ್ಷಗಳ ವರೆಗೂ ಮಕ್ಕಳಿಲ್ಲದಿದ್ದರೂ ಅದರ ಬಗ್ಗೆ ನಿರ್ಲಿಪ್ತನಾಗಿದ್ದ. ಜೀವನದ ಸಂಜೆಯಲ್ಲಿ ಗಂಡುಮಗುವೊಂದು ಜನನವಾದಂದಿನಿಂದ ಮೈಕೆಲ್ ತನ್ನ ಜೀವನೋತ್ಸಾಹವನ್ನು ಇಮ್ಮಡಿಗೊಳಿಸುತ್ತಾನೆ. ಅಷ್ಟೆ ಅಲ್ಲ; ಅವನ ಜೀವನವೊಂದು ಸಂತೋಷದ ಸಾಗರವಾಗುತ್ತದೆ. ಆದರೆ ದುರದೃಷ್ಟವಶಾತ್ ತನ್ನ ಸೋದರಮಗ ಹೆಣೆದ ಮೋಸದ ಬಲೆಗೆ ಬಿದ್ದ ಮೈಕೆಲ್ ನೀರಿನಿಂದ ಹೊರಬಿದ್ದ ಮೀನಿನಂತಾಗುತ್ತಾನೆ. ಆದರೂ ಕಷ್ಟವನ್ನು ಸಹಿಸಿ ತನ್ನ ಮಗನನ್ನು ದುಡಿಮೆಗಾಗಿ ನಗರಕ್ಕೆ ಕಳುಹಿಸಿ, ಇಲ್ಲಿ ತನ್ನ ಮಗನ ನಿರ್ವಂಚನೆಯ ದುಡಿಮೆಯ ಬಗೆಗೆ ತಿಳಿದ ಕೂಡಲೇ ಪುನಃ ತನ್ನ ಸಂತೋಷಕ್ಕೆಣೆಯಿಲ್ಲವೆಂಬಂತೆ ತನ್ನ ಕರ್ತವ್ಯದಲ್ಲಿ ಮಗ್ನನಾಗುತ್ತಾನೆ. ವಿಧಿ ಇವನನ್ನು ಇನ್ನೂ ಆಟವಾಡಿಸುವುದರಲ್ಲಿ ತನ್ನ ಜಾಲವನ್ನು ಬೀಸಿದೆ. ತನ್ನ ಮಗ ಅಪಮಾನಕ್ಕೊಳಕಾಗಿ ತಲೆಮರೆಸಿಕೊಂಡಿದ್ದಾನೆಂದು ತಿಳಿದಕೂಡಲೇ ಶ್ರದ್ಧೆಯಲ್ಲಿ ಅಚಲ ವಿಶ್ವಾಸವಿಟ್ಟಿದ್ದ ಮೈಕೆಲ್ ಕ್ಷಣಾರ್ಧದಲ್ಲಿ ನೀರಸ ಜೀವನಕ್ಕಿಳಿಯುತ್ತಾನೆ. ಮಗನ ಅಭ್ಯುದಯವನ್ನು ಕಂಡಾಗ ತಾನೊಂದು ಕುರಿಯ ರೊಪ್ಪವನ್ನು ಕಟ್ಟುವ ಆತ್ಮವಿಶ್ವಾಸವಿಟ್ಟಿದ್ದ ಮೈಕೆಲ್ ತನ್ನ ಕುಲಕ್ಕೆ ಕೆಟ್ಟಹೆಸರು ಬಂದಕೂಡಲೇ ಒಂದು ಕಲ್ಲನ್ನೂ ಎತ್ತುವ ಶಕ್ತಿಯಿಲ್ಲದೆ ನಿರ್ಜೀವ ವ್ಯಕ್ತಿಯಂತಾಗುತ್ತಾನೆ.

ಕನ್ನಡ ಸಾಹಿತ್ಯದ ಅನುವಾದಿತ ಕಥನಕವನಗಳಲ್ಲಿ "ಮಾಚಯ್ಯ" ಅಗ್ರಪಂಕ್ತಿಯಲ್ಲಿ ನಿಲ್ಲಬಲ್ಲುದು.

ಮೂಲದಷ್ಟೇ ಸೊಗಸು ಅನುವಾದದಲ್ಲಿ ಮೂಡಿದೆ. ಅನುವಾದದಲ್ಲಿ ಕೆಲವು ಕಡೆ ಕಂಡುಬರುವ ಭಾವವು ಬಿಗಿ ಮೂಲದಲ್ಲಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಶ್ರೀ ಪರಮೇಶ್ವರ ಭಟ್ಟರು ಈ ಕವನದ ಶೀರ್ಷಿಕೆಯನ್ನು ಇಡುವುದರಲ್ಲಿಯೂ ತಮ್ಮ ಶ್ರೀಮಂತ ಪ್ರತಿಭೆಯನ್ನು ಮೆರೆದಿದ್ದಾರೆ. ಮೈಕೆಲ್‌ನನ್ನು ಮಾಚಯ್ಯ ಎಂದು ಕರೆಯುವುದರಲ್ಲಿ ಬಹಳ ಔಚಿತ್ಯವಿದೆ. ಇಂಗ್ಲೆಂಡಿನ ಮಣ್ಣಿನಲ್ಲಿ ಹುಟ್ಟಿದವರಾದರೂ ಕನ್ನಡ ನೆಲದ ಮಕ್ಕಳೆನ್ನುವಂತೆ ಬದಲಾಯಿಸಿದ್ದಾರೆ. ಮಾಚ ಮಾಚಿ ಮತ್ತು ಲಕ್ಕರು – (Michael, Isabel and Lake) ಈ ಕಥನಕವನಕ್ಕೆ ತನ್ನದೇ ಆದ ಒಂದು ಅನ್ಯತ್ರ-ಪ್ರಾದೇಶಿಕತೆ ಇದೆ. English Land ಮಲೆನಾಡಾಗಿರುವುದೂ, Greenhead ghyll ಬಿಳಿಕಲ್ಲು ಬೆಟ್ಟವಾಗಿರುವುದೂ ಅನುವಾದದ ಒಂದು ಕವಚವೆನ್ನಬಹುದು. ಇಲ್ಲಿ ಬರುವ Michael Isabel ಮತ್ತು Lakeರು ಅಲ್ಲಿಯ ರೈತ ಜೀವನದ ಪ್ರತಿನಿಧಿಗಳಾಗಿದ್ದಾರೆ. ಅಲ್ಲಿಯ dwellers in the valley ಅನುವಾದದಲ್ಲಿ "ಕುರುಬರ ಕಣಿವೆ"ಯಾಗಿ ಬಂದಿರುವುದು ಅನುವಾದಕರ ಸೂಕ್ಷ್ಮಬುದ್ಧಿಗೆ ಹಿಡಿದ ಕನ್ನಡಿ. 'ಮಾಚಯ್ಯ' ಕವನವನ್ನು ಓದುತ್ತ ಹೋದಂತೆಲ್ಲ ಇದು ಅನುವಾದವಲ್ಲ, ಭಾಷಾಂತರವಲ್ಲ ಇದೊಂದು ಸ್ವಂತಸೃಷ್ಟಿ ಎಂಬ ಭಾವನೆ ಬರುತ್ತದೆ.

ಈ ಕಥನಕವನದ ಕೇಂದ್ರವ್ಯಕ್ತಿ ಮಾಚಯ್ಯ: ಮುದುಕನಾದರೂ 'ಕಲ್ಲೆದೆಯ ಕಟ್ಟಾಳು'. ಈ ವಾಕ್ಯ ಮೂಲದ 'An old man, stout of heat, and strong of limb' ವಾಕ್ಯಕ್ಕಿಂತಲೂ ಹೆಚ್ಚಾಗಿ ಇದು ಕನ್ನಡನಾಡಿನ ಕಂಪನ್ನು ಎತ್ತಿಹಿಡಿಯುವಷ್ಟು ಸೊಗಸನ್ನು ಹೊಂದಿದೆ. ಹರೆಯದಲ್ಲಿ ಹೇಗೋ ಹಾಗೆ ಮುಪ್ಪಿನಲ್ಲೂ ಮಾಚಯ್ಯ ಅಸಮಾನ ಬಲವುಳ್ಳವನು. ಅವನ ಬುದ್ಧಿಯಾದರೂ ಅತಿ ಚುರುಕು. 'ರಾತ್ರಿಯೆಲ್ಲಾ ಕುರಿಮಂದೆ ಕಾಯುವುದರಲ್ಲಿ ಯಾರಾದರೂ ಸರಿ, ನಿದ್ರೆಗೆ ಘಳಿಗೆಯಾದರೂ ಶರಣಾಗಬೇಕಾಗುತ್ತದೆ. ಆದರೆ ಮಾಚಯ್ಯನಿಗೆ ಸರ್ವಸ್ವವಾಗಿದ್ದ ಕುರಿಗಳ ಮೇಲಿನ ಪ್ರೀತಿಯನ್ನು ತಳ್ಳಿ ಆ ಸ್ಥಾನವನ್ನು ತುಂಬಲು ನಿದ್ರೆಯೂ ಹೆದರುತ್ತಿತ್ತು. ರಾತ್ರಿಯೆಲ್ಲ ಎಚ್ಚರವಾಗಿರುವ ಮಾಚಯ್ಯನಿಗೆ ಯಾವ ಘಳಿಗೆಯಲ್ಲಿ ಹೂಗಾಳಿ, ಯಾವ ಸಂದರ್ಭದಲ್ಲಿ ಬಿರುಗಾಳಿ ತನ್ನ ರಭಸವನ್ನು ಪರಿಚಿತಗೊಳಿಸುತ್ತದೆಂಬುದನ್ನು ಭವಿಷ್ಯ ನುಡಿಯುವ ಅನುಭವಿ. ಅನೇಕರು ನಿರ್ಲಕ್ಷಿಸುವ ಸಮಯವನ್ನು ಮಾಚಯ್ಯ ದನಗಾಹಿಗಳು ಊದುವ ಕೊಳಲಿನಂತೆ ನಾದಗೈಯುವ ತಂಗಾಳಿಯನ್ನು ಎದುರುಗೊಳ್ಳುತ್ತಿದ್ದ. ಅಷ್ಟೇ ಅಲ್ಲ, ಅಂಥ ಆಹ್ಲಾದಕರವಾದ ಗಾಳಿ ತನ್ನನ್ನು ಊಳಿಗಕ್ಕಾಗಿ ಕರೆಯುತ್ತದೆಂದು ಎದೆತುಂಬಿ ನುಡಿಯುತ್ತಾನೆ. "The winds are now devising work for me !" ಇದರ ಅನುವಾದದ ಶ್ರೇಷ್ಠತೆಯನ್ನು– "ಅಂತಲೆವ ಸುಳಿವೆಲರೆ ತನ್ನನೂಳಿಗರಾಗಿ ಕರೆವುದೆನ್ನುವನು"—ಇಲ್ಲಿ ಗುರುತಿಸಬಹುದು. ಬಿರುಗಾಳಿ ದಾರಿಹೋಕರೆಲ್ಲರನ್ನು ರಕ್ಷಣೆಗೆ ತಳ್ಳಿ ಮಾಚಯ್ಯನನ್ನು ಮಾತ್ರ ಬೆಟ್ಟದ ನೆತ್ತಿಗೆ ಆಹ್ವಾನಿಸುತ್ತಿತ್ತು. ಇಲ್ಲಿ ಮಾಚಯ್ಯನಿಗೂ ಪ್ರಕೃತಿಗೂ ಇರುವ ಅತ್ಯಂತ ಸಮ್ಮಿಲನಗೊಂಡ ಸ್ನೇಹವನ್ನು ಕಾಣಬಹುದು. ಗಿರಿಯ ತುತ್ತತುದಿಯಲ್ಲಿ ವಿಹರಿಸುತ್ತಿದ್ದ ಮಾಚಯ್ಯನನ್ನು ಎಂಬತ್ತು ವರ್ಷಗಳಿಂದಲೂ ಸೋಲಿಸಲು ಪ್ರಯತ್ನಿಸಿ ವಿಫಲವಾಗಿತ್ತು, ಹಿಮ. ಈ ಮುಂದಿನ ಸಾಲುಗಳಲ್ಲಿ ತನಗೆ ಗೊತ್ತಿಲ್ಲದಂತೆ ವರ್ಡ್ಸ್‌ವರ್ತ್ ಕಲೆಯನ್ನು ಹೆಣೆಯುವುದರಲ್ಲಿ ಮುಗ್ಗರಿಸಿದ್ದಾನೆಂಬುದಕ್ಕೆ,

> And glossy that man errs, who should suppose
> That the green valleys, and the streams and rocks
> Were things indifferent to the shepherd's thoughts

ಈ ಕಥನಕವನವನ್ನು ಅಭ್ಯಸಿಸುವವನು ಯಾರೇ ಆಗಲಿ ಪ್ರಕೃತಿಯಲ್ಲಿ ಒಂದಾಗಿರುವ ಮೈಕೆಲ್‌ನಿಗೆ ಕಣಿವೆ, ಬೆಟ್ಟ, ಕಾಡು, ಹೊಲ ಮುಂತಾದುವುಗಳು ಸಂಬಂಧವಿಲ್ಲವೆಂದು ಹೇಳುವ ವ್ಯರ್ಥ ಸಾಹಸ ಮಾಡಿಯಾನು? ಮಾಚಯ್ಯನ ಅವಿಭಾಜ್ಯ ಅಂಗಗಳಾದ ಹೊಲಗದ್ದೆಗಳು ಮತ್ತು ಅವನೇ ಬಹಳ ಮಮತೆಯಿಂದ ತಿಂದಿಕೊಟ್ಟು ರಕ್ಷಿಸಿದ್ದ ಮೂಕ ಪ್ರಾಣಿಗಳು ಅವನನ್ನು ಅಷ್ಟೇ ಪ್ರೀತಿಸುತ್ತಿದ್ದುವು. ಅವ್ಯಕ್ತ ಅನುಭವದಿಂದ ತುಂಬಿರುವ ಗ್ರಂಥಗಳೋ ಎಂಬಂತಿರುವ ಅಲ್ಲಿಯ ಬೆಟ್ಟ, ಬಯಲು ಪ್ರದೇಶ

ಗಳು ಮಾಚಯ್ಯನು ತಮ್ಮ ಪ್ರೀತಿಗೆ ಯೋಗ್ಯನೋ ಅಲ್ಲವೋ ಎಂಬುದನ್ನು ಪರಿಗಣಿಸದೆ ಅವನಿಗೆ ತನ್ನ ಜೀವನವೇ ತುಂಬಿತುಳುಕಾಡುವಂಥ ಆನಂದವನ್ನು ವ್ಯಕ್ತಪಡಿಸುತ್ತಿದ್ದುವು. ಇಷ್ಟೊಂದು ಏಕಾಂಗಿಯಾಗಿ ಜೀವನವನ್ನು ನಡೆಸುತ್ತಿದ್ದ ಮಾಚಯ್ಯನಿಗೆ ಬಾಳಗೆಳತಿಯೊಬ್ಬಳಿದ್ದಳು. ಮುದುಕಿಯಾದರೂ ತನ್ನ ಪತಿಗಿಂತ ಇಪ್ಪತ್ತು ವರ್ಷಕ್ಕೆ ಕಿರಿಯವಳು. ಅವಳ ವ್ಯಕ್ತಿತ್ವವನ್ನು ಕವಿ,

She was a woman of stirring life,
whose heart was in her house;

ಎನ್ನುವಲ್ಲಿ ಹಿಡಿದಿಟ್ಟಿದ್ದಾನೆ. ಅದಕ್ಕಿಂತಲೂ ನಮ್ಮ ರೈತಕುಂಟುಂಬದ ಸೊಗಸಾದ ಚಿತ್ರವನ್ನು ದರ್ಶಿಸಬೇಕಾದರೆ ಅನುವಾದಕ್ಕೆ ಶರಣಾಗಬೇಕು. ಆಗ ನಮ್ಮ ಭಾರತೀಯ ಬೆನ್ನೆಲುಬಿನ ತಾಯಿಯ ಚಿತ್ರ ಹೀಗೆ ಮೈದಾಳುತ್ತದೆ:

ಅವನ ಹೆಂಡತಿ ಮಾಚಿ ಗುಣವಂತೆ ನೀತಿವಿದೆ
. . . . . . . . . . . . . .
. . . . . ಕಷ್ಟವನು ಕಂಡಾಕೆ ಸಂಸಾರ
ಪ್ರಾಣಕಿಂತಲೂ ಹೆಚ್ಚು ಎನ್ನುವೊಂದಭಿಮಾನ
ದಿಂದಾಕೆ ದುಡಿಯುವಳು.

ಮೇಲಿನ ಸಾಲುಗಳು ಬಹಳ ಮನೋಜ್ಞವಾಗಿ ಮೂಡಿಬಂದಿವೆ. ಮೂಲಕವಿಯೇ ಕನ್ನಡದಲ್ಲಿ ಹೇಳುತ್ತಿದ್ದಾನೆಂಬ ಭ್ರಮೆಗೆ ಒಳಗಾಗುತ್ತೇವೆ. ಮಾಚಿಯ ಹತ್ತಿರ ಹಿಂದಿನ ಕಾಲದ ಎರಡು ಚರಕಗಳಿದ್ದುವು. ಇವುಗಳಲ್ಲಿ ಕ್ರಮವಾಗಿ ಒಂದರಲ್ಲಿ ನಾರು, ಇನ್ನೊಂದರಲ್ಲಿ ಹತ್ತಿಯನ್ನು ನೂಲುತ್ತಿದ್ದಳು. ಮಾಚಮಾಚಿಯರು ಅನ್ಯೋನ್ಯವಾಗಿ, ಸುಖಸಂಸಾರದಲ್ಲಿ ತಮ್ಮ ಆಯುಸ್ಸನ್ನೆಲ್ಲ ನೂಕಿದರು. ವರ್ಡ್ಸ್‌ವರ್ತನು ಇಂಗ್ಲಿಷ್ ನಾಣ್ಣುಡಿಯೊಂದನ್ನು ಅರ್ಥವತ್ತಾಗಿ ಹೇಳಿದ್ದಾನೆ:

"with one foot in the grave"

ಇದನ್ನೇ ಶ್ರೀ ಪರಮೇಶ್ವರಭಟ್ಟರು ಸಶಕ್ತವಾಗಿ, ಕನ್ನಡದಲ್ಲಿ — "ಮುದುಕನಾಗಿಹ ನನ್ನ ಕಾಡು ಕರೆಯುವುದೆಂದು" ಭಾವಾನುವಾದ ಮಾಡಿದ್ದಾರೆ. ಕಾಡು ಕರೆಯುತ್ತಿದೆ ಎಂಬ ಆಡುನುಡಿಯಲ್ಲಿ ಜಾನಪದ ಸತ್ತ್ವವನ್ನು ಬಟ್ಟಿಯಿಳಿಸಿದ್ದಾರೆ. ಜನಪದ ಭಾಷೆಯ ಸತ್ತ್ವದಿಂದ ಸಾಹಿತ್ಯ ಭಾಷೆಗೆ ರಕ್ತದಾನವಾಗಬೇಕೆಂದು ಹೇಳುವ ಈಗಿನ ಕವಿಗಳಿಗಿಂತ ಶ್ರೀ ಪರಮೇಶ್ವರ ಭಟ್ಟರು ಸುಮಾರು ಮೂರು ದಶಕಗಳ ಹಿಂದೆಯೇ ಸಶಕ್ತವಾಗಿ ಹಿಡಿದಿರುವುದನ್ನು, ಸೃಷ್ಟ್ಯಾತ್ಮಕವಾಗಿ ಪ್ರಯೋಗಿಸಿರುವುದನ್ನು ಕಾಣಬಹುದು. ಇಂತಹ ಮುಪ್ಪಿನಲ್ಲಿ ಮಾಚಯ್ಯ ಮಾಚಿಯರಿಗೆ ಊರುಗೋಲಾಗಿ ಒಂದು ಗಂಡು ಮಗು ಜನ್ಮತಾಳುತ್ತದೆ. ಇವರ ಜೊತೆಗೆ ಅನೇಕ ವರುಷಗಳು ಪ್ರಕೃತಿಯ ಕಷ್ಟಸುಖಗಳಲ್ಲಿ ಭಾಗಿಯಾಗಿದ್ದ ಎರಡು ಬೇಟೆನಾಯಿಗಳು ಇದ್ದವು. ಮಾಚಯ್ಯನ ಕೌಟುಂಬಿಕ ಜೀವನ ಅಲ್ಲಿಯ ಜನರಿಗೆ ಒಂದು ಗಾದೆಯಾಗಿತ್ತು.

"ನೆರೆಹೊರೆಗಳಲಿ ಜನರು 'ಬಿಡುವಿಲ್ಲದಿಹ ದುಡಿಮೆ'
ಎಂದೊಡನೆ 'ಮಾಚಯ್ಯ'ನೆನ್ನುವರು."

ಇಲ್ಲಿ 'ಮಾಚಯ್ಯ' ಶಬ್ದವನ್ನು ಅವನ ಒಕ್ಕಲುತನ ಎಂಬರ್ಥದಲ್ಲಿ ಅನುವಾದ ಮಾಡಿದ್ದಾರೆ. ಬೆಳಗಿನಿಂದ ಸಂಜೆವರೆಗೂ ಹೊಲದಲ್ಲಿ ದುಡಿದು ಮಾಚಯ್ಯ, ಲಕ್ಕರು ಮಬ್ಬಿನಲ್ಲಿ ಮನೆಗೆ ಮರಳುತ್ತಿದ್ದರು. ಮನೆಗೆ ಬಂದಮೇಲೆ ತಂದೆಮಗ ಕಾಡುಹರಟೆಯಲ್ಲಿ ಕಾಲಕಳೆಯದೆ ಊಟಮಾಡುವವರೆಗೂ ಮನೆಯ ಕೆಲಸದಲ್ಲಿ ಮಾಚಿಗೆ ನೆರವಾಗುತ್ತಿದ್ದರು. ನಮ್ಮ ಹಳ್ಳಿಗಳ ರೈತರು ನಾಳೆಯ ಕೆಲಸಗಳಿಗೆ ಹಿಂದಿನ ರಾತ್ರಿಯೇ ಅಣಿಗೊಳಿಸುವಂತೆ ಲಕ್ಕಮಾಚಯ್ಯರೂ ಮಾಡುತ್ತಿದ್ದರು. ಈ ಅನುವಾದದಲ್ಲಿ ಅಲ್ಲಲ್ಲೆ ಅನುಪ್ರಾಸಗಳನ್ನೂ ಗುರುತಿಸಬಹುದೆಂಬುದಕ್ಕೆ ಒಂದು ನಿದರ್ಶನ:

"ಮನೆಯಾಕೆ ಒಣರೊಟ್ಟಿ, ನೀರು ರಾಗಿಯು ಹಿಟ್ಟು—
ನುಣಬಡಿಸುವಷ್ಟರಲೆ ಎಷ್ಟೊ ಮನೆಕೆಲಸಗಳ
ಮಾಡುವರು."

ಚಿಕ್ಕದೂ ಚೊಕ್ಕವೂ ಆದ ಆ ಕುಟುಂಬದಲ್ಲಿ ತಲೆಮಾರುಗಳಿಂದ ಕಾಪಾಡಿಕೊಂಡುಬಂದಿದ್ದ ಒಂದು ದೀಪದ ಕಂಬವಿತ್ತು. ಸೂರ್ಯ ತನ್ನ ಪ್ರಕಾಶವನ್ನು ಮರೆಮಾಡಿದಾಗ ಆ ದೀಪ ತನ್ನ ಕೆಲಸವನ್ನು ಪ್ರಾರಂಭಿಸುತ್ತಿತ್ತು. ಅಂದಂದಿನ ಜೀವನ ಕಷ್ಟದ್ದೋ. ಸುಖದ್ದೋ? ಎಂಬ ಚಿಂತೆಯನ್ನು ಮಾಚಯ್ಯ ಮಾಚಿಯರಿಂದ ಅದು ದೂರಮಾಡುತ್ತಿತ್ತು. ಮುದ್ದಾಗಿ ಬೆಳೆಯುತ್ತಿದ್ದ ಮಗನೊಡನೆ ಮಾಚಯ್ಯ ಆ ದೀಪದ ಬೆಳಕಿನಲ್ಲಿ ಮಾತನಾಡುತ್ತಿದ್ದ. ಮಾಚಿಯು ದುಡಿಮೆಯಾದರೊ ನಿಸ್ವಾರ್ಥಕ್ಕಾಗಿ ಮಧುವನ್ನು ಹೀರಲು ದಿನವೆಲ್ಲ ಝೇಂಕರಿಸುವ ಜೇನ್ನೊಣದಂತೆ ನಿಶ್ಶಬ್ದ ರಾತ್ರಿಯಲ್ಲಿ ಅವಳು ತನ್ನ ವಿಚಿತ್ರ ಕೆಲಸಗಳಲ್ಲಿ ನಿರತಳಾಗಿರುತ್ತಿದ್ದಳು.

ಇಂಗ್ಲಿಷಿನ ಪ್ರಾದೇಶಿಕ ಹೆಸರುಗಳಿಗೆ ಕನ್ನಡದಲ್ಲಿ ಸಂವಾದಿಯಾದ ಪದಗಳನ್ನು ಜೋಡಿಸುವುದರಲ್ಲಿ ಶ್ರೀ ಪರಮೇಶ್ವರಭಟ್ಟರು ತಮ್ಮ ಬುದ್ಧಿಶ್ರೀಮಂತಿಕೆಯನ್ನು ಹೊರಹೊಮ್ಮಿಸಿರುವುದನ್ನು ತುಲನಾತ್ಮಕವಾಗಿ ನೋಡಬಹುದು.

Stood single with large prospect, north and south,
. . . . . . . . . . . . . . . .
And from this constant light, so regular,
. . . . . . . . . . . . . . . .
Both old and young, was named the Evening Star

ದಕ್ಷಿಣೋತ್ತರವಾಗಿ ಎತ್ತರದ ಮಲೆಮೇಲೆ
ನಿಂದ ದೇಗುಲದಂತೆ ಮೆರೆವ ಗುಡಿಸಲ ದೀಪ
. . . . . . . . . . . . . .
ದೊಡ್ಡವರು ಚಿಕ್ಕವರು ಎಲ್ಲರೂ ಗುಡಿಸಲನು
ಹೆಸರಿಟ್ಟು ಕರೆಯುವರು 'ಸಂಜೆತಾರೆ'ಯಿದೆಂದು

ಮೂಲಕ್ಕಿಂತಲೂ ಅನುವಾದ ಚೆನ್ನಾಗಿರುವುದನ್ನು ಈ ಕೆಳಗಿನ ಸಾಲುಗಳಲ್ಲಿ ನೋಡುತ್ತೇವೆ:

ಮಾಚಮಾಚಿಯರಿಂತು ದಾಂಪತ್ಯ ಜೀವನದೊ-
ಳೊಬ್ಬರೊಬ್ಬರನೊಲಿದು ಬಹುಕಾಲ ಬಾಳಿದರು,
ಮಗನ ಮೇಲಣ ಮೋಹ ಮಾಚಗಿಮ್ಮಡಿಯಿತ್ತು.
. . . . . . . . . . . . . .
ಇಳಿವಯಸ್ಸಿನ ಮನುಜಗವನಿಯೊದಗಿಸಿಕೊಡುವ
ವರಗಳಲಿ ಮಿಗಿಲಾದ ಬರುವ ಸುಖಭಾಗ್ಯಗಳ-
ನೊಡತರುವ ಮಕ್ಕಳನು ಹಡೆದವರ ಪ್ರೇಮಕೇ —
ಣೆಣೆಯುಂಟೆ ? . . . . . . .

ಕುರುಡನಿಗೆ ಕಣ್ಣುಬಂದಂತೆ ಮುಪ್ಪಿನಲ್ಲಿದ್ದ ಮಾಚಯ್ಯನಿಗೊಂದು ಮಗುವಾದದ್ದು. ಮಗನ ಮೇಲೆ ಸಾಮಾನ್ಯ ತಂದೆಗಿರುವ ಪ್ರೀತಿಗಿಂತ ಬೇರೆಯಾದದ್ದು. ಮಾಚಯ್ಯನ ಪ್ರೀತಿಯಲ್ಲಿ ಕ್ಷಣಿಕತೆ ಇನಿತಿಲ್ಲ. ಲಕ್ಕ ಒಂದು ಕ್ಷಣ ಕಣ್ಮರೆಯಾದರೆ ಮಾಚಯ್ಯ ಸಹಿಸಲಾರ.

Exceeding was the love he bare to him,
His heart and heart's joy!

ಚಿಕ್ಕ ಮಗುವಾಗಿದ್ದಾಗ ಲಕ್ಕ ಕುರಿಗಳ ಕಾಲುಹಿಡಿದು ಎಳೆಯುವ ದೃಶ್ಯವನ್ನು ನೋಡಿದಾಗ ಮಾಚಯ್ಯ ಅತೀತವಾದ ಪ್ರೇಮದಿಂದ ಪುಳಕಿತನಾಗುತ್ತಿದ್ದ. ತನ್ನ ಹಸುಳೆಯ ತುಂಟತನವನ್ನು ನೋಡಿ ಯಾವ ತಂದೆ ತಾನೆ ಹಿಗ್ಗುವುದಿಲ್ಲ? ಹಾಗಿದ್ದಲ್ಲಿ ಪ್ರೇಮದಾಗರವಾಗಿದ್ದ ಮಾಚಯ್ಯನ ಹೃದಯ ಎಷ್ಟು ಸಂತೋಷಪಟ್ಟಿರಬಹುದು! ಲಕ್ಕನನ್ನು ಮಾಚಯ್ಯ ತಂದೆಯಾಗಿ ಪ್ರೀತಿಸುತ್ತ ಗುರುವಾಗಿ ಶಿಕ್ಷಿಸುತ್ತ ಅವನ ಜೀವನವನ್ನು ತಿದ್ದುತ್ತಿದ್ದನು. ಇಷ್ಟರಲ್ಲೆ ರೈತಜೀವನದ ಕಷ್ಟಗಳನ್ನು ಎದುರಿಸುವ ಸಾಮರ್ಥ್ಯವನ್ನು ಲಕ್ಕ ಪಡೆದಿದ್ದ. ಅಂದಿನಿಂದ ಚಳಿ, ಬಿಸಿಲು, ಮಳೆ, ಗಾಳಿಯನ್ನು ಲೆಕ್ಕಿಸದೆ ತಂದೆಯೊಡನೆ ಕಣಿವೆಯಲ್ಲಿ ಕುರಿಕಾಯುವ ಸಹಪಾಠಿಯಾಗಿದ್ದ. ಆಗ ಮಾಚಯ್ಯನಿಗಾದರೋ,

ಮೊದಲು ತಾನೊಬ್ಬನೇ
ಪ್ರೀತಿಸಿದ ಹೊಲಗದ್ದೆಗಳು ಇಂದು ಹೆಚ್ಚು ಪ್ರಿಯ
ತರವಾಗಿ ತೋರಿದವು . . . . . . .
ನೇಸರಿಗೆ ಬೆಳಕಾಗಿ ತಂಗಾಳಿಗುಲಿಯಾಗಿ
ಮೋಹನೇಹಗಳನ್ನು ಬೀರುತಿರೆ, ಮುದುಕನೆದೆ
ಹೊಸದಾಗಿ ಹುಟ್ಟಿತೆಂಬಂತೆ ನಲಿದೊಲಿಯಿತು.

ಮೇಲಿನ ನಿದರ್ಶನದಿಂದ ಮೂಲ ವಿಫಲವಾಗಿರುವುದನ್ನೂ ಅನುವಾದ ತನ್ನ ಉತ್ತಮಾಂಗವನ್ನು ಸ್ಪರ್ಶಿಸಿರುವುದನ್ನೂ ಕಾಣುತ್ತೇವೆ. ಲಕ್ಕನಿಗೆ ಹದಿನೆಂಟು ವರ್ಷ ತುಂಬಿದ್ದರಿಂದ ಮಾಚಯ್ಯನಿಗೆ ತನ್ನ ಮಗ ಇನ್ನು ಅವನ ಕರ್ತವ್ಯವನ್ನು ಪಾಲಿಸುವುದರಲ್ಲಿ ದಕ್ಷನಾಗಿದ್ದಾನೆಂದು ನಂಬಿದ್ದನು. ಹಾಗೆ ನಂಬುವುದು ತಂದೆಯಾದವನಿಗೆ ಸಹಜವೇ. "He was his comfort and his daily hope" ಯಾರ ಸುಖಕ್ಕೂ ಭಂಗತಾರದೆ, ಯಾರ ದುಃಖಕ್ಕೂ ಕಾರಣರಾಗದೆ ನೆಮ್ಮದಿಯಿಂದ ಸರಳವಾದ ಜೀವನವನ್ನು ಮಾಚ, ಮಾಚಿ, ಮತ್ತು ಲಕ್ಕರು ನಡೆಸುತ್ತಿದ್ದರು. ಶಾಂತಿಯ ನೆಲೆಯಾಗಿದ್ದಂತಹ ಈ ಸಂಸಾರಕ್ಕೆ ಬರಸಿಡಿಲಿನ ಸೋಂಕೊಂದು ತಾಗಿತು. ಅನೇಕ ವರ್ಷಗಳ ಹಿಂದೆ ಮಾಚಯ್ಯ ತನ್ನ ಅಣ್ಣನ ಮಗನ ಸಾಲಕ್ಕೆ ಜಾಮೀನಾಗಿದ್ದನು. ಇದ್ದಕ್ಕಿದಂತೆ ಜಾಮೀನಾಗಿದ್ದವನೇ ಸಾಲವನ್ನು ತೀರಿಸುವ ದುರವಸ್ಥೆಗೆ ಕಾರಣನಾಗಬೇಕಾಗುತ್ತದೆ. ಆದರೆ ಮಾಚಯ್ಯನಿಗೆಲ್ಲಿಂದ ಬರಬೇಕು ಅಷ್ಟು ಹಣ? ಇವನ ಆಸ್ತಿಯಲ್ಲಿ ಸುಮಾರು ಅರ್ಧಕ್ಕಿಂತಲೂ ಹೆಚ್ಚು ಭಾಗವನ್ನು ಆ ಸಾಲಕ್ಕೆ ವಿಕ್ರಯ ಮಾಡಬೇಕಾದ ಹೃದಯ ವಿದ್ರಾವಕ ಪರಿಸ್ಥಿತಿ ಒದಗುತ್ತದೆ. ಸಂಪ್ರದಾಯಬದ್ಧರೈತ, ತನ್ನ ಭೂಮಿಯನ್ನು ಮಾರುವುದೆಂದರೆ ಸ್ವಂತ ತಾಯಿಯನ್ನೇ ಪರರಿಗೆ ಕೊಟ್ಟಂತೆ; ತನ್ನ ಬಂಧುಬಾಂಧವರೆಲ್ಲರನ್ನು ಅಪಮಾನಗೊಳಿಸಿದಂತೆ; ಮೇಲಾಗಿ ತನ್ನನ್ನು ತಾನೇ ಮಾರಿಕೊಂಡಂತೆ. ಇದು ಕೇವಲ ಗ್ರಂಥದಲ್ಲಿರುವ ವಸ್ತುವಲ್ಲ. ಇಂದಿಗೂ ಸತ್ಯವಾಗಿರುವ ಹಳ್ಳಿಯ ಬದುಕಿನ ಮುಖ್ಯವಾದೊಂದು ಅಂಗ. ಇಂಥ ಪ್ರಸಂಗದಲ್ಲಿ ಸಿಕ್ಕಿಬಿದ್ದಿದ್ದ ಮಾಚಯ್ಯನಿಗೆ ಮನುಷ್ಯಜೀವನದಂತಹ ವ್ಯರ್ಥ ಜೀವನ ಬೇರೊಂದಿಲ್ಲವೆನಿಸಿರುವುದು ಸಹಜವೆ. ಘೋರಕಷ್ಟಕ್ಕೆ ಸಿಕ್ಕಿದ ಮಾಚಯ್ಯನು ಮಾನಸಿಕವಾಗಿ ತತ್ತರಿಸುತ್ತಾನೆ, ಎದೆಯೊಡೆದು ನಡುಗುತ್ತಾನೆ. ಒಮ್ಮೆ, ಅವನ ಮನಸ್ಸು ಕಷ್ಟದ ಹೊರೆಯನ್ನು ಸಹಿಸಲಾರದೆ ತಲೆಮಾರುಗಳಿಂದ ಬಂದಿದ್ದ ಆಸ್ತಿಯನ್ನು ಮಾರುವುದೇ ಉತ್ತಮವೆಂದು ಒತ್ತಾಯ ಮಾಡುತ್ತದೆ; ಇನ್ನೊಮ್ಮೆ, ತನ್ನ ಹೊಲದಲ್ಲಿ ಪರರು ಬೆಳೆಯುವುದನ್ನು ನೋಡಲಾರೆ ಎನ್ನುತ್ತದೆ. ಅಷ್ಟೇ ಅಲ್ಲ, ತನ್ನ ಆಸ್ತಿ ಪರರ ಕೈಗೆ ಹೋದರೆ ಸ್ವರ್ಗದಲ್ಲೂ ತನಗೆ ಶಾಂತಿಸಿಗದೆಂದು ಮಾಚಯ್ಯ ನೊಂದು ನುಡಿಯುತ್ತಾನೆ. ನೋವನ್ನು ತಡೆಯಲಾರದ ಮನಸ್ಸು ದುಃಖವನ್ನು ತೋಡಿಕೊಳ್ಳಲು ತನ್ನಂಥದೇ ಒಂದು ಹೃದಯವನ್ನು ಹುಡುಕುತ್ತದೆ. ಈ ದುರ್ವಾರ್ತೆ ಬಂದ ಎರಡು ದಿನಗಳ ವರೆಗೂ ಮಾಚಯ್ಯ

ಗುಟ್ಟಾಗಿಯೇ ಇದ್ದ. ಅನಂತರ ಬೇರೆ ಗತಿಯಿಲ್ಲದೆ ಮಾಚಿಗೆ ವಿಷಯವನ್ನು ತಿಳಿಸುತ್ತಾನೆ. ಈ ಸಂದರ್ಭದ ಅನುವಾದ ಎಂಥವರ ಹೃದಯವನ್ನೂ ಹಿಂಡಿಹಿಂಡಿರಬಹುದು.

. . . . . . . . ಮಾಚಿ !
ಎಪ್ಪತ್ತುವರುಷದಿಂದಿಂತು ದುಡಿಯುತ್ತಿಹೆನು
. . . . . . . . . .
. . . . ಆದರೂ ನಮ್ಮ ಹೊಲಗದ್ದೆಗಳು
ಅನ್ನಿಗರ ಕೈಸೇರಲಾರದು ನೆಮ್ಮದಿಯಿಂದ
ಇರಲಾರೆ ಪರಲೋಕದಲ್ಲೆಂದು ತೋರುವುದು
. . . . . . . ಆದರೂ
ಕೊನೆಗೆನ್ನ ಮನೆಗಾನು ಹೊರೆಯಾಗಿ ಬಾಳಿದೆನು

ಸಾಲವನ್ನು ತೀರಿಸಲು ಆಸ್ತಿಯನ್ನು ವಿಕ್ರಯಮಾಡಬೇಕು, ಇಲ್ಲವೆ ಅಷ್ಟು ಹಣವನ್ನು ದುಡಿದೇ ತೀರಿಸಬೇಕು. ಆದರೆ ಆ ಎಂಬತ್ತು ವರ್ಷಗಳ ಮುದುಕನೇನು ಮಾಡಿಯಾನು? ಮಾಚಯ್ಯನೇ ನೊಂದು ನುಡಿಯುತ್ತಾನೆ.

ನಾನು ಚಿಕ್ಕವನಿದ್ದು
ಈ ಕಷ್ಟ ಬಂದಿದ್ದರೆನಿತೊ ಲೇಸಾಗಿತ್ತು
ಆದರಿದು ಕುರುಡಾಸೆ

ಮಾಚಮಾಚಿಯರ ಜೀವನದ ಹೂವಾಗಿದ್ದ ಲಕ್ಕನೇ ಹಣಸಂಪಾದಿಸಲು ನಗರಕ್ಕೆ ಹೋಗ ಬೇಕಾಗುತ್ತದೆ. ಮಾಚಯ್ಯ ವಿಧಿಯಿಲ್ಲದೆ ಮಾಚಿಗೆ ಆ ರೀತಿ ತಿಳಿಸುತ್ತಾನೆ. ಆಕೆ ಮನಸ್ಸಿನಲ್ಲಿಯೇ ಯೋಚಿಸುತ್ತಾಳೆ. ಅವಳ ಮನಸ್ಸು ತಮ್ಮೂರಿನ ಬಡ ಹುಡುಗನೊಬ್ಬನು ಪಟ್ಟಣದಲ್ಲಿ ದುಡಿದು ಒಳ್ಳೆಯ ಹೆಸರು ಗಳಿಸಿದ್ದುದನ್ನು ನೆನೆಯುತ್ತದೆ. ಹಾಗೆ ತನ್ನ ಮಗನೂ ಹಣ, ಕೀರ್ತಿಗಳಿಸಬಹುದೆಂದು ಉಬ್ಬುತ್ತಾಳೆ. ಇಲ್ಲಿ, ಸನ್ನಿವೇಶಕ್ಕೆ ತಕ್ಕಂತೆ ಹೊಂದುವ ಪದಪ್ರಯೋಗದಲ್ಲಿ ಶ್ರೀ ಪರಮೇಶ್ವರಭಟ್ಟರು ತುಂಬ ಯಶಸ್ವಿಯಾಗಿರುವುದನ್ನು ತೌಲನಿಕವಾಗಿ ವೀಕ್ಷಿಸಬಹುದು.

There's Richard Bateman, thought she to herself,
He was a panish – boy – at the church door
They made a gathering for him, shilling . . . . .
. . . . . . . . the lad
Went up to London, found a master there,

ಮೇಳಿಗೆಯ ಪುಟ್ಟ ಬಸವನು ಇದ್ದ, ಪರದೇಸಿ
ಜನರೆಲ್ಲ ನೆರೆದೊಂದು ಜಾತ್ರೆಯಲಿ ಹಣವನ್ನು
ಬೇಡಿದರು ಕಾಸು ಪಾವಲಿ ಆಣೆ ರೂಪಾಯಿ
ಹೀಗೆ ತಿರುಪತಿಯನೆತ್ತಿ . . . . . . .
. . . . . . . ಮುಂದವನು ಮಂಗಳೂರಿಗೆ ಹೋಗಿ
ಅಲ್ಲಿ ಹಣಗಾರನೊರುವನ ಸೇರಿ . . . . . .

ಮಾಚಿಯ ಸಲಹೆಯನ್ನು ಅರಿತ ಮಾಚಯ್ಯ ಹಿಂದಿನ ಎರಡು ದಿನದ ವೇದನೆಯನ್ನು ಕರುಳು ಕರಗುವಂತೆ ವ್ಯಕ್ತಪಡಿಸುತ್ತಾನೆ.

'These two days have been meat and drink to me'

ಪತಿಯ ಅಪ್ಪಣೆಯ ಮೇರೆಗೆ ಮಾಚಿ ಐದು ದಿವಸಗಳ ವರೆಗೆ ಮಗನ ಪ್ರಯಾಣಕ್ಕೆ ಸಿದ್ಧತೆ ನಡೆಸುತ್ತಾಳೆ. ಮಾಚನಿಗೆ ತನ್ನ ಮಗನು ದುಡಿಮೆಗಾಗಿ ಹೋಗುತ್ತಿದ್ದರೂ ಅವನನ್ನು ದೂರಪಿರಿಸಿ ತಾನು ಮನೆಯಲ್ಲಿರುವುದು ಸ್ವಲ್ಪವೂ ಇಷ್ಟವಿಲ್ಲ. ರಾತ್ರಿಯೆಲ್ಲ ಮರುಗುತ್ತಾನೆ. ಅದನ್ನರಿತ ಮಾಚಿ ಉದ್ವೇಗದಿಂದ, ಒಬ್ಬನೇ ಮುದ್ದುಮಗ ತಮ್ಮನ್ನು ಅಗಲಿ ಹೋದರೆ ವಯಸ್ಸಾದ ತನ್ನ ಪತಿ ಬದುಕ ಲಾರನೆಂದು ಲಕ್ಕನಿಗೆ ತಿಳಿಸುತ್ತಾಳೆ; ಗೋಳಾಡುತ್ತಾಳೆ. ಹಾಗೆಂದು ಅವನೂ ಮನೆಯಲ್ಲಿ ಕುಳಿತರೆ ಸಾಲತೀರಿಸುವ ಬಗೆ ಹೇಗೆ? ಆಗ ಲಕ್ಕ ತಾಯಿಯನ್ನು ಸಂತೈಸಿ ಪುನಃ ಅವಳು ಒಪ್ಪುವಂತೆ ಮಾಡುತ್ತಾನೆ.

ಆ ವಾರವೆಲ್ಲವೂ ಮನೆಯು ಸುಗ್ಗಿಯಲಿ ಹೂ<br>ಬಿಟ್ಟು ಜಗ್ಗುವ ಹೊದರಿನಂದದಲಿ ನಲಿದಿತ್ತು.

ಇವರ ಸಂಬಂಧಿಯೊಬ್ಬ ಲಕ್ಕನ ಆವಶ್ಯಕತೆಗಳನ್ನು ನೋಡಿಕೊಳ್ಳುವುದಾಗಿ ಲಂಡನ್ನಿನಿಂದ — (ಅನುವಾದದಲ್ಲಿ ಮಂಗಳೂರಿನಿಂದ ಹಾಗೆ ಮಾಡಿರುವುದರಲ್ಲಿ ಅರ್ಥವಿದೆ. ಲಂಡನ್ ವ್ಯಾಪಾರ ಕೇಂದ್ರ ಮತ್ತು ಸಮುದ್ರದ ಪಕ್ಕದಲ್ಲಿದೆ; ಅನುವಾದ ಔಚಿತ್ಯಪೂರ್ಣವಾಗಿ ಹೊರಹೊಮ್ಮಿದೆ.)— ಪತ್ರ ಬರೆದಿದ್ದನು. ನಾಳೆ ಲಕ್ಕನ ಪ್ರಯಾಣವೆಂದು ನಿರ್ಧರಿಸಿದರು . ಈ ಸಾಲದ ಸುದ್ದಿಯು ಬರುವುದ ಕ್ಕಿಂತ ಮುಂಚೆ, ಮಾಚಯ್ಯ ಕಣಿವೆಯಲ್ಲಿ ಹರಿಯುತ್ತಿದ್ದ ಹಳ್ಳದ ಪಕ್ಕದಲ್ಲಿ ಒಂದು ಕುರಿರೊಪ್ಪವನ್ನು ಕಟ್ಟಲೆಂದು ಕಲ್ಲುಗಳನ್ನು ರಾಶಿಮಾಡಿದ್ದ. ಕೆಲಸವನ್ನು ಪ್ರಾರಂಭಿಸುವುದರಲ್ಲಿಯೂ ಇದ್ದ. ಆದರೆ ಮಧ್ಯೆಬಂದ ಈ ಗಂಡಾಂತರದಿಂದ ಮಾಚಯ್ಯನಿಗೆ ಇಲ್ಲಿ ಬರಲೂ ಅವಕಾಶವಿರಲಿಲ್ಲ. ನಾಳೆ ತಮ್ಮಿಂದ ದೂರವಾಗಲಿರುವ ಲಕ್ಕನನ್ನು ರೊಪ್ಪಕಟ್ಟುವ ಜಾಗಕ್ಕೆ ಕರೆದುಕೊಂಡು ಬರುತ್ತಾನೆ. ಈ ಸಂದರ್ಭದಲ್ಲಿ ಮಾಚಯ್ಯ ತನ್ನ ಮಗನಿಗೆ ಹೇಳಿದ ಅನುಭವದ ಬುದ್ಧಿಮಾತುಗಳು ಕಠಿಣ ಹೃದಯವನ್ನೂ ಕರಗಿಸುತ್ತವೆ- ಅನುವಾದವನ್ನು ಓದಿಯೇ ಇಲ್ಲಿಯ ಸೊಗಸನ್ನು ಅನುಭವಿಸಬೇಕು.

. . . . ನನ್ನ ಮಗು,<br>ನಾಳೆ ಹೊರಡುವೆ ನೀನು. ನಾನು ನಿನ್ನನೆ ನಂಬಿ<br>ಮನತುಂಬಿ ಸಲಹಿದೆನು<br>. . . . . . . .<br>ನಿನ್ನ ಬಾಳಿನ ಕನಸೆ ನನ್ನ ಭಾಗ್ಯೋದಯದ<br>ನಸುಕಿನುಷೆ

ಪುಣ್ಯಕೋಟಿ ತನ್ನ ಮಾತಿನಂತೆ ನಡೆಯಲು ತನ್ನ ಹಾಲುಗರುವನ್ನು ಅಗಲುವಾಗ ಇಂಥದೊಂದು ವೇದನೆಯಾಗಿರಬಹುದು. ಲಕ್ಕನೂ ಕೂಡ ತಂದೆಯ ಬುದ್ಧಿಮಾತನ್ನು ಕೇಳಿದಂತೆಲ್ಲ ಬಿಕ್ಕಿಬಿಕ್ಕಿ ಅಳುತ್ತಾನೆ. ಮಾಚಯ್ಯ ಅವನನ್ನು ಸಂತೈಸುತ್ತಾನೆ, ಪುಣ್ಯಕೋಟಿ ಸಂತೈಸಿದಂತೆ. ಮಾಚಯ್ಯ ತನ್ನ ಬುದ್ಧಿಯ ನುಡಿಗಳನ್ನು ಮುಂದುವರಿಸುತ್ತಾನೆ.

ಹುಡುಗನಾಗಿದ್ದಂದು ನನ್ನ ನೊಲಿದಾಡಿಸಿದ<br>ಹಿರಿಯರನು ನಾನು ಮರೆವವನಲ್ಲ ನೋಡಿಲ್ಲಿ<br>ಮಲಗಿರುವರಿವರಿಬ್ಬರೆಮ್ಮ ಪೂರ್ವಜರು ಓ ಮಗುವೆ !<br>ಅವರು ಬಾಳಿದ ಬದುಕು ನಿನ್ನದಾಗಲಿ ಎಂದೆ ನನ್ನಾಸೆ<br>. . . . . . . . ನೋಡಿದರೆ<br>ನಮ್ಮ ಹೊಲ ಬೇರೊಬ್ಬ ಯಜಮಾನ ಬೇಡೆನ್ನುವಂತಿಹುದು

ಮಾಚ ತನ್ನ ಪೂರ್ವಿಕರನ್ನು ನೆನೆದು ತನ್ನ ಕತೆಯನ್ನು ವಿವರಿಸುತ್ತಾನೆ, ಮಗನಿಗೆ. ಮುಂದೆ ಲಕ್ಕನೂ ಒಳ್ಳೆಯ ಗುಣವಂತನಾಗಲಿ ನೀತಿವಿದನಾಗಲಿ ಎಂಬ ಹೆಬ್ಬಯಕೆಯಿಂದ ಮೊದಲೇ ತಿಳಿಸಿದಂತೆ ತನ್ನ ಮಗನ ಜೊತೆಗೂಡಿ ಮಾಚಯ್ಯ ಕುರಿರೊಪ್ಪವನ್ನು ಕಟ್ಟಬೇಕೆಂದು ಬಯಸಿದ್ದ. ಆದರೆ

ಅನಿವಾರ್ಯವಾಗಿ ಲಕ್ಕ ನಗರಕ್ಕೆ ಹೋಗಬೇಕಾಗಿದೆ. ಮುದುಕನಾದ ತಾನೊಬ್ಬನೇ ರೊಪ್ಪವನ್ನು ಕಟ್ಟುವ ಸ್ಥಿರಮನಸ್ಕನಾಗುತ್ತಾನೆ, ಮಾಚಯ್ಯ. ಅದಕ್ಕಾಗಿ ತನ್ನ ಪ್ರೀತಿಯ ಮಗನ ಕೈಯಿಂದಲೇ ಅಡಿಗಲ್ಲನ್ನು ನೆಡಿಸಬೇಕೆಂದು ಬಯಸುತ್ತಾನೆ. ಹಾಗೆ ಮಾಡಿಸುವುದರಿಂದ ತನ್ನ ಮಗನ ಚಿತ್ರ ಕಣ್ಣಿಗೆ ಕಟ್ಟಿ ಇನ್ನೂ ಉತ್ಸಾಹಭರಿತನಾಗಿ ದುಡಿಯಲು ಪ್ರೇರಕಶಕ್ತಿಯಾಗುತ್ತದೆಂದು ನಂಬಿದ್ದ.

> ......ಓ ಮಗುವೆ ನಿನ್ನ ಕಿರುಕೈಗಳಲಿ
> ಅದಕಾಗಿ ಒಂದು ಕಲ್ಲನು ಹೂಳು
> ...........
> ನನ್ನನಗಲಿದ ಮೇಲೆ ಕೆಟ್ಟವರ ಸಹವಾಸ
> ದೊರೆತಂದು ನನ್ನ ನೆನೆ ಈ ಘಳಿಗೆಯನ್ನು ನೆನೆ
> ...........
> ಮರಳಿ ನೀ ಬರುವಂದು ಇಲ್ಲಿ ಈಗಿರದೊಂದು
> ರೊಪ್ಪವನು ನೋಡಲಿಹೆ
> ...........
> ಕಡೆತನಕ ನಾನಿನ್ನ ಪ್ರೀತಿಸುತ ನಿನ್ನ ಸವಿ—
> ನೆನಹನೊಯ್ಯುವೆನು ನನ್ನೊಡನೆ ಪರಲೋಕಕೂ

ಅಂತು ತಂದೆಯ ಇಷ್ಟದಂತೆ ರೊಪ್ಪಕ್ಕೆ ಅಡಿಗಲ್ಲನ್ನೊಂದನ್ನು ಹೂಳಿದ. ಪ್ರೇಮಸದೃಶವಾದ ಆ ಸಂದರ್ಭವನ್ನು ನೋಡಿ ತಡೆಯಲಾರದೆ ಮಾಚಯ್ಯ ಲಕ್ಕನನ್ನು ಅಪ್ಪಿಕೊಂಡು ಅಳುತ್ತಾನೆ. ಕತ್ತಲಾಯ್ತು; ಮನೆಗೆ ಮರಳುತ್ತಾರೆ.

ನಿರ್ಧರಿಸಿದ ದಿನವೇ ಲಕ್ಕ ಕಣಿವೆಯಿಂದ ಕಣ್ಮರೆಯಾಗುತ್ತಾನೆ. ಲಂಡನ್ನಿನಿಂದ (ಮಂಗಳೂರಿನಿಂದ) ಪತ್ರವನ್ನು ಬರೆಯುತ್ತಾನೆ. "ಒಂದೆಂದೂ ಕಾಣದಿಹ ಅಂದದೋಲೆಗಳೆಂದು" ಮಾಚಮಾಜಿಯರು ಹಿಗ್ಗುತ್ತಾರೆ. ಮಾಚಯ್ಯ ತನ್ನ ಮಗ ಕಷ್ಟಪಟ್ಟು ದುಡಿಯುತ್ತಿರುವುದನ್ನೂ ಪ್ರಾಮಾಣಿಕನಾಗಿರುವುದನ್ನೂ ತಿಳಿದು ಮಗನ ಅಭ್ಯುದಯದಲ್ಲಿ ನಂಬಿಕೆಯಿಟ್ಟು ದುಡಿಯುತ್ತಾನೆ; ರೊಪ್ಪವನ್ನು ಕಟ್ಟಬೇಕೆಂದು ಮನಃಪೂರ್ವಕವಾಗಿ ಹವಣಿಸುತ್ತಾನೆ. ಆದರೆ ಮಾಚಯ್ಯನ ದುರದೃಷ್ಟವೇ ಬೇರೆಯಾಗಿತ್ತೆಂದು ಅವನಿಗೆ ಹೇಗೆ ಗೊತ್ತಾಗಬೇಕು. ಲಕ್ಕ ಮೈಗಳ್ಳನಾಗಿ, ಮೋಸಮಾಡಿ ಅಪಮಾನಕ್ಕೆ ಗುರಿಯಾಗುತ್ತಾನೆ. ಅವನನ್ನು ತಲೆಮರೆಸಲು ಸಮುದ್ರದಾಚೆಗೆ ಕಳುಹಿಸುತ್ತಾರೆ.

ಯಾರ ಸುಖಕ್ಕಾಗಿ ಮಾಚಯ್ಯ ತನ್ನ ಜೀವನದ ಸರ್ವಸ್ವವನ್ನು ಮುಡಿಪಿಟ್ಟಿದ್ದನೊ ಅಂಥ ಮಗ ಇಂದು ತನ್ನನ್ನೂ ತನ್ನ ವಂಶವನ್ನೂ ಅವಮಾನಗೊಳಿಸಿದ. ಇಡೀ ಕುಲದ ಗೌರವವೆಲ್ಲವೂ ಮಣ್ಣು ಪಾಲಾಯಿತು. ಯಾವುದಕ್ಕಾಗಿ ಮಾಚಯ್ಯ ಎಷ್ಟು ವರ್ಷಗಳಿಂದ ಹೋರಾಡುತ್ತಿದ್ದನೊ ಅದು ಇಂದು ಸಂಪೂರ್ಣವಾಗಿ ನಾಶವಾಯಿತು. ಈ ಕವನದಲ್ಲಿ ಎಲ್ಲಕ್ಕೂ ಮುಖ್ಯವಾದದ್ದೆಂದರೆ ಈ ಕೆಳಗಿನ ಎರಡು ಸಾಲುಗಳು ಇಡೀ ಕವನದ ಮೇಲೆ ಬೆಳಕು ಚೆಲ್ಲುವ ಅತ್ಯಂತ ಪರಿಣಾಮಕಾರಕ ಪಂಕ್ತಿಗಳು. ಕವಿ ಬೇರೆಷ್ಟೋ ಪದ್ಯಗಳಲ್ಲಿ ಮಾಚಯ್ಯನ ದುಃಖವನ್ನು ಹೇಳಿದ್ದರೂ ಇಷ್ಟು ಪರಿಣಾಮ ಓದುಗನಿಗಾಗುತ್ತಿರಲಿಲ್ಲ.

> "ಎನಿತೆನಿತೊ ದಿನಗಳವನಿತ್ತಲೈತಂದರೂ
> ಕಲ್ಲೊಂದನಾದರೂ ಮತ್ತೆ ಎತ್ತಿಡಲಿಲ್ಲ"

ಮೇಲಿನ ಪಂಕ್ತಿ ತುಂಬಾ ಧ್ವನಿಪೂರ್ಣವಾದುದು. ಇದು ಮಾಚಯ್ಯನ ಶೋಕಜೀವನದಲ್ಲಿ ಅವನಿಗುಂಟಾದ ನಿರಾಸೆ, ಮಗನ ಮೇಲೆ ಅವನಿಟ್ಟಿದ್ದ ಪ್ರೇಮ, ಅಭಿಮಾನ, ಭರವಸೆ ಅತ್ಯಂತ ವೀರ್ಯವತ್ತಾಗಿ ಈ ಪಂಕ್ತಿಗಳಲ್ಲಿ ಚಿತ್ರಿತವಾಗಿದೆ.

ಭಾರತೀಯ ಕಾವ್ಯಮೀಮಾಂಸೆ 'ಧ್ವನಿಯೇ ಕಾವ್ಯದ ಆತ್ಮ' ಎಂದು ಹೇಳುತ್ತದೆ. ಅದಕ್ಕೆ ಅತ್ಯುತ್ತಮವಾದ ಉದಾಹರಣೆಯಾಗಿವೆ, ಈ ಪಂಕ್ತಿಗಳು.

ಮೂಲ, ಹಾಗೂ ಅನುವಾದದ ಕವಿಗಳಿಬ್ಬರಲ್ಲೂ ವೈಯಕ್ತಿಕವಾಗಿ ಅನೇಕ ವಿಷಯದಲ್ಲಿ ಸಾಮ್ಯವನ್ನು ಕಾಣುತ್ತೇವೆ. ವಿಲಿಯಂ ವರ್ಡ್ಸ್‌ವರ್ತ್ ಪ್ರಕೃತಿಯ ನೆಲೆಯಾದ ಲೇರಿ ಜಿಲ್ಲೆಯಲ್ಲಿ ಬಡಕುಟುಂಬದಲ್ಲಿ ಹುಟ್ಟಿದವನು. ಅಲ್ಲಿಯ ಮಲೆನಾಡಿನ ಸೌಂದರ್ಯವನ್ನು ಅನುಭವಿಸಿ, ಆ ಅನುಭವವನ್ನು ತನ್ನ ಕಾವ್ಯದಲ್ಲಿ ಸುಲಭಗ್ರಾಹ್ಯವಾಗುವಂತೆ ಚಿತ್ರಿಸಿದವನು. 'ಪ್ರಕೃತಿ ಕವಿ' ಎಂದು ಹೆಸರು ಪಡೆದು ಇಂಗ್ಲಿಷ್ ಸಾಹಿತ್ಯದಲ್ಲಿ ಚಿರಸ್ಥಾಯಿಯಾದ ಸ್ಥಾನ ಪಡೆದವನು.

ಶ್ರೀ ಪರಮೇಶ್ವರಭಟ್ಟರು ಶಿವಮೊಗ್ಗ ಜಿಲ್ಲೆಯ ಮಲೆನಾಡಿನ ಮಡಿಲಲ್ಲಿ ಬಡಕುಟುಂಬದಲ್ಲಿ ಹುಟ್ಟಿದವರು. ಜೀವನದಲ್ಲಿ ಕಷ್ಟನಷ್ಟವನ್ನು ಅನುಭವಿಸಿದವರು. ಜೀವಕ್ಕೆ ಬಡತನ ಬಂದರೂ ಸೌಂದರ್ಯಾಸ್ವಾದನೆಯಲ್ಲಿ ಶ್ರೀಮಂತರಾಗಿ ಹುಟ್ಟಿದವರು. ಅವರ ಕಾವ್ಯದಲ್ಲಿ ಪ್ರಕೃತಿಯ ವಿವಿಧ ವರ್ಣನೆಯನ್ನು ಕಾಣುತ್ತೇವೆ. ಅಪರಿಮಿತ ಶ್ರಮ, ಶ್ರದ್ಧೆಯಿಂದ 'ಕನ್ನಡದ ಕಾಳಿದಾಸ' ಎಂದು ಕೀರ್ತಿ ಉಳ್ಳವರಾಗಿ ಕನ್ನಡನಾಡಿನ ಮನೆಮಾತಾಗಿದ್ದಾರೆ. ಅಂತೆಯೇ ಅವರಿಗೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಮರವಾದೊಂದು ಸ್ಥಾನ ಎಂದಿಗೂ ಉಳಿಯುತ್ತದೆ. ಅವರ ಗಮನ ಇನ್ನೊಮ್ಮೆ ಕಥನ ಕಾವ್ಯದ ಸೃಷ್ಟಿಯ ಕಡೆಗೆ ಹೊರಳಿದರೆ ಆ ಪ್ರಕಾರದಲ್ಲಿ ಕನ್ನಡ ಸಾಹಿತ್ಯ ಇನ್ನೂ ಶ್ರೀಮಂತವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಈ ಸುಸಮಯದಲ್ಲಿ ಭಗವಂತ ಅವರಿಗೆ, ಸರಸ್ವತಿ ಆರಾಧನೆಗೆ ಸರ್ವವಿಧದಲ್ಲೂ ಸಹಕಾರಿಯಾಗಲೆಂದು ಪ್ರಾರ್ಥಿಸೋಣ.

# ೨೮. ಪ್ರೊ. ಪರಮೇಶ್ವರ ಭಟ್ಟರ ಸಿಹಿತಿಂಡಿ ಹಂಚೋಣ

**ಎಲಿಜಬೆತ್ ನ್ಯಾನ್ಸಿ**

ಮಕ್ಕಳಿಗೆ ಕಥೆ ಎಂದರೆ ಪ್ರಾಣ. ಅದನ್ನು ಕೇಳುವುದಕ್ಕಾಗಿ ಅವರು ಊಟ ನಿದ್ರೆಗಳನ್ನಾದರೂ ತೊರೆಯಬಲ್ಲರು. ಕಥೆಗಳು ಶಿಶುವಶೀಕರಣ ಮಂತ್ರವಿದ್ದಂತೆ. ಅವುಗಳ ಆಸೆಯಿಂದ ಮೇಳದ ಮಾತನ್ನು ಕೇಳದೆ ಇರುವ ಮಕ್ಕಳೇ ಇಲ್ಲ. ಮನೆಯಲ್ಲಿ ಮಕ್ಕಳಿಗೆ ಕಥೆಯನ್ನು ಹೇಳಲು ಒಂದು ಮುದಿತಲೆ ಮುತ್ತಾರು ಅಲ್ಲದೆ ಅಜ್ಜಅಜ್ಜಿಯರಾಗಿದ್ದಾರೆ. ಅವರಲ್ಲಿ ಮಕ್ಕಳಿಗಿರುವಷ್ಟು ಸಲುಗೆ ಬೇರೆ ಯಾರಲ್ಲೂ ಇರುವುದಿಲ್ಲ. ಅವರು ಹೇಳುವ ರಾಜರಾಣಿಯರ ಕಥೆ, ಏಳುಸುತ್ತಿನ ಕೋಟೆಯ ರಾಜಕುಮಾರಿಯ ಕಥೆ, ಕಾಗೆ ಗುಬ್ಬಿಯ ಕಥೆಗಳು ಮಕ್ಕಳ ಕುತೂಹಲವನ್ನು ಕೆರಳಿಸಲು, ಅವರ ಗಮನವನ್ನು ಒಂದೆಡೆಗೆ ಸೆಳೆಯಲು ಸಹಾಯಕವಾಗಿವೆ. ಅಲ್ಲದೆ ಅವುಗಳನ್ನು ಕೇಳುವುದರಿಂದ ತುಂಟಮಕ್ಕಳು ಚೇಷ್ಟೆಯನ್ನು ಕಡಮೆಮಾಡಿ ತಂದೆ ತಾಯಿಂದಿರಿಗೆ ಅವರಿಂದುಂಟಾಗುವ ತೊಂದರೆಯನ್ನು ಕಡಮೆ ಮಾಡುತ್ತಾರೆ. ಆದರೆ ಈಗ ಅಜ್ಜ ಅಜ್ಜಿಯರು ಮಕ್ಕಳಿಗೆ ಹೇಳುವ ಕಥೆಗಳು ಮರೆಯಾಗುತ್ತ ಬಂದಿವೆ. ಅಲ್ಲದೆ ಆಧುನಿಕ ನಾಗರಿಕತೆಯ ಪ್ರಭಾವದಿಂದ ಪಟ್ಟಣಗಳಲ್ಲಿ ವಾಸಿಸುವವರ ಎಷ್ಟೋ ಮಕ್ಕಳಿಗೆ ಅಜ್ಜಅಜ್ಜಿಯರೊಡನೆ ಸಲುಗೆಯಿಂದಿರುವ ಅವಕಾಶವೂ ತಪ್ಪಿ ಹೋಗಿದೆ.

ಆಂಗ್ಲರು ಭಾರತವನ್ನು ಆಳತೊಡಗಿದಾಗ ನಮ್ಮ ದೇಶದ ವಿದ್ಯಾಭ್ಯಾಸ ಪದ್ಧತಿಯಲ್ಲಿ ಹಿಂದಿದ್ದ ರೀತಿ ನೀತಿಗಳನ್ನು ಬದಲಾಯಿಸಿ ಹೊಸ ಪದ್ಧತಿಯನ್ನು ಜಾರಿಗೆ ತಂದರು. ಅಂಥ ಪದ್ಧತಿಗಳಲ್ಲಿ ಒಂದು ಈ ಬಾಲಸಾಹಿತ್ಯ ನಿರ್ಮಾಣ. ಮಕ್ಕಳಿಗಾಗಿ ಒಂದು ಪ್ರತ್ಯೇಕ ಸಾಹಿತ್ಯವನ್ನು ರಚಿಸುವ ಈ ಕ್ರಮವು ಆಂಗ್ಲರಿಂದ ಮೊತ್ತಮೊದಲು ನಮ್ಮ ದೇಶಕ್ಕೆ ಕಾಲಿಟ್ಟಿತು. ಮಕ್ಕಳ ಕಥೆಗಳು ಅವರ ಕಲ್ಪನಾಶಕ್ತಿಯ ಗಡಿಯೊಳಗೇ ಇರಬೇಕು. ಅವುಗಳ ಭಾಷೆ ಎಷ್ಟು ಸುಲಭ, ಸರಳವಾಗಿ ಇದೆಯೋ ಅಷ್ಟು ಅಷ್ಟು ಅವು ಮಕ್ಕಳನ್ನು ಆಕರ್ಷಿಸುತ್ತವೆ. ಕಥೆಯು ಮಕ್ಕಳ ಜ್ಞಾಪಕಶಕ್ತಿಯನ್ನು ವಿಕಾಸ ಗೊಳಿಸುವ ಒಂದು ಸಾಧನ. ಚಿಕ್ಕಮಕ್ಕಳು ತಾವು ಕೇಳಿದ ಕಥೆಗಳನ್ನು ತಮ್ಮ ಒಡನಾಡಿಗಳಿಗೆ ಹೇಳಲು ಪ್ರಯತ್ನಿಸುತ್ತಾರೆ. ಹೀಗೆ ಪುನಃ ಪುನಃ ಕಥೆಗಳನ್ನು ಹೇಳಲು ಪ್ರಯತ್ನಿಸುವುದರಿಂದ ಮಕ್ಕಳ ಕಲ್ಪನಾಶಕ್ತಿ, ಜ್ಞಾಪಕಶಕ್ತಿಯೂ ಹೆಚ್ಚಿ 'ಮುಂದೇನು? ಆ ಮೇಲೆ ಏನು ?' ಎಂಬ ಕುತೂಹಲವನ್ನು ಹುಟ್ಟಿಸುತ್ತದೆ. ಇಂಥ ಮಕ್ಕಳ ಶಿಕ್ಷಣದ ಅಮೂಲ್ಯವಾದ ಸಾಧನವನ್ನು ಈ ವೈಜ್ಞಾನಿಕ ಯುಗದಲ್ಲಿ ಪುನಃ ಚಿಗುರಿಸಲು ಪ್ರಯತ್ನಿಸಬೇಕಾದುದು ಈ ಯುಗದ ಯುವ ಜನಾಂಗದ ಕರ್ತವ್ಯ. ಅವರು ವೈಜ್ಞಾನಿಕ ವಿಷಯಗಳನ್ನು ಕಥಾರೂಪದಲ್ಲಿ ಬೆಳೆಯುತ್ತಿರುವ ಮಕ್ಕಳಿಗೆ ಒದಗಿಸಿ ಕೊಡಬೇಕು. ಇಂಥ ಒಂದು ಪ್ರಯತ್ನವನ್ನು ಪ್ರೊ. ಪರಮೇಶ್ವರ ಭಟ್ಟರ 'ಭೂಮಿ ಮತ್ತು ಧೂಮಕೇತು' ಮತ್ತು 'ಸತ್ಯದ ಬೆಳಕು' ಎಂಬ ಕಥೆಗಳಲ್ಲಿ ಕಾಣಬಹುದು. ಇವು ಇಂಗ್ಲಿಷ್ ಸಾಹಿತ್ಯದ ಅನುವಾದವಾದರೂ ಸಹ ಇವು ಅನುವಾದಗಳೆಂದು ಹೇಳಿದ ಹೊರತು ಓದುಗರಿಗೆ ತಿಳಿಯುವುದಿಲ್ಲ. ಅಷ್ಟು ಚೆನ್ನಾಗಿ, ಸರಳವಾಗಿ, ಮಕ್ಕಳ ಮನಸ್ಸಿಗೆ ನಾಟುವಂತೆ ಕವಿಗಳು ಅನುವಾದಿ ಸಿದ್ದಾರೆ.

'ಭೂಮಿ ಮತ್ತು ಧೂಮಕೇತು'ವು ಕಾಲ್ಎವಾಲ್ಡ್‌ನ (The Earth and the Comet) ಎಂಬ ಕಥೆಯ ಅನುವಾದ. ಇದನ್ನು ಅದೇ ಲೇಖಕನ (The old post and other nature stories) ಎಂಬ ಕಥಾಸಂಕಲನದಿಂದ ಆರಿಸಲಾಗಿದೆ. ಇದರಲ್ಲಿ ವಿಜ್ಞಾನಕ್ಕೆ ಸಂಬಂಧಪಟ್ಟ ಭೂಮಿ, ಚಂದ್ರ ಮತ್ತು ಧೂಮಕೇತುಗಳ ಸಂಬಂಧ ಅವುಗಳ ಸ್ವರೂಪ ಮತ್ತು ಕಾರ್ಯಗಳು ಕಥಾರೂಪದಲ್ಲಿ ಬಂದಿವೆ. ಈಗಿನ ಕಾಲದಲ್ಲಿ ಪ್ರಾಥಮಿಕ ತರಗತಿಯಿಂದಲೇ ವಿಜ್ಞಾನವನ್ನು ಅಭ್ಯಾಸಮಾಡುವ ಮಕ್ಕಳಿಗೆ ಈ ಪುಸ್ತಕವು ಉಪಯುಕ್ತವಾದುದು. ಇದನ್ನು ಓದುವುದರಿಂದ ಮಕ್ಕಳಿಗೆ ಒಂದು ರೀತಿ ಯಲ್ಲಿ ಕಥೆಯನ್ನು ಓದಿದಂತೆಯೂ ಆಗುತ್ತದೆ, ವೈಜ್ಞಾನಿಕ ಸತ್ಯಗಳನ್ನು ಅರಿತಂತೆಯೂ ಆಗುತ್ತದೆ.

ಭೂಮಿ ಎಂದರೆ ಏನು, ಧೂಮಕೇತು ಎಂದರೆ ಏನು, ಸೂರ್ಯಚಂದ್ರರು ಹೇಗೆ ಹುಟ್ಟುತ್ತಾರೆ, ಎಂದು ಮುಂತಾಗಿ ಕುತೂಹಲವನ್ನು ವ್ಯಕ್ತಪಡಿಸುವ ಎಳೆಯ ಮನಸ್ಸಿಗೆ ಈ ಕಥೆಯ ಪುಸ್ತಕವು ಜ್ಞಾನದ ಬೆಳಕನ್ನು ಚೆಲ್ಲುತ್ತದೆ.

'ಸತ್ಯದ ಬೆಳಕು' ಶ್ರೀಮತಿ ಗೇಟ್ಟಿಯು 'Parables from Nature' ಎಂಬ ಕಥಾಸಂಕಲನದಿಂದ ಆರಿಸಲಾದ The light of truthನ ಅನುವಾದ. ಇದೂ ಸಹ ಒಂದು ವೈಜ್ಞಾನಿಕ ಕಥೆ. ರಾತ್ರಿಹೊತ್ತು ದೂರದಲ್ಲಿ ಮಿನುಗುತ್ತಿರುವ ಒಂದು ವಸ್ತುವನ್ನು ನೋಡಿ ಹಿಂದಿನ ಕಾಲದ ಜನರು ಪೆವರಿ 'ಕೊಳ್ಳಿದೆವ್ವ' ಮುಂತಾದ ಹೆಸರುಗಳಿಂದ ಅದನ್ನು ಕರೆಯುತ್ತಿದ್ದರು. ಆದರೆ ಈ ವಿಜ್ಞಾನ ಯುಗದಲ್ಲಿ ಆ ನಂಬಿಕೆಯು ಸಡಿಲಾಗಿ ಅದು 'ರಂಜಕ' ಎಂಬ ವಸ್ತುವಿನ ಜ್ವಾಲೆ ಎಂದು ಕಂಡು ಹಿಡಿದರು. ಅಂಥ ಒಂದು ಜ್ವಾಲೆಯು ಇಲ್ಲಿಯ ಕಥಾವಸ್ತು. ಅದು ಒಂದು ಜೌಗು ಪ್ರದೇಶದಲ್ಲಿದ್ದು ಅಜ್ಞಾನಿಯನ್ನು ದಾರಿ ತಪ್ಪುವಂತೆ ಮಾಡುತ್ತಿದ್ದರೂ ತಾನು ಯಾರನ್ನಾದರೂ ರಕ್ಷಿಸುತ್ತೇನೆ ಎಂಬ ನಂಬಿಕೆಯಿಂದ ಮತ್ತಷ್ಟು ಉಜ್ಜ್ವಲವಾಗಿ ಉರಿಯುತ್ತಲೇ ಇರುತ್ತದೆ. ಆದರೆ ಅದರಿಂದ ಸುರಕ್ಷಿತ ವಾಗುವ ಬದಲು ಹೆಚ್ಚು ಜನ ಮೋಸಹೋಗುತ್ತಾರೆ. ಕೊನೆಯಲ್ಲಿ ಆ ರಂಜಕದ ಜ್ವಾಲೆ. ಒಬ್ಬ ತಂದೆ ಮಗನನ್ನು ಎಚ್ಚರಿಸಿ ಅಪಾಯದಿಂದ ರಕ್ಷಿಸುತ್ತದೆ. ಈ ರೀತಿ ರಂಜಕದ ಜ್ವಾಲೆಯಿಂದ ಮಾನವನಿಗಾಗುವ ಅಪಕಾರ, ಉಪಕಾರಗಳನ್ನು ಬಹಳ ಸುಂದರವಾಗಿ ಕಥಾರೂಪದಲ್ಲಿ ಕವಿಗಳು ಮಕ್ಕಳಿಗೆ ತಿಳಿಸಿದ್ದಾರೆ.

ಈ ಎರಡೂ ಕಥೆಗಳು ಅವುಗಳ ಭಾಷೆಯ ಸರಳತೆಯಿಂದ ಸ್ವಾರಸ್ಯವಾಗಿವೆ. ತೀ. ನಂ. ಶ್ರೀ. ಹೇಳುವಂತೆ "ಮಕ್ಕಳ ಪ್ರಪಂಚ ಯಕ್ಷಿಣಿಯ ಪ್ರಪಂಚ. ನಮ್ಮ ಪ್ರಪಂಚದಲ್ಲಿ ಅಸಂಭವವಾದ ಸಂಗತಿಗಳೆಲ್ಲ ಅಲ್ಲಿ ಸುಲಭವಾಗಿ ನಡೆದುಬಿಡುತ್ತವೆ. ಅದರಲ್ಲಿ ಮೃಗ ಪಕ್ಷಿಗಳೂ ಮಾತನಾಡುತ್ತವೆ." ಈ ಮೇಲಿನ ಎರಡೂ ಕಥೆಗಳಲ್ಲಿ ಬರುವ ಭೂಮಿ, ಚಂದ್ರ. ಧೂಮಕೇತು ಮತ್ತು ರಂಜಕದ ಜ್ವಾಲೆಗಳು ನಮ್ಮಂತೆಯೇ ಮಾತನಾಡುತ್ತವೆ, ನಗುತ್ತವೆ. 'ಸತ್ಯದ ಬೆಳಕು' ಎಂಬ ಕಥೆಯಲ್ಲಿ ರಂಜಕದ ಜ್ವಾಲೆಯು ಸ್ವಾಗತ ಹೇಳಿಕೊಳ್ಳುವ ಮಾತುಗಳ ಪುನರುಕ್ತಿಯು ಮಕ್ಕಳಿಗೆ ಕಥೆಯನ್ನು ನೆನಪಿನಲ್ಲಿಡಲು ಸಹಾಯಕವಾಗುತ್ತದೆ. ಅಲ್ಲದೆ ಕಥೆಯು ಸಂವಾದದ ರೂಪದಲ್ಲಿರುವುದರಿಂದ ಮಕ್ಕಳಿಗೆ ಬೇಗ ಅರ್ಥ ವಾಗುತ್ತದೆ. ಕವಿಗಳು ಮಾಡಿರುವ ಅನುವಾದದ ಸ್ವರೂಪ:

"The Earth pushed its cap of ice to one side, so that half the Atlantic ocean was filled with icebergs, and the New Forest did not burst into leaf fill whitesuntide"

"ಭೂಮಿ ತನ್ನ ಮಂಜಿನ ಟೋಪಿಯನ್ನು ಒಂದು ಕಡೆಗೆ ನೂಕಿಕೊಂಡಿತು. ಅಟ್ಲಾಂಟಿಕ್ ಸಾಗರದ ಅರ್ಧಭಾಗವೆಲ್ಲ ಮಂಜುಗೆಡ್ಡೆಗಳಿಂದ ತುಂಬಿಹೋಯಿತು. ವೈಟ್‌ಸನ್‌ಟೈಡ್ ಎಂಬ ಕ್ರಿಶ್ಚಿಯನ್ನರ ಹಬ್ಬ ಬರುವ ವರೆಗೂ ದಕ್ಷಿಣ ಇಂಗ್ಲೆಂಡಿನ ಮರಗಿಡಗಳು ಚಿಗುರಲೇ ಇಲ್ಲ."

"Hold your tongue and mind your own business" said Earth, who was furious. "ಬಾಯಿ ಮುಚ್ಚಿಕೊಂಡು ನಿನ್ನ ಕೆಲಸ ನೀನು ಮಾಡು," ಸಿಟ್ಟಿನಿಂದ ಭೂಮಿ ಉರಿದು ಹೇಳಿತು. ಕವಿಗಳು ಈ ರೀತಿ ಸರಳವಾಗಿ ಅನುವಾದ ಮಾಡಿದ್ದಾರೆ.

ಇಂಗ್ಲಿಷ್ ಮುಂತಾದ ಪಾಶ್ಚಾತ್ಯ ಭಾಷೆಗಳಲ್ಲಿ ಪುಟ್ಟ ಮಕ್ಕಳಿಗಾಗಿ ಈ ರೀತಿಯ ಕಥೆಗಳನ್ನು ಬಹಳ ಇವೆ. ಇಂಥ ಕಥೆಗಳನ್ನು ಸಂಗ್ರಹಿಸಿ, ಮಕ್ಕಳಿಗೆ ಅರ್ಥವಾಗುವ ರೀತಿಯಲ್ಲಿ ಅನುವಾದಿಸಿ, ಸುಂದರ ವಾದ ಚಿತ್ರಗಳೊಡನೆ, ಕಡಮೆಬೆಲೆಗೆ ದೊರೆಯುವಂತೆ ಮಾಡಿದರೆ ನಮ್ಮ ನಾಡಿನ ಮಕ್ಕಳು ಸುಲಭ ವಾಗಿ ವೈಜ್ಞಾನಿಕ ವಿಷಯಗಳನ್ನು ಅರಿತುಕೊಳ್ಳಬಲ್ಲರು. ಜೊತೆಗೆ ಭಾಷೆಯನ್ನು ಸಲೀಲವಾಗಿ ಓದಿ ಬರೆಯಲು ಅಭ್ಯಾಸಮಾಡಬಲ್ಲರು. ನಮ್ಮ ನಾಡಿನ ಮಕ್ಕಳ ವೈಜ್ಞಾನಿಕ ವಿದ್ಯಾಭ್ಯಾಸ ಈ ರೀತಿಯ ಕಥೆಗಳಿಂದ ಆರಂಭವಾಗಬೇಕು. ಹಾಗೆ ಆದರೆ ಮಕ್ಕಳ ವೈಜ್ಞಾನಿಕ ಜ್ಞಾನದ ಬೆಳವಣಿಗೆಗೆ ಸರಿಯಾದ ಗಟ್ಟಿಯಾದ ಅಡಿಪಾಯವನ್ನು ಹಾಕಿದ ಹಾಗೆ ಆಗುತ್ತದೆ.

ಪ್ರೊ. ಪರಮೇಶ್ವರ ಭಟ್ಟರು ಈ ಕಥೆಗಳನ್ನು ತಾವು ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗ ಅನುವಾದಿಸಿದ್ದುದಾದರೂ ಇವು ಆ ಮಟ್ಟಕ್ಕಿಂತ ಬಹಳ ಎತ್ತರಕ್ಕೆ ಏರಿವೆ. ಇವರು ಇಂಥ ಅನೇಕ ಕಥೆಗಳನ್ನು ಇಂಗ್ಲಿಷಿನಿಂದ ಅನುವಾದಿಸಿದ್ದರಾದರೂ ಅಚ್ಚಾಗಿರುವುದು ಈ ಮೇಲಿನ ಎರಡು ಕಥೆಗಳು ಮಾತ್ರ. ಬಾಲ್ಯದಲ್ಲಿಯೇ ಇಷ್ಟು ಚೆನ್ನಾಗಿ ಅನುವಾದ ಮಾಡುವ ಕಲೆ ಇವರಿಗೆ ಕರಗತವಾಗಿತ್ತೆಂದು ಇದರಿಂದ ತಿಳಿಯುತ್ತದೆ. ತಮ್ಮ ಅನುವಾದಕಲೆಯ ಹಿರಿಮೆಯನ್ನು 'ಕುಮಾರ ಸಂಭವ' ಹಿರಿಯ ಅನುವಾದಕೃತಿಗಳಲ್ಲಿ ಮಾತ್ರವಲ್ಲದೆ, ಈ ಸಣ್ಣ ಕಥೆಗಳಲ್ಲಿಯೂ ಇವರು ತೋರಿಸಿದ್ದಾರೆ. ಈ ರೀತಿ ಕಿರಿಯರಿಗೆ ತಾತಯ್ಯನಾಗಿ, ಮುಂದಿನವರಿಗೆ ದಾರಿದೀಪವಾಗಿ ಕನ್ನಡಮ್ಮನ ಈ ಸುಪುತ್ರರು ಚಿರಕಾಲ ಬಾಳಬೇಕು. ಬಾಳಿ ನಮ್ಮೆಲ್ಲರಿಗೂ ಮಾರ್ಗದರ್ಶಕರಾಗಬೇಕು.

# ೨೯. ಭರ್ತೃಹರಿಯ ಶತಕತ್ರಯ—ಕನ್ನಡ ಪದ್ಯಾನುವಾದ

ಎಂ. ಮಂಜುನಾಥ ಭಟ್ಟ

ಭರ್ತೃಹರಿಯ ಸುಭಾಷಿತತ್ರಿಶತೀ ಅಥವಾ ಶತಕತ್ರಯವು ಸಂಸ್ಕೃತ ವಾಙ್ಮಯದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿದೆ ಎಂಬುದಕ್ಕೆ ಅದರ ಜನಪ್ರಿಯತೆಯೇ ಸಾಕಷ್ಟು ಸಾಕ್ಷ್ಯ. ಕ್ರಿ.ಪೂ. ಮೊದಲನೆಯ ಶತಮಾನಕ್ಕೆ ಸೇರಿದವನೆನ್ನಲಾದ ಕವಿ ಭರ್ತೃಹರಿಯು ವೇದೋಪನಿಷತ್ತುಗಳ ಆದರಣೀಯ ಉದಾರ ತತ್ತ್ವಗಳನ್ನೇ ಬಹುಮಟ್ಟಿಗೆ ಪ್ರತಿಪಾದಿಸಿದವನಾಗಿದ್ದು ನಿಃಶ್ರೇಯಸಕ್ಕೆ, ಬ್ರಹ್ಮಸಾಕ್ಷಾತ್ಕಾರಕ್ಕೆ ವೈರಾಗ್ಯ ಪ್ರೇರಿತ ಅಂತರ್ಮುಖ ಆತ್ಮಾನುಸಂಧಾನವೇ ಏಕಮೇವ ಉತ್ತಮ ಸಾಧನ ಎಂಬುದಾಗಿ ಘೋಷಿಸಿರುವನಾದರೂ ಜನಸಾಮಾನ್ಯನ ಸಾಂಸಾರಿಕ ಜೀವನದ ದೈನಂದಿನದ ವ್ಯಾವಹಾರಿಕ ಸಮಸ್ಯೆಗಳನ್ನು ತುಚ್ಛವೆಂದು ಪರಿಗಣಿಸುವಷ್ಟು ಸಂಕುಚಿತ ಮನೋಧರ್ಮದ ಶುಷ್ಕವೇದಾಂತಿಯು ಅವನಲ್ಲ. ಸಂಸಾರದಲ್ಲಿನ ಸುಖದುಃಖ, ಸೋಲುಗೆಲವು, ಉನ್ನತಿ ಅವನತಿ, ಆಶೆ ನಿರಾಶೆ ಮೊದಲಾದ ವಿವಿಧ ಅವಸ್ಥೆಗಳಲ್ಲಿ ಹೊಸೆದು ಬೆಸೆದು ತೊಳಲಿ ಬಳಲಿ ಕುಗ್ಗಿ ಕೊನರಿದ ಬಾಳಿನ ಬಹುಮುಖ ಅನುಭವದ ಅಮೃತಧಾರೆಯಿಂದ ಹಸನಾಗಿ ಹಿಗ್ಗಿ ಬೆಳೆದ ಮತಿಲತೆಯ ಅತಿ ಮನೋಹರ ಕೃತಿಕುಸುಮವೇ ಅವನ ಈ ತ್ರಿಶತೀಕಾವ್ಯ. ಕವಿತೆಯಲ್ಲಿ ಬಿಂಬಿತವಾದ ಭಾವ ಅನುಭವಗಳ ಭಂಗಿಯ ಆಧಾರದ ಮೇಲೆ ಕವಿಯ ಜೀವನದ ವೈಖರಿಯನ್ನು ನಿರೂಪಿಸುವುದೇ ಆದರೆ ಭರ್ತೃಹರಿಯ ಬಾಳನ್ನು ಉನ್ನತ ವಂಶದಲ್ಲಿ ಉದ್ಗಮಿಸಿ ಸಂಪತ್ತಿನ ಮಡಿಲಲ್ಲಿ ಮಿಡಿದು ಸುಖದ ಹೊಂಬಿಸಿಲಲ್ಲಿ ಮಾಗಿ ಬಳಿಕ ಜಟಿಲ ಜೀವನದ ಜಂಜಾಟದಲ್ಲಿ ಸಿಲುಕಿ ಸೋತು ಬೇಸತ್ತು ಮುದುಡಿ ಧರೆಗುದುರಿದ ಆದರೆ ಆ ಬಳಿಕವೂ 'ವೈರಾಗ್ಯಮೇವಾಭಯಂ' ಮಂತ್ರದ ಸಿದ್ಧರಸಯೋಗದಿಂದ ಪುನರಪಿ ರಸಮಯವಾಗಿ ಚಿರನೂತನ ಮಾಧುರ್ಯದಿಂದ ತುಂಬಿ ಮೆರೆವ ಒಂದು ಅನಲ್ಪಸತ್ತ್ವಕಲ್ಪಮಹಾಫಲ ಎಂಬುದಾಗಿ ವರ್ಣಿಸಬಹುದು. ಕವಿಯು ಶಕಪುರುಷ ವಿಕ್ರಮಾದಿತ್ಯನ ಅಗ್ರಜನಾಗಿ ಜನಿಸಿ ಬಹುಕಾಲ ರಾಜವೈಭವದ ಸುಖಸಂತಸದಲ್ಲಿ ಬಾಳಿ ಬಳಿಕ ಅವನೇ ಎಂದಂತೆ 'ಯಾಂ ಚಿಂತಯಾಮಿ ಸತತಂ ಮಯಿ ಸಾ ವಿರಕ್ತಾ ಸಾಪ್ಯನ್ಯಮಿಚ್ಛತಿ ಜನಂ' . . . . ತನ್ನ ಪತ್ನಿಯ ಅನೈತಿಕತೆಯಿಂದಾಗಿ ಸಾಂಸಾರಿಕ ಜೀವನದಲ್ಲಿ ಜುಗುಪ್ಸೆಯನ್ನು ತಾಳಿ ರಾಜ್ಯವನ್ನು ತಮ್ಮನಿಗೆ ತೊರೆದು ಬೈರಾಗಿಯಾಗಿ ಯೋಗಸಾಧನೆಯಲ್ಲಿ ಪ್ರವೃತ್ತನಾದನೆಂದು ಪರಂಪರಾಪ್ರಾಪ್ತವಾದ ಒಂದು ಕಥೆಯೂ ಇದೆ.

ಮೇಲಿನ ಕಥನದಲ್ಲಿ ಸತ್ಯಾಂಶವೆಷ್ಟೆಂಬುದು ಇಂದಿಗೂ ಒಂದು ಪ್ರಶ್ನೆಯಾಗಿಯೇ ಉಳಿದಿದೆಯಾದರೂ ಕಾವ್ಯದಲ್ಲಿ ಕವಿಯ ಅನುಭವವು ಬಹುವಿಧವಾಗಿ ಚಿತ್ರಿತವಾಗಿದ್ದು ಅದರಲ್ಲಿ ಅವನ ಬಾಳಿನ ದ್ವಂದ್ವ ಘರ್ಷಣೆಗಳಿಂದಾದ ಘಾತ ಪ್ರತಿಘಾತಗಳ ವ್ರಣಕಿಣಗಳು ಸುಸ್ಪಷ್ಟವಾಗಿ ಮೂಡಿ ಕಾಣಿಸುತ್ತಿವೆ. ಒಂದೆಡೆ 'ಅಬ್ಜದೃಶೆಯರಿಗಿಂತ ರಮ್ಯವು ಜಗದೊಳಿನ್ನೊಂದಿಲ್ಲವು' 'ಧನ್ಯಗೀತರ ಸುದಿನವಪ್ಪುದು ಸತಿಯ ಸಂಗದೆ ದುರ್ದಿನ.' ಎಂದು ಮುಂತಾಗಿ ಶೃಂಗಾರದ ಸರಸರಾಗವನ್ನು ಆಲಾಪನೆಗೈದ ಉಲ್ಲಾಸಿ ರಸಿಕ ಕವಿಯು ಮತ್ತೆ 'ಆದೊಡಾ ಕಂದರ್ಪದರ್ಪವ ಮುರಿದ ಶೂರರು ವಿರಳರು' 'ಮಾರಚೋರನು ಅಲ್ಲಿ ತಾನವಿತಿರುವನು' ಎಂದೆನ್ನುತ್ತ ಸ್ಮರಮಹಾಅಪಸ್ಮಾರದಿಂದ ಕಂಗೆಟ್ಟು ದಿಗ್ಭ್ರಮೆಗೊಂಡವನಾಗಿ ಗತಿಕಾಣದೆ ತಲ್ಲಣಿಸುತ್ತಿದ್ದರೆ ಮುಂದೆ ಆತನೇ ಅಧ್ಯಾತ್ಮಿಕಾನುಭೂತಿಯ ವಿಭೂತಿಯಿಂದ ಸ್ಫೂರ್ತಿ ಪಡೆದು ಹೃದಯಸ್ಪರ್ಶಿ ದಾರ್ಶನಿಕತೆಯನ್ನು ಪ್ರತಿನಿಧಿಸುತ್ತಾ 'ಚಂದ್ರಚೂಡನ ಚರಣಚಿಂತನದಮೃತ ಪಾನದೊಳೆನ್ನಚಿತ್ತವು ಮತ್ತವು. 'ಜ್ಞಾನಕಜ್ಜಳವಿಟ್ಟ ಮಾತ್ರದೊಳೀ ಜಗತ್ರಯ ಬ್ರಹ್ಮಮಯ ವೆಂದೆಸಿಸಿತು' 'ಅಂಥ ವಿಮಲಬ್ರಹ್ಮ ನಿರ್ವೃತಿಸುಖವನೀವುದು ನಿನಗೆನೆ.' ಎಂದು ಹರ್ಷೋನ್ಮತ್ತನಾಗಿ ನರ್ತಿಸುತ್ತಾ ಕೊನೆಯಲ್ಲಿ 'ತಪವ ಹೊರತಿನ್ನಾವುದೂ ಲೇಸಲ್ಲ ಸುಜ್ಞನಿಗಿಳೆಯೊಳು' 'ಮತ್ತೆ ಆ ವೈರಾಗ್ಯವಿರುತಿರೆ ಆವುದಿಹದಿನ್ನೆಮಗರೆ' 'ವಿರತಿವನಿತಾಸಂಗಮುದಿತನು ಸುಖದೆ ನಿದ್ರಿಪನು' ಇಂತೆಂದು

ವಿರಕ್ತಿಪರತೆಯಲ್ಲಿ ಅನುರಕ್ತಿಯನ್ನು ತಳೆದು ತದನುಭಾವಸಮಂಜಸವಾಗಿ ನುಡಿದ ಭಾವುಕತೆಯಿಂದಾಗಿ. "ಆ..... ಪೀಠದ ತೆರೆಯ ಮರೆಯೊಳು ಸರಿವನು.'

ತಾರುಣ್ಯದಲ್ಲಿ ವಿಲಾಸಿಶೃಂಗಾರಿಯೂ ಮುಂದೆ ಮಹಾದಾರ್ಶನಿಕನೂ ಹಾಗೂ ಪರಮ ಭಕ್ತನೂ ಆಗಿ ಮೆರೆದ ಕವಿಯು ಕೇವಲ ಇಷ್ಟೇ ಅಲ್ಲದೆ ನೀತಿಶತಕದ ಪ್ರತಿಯೊಂದು ಶ್ಲೋಕದಲ್ಲಿಯೂ ವ್ಯಕ್ತವಾಗುವಂತೆ ಬಾಳಿನ ಬೇರೆ ಬೇರೆ ರಂಗಗಳಲ್ಲಿ ವ್ಯಾವಹಾರಿಕ ಪ್ರಜ್ಞೆಯುಳ್ಳ ಬಲು ಕುಶಲ ವ್ಯವಸಾಯಿಯೂ ಆಗಿರುವನು. ಕೆಲವೊಮ್ಮೆ ಕವಿಯ ಮನಸ್ಸು ಅಭಿಲಷಣೀಯ ಆದರ್ಶದ ಕಡೆಗೆ ಒಲಿಯುವಂತಿದ್ದರೆ ಮತ್ತೆ ಕೆಲವು ವೇಳೆ ಅನಿವಾರ್ಯ ಕಠೋರಸತ್ಯ ವಸ್ತುಸ್ಥಿತಿಯನ್ನು ಪರಿಚಿಂತಿಸುತ್ತದೆ. ವಿದ್ವಾಂಸರು ವಿತ್ತದ ಹಿಡಿತಕ್ಕೆ ಸಿಗರು. 'ತಡೆಯಲಾರಳು ತೃಣದವೋಲು ಲಘುವೆನಿಪ ಲಕ್ಷ್ಮಿಯುಮವರನು.' 'ರಾಜಪೂಜ್ಯವು ವಿದ್ಯೆಯೇ ಧನವಲ್ಲ' ಎಂದು ವಿದ್ಯೆಯನ್ನೂ 'ಸತತ ವಾಗ್ಭೂಷಣವೆ ಭೂಷಣವೆನಿಪುದು' ಎಂಬುದಾಗಿ ವಾಗ್ಮಿತೆಯನ್ನು 'ಇರಲು ಕಾವ್ಯವು ರಾಜ್ಯವಿನ್ನೇನಿಪ್ಪುದು' ಎಂದು ಮುಂತಾಗಿ ಸುಕವಿತೆಯನ್ನೂ ವಿತ್ತಕ್ಕಿಂತ ಉತ್ತಮವೆಂಬುದಾಗಿ ಕೊಂಡಾಡಿದ ಆದರ್ಶವಾದಿ ಕವಿಯೇ ನಿತ್ಯ ಜೀವನದಲ್ಲಿ 'ಕಾಣುವ ಸ್ತುತ್ಯವಲ್ಲದ ಆದರೂ ಸತ್ಯದ ಪರಿಸ್ಥಿತಿಯನ್ನು ಗಮನಿಸಿ ವಿಷಾದಿಸುತ್ತಾನೆ—'ಲೋಕದೊಳು ಹಣವಾರ ಬಳಿಯಿಹುದವನೆ ನಿಜ ಅಭಿಜಾತನು.... ಸರ್ವಗುಣವೂ ಜಗದೊಳಾಶ್ರಯಿಸಿರ್ಪುದಾ ಕಾಂಚನವನೆ' ಒಂದೆಡೆ ಕವಿಯು ವಿಧಿಯ ದುರ್ವಿಲಾಸದ ವಿಪರ್ಯಾಸದಿಂದ ವಿಹ್ವಲನಾಗಿ 'ವಿಧಿಯೆ ಓಹೋ ಬಹಳ ಬಲವತ್ತರವು.' ಎಂದು ಪ್ರಲಪಿಸುತ್ತಾ ಬಾಳಿನ ಗೋಳನ್ನು ಕಾಲನ ಕ್ರೀಡೆಯೆಂದು ಹಳಿದು—'ಜೀವರಾಶಿಯ ನಿಳೆಯ ಹಾಸೊಳು ಕಾಳಿಯೊಡವೆರೆದಾಟವಾಡುತ-ಲಿರುವನು.' ಇಂತೆಂದು ಮುಳಿದು ಮನನೊಂದು 'ನದಿಯ ಮರಳಿನ ದಡದಿ ಬೆಳೆದಿಹ ಮರದವಸ್ಥೆಯೆ ಆದುದು.' ಎನ್ನುತ್ತಾ ಎಲ್ಲೆಡೆಯಲ್ಲೂ ತಾಂಡವವಾಡುತ್ತಿರುವ ನಶ್ವರತೆಯನ್ನು ನೆನೆದು ಮಾರ್ಮಿಕವಾಗಿ ಮರುಗುವನಾದರೆ ಇನ್ನೊಂದೆಡೆ ಧೈರ್ಯ, ಸ್ಥೈರ್ಯ, ಪುರುಷಕಾರಗಳಿಂದ ದೈವವನ್ನು ಧಿಕ್ಕರಿಸುವವನಂತೆ ಹಾರ್ದಿವಾದ ಹಿಗ್ಗಿನಿಂದ ಗರ್ಜಿಸುವನು—'ಧೀರರೆಂದುಂ ಬಿಡರು ಯತ್ನವನವರು ಯಶವನು ಗಳಿಸದೆ ಈ ರೀತಿಯಲ್ಲಿ ಅನುಭವ ವೈವಿಧ್ಯದ ಪರಿಣಾಮವಾಗಿ ಕಾವ್ಯದಲ್ಲಿ ಮೂಡಿಬಂದ ವಿಚಾರ ವೈಶದ್ಯವು ಕವಿಯ ಯಶಸ್ಸನ್ನು ಉಜ್ಜ್ವಲಗೊಳಿಸಿದೆ.

ಈ ಶತಕತ್ರಯದ ಕನ್ನಡಪದ್ಯಾನುವಾದದ ಕರ್ತೃವು ಸುಪ್ರಸಿದ್ಧ ಸಾಹಿತಿಗಳೂ ವಾಗ್ಮಿಗಳೂ ಆದ ಶ್ರೀಮಾನ್ ಎಸ್. ವಿ. ಪಿ. ಅವರು. ಕವಿ, ವಿಮರ್ಶಕ ಹಾಗೂ ಅನುವಾದಕ ಈ ಮೂವರ ವ್ಯವಸಾಯವೂ ಒಂದೇ ತೆರನಾಗಿ ಕಠಿಣವಾದುದು. ಒಂದು ಭಾಷೆಯ ಕವಿತೆಯಲ್ಲಿನ ಕವಿಯ ಭಾವ ಅನುಭವಗಳ ಬೆಸಗು ಬೆಡಗುಗಳನ್ನು ಸಮಗ್ರವಾಗಿ ಊಹಿಸಿ, ಗ್ರಹಿಸಿ ಮತ್ತೆ ಅವುಗಳನ್ನು ತನ್ನ ಮನಃಪಟಲದಲ್ಲಿ ಆವಾಹಿಸಿ, ಅನುಗೊಳಿಸಿ ಆ ಬಳಿಕ ಇನ್ನೊಂದು ಭಾಷೆಯಲ್ಲಿ ತನ್ನದೇ ಆದ ಶೈಲಿಯಲ್ಲಿ ಸಾನುಕ್ರಮವಾಗಿ ಪ್ರವಹಿಸಿ ಛಂದೋಬದ್ಧವಾಗಿ ಅನುವಾದಿಸುವುದು ಸ್ವತಃ ಕಾವ್ಯವನ್ನು ರಚಿಸುವುದಕ್ಕಿಂತ ಸುಲಭತರವಾದ ಕೆಲಸವೇನೂ ಅಲ್ಲ. ಇದಕ್ಕಾಗಿ ಅನುವಾದಕನಲ್ಲಿ ಕವಿಯೊಂದಿಗೆ ಭಾವತಾದಾತ್ಮ್ಯವನ್ನು ತಾಳುವಂತಹ, ಅನುಭವ ತದೇಕತೆಯನ್ನು ಹೊಂದುವಂತಹ ಸಹೃದಯತೆ ಹಾಗೂ ಸುಹೃದಯತೆ ಇರುವುದು ಅವಶ್ಯಕ. ಕವಿಯದ್ದೇ ಆದ ವಿಧಾನ ಅವಧಾನಗಳನ್ನು ಅನುವಾದಕನೂ ಬಳಸಿಕೊಳ್ಳ-ಬೇಕಾದುದು ಅನಿವಾರ್ಯ. ಕವಿಯಷ್ಟೇ ಭಾವವೈಶಾಲ್ಯ ಹಾಗೂ ಅನುಭವ ವೈಪುಲ್ಯ ಅನುವಾದಕನಿಗೂ ಇರಬೇಕಾದುದು ಅಗತ್ಯ. ಶ್ರೀಯುತ ಎಸ್. ವಿ. ಪಿ. ಅವರು ಸಂಸ್ಕೃತ ಕನ್ನಡ ಎರಡೂ ಭಾಷೆಗಳಲ್ಲಿಯೂ ಘನವಿದ್ವಾಂಸರೂ, ಸ್ವತಃ ಕವಿಗಳೂ ಆಗಿದ್ದು ಈ ಎಲ್ಲಾ ಅರ್ಹತೆಗಳನ್ನು ಯಥೇಷ್ಟವಾಗಿ ಗಳಿಸಿದವರಾಗಿದ್ದಾರೆ. ಆದ್ದರಿಂದಲೆ ಈ ಪದ್ಯಾನುವಾದವು ಬಹಳ ಸೊಗಸಾಗಿದ್ದು ಮೂಲದಷ್ಟೇ ಕಲಾ ಪ್ರೌಢಿಮೆಯಿಂದ ಶೋಭಿಸುತ್ತಿದೆ. ಅವರದು ತ್ವರಿತ ಲೇಖನಿ, ಸುಂತಮತಿ. ಹಿತವೂ ಹಾಗೂ ಯುಕ್ತಿಭರಿತವೂ ಆದ ಉಕ್ತಿ. ಕವಿತೆ ಇರಲಿ, ವಿಮರ್ಶೆ ಇರಲಿ, ಅನುವಾದವಿರಲಿ ಅಥವಾ ಇನ್ನಾವುದೇ ಇರಲಿ ಅವರ ಕೃತಿ ನಿಜಕ್ಕೂ ವಿಮರ್ಶಾತೀತ. ಪ್ರಸ್ತುತ ಪದ್ಯಾನುವಾದವು ಬಹುಮಟ್ಟಿಗೆ ಪ್ರತಿಪದ ಅನುವಾದದಂತಿದ್ದರೂ ಶೈಲಿಯು ಸಹಜವೂ, ಸರಳವೂ. ನಿರರ್ಗಳವೂ ಆಗಿರುವುದು ಈ

ಅನುಕೃತಿಯು ಪ್ರಕೃತಿ ವೈಶಿಷ್ಟ್ಯ ಎನ್ನುವುದಕ್ಕೆ ಮೇಲೆ ಉದ್ಧರಿಸಿದ ಪಂಕ್ತಿಗಳೇ ಪರ್ಯಾಪ್ತವಾದ ಪ್ರಮಾಣ.

ಶ್ರೀಯುತರು ಕಾಳಿದಾಸ, ಜಯದೇವ, ಅಮರುಕ ಇವರೆಲ್ಲರ ಕೃತಿಗಳನ್ನೂ ಲಲಿತವಹ ಕನ್ನಡದ ನುಡಿಯೊಳು ಅನುವಾದಿಸಿ 'ಸಂತರಪ್ಪರು ತಾವೆ ಪರಹಿತನಿರತರು' ಎಂಬಂತೆ ಕನ್ನಡ ಜನತೆಗೆ ನಿಸ್ಸೀಮ ನಿಃಸ್ವಾರ್ಥ ಸೇವೆಗೈದು 'ತಮ್ಮ ಮನದೊಳೆ ಹಿಗ್ಗಿ ನಲಿಯುವ ಸಜ್ಜನರ್ಕಳದೆನಿಬರಿನ್ನಿಹರು.' ಎಂದೆನಿಸಿಕೊಂಡಿದ್ದಾರೆ.

**ಅನಂತಕೃಷ್ಣ ಹೆಬ್ಬಾರ್, ಮಣಿಯ**

ಮಹಾಮಂಗಳಾರತಿಯಾದ ಅನಂತರ "ಪುನಃ ಪೂಜಾಂ ಕರಿಷ್ಯೇ" ಎಂದು ಪುರೋಹಿತರು ಹೇಳುವ ಕ್ರಮ. ಈ ಪೂಜೆಗೆ ಮೊದಲಿನದರಷ್ಟು ಪ್ರಾಮುಖ್ಯವಿಲ್ಲ. ಪ್ರಥಮ ಪೂಜೆಗೆ ಭಕ್ಷ್ಯ ಭೋಜ್ಯ-ಗಳೆಲ್ಲವನ್ನೂ ತಂದಿತ್ತರೆ ಈ ಪುನಃಪೂಜೆಗೆ "ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ" ಎಂದು ಷೋಡಶೋಪಚಾರ ಪೂಜೆಗೆ ಬದಲಾಗಿ ತುಲಸೀದಲವನ್ನು ಅರ್ಘ್ಯವಿತ್ತೇ ಪೂರೈಸುವುದು ವಾಡಿಕೆ. ಅಮರುಕ ಕವಿಯ ಶೃಂಗಾರ ಶತಮೂರ್ತಿಗಳ ಆರಾಧನೆಯನ್ನು ತಮ್ಮ ವಿಶಾಲ ವಿದ್ವತ್ತಿನಿಂದ ಶ್ರೀಯುತ ಪರಮೇಶ್ವರಭಟ್ಟರು ಭರ್ಜರಿಯಾಗಿ ಒಪ್ಪ ಮಾಡಿದ್ದಾರೆ. ಅವರ ಈ ಪ್ರೇಮಾರಾಧನೆಯ ಪುನಃಪೂಜೆಯನ್ನು ಮಾತ್ರ ಮಾಡುವುದು ನನ್ನ ಕೆಲಸ. ನನ್ನ ಸೀಮಿತಜ್ಞಾನದ ತುಲಸೀದಲವೇ ಸಕಲ ರಾಜೋಪಚಾರವೂ ಹೌದು.

ಶೃಂಗಾರವು ವಿಶ್ವಮೋಹಕವಾದ ರಸ. ಸಂಸ್ಕೃತ ಸಾಹಿತ್ಯದ ರಸಲೋಕದಲ್ಲಿರುವ ಹೆಚ್ಚಿನವುಗಳು ಶೃಂಗಾರ ಮೂರ್ತಿಗಳೇ ಆಗಿವೆ. ಇವರ ಹೆಚ್ಚಿನ ಶ್ರೇಯಸ್ಸೆಲ್ಲವೂ ಅಮರುಕನಿಗೇ ಸಲ್ಲಬೇಕೆಂದರೂ ತಪ್ಪಾಗದು. 'ಅಮರುಕ ಕವೇರೇಕಃ ಶ್ಲೋಕಃ ಪ್ರಬಂಧಶತಾಯತೇ' ಎನ್ನುವ ಮಾತು ಇದನ್ನೇ ಸಾರುತ್ತದೆ. ಅಮರುವನ್ನು ಕನ್ನಡಿಸುವ ಎದೆಗಾರಿಕೆ ಕಾಳಿದಾಸನನ್ನು ಅನುವಾದ ಮಾಡಿದವರಿಗೆ ಮಾತ್ರ ಬಂದೀತು. ಒಂದು ದೃಷ್ಟಿಯಿಂದ ಪರಮೇಶ್ವರಭಟ್ಟರು ಅಭಿನವ ಕಾಳಿದಾಸರೇ ಸರಿ. ನವುರು ನವುರಾದ ಭಾವಗಳಿಗೆ ಪರಮೇಶ್ವರಭಟ್ಟರದು ಸಿದ್ಧಹಸ್ತ. ಶೃಂಗಾರಕ್ಕೆ ಸಂಬಂಧಪಟ್ಟವುಗಳೆಂದರೆ ಭಟ್ಟರಿಗೂ ಪ್ರಿಯವೇ. ಭಟ್ಟರಿಗೇ ಎಂದೇನು?

ಅಂತರಂಗಸಂಬಂಧಿಯಾದ ಭಾವಗಳನ್ನು ಭಾಷಾಮಾಧ್ಯಮಕ್ಕೆ ಇಳಿಸುವುದೇ ಕಷ್ಟವಾಗಿರುವಾಗ ಒಂದು ಭಾಷೆಯ ಸಂಪತ್ತನ್ನು ಇನ್ನೊಂದಕ್ಕೆ ತರುವುದೆಂದರೆ ಅದು ಆಗದ ಮಾತು. ಆದರೆ ಕಂಡ ಸಿದ್ಧಿಯ ಪ್ರಮಾಣದ ಮೇಲೆ ಅವರ ಯಶಸ್ಸು ನಿಲ್ಲುತ್ತದೆ. ಅಮರುಕವಿಯ ಅನುವಾದದಲ್ಲಿ ಭಟ್ಟರು ಕಂಡ ಸಿದ್ಧಿಯೇನು ಎದುರಿಸಿದ ಅಡಚಣೆಗಳೇನು ಎಂಬುದನ್ನು ನೋಡೋಣ. ಅಮರುಶತಕದ ಒಂದು ಪದ್ಯ.

ಕ್ವ ಪ್ರಸ್ಥಿತಾಸಿ ಕರಭೋರು ಘನೇ ನಿಶೀಥೇ
ಪ್ರಾಣಾಧಿಕೋ ವಸತಿ ಯತ್ರ ಜನಃ ಪ್ರಿಯೋ ಮೇ
ಏಕಾಕಿನೀ ಬತ ಕಥಂ ನ ಬಿಭೇಷಿ ಬಾಲೇ
ನನ್ವಸ್ತಿ ಪುಂಖಿತಶರೋ ಮದನಃ ಸಹಾಯಃ

ಈ ಮುಕ್ತಕದ ಅನುವಾದ ಭಟ್ಟರಲ್ಲಿ ಕನ್ನಡಕ್ಕೆ ಸಹಜವಾದ ಪ್ರಾಸದಿಂದ ಒಡಗೂಡಿಕೊಂಡು ತಾಯಿಮನೆಯಿಂದ ಗಂಡನ ಮನೆಗೆ ಬರುವ ಮುತ್ತೈದೆಯಂತೆ ಬಂದಿದೆ.

"ಹೊರಟಿರುವೆ ಕರಭೋರು ಘನನಿಶಿಯೊಳೆತ್ತ?"
"ನನ್ನ ಪ್ರಾಣಾಧಿಕನು ನಲ್ಲನಿರುವತ್ತ"
"ಬೆದರೆಯೆಲೆ ಬಾಲೆಯೆಂತೇಕಾಕಿ ನೀನು?"
"ಗರಿಯಂಬಿನಾ ಮದನ ಜೊತೆಗಿಲ್ಲವೇನು !"

ಪ್ರೇಮಗೀತೆಗಳ ಅನುವಾದದಲ್ಲಿ ಸಿದ್ಧಹಸ್ತರಾದ ತೀ. ನಂ. ಶ್ರೀ. ಯವರ ಅನುವಾದವನ್ನೂ ನೋಡ ಬಹುದು.

"ಹಬ್ಬಿದಿರುಳೊಳಗೆಲ್ಲಿ ಹೊರಟಿರುವೆ ಚೆಲುವೆ?"
"ನನ್ನ ಪ್ರಾಣಕೆ ಮಿಗಿಲಿನಿನಿಯನಿರುವೆಡೆಗೆ"

> "ಏಕಾಕಿ ನೀನಿಂತು ಹೆದರೆಯೆಲೆ ತರಳೆ?"
> "ಸೋಗೆಯಂಬಿನ ಮದನನಿಲ್ಲವೇ ಜೊತೆಗೆ?"

ಭಟ್ಟರ ಪದ್ಯದಲ್ಲಿರುವ ನಾದ ಮತ್ತು ಪ್ರಾಸಗಳ ಸೊಗಸು ಇಲ್ಲಿಲ್ಲ. ಕಾಮದಿಂದ ಪೀಡಿತರಾದ ಜನರಿಗೆ ಭಯಲಜ್ಜೆ ಇತ್ಯಾದಿಗಳು ಯಾವುವೂ ಹೇಗೆ ಅಲಕ್ಷ್ಯವೆಂಬುದು ಬಹಳ ಸ್ವಾರಸ್ಯವಾಗಿ ಸಂಭಾಷಣೆಯ ರೂಪದಲ್ಲಿ ಬಂದಿದೆ.

ಶೃಂಗಾರ ಪ್ರಭೇದಗಳು ಅಪಾರ. ನಲ್ಲನಲ್ಲೆಯರಿದ್ದಷ್ಟೂ ರೀತಿ. ಒಬ್ಬೊಬ್ಬರದು ಒಂದೊಂದು ತೆರ. ಹೆಣ್ಣಿನ ಕಣ್ಣನ್ನು ವರ್ಣಿಸದ ಕವಿಯಿಲ್ಲ. "ಶೃಂಗಾರಮೆ ರಸಂ" ಎನ್ನುವ ವರೆಗೂ ನಮ್ಮ ಸಿದ್ಧಾಂತಗಳು ಮುಂದುವರಿದಿವೆ. ಆದರೆ ಅಮರುಕನ ರೀತಿಯೇ ಬೇರೆ. ಅದನ್ನು ನಿಷ್ಠೆಯಿಂದ ಆರಾಧಿಸಿದ ಪ್ರೇಮಾರಾಧನೆಯ ಸೊಗಸೂ ಬೆರೆಶಾಗ ಕೇಳುವುದೇನು. ವರ್ಣಿಸುವುದಕ್ಕಿಂತ ಕೆಳಗಿನ ಪದ್ಯ ನೋಡುವುದೇ ಮೇಲು.

> "ದೂರದಿಂದೌತ್ಸುಕ್ಯಗೊಳ್ಳುತೆ ಬರಲು ತಿರುಗುತೆ ಮಾತನಾಡಿಸಲರಳುತೆ
> ತಬ್ಬಿಕೊಳ್ಳಲು ಕೆಂಪಗಾಗುತೆ ಬಟ್ಟೆಹಿಡಿಯಲು ಮುನಿದು ಹುಬ್ಬನು ಬಿಗಿಯುತೆ
> ಕಾಲಿಗಿರದೆರಗಿರುವ ಪದದೊಳು ಕಣ್ಣನೀರನು ನೋಟದೊಳು ಸಲೆ ತುಂಬುತೆ
> ಕಣ್ಗಳೆಸೆದವು ತಪ್ಪನೆಸಗಿದ ನಲ್ಲನೊಳು ಜಗದಗಲ ಚತುರತೆಯಾನುತೆ."

ಪ್ರಣಯದಾಟದಲ್ಲಿ ಗಂಡು ಸೋಲುವುದು ಸ್ವಾಭಾವಿಕ. ಮತ್ತು ನಲ್ಲೆಯ ಚರಣಚುಂಬನವು ಅತ್ಯಂತ ಸುಖದಾಯಕವೆಂದು ಕಾಮಶಾಸ್ತ್ರವೇ ಹೇಳುತ್ತಿದೆ. ಆದರೆ ನಾಲ್ಕು ಜನರೆದುರು ಹೇಗೆ ಈ ಆಟ ಸಾಗುತ್ತದೆ? ಇಲ್ಲಿಯೇ ಸ್ವಾರಸ್ಯವಿರುವುದು. ಕೇವಲ ಕಣ್ಣಿನ ಕುಣಿತದಿಂದಲೇ ಇಷ್ಟೆಲ್ಲವೂ ನಡೆಯುವುದೆಂದರೆ ಅಚ್ಚರಿಯಾದೀತು. ಆದರೆ ಪದ್ಯ ನೋಡಿ.

> "ಬಳ್ಳಿಹುಬ್ಬನು ಕುಣಿಸಿ ತೋರಲು ಸವತಿ ದಿಕ್ಕನು ತಲೆಯ ಕೊಡಹಿದನು
> ಅದರ ವೃತ್ತಾಂತವನು ನೋಡಲು ನಿಂತನಿನಿಯನು ಮಾಡಿ ನಮನವನು
> ಕೆನ್ನೆಕೋಪಕೆ ಕೆಂಪಗಾಗಲು ಕಾಲೊಳಿಟ್ಟನು ಕಣ್ಣನೋಟವನು
> ಬಿಡರು ಗುರುಸನ್ನಿಧಿಯೊಳಾದರು ಅವರು ಕಾಲೋಚಿತದ ಕರ್ಮವನು."

ಪ್ರೇಮಾರಾಧನೆಗೆ ಕಾಲವು ದೊಡ್ಡ ಶತ್ರುವಂತೆ. ಆದುದರಿಂದಲೇ ಕಾಲಭೇದವಿಲ್ಲದೆ ಗುರುಸನ್ನಿಧಿಯಲ್ಲಿಯೂ ನಡೆಯುವ ಕ್ರಿಯೆಗಳು ನಡೆದೇ ತೀರುವುವು.

ರತಿಭಾವದ ಬೆಳವಣಿಗೆಗೆ ಕಣ್ಣು ಮೊದಲ ಕಾರಣವಾದರೆ ಮಾತು ಎರಡನೆಯದು. ಸಂಭಾಷಣೆಯು ಪ್ರೇಮಿಗಳಿಗೆ ಅತ್ಯಂತ ಸಂತೋಷದ ವಿಷಯ. ಪ್ರಶ್ನೆ, ಚಾಟೂಕ್ತಿ, ಹಾಸ್ಯ ಇವೆಲ್ಲ ಅದಕ್ಕೆ ಉದ್ದೀಪನ ಭಾವಗಳೇ ಆಗುತ್ತವೆ. ಪ್ರಶ್ನೋತ್ತರಗಳಿಂದ ಕೂಡಿದ ಇಂತಹ ಒಂದು ಸುಂದರವಾದ ಪದ್ಯವಿದೆ.

> "ಬಾಲೇ ನಾಥ ವಿಮುಂಚ ಮಾನಿನಿ ರುಷಂ ರೋಷಾನ್ಮಯಾ ಕಿಂ ಕೃತಂ
> ಖೇದೋಸ್ಮಾಸು ನಮೇಪರಾಧ್ಯತಿ ಭವಾನ್ಸರ್ವೇಪರಾಧಾ ಮಯಿ
> ತತ್ಕಿಂ ರೋದಿಷಿ ಗದ್ಗದೇನ ವಚಸಾ ಕಸ್ಯಾಗ್ರತೋ ರುದ್ಯತೇ
> ನನ್ವೇ ತನ್ಮಮ ಕಾ ತವಾಸ್ಮಿದಯಿತಾ ನಾಸ್ಮೀತ್ಯತೋ ರುದ್ಯತೇ."

ಇದರ ಅನುವಾದವೂ ಅಷ್ಟೇ ಸೊಗಸಾಗಿದೆ.

> "ಬಾಲೆ ! ನಾಥನೆ !" "ಕೋಪವನು ಮಾನಿನಿಯೆ ! ಬಿಡು" "ನಾ ರೋಷದಿಂದೇಗೈದುದು?"
> "ಖೇದವೆಸಗಿದೆ ನಮಗೆ" "ನಿನ್ನಿಂದಿಲ್ಲ ತಪ್ಪೆನಗೆಲ್ಲ ತಪ್ಪೂ ನನ್ನದು"
> "ಆದರೇತಕೆ ಮತ್ತೆ ಗದ್ಗದದನಿಯೊಳಳುತಿಹೆ?" "ಆರ ಮುಂದಿಂದತ್ತುದು?"
> "ಅಲ್ಲವೇನೆನ್ನಿದಿರು?" "ನಿನಗಾನಾರು" "ಕಾದಲೆ" "ಅಲ್ಲವೆಂದೇ ಅತ್ತುದು."

ಮೂಲದ ಸೊಗಸು ಅನುವಾದದಲ್ಲಿಲ್ಲ. ಬಂಧುರವೂ ಹಿತವಲ್ಲ. ಆದರೆ ಇಲ್ಲಿ ಅಂತ್ಯಪ್ರಾಸಕ್ಕಾಗಿ ವೃಥಾ ಪ್ರಯತ್ನ ಮಾಡಿದಂತೆ ಕಾಣುತ್ತದೆ. ಆದರೆ ತೀ. ನಂ. ಶ್ರೀಯವರ ಅನುವಾದ ಅತ್ಯಂತ ಸಮರ್ಪಕವಾಗಿದೆ.

"ಬಾಲೆ!" "ಏನದು ನಾಥ!" "ಮುನಿಸ ತೊರೆ ಮಾನಿನಿ!" "ಮುನಿದು ಮಾಡಿರುವುದೇನು?"
"ಏಕೆ ಹೀಗೆ ನಮ್ಮಲ್ಲಿ" "ನಿಮ್ಮ ತಪ್ಪೇನಿಲ್ಲ" "ತಪ್ಪೆಲ್ಲವೂ ನನ್ನದು"
"ಅಂತಿರಲು ನುಡಿವಾಗ ಬಿಕ್ಕಳಿಸುತೇಕಳುವೆ?" "ಆರ ಮುಂದಳುತಿರುವುದು?"
"ನನ್ನ ಮುಂದಿದೊ" "ನಿನಗೆ ನಾನಾರು" "ನಲ್ಲೆ" "ನಾನಲ್ಲವೆಂದಳುತಿರುವುದು."

ಸರಳವಾಗಿ ಅತ್ಯಂತ ಸೊಗಸಾದ ಅನುವಾದವು ಇದಾಗಿದೆ. ಆದರೂ ಮೂಲಪದ್ಯದ ಓಘ ಇವೆರಡರಲ್ಲಿಯೂ ಇಲ್ಲ. ಅತ್ಯಂತ ಸರಳವಾದ ಶಬ್ದಗಳನ್ನು ಉಪಯೋಗಿಸಿ, ಕರ್ಣಮಧುರವಾದ ಅನುವಾದಗಳು ಭಟ್ಟರಲ್ಲಿ ಅತ್ಯಂತ ಸಹಜವೆಂಬಂತೆ ಬರುತ್ತವೆ. ಉದಾಹರಣೆಗಾಗಿ.

"ಮತ್ತಿದೇತಕಿಂತು ಮುಗ್ಧನಯನೆ ಹಾಸಿಂದಲೆಳೆದು ಕಟ್ಟಿ ಸೀರೆಸೆರಗನು
ಮಲಗಿರುವಳು" ಎಂದು ಅವಳ ಪರಿಜನವನು ಸ್ವೇಚ್ಛೆಯಾಗಿ ಕೇಳುತಿರಲು ನಲ್ಲನು
"ತಾಯಿ! ನನ್ನ ನಿದ್ರೆಯಿದನುಮಿವನು ಕೆಡಿಸುತಿರುವನೆಂದು" ಎಂದು ಕೋಪಗೊಂಡಳು
ತಿರುಗಿ ಮಗ್ಗುಲಾಗುವೊಂದು ನೆವದೊಳವಳು ಹಾಸುಗೆಯೊಳು ಅವನಿಗೆಡೆಯನಿತ್ತಳು

ತರತರದ ನಲ್ಲನಲ್ಲೆಯರ ಚಿತ್ರಶಾಲೆಯೇ ಅಮರುಶತಕ ಅವನ ಸೂಕ್ಷ್ಮಾತಿಸೂಕ್ಷ್ಮಗ್ರಹಣ ಶಕ್ತಿಗೆ ಒಳಗಾಗದ ಚೇಷ್ಟೆಗಳೇ ಇಲ್ಲ. ಎಂತೆಂತಹ ಆಟಗಳು! ಎಂತೆಂತಹ ಕೋಪದ ನಟನೆಗಳು! ಎಂತೆಂತಹ ದ್ವಂದ್ವಾರ್ಥಯುಕ್ತ ಮಾತುಗಳು! ಇವೆಲ್ಲ ಅಮರುವಿನ ಬತ್ತಳಿಕೆಯಲ್ಲಿ ಸದಾಸಿದ್ಧವಾಗಿಯೇ ಇರುತ್ತವೆ. ತನ್ನನ್ನು ಪ್ರಯೋಗಿಸು ತನ್ನನ್ನು ಪ್ರಯೋಗಿಸು ಎಂಬ ಹಾಗೆ ಅವುಗಳೇ ಉತ್ಸುಕವಾಗಿರುವಂತೆ ಕಾಣುತ್ತದೆ. ಕನ್ನಡದಲ್ಲಿ ಬರುವಾಗ ಅವುಗಳು ಭಟ್ಟರ ಕೈಯಲ್ಲಿ ಹೇಗೆ ಬಳುಕುತ್ತವೆ? ಹೇಗೆ ಪಲುಕುತ್ತವೆ? ಎಂಬುದಕ್ಕೆ ಒಂದು ಉದಾಹರಣೆಯನ್ನು ನೋಡುತ್ತೇವೆ.

"ಭರದಲಿ ಬಿಗಿದೆಳೆದಪ್ಪಿರಲಮುಕಿದ ಮೊಲೆಗಳಿ–
ನೊಗೆದಿಹ ನವಿರಿನ ಮೈಯವಳು
ಗಾಢಸ್ನೇಹದ ರಸದತಿರೇಕದೊಳುದುರಿದ
ಚೆಂದದ ಪೊರೆವಾರುಡೆಯವಳು
ಬಿಡುಬಿಡು ಮಾನದ! ನನ್ನೊಳಲಂಪಿದು ಬೇಡವೊ
ಸಾಕೆಂದಗ್ಗಿದ ದನಿಯೊಳು ನುಡಿವವಳು
ನಿದ್ದೆಯೊಳಿದ್ದಳೊ ಸಾವೈದಿದಳೋ
ಮನದೊಳಗದ್ದಳೊ ಕರಗಿದಳೊ"

ಪರಮೇಶ್ವರಭಟ್ಟರ ನೈಜವಾದ ರಸಿಕಪ್ರವೃತ್ತಿಗೂ ಅಮರುವಿನ ವಿಶ್ವಖ್ಯಾತವಾದ ಶೃಂಗಾರ ಶತಕಕ್ಕೂ ಹೇಳಿ ಮಾಡಿಸಿದ ನಂಟು ಆದುದರಿಂದಲೇ ಭಟ್ಟರೂ ಅಷ್ಟು ಸಲೀಸಾಗಿ ಅನುವಾದ ಮಾಡಿದರು; ಅತ್ಯಂತ ಸಹಜವಾಗಿ ಮಾಡಿದರು. ಬೇರೊಬ್ಬರಿಗೆ ಇಷ್ಟು ಸಿದ್ಧಿ ಅಸಾಧ್ಯ ಎಂಬ ಹಾಗೆ ಮಾಡಿದರು. ಕನ್ನಡದ ರಸಿಕಲೋಕ ಅವರ ಅನುವಾದವನ್ನು ಓದಿದೆ, ಮೆಚ್ಚಿದೆ; ನಲಿದಿದೆ. ಕಲಾರಾಧನೆಗೂ ಪ್ರೇಮಾರಾಧನೆಗೂ ಕಾಲ ದೊಡ್ಡ ಶತ್ರುವಂತೆ. ಆದುದರಿಂದ ಭಟ್ಟರ ಜೀವಿತಕಾಲ ನೂರಕ್ಕೂ ಮಿಕ್ಕಲಿ; ಅನುವಾದಗಳು ಸಹಸ್ರವಾಗಲಿ ಓದಿ ನಲಿಯುವ ನಲಿದು ಬಲಿಯುವ ಲಕ್ಷೋಪಲಕ್ಷ ಜನತೆ ಸದಾ ಸಿದ್ಧವಾಗಿಯೇ ಇದೆ.

# ೩೧. ದೇಸೀ ಛಂದಸ್ಸು ಮತ್ತು ಶ್ರೀ ಭಟ್ಟರು

ಸಂ. ಶಿವಾಜಿ ಜೋಯಿಸ

ಕಾವ್ಯವೊಂದು ಸ್ಫುರಣೆ, ಭಾವದ ಸ್ಫುರಣೆ. ಅತ್ಯಂತ ಕಿರಿದರಲ್ಲಿ ಅದು ಬಿಂಬಿಸಬಹುದು, ಸ್ವಲ್ಪ ಉಬ್ಬ ಲಂಬಿಸಬಹುದು. ಲೋಕವೃತ್ತಿಯಲ್ಲಿ ಪ್ರವೃತ್ತರಾದ ಜನ, ಭಾವುಕರಾಗಿದ್ದರೆ, ಆನಂದ ಆಮೋದಗಳಲ್ಲಿ, ವಿನೋದ ವಿಹಾರಗಳಲ್ಲಿ, ವಿವಾದ ವಿಷಾದಗಳಲ್ಲಿ ತಟ್ಟನೆ ಬಾಯ್ದೆರೆಯಬಹುದು. ಆಗ ಹೊರಹೊಮ್ಮುವ ನುಡಿಯ ಕಿಡಿಗಳು ವಿಚಾರಲಹರಿಯೋ, ವಿನೋದಲಹರಿಯೋ ವಿಷಾದ ಲಹರಿಯೋ ಆಗಬಹುದು. ಅದು ಸುಭಾಷಿತ ಸುವಿಚಾರವಾಗಿರಲಿ, ಸುಹಸಿತ ಸೂಳುನುಡಿಗಳಾಗಲಿ, ಸುಲಲಿತವಾಗಿ ಕಾವ್ಯಸೌಂದರ್ಯವನ್ನುಳ್ಳವಾಗಿರುತ್ತದೆ; ಸುಸಂಗತ ಛಂದೋಬಂಧದೊಡಗೂಡಿ ಬರುತ್ತದೆ. ಅವಿದ್ಯಾವಂತ ಹಳ್ಳಿಯ ಜನರಲ್ಲೂ ಇಂಥ ನುಡಿಗಳಿಗೆ ಅಭಾವವಿಲ್ಲ. ಮಾತ್ರವಲ್ಲ, ಅವು ಹೃದ್ಯವಾಗಿರುವುದು ಅವರ ಭಾವಶ್ರೀಮಂತಿಕೆಯ ಪ್ರತೀಕ. ಜನಪದ ಸಾಹಿತ್ಯ ಕುರಿತೋದದೆಯೂ ಕಾವ್ಯಪ್ರಯೋಗ ಪರಿಗಣಿತಮತಿಗಳ ಸೃಷ್ಟಿ. ಜೀವನ ಸೌಂದರ್ಯವನ್ನು ಅದರ ವಿವಿಧಮುಖಗಳಲ್ಲಿ ಚಿತ್ರಿಸುವ ಜನಪದ ಸಾಹಿತ್ಯ ಕಥೆಯಾಗಿ, ಕವನವಾಗಿ, ಕಥನಕವನವಾಗಿ ಮುಕ್ತಕರೂಪವಾಗಿ ಹೀಗೆ ಹಲವು ರೀತಿಗಳಲ್ಲಿ ಅಭಿವ್ಯಕ್ತವಾಗಿದೆ. ಜಾನಪದ ಕವಿ ಕಟ್ಟಿದ ಹಾಡು, ಮುಟ್ಟಿದ ಕಿವಿ ತಟ್ಟಿದ ಮನಗಳಲ್ಲಿ ಉಳಕೊಂಡು ಇಂದಿನವರೆಗೆ ಉಳಿದಿದೆ. ಇದರಲ್ಲಿ ಒಂದು ಭಾವವನ್ನೊ, ಅನುಭವವನ್ನೊ, ವಿಚಾರವನ್ನೊ, ಹಾಸ್ಯವನ್ನೊ, ಸರಸಸನ್ನಿವೇಶವನ್ನೊ ಅತಿ ಚಿಕ್ಕದಾಗಿ ಹೇಳಿದ ಮುಕ್ತಕಗಳ ಸಂಖ್ಯೆಯೇ ಹೆಚ್ಚು. ಜಾನಪದ ಮುಕ್ತಕಗಳಿಗೆ ದೇಶೀಯ ಛಂದಸ್ಸುಗಳಾದ ಏಳೆ, ತ್ರಿಪದಿ, ಸಾಂಗತ್ಯಗಳೇ (ಕನ್ನಡದಲ್ಲಿ) ಮಾಧ್ಯಮವಾದುವು. ಅಂಶಗಣವಿವಕ್ಷೆಯ ಈ ಛಂದೋರೂಪಗಳ ಗೇಯತೆ, ಅತಿಸಂಕ್ಷಿಪ್ತತೆ, ದೇಸಿಯ ನುಡಿಗಟ್ಟು, ಭಾಷೆಯ ಮಾರ್ದವ, ಮಧುರತೆ, ಗ್ರಾಮೀಣ ಜೀವನದ ಅನನ್ಯ ಸೌಂದರ್ಯ ಇವುಗಳಿಂದ ಈ ಸಾಹಿತ್ಯ ಪ್ರೌಢ ಸಾಹಿತ್ಯದೊಂದಿಗೆ ತನ್ನ ವಿಶಿಷ್ಟತೆಯನ್ನು ಮೆರೆದಿದೆ.

ಈ ದೇಶೀಯ ಛಂದೋರೂಪಗಳು ಕೆಲವೊಮ್ಮೆ ವೈವಿಧ್ಯಕ್ಕಾಗಿ, ಚಂಪೂಸಾಹಿತ ದಲ್ಲಿ ನುಸುಳಿಕೊಂಡಿದೆ. ತ್ರಿಪದಿ, ಮಾರ್ಗಸಾಹಿತ್ಯದಲ್ಲಿ ಅತಿ ವಿರಳವಾಗಿ ಪ್ರಯೋಗವಾಗಿ, ವಚನಕಾರರ ಕಾಲದಲ್ಲಿ ಸ್ವಲ್ಪ ವ್ಯಾಪಕವಾಗಿ, ಸರ್ವಜ್ಞನಲ್ಲಿ ವಿಶಿಷ್ಟಸ್ಥಾನವನ್ನು ಪಡೆಯಿತು. ಸಾಂಗತ್ಯ ಶಿಶುಮಾಯಣನ ಕೃತಿಯಲ್ಲಿ ಮೊತ್ತಮೊದಲಿಗೆ ಗ್ರಂಥಸ್ಥವಾಗಿ ಕಂಡುಬಂದು ಅನಂತರ ಕೆಲವು ಶ್ರೇಷ್ಠ ಕವಿಗಳ ಕೈಯಲ್ಲಿ ಸರ್ವತ್ರ ಬಳಕೆಯಾಗಿ, ರತ್ನಾಕರನಲ್ಲಿ ಮಹಾಕಾವ್ಯದ ಮಾಧ್ಯಮವಾಯಿತು.

೨೦ನೆಯ ಶತಮಾನದ ಕನ್ನಡಕವಿಗಳಲ್ಲಿ ಜನಪದ ಸಾಹಿತ್ಯದಿಂದ ಪ್ರಭಾವಿತರಾದವರು ಕೆಲವರಿದ್ದಾರೆ. ಅವರನ್ನು ಎರಡು ವಿಧವಾಗಿ ವಿಂಗಡಿಸಬಹುದು. ಭಾವ, ಭಾಷೆ ಶೈಲಿಗಳಲ್ಲಿ ಜನಪದ ಸತ್ತ್ವವನ್ನು ಮೈಗೂಡಿಸಿಕೊಂಡವರು. ಈ ವರ್ಗಕ್ಕೆ ಮುಖ್ಯವಾಗಿ ಬೇಂದ್ರೆ, ರಾಜರತ್ನಂ ಅವರನ್ನು ಸೇರಿಸಬಹುದು. ಇನ್ನು, ದೇಶೀಯ ಛಂದಸ್ಸುಗಳನ್ನು ತಮ್ಮ ಕಾವ್ಯಾಭಿವ್ಯಕ್ತಿಗೆ ಬಳಸಿಕೊಂಡವರು. ಇವರಲ್ಲಿ ಅಗ್ರಮಾನ್ಯತೆ ಸಲ್ಲಬೇಕಾದುದು ಇಬ್ಬರಿಗೆ. ಒಬ್ಬರು ಶ್ರೀ ಎಸ್. ವಿ. ಪರಮೇಶ್ವರ ಭಟ್ಟರು. ಇನ್ನೊಬ್ಬರು ಶ್ರೀಮತಿ ಜಯದೇವಿ ತಾಯಿ ಲಿಗಾಡೆಯವರು. ಶ್ರೀಮತಿ ಲಿಗಾಡೆಯವರು ತ್ರಿಪದಿಯಲ್ಲಿ ಸಿದ್ಧರಾಮೇಶ್ವರ ಪುರಾಣವನ್ನು ಸಂಪೂರ್ಣವಾಗಿ ಹೇಳಿದ್ದಾರೆ. ೪೧೦೦ ತ್ರಿಪದಿಗಳಿಂದ ಕೂಡಿದ ಬೃಹತ್ಕೃತಿಯಿದು. ಬಹುಶಃ ಸರ್ವಜ್ಞನನ್ನು ಬಿಟ್ಟರೆ ಇಷ್ಟು ಸಂಖ್ಯೆಯಲ್ಲಿ ತ್ರಿಪದಿಗಳನ್ನು ಬರೆದವರಿಲ್ಲ. ತ್ರಿಪದಿಗಳೆಲ್ಲ ಅಂಶಗಣ ಲಕ್ಷಣದಿಂದ ಕೂಡಿದ್ದು ಸರಸವಾಗಿವೆ, ಸರಳವಾಗಿವೆ. ಕೆಲವು ತ್ರಿಪದಿಗಳಲ್ಲಿ ಮಾತ್ರ ರಸ–ದಶಸ್ಥಾನಗಳಲ್ಲಿ ಬ್ರಹ್ಮಗಣ ಬರದೆ ಸೌಂದರ್ಯ ಕುಂದಿರುವುದುಂಟು.

ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರು ತ್ರಿಪದಿ, ಸಾಂಗತ್ಯ, ಏಳೆಗಳಲ್ಲಿ ಪ್ರಯೋಗ ನಡೆಸಿ ಸಿದ್ಧಿ ಪಡೆದವರು: ಹೊಸಗನ್ನಡ ಕಾಲದಲ್ಲಿ ಈ ದೇಶೀಯ ಛಂದಸ್ಸುಗಳನ್ನು ಮತ್ತೆ ಪ್ರಸಿದ್ಧಿಗೆ ತಂದವರು. ಮುಕ್ತಕದ ರೀತಿಯಲ್ಲಿ ೨೬೦೦ ಸಾಂಗತ್ಯಗಳನ್ನೂ, ೭೦೦ ತ್ರಿಪದಿಗಳನ್ನೂ, ೭೦೦ ಏಳೆಗಳನ್ನೂ ಅವರು

ನಮಗೆ ಕೊಟ್ಟಿದ್ದಾರೆ. ಪ್ರಯೋಗದ ಪರಿಶ್ರಮವಿನಿತೂ ಕಂಡುಬರದೆ ಪಂಕ್ತಿಯು ಪದ್ಯಗಳಾಗಿ ಪುಸ್ತಕಗಳ ಪುಟ ಪುಟದಲ್ಲೂ ಮುಕ್ತಕಗಳು ಕಾಣುತ್ತವೆ. ಶ್ರೀ ಭಟ್ಟರು ಈ ಛಂದೋಪ್ರಕಾರಗಳನ್ನು ಬಳಸಿದ ವೈವಿಧ್ಯ ವೈಶಿಷ್ಟ್ಯಗಳನ್ನು, ಸೂಕ್ಷ್ಮತೆ ಸುಂದರತೆಗಳನ್ನು ಸ್ಥೂಲವಾಗಿ ತೋರಿಸುವ ಅಲ್ಪ ಪ್ರಯತ್ನ ಈ ಲೇಖನ.

'ಇಂದ್ರಚಾಪ', 'ಗಾಥಾಸಪ್ತಶತಿ', 'ಚಂದ್ರವೀಥಿ' ಮತ್ತು 'ಕೃಷ್ಣಮೇಘ'—ಇವು ಭಟ್ಟರ ಸಾಂಗತ್ಯ ಕೃತಿಗಳು. ಮೊದಲ ಮೂರು ಮುಕ್ತಕ ಸಂಕಲನಗಳಾದರೆ ಕೊನೆಯದು ಐದು ವಿವಿಧ ವಿಷಯಗಳ ಕುರಿತು ಸಾಂಗತ್ಯ ಛಂದದಲ್ಲಿ ಬರೆದ ಕವನಗುಚ್ಛವಾಗಿದೆ. ಮೊದಲವು ಬಿಡಿ ಬಿಡಿ ಮುಕ್ತಕಗಳನ್ನು ತುಂಬಿರುವ ಚಿನ್ನದ ಬಟ್ಟಲುಗಳಾದರೆ, ಕೊನೆಯದರಲ್ಲಿ ಸಾಂಗತ್ಯಗಳಿಂದ ಕೂಡಿದ ಕವನಮಾಲೆಗಳಿವೆ.

ಈ ಮುಕ್ತಕಗಳಿಗೆ ಮಾತೃಕೆ ಕೆಲವಕ್ಕೆ ಅನ್ಯಮೂಲವಾದರೆ, ಹಲವಕ್ಕೆ ಕವಿ ಹೃದಯ, ಕವಿ ಜೀವನ. 'ಗಾಥಾಸಪ್ತಶತಿ'ಯೊಂದು ಸಂಪೂರ್ಣವಾಗಿ ಹಾಲ ಮಹಾಕವಿಯ ಪ್ರಾಕೃತ ಗಾಥಾಸಪ್ತಶತಿಯ ಕನ್ನಡ ಅನುವಾದ. ಅದರ ಅನುವಾದಕ್ಕೆ ಸಮರ್ಥ ಛಂದಸ್ಸನ್ನು ಆರಿಸಿದುದು ಕವಿಯ ಔಚಿತ್ಯ ಪ್ರಜ್ಞೆಗೆ ಸಾಕ್ಷಿ. ಆದರೆ ಆ ಮೊದಲೆ ತೀ. ನಂ. ಶ್ರೀ. ಯವರು ಗಾಥಾಸಪ್ತಶತಿಯ ಕೆಲವು ಪದ್ಯಗಳನ್ನು 'ಸಾಂಗತ್ಯದ ಧಾಟಿ'ಯಲ್ಲಿ ಕನ್ನಡಿಸಿಕೊಟ್ಟುದು ಇವರಿಗೆ ಮಾರ್ಗದರ್ಶನವಾಯಿತು. ಪ್ರಿಯ ಪ್ರೇಯಸಿಯರ 'ಒಲುಮೆ'ಯ ವಿವಿಧ ಮೋಡಿಗಳು, 'ಪ್ರೇಮಪೂಜೆ'ಯ ವಿವಿಧ ಗಾಡಿಗಳು, ನಲ್ಲನಲ್ಲೆಯರ ನಲ್ವಾತಿನ ನವೀನ ರೀತಿಗಳು—ಒಟ್ಟಿನಲ್ಲಿ ಶೃಂಗಾರ ರಸಮಂಜರಿಯ ರಸಬಿಂದುಗಳು ಸಾಂಗತ್ಯದ ಪಾತ್ರೆಯಲ್ಲಿ ಮಡುಗಟ್ಟಿರುದು ಕಾವ್ಯಸೌಂದರ್ಯವನ್ನು ವರ್ಧಿಸಿದೆ. ಸಾಂಗತ್ಯದ ಗೇಯತೆ, ಮಿತವಾದ ಹರಹು, ನಯವಾದ ಗತಿ, ಶೃಂಗಾರ ಸನ್ನಿವೇಶ ವಿರಚನೆಗೆ ರತಿಭಾವ ಪ್ರಕಟಣೆಗೆ ಒಪ್ಪವಾದುದಾಗಿದೆ. 'ಚಂದ್ರವೀಥಿ' ಈ ಮಾದರಿಯ ಕವಿಯ ಸ್ವತಂತ್ರಕೃತಿ. ಇಲ್ಲಿಯೂ ಸಂಸಾರದ ಸರಸವಿರಸಗಳೇ ಒಟ್ಟು ವಸ್ತುವಾಗಿದೆ. ಸಂಸಾರಿಯೊಬ್ಬನು ತನ್ನ ಸ್ತ್ರೀಗೆ ಹೇಳಿದಂತೆ, ಪ್ರಿಯೆ ಪ್ರಿಯನಿಗೆ ಆಡಿದಂತೆ, ಮತ್ತಿತರರಿಗೆ ಆಡಿದಂತೆ, ಹಾಡಿದಂತೆ ಇಲ್ಲಿಯ ಒಂದೊಂದು ಪದ್ಯಗಳೂ ಇವೆ. ಈ ಇಂಥ ಭಾವಗಳ ಪ್ರಕಟಣೆಗೆ ಸಾಂಗತ್ಯ ಸುಸಂಬದ್ಧ ಬಂಧವೆಂದು 'ಗಾಥಾಸಪ್ತಶತಿ'ಯಲ್ಲಿ ಕಂಡುಕೊಂಡ ಕವಿ. ಇಲ್ಲಿಯೂ ಸಾಂಗತ್ಯವನ್ನೆ ಬಳಸಿ, ಕೃತಕೃತ್ಯರಾಗಿದ್ದಾರೆ. 'ಇಂದ್ರಚಾಪ' ಪರಮೇಶ್ವರ ಭಟ್ಟರ ಮೊದಲ ಸಾಂಗತ್ಯ ಕೃತಿ; ಮೌಲಿಕವಾಗಿಯೂ ಮೊದಲ ಸ್ಥಾನ ಅದಕ್ಕೆ. ಇಲ್ಲಿನ ವಸ್ತುವೈವಿಧ್ಯ ಒಂದೊಂದು ಮುಕ್ತಕಗಳನ್ನೂ ಇಡಿಯಾಗಿ ಬಿಡಿಯಾಗಿಸುವಂಥದ್ದು. ಅನ್ಯಭಾಷೆಯ ಸೂಕ್ತಿ ಸಾಮತಿಗಳು, ಅನ್ಯಹೃದಯದ ಮಾತು ಗೀತಗಳು, ಕವಿಯ ಅನನ್ಯ ಅನುಭವಗಳು—ಇವೆಲ್ಲವುಗಳನ್ನು ಸಾಂಗತ್ಯಗಳಾಗಿ ಪರಿವರ್ತಿಸಿ, ಇಲ್ಲಿ ಇಡಿಕಿರಿಸಲಾಗಿದೆ. ಇದೊಂದೆ ಕೃತಿ ಅವರು ಸಾಂಗತ್ಯದಲ್ಲಿ ತೋರಿಸಿದ ನವೀನತೆಗೆ, ಪ್ರಾಸವೈವಿಧ್ಯಕ್ಕೆ, ಪ್ರಯೋಗಸಿದ್ಧಿಗೆ ಪ್ರತೀಕವಾಗಬಲ್ಲುದು.

ಸಾಂಗತ್ಯದ ಮೊದಲ ಪಾದದಲ್ಲಿ ನಾಲ್ಕು ವಿಷ್ಣುಗಣಗಳು ಎರಡನೆಯ ಪಾದದಲ್ಲಿ ಎರಡು ವಿಷ್ಣು ಗಣಗಳು, ಬಳಿಕ ಒಂದು ಬ್ರಹ್ಮಗಣ ಬರಬೇಕು. ಮೊದಲ ಪಾದದಂತೆ ಮೂರನೆಯ ಪಾದವೂ. ಎರಡನೆಯದರಂತೆ ನಾಲ್ಕನೆಯ ಪಾದವೂ ಇರುತ್ತದೆ. ಆದಿಪ್ರಾಸವಿದೆ. ಪರಮೇಶ್ವರ ಭಟ್ಟರು ಪ್ರಾಸ ವಿಷಯವೊಂದರಲ್ಲಿ ಸ್ವಾತಂತ್ರ್ಯ ವಹಿಸಿದ್ದಾರೆ. ಅವರ ಸಾಂಗತ್ಯಗಳಲ್ಲಿ ಆದಿಪ್ರಾಸವಿಲ್ಲ. ಅಂತ್ಯಪ್ರಾಸವಿದೆ, ವಿವಿಧ ರೀತಿಯ ಅಂತ್ಯಪ್ರಾಸಗಳಿವೆ. ಒಂದು ಮತ್ತು ಮೂರನೆಯ ಪಾದಾಂತ್ಯ ಸಾಕ್ಷರ. ಎರಡು ಮತ್ತು ನಾಲ್ಕನೆಯ ಪಾದಾಂತ್ಯ ಸಾಕ್ಷರ ಪ್ರಾಸ ಒಂದು ವರ್ಗ.

'ನೀವೊಂದು ಸೀರೆಯ ನನಗಾಗಿ ತಂದಂತೆ
ನಾ ಕಂಡೆ ಕನಸನು ನಿನ್ನೆ'
'ನಾಳೆ ಆ ಸೀರೆಯ ನೀನುಟ್ಟು, ಮೆರೆದಂತೆ
ಕನಸನು ಕಾಣೆನ್ನ ಚೆನ್ನೆ'

ಒಂದು ಎರಡನೆಯ ಪಾದದ ಕೊನೆಯಲ್ಲಿ ಸವರ್ಣ ಮತ್ತು ಮೂರು ನಾಲ್ಕರ ಪಾದಾಂತ್ಯದಲ್ಲಿ ಸವರ್ಣ ಇರುವುದು ಇನ್ನೊಂದು ವರ್ಗ.

ಹೊಕ್ಕಿತು ನಿನ್ನನು ಕಾಮನ ಸಾಯಕ
ಮುಕ್ಕುವೆ ಮಣ್ಣನು ಯುವಕ
ಸಿಕ್ಕಸಿಕ್ಕವರನು ನೋಡಿದರೇನುಂಟು
ಕನ್ನಡಿಯೊಳಗಣ ಗಂಟು

ಹೀಗಲ್ಲದೆ ಎಲ್ಲ ಪಾದಗಳ ಅಂತ್ಯದಲ್ಲೂ ವ್ಯಂಜನಸಮತೆ ಇರುವ ಪದ್ಯಗಳು ಇನ್ನೊಂದು ವರ್ಗ.

ಆನೆಗೆ ಅಡಿಸನ್ನೆ ಕುದುರೆಗೆ ತೊಡೆಸನ್ನೆ
ಹೆಣ್ಣಿಗೆ ಕಣ್ಣಿನ ಸನ್ನೆ
ಮನ್ನಗೆ ತುಟಿಸನ್ನೆ ಕೆಪ್ಪಗೆ ಕೈಸನ್ನೆ
ಹೆಡ್ಡಗೆ ಬಡಿಗೆಯ ಸನ್ನೆ

ಅತ್ತರೆ ಅಳು ಚಂದ ನಕ್ಕರೆ ನಗು ಚಂದ
ನುಡಿದರೆ ನುಡಿ ಬಹು ಚಂದ
ಮುನಿದರೆ ಮುನಿಸಂದ ಒಲಿದರೆ ಒಲವಂದ
ಬಿಸವಂದವೀ ಕಂದನಂದ

ಇಲ್ಲಿ ಮೊದಲ ಮತ್ತು ಮೂರನೆಯ ಪಾದಗಳಲ್ಲಿ ಎರಡನೆಯ ವಿಷ್ಣುಗಣಗಳ ಕೊನೆಯಲ್ಲೂ ಪ್ರಾಸಾಕ್ಷರ ಬಂದಿರುವುದನ್ನು ಗಮನಿಸಬಹುದು. ಹೀಗೆ ಭಟ್ಟರು ಆದಿಪ್ರಾಸವನ್ನು ಬಿಟ್ಟಿದ್ದರೂ ಅಂತ್ಯಪ್ರಾಸದಲ್ಲಿ ವೈವಿಧ್ಯವನ್ನು ತೋರಿಸಿ ಸಾಂಗತ್ಯಕ್ಕೆ ಸೊಗಸು ತಂದಿದ್ದಾರೆ.

ವಿಷ್ಣುಗಣದ ಬದಲು ಕ್ವಚಿತ್ತಾಗಿ ರುದ್ರಗಣ ಬರಬಹುದೆಂಬ ನಿಯಮವಿರುವುದರಿಂದ ಕೆಲವೆಡೆ ರುದ್ರಗಣ ವಿಷ್ಣುಗಣಕ್ಕೆ ಬದಲಾಗಿ ಬಂದುದಿದೆ.

ರು ರು
ಬೆಳ್ಳನೆ | ಉಡೆಯವರು | ಮೊಲ್ಲೆಯ | ಮುಡಿಯವರು |
ಮೈಯೆಲ್ಲ ಚಂದನದವರು

ರು
ಮುತ್ತಿನ | ಸರದವರು | ಸರಿದರು ಜನಗಳು
ಅರಿಯರು ಬೆಳುದಿಂಗಳಿನೊಳು

ರು ರು
ಬೇಕೆನುವ | ಧನಿಕನ | ಪುತ್ರನು | ಬೇಡೆನುವ
ಬಡವನು ಬಹುಪುತ್ರವಂತ

ಒಂದೇ ಪಾದದ ನಾಲ್ಕು ವಿಷ್ಣುಗಣಗಳ ಸ್ಥಾನಗಳಲ್ಲಿ ಎರಡು ರುದ್ರಗಣಗಳು ಬಂದಿದ್ದರೂ, ಅದನ್ನು ತ್ವರಿತವಾಗಿ ಉಚ್ಚರಿಸುವ ಸಾಧ್ಯತೆಯಿರುವುದರಿಂದ ಹಾಡುವಿಕೆಗೆ ತೊಂದರೆ ಬಂದಿಲ್ಲ. ಬ್ರಹ್ಮ ಬರಬೇಕಾದೆಡೆಗಳಲ್ಲಿ ನಿಯತವಾಗಿ ಅದು ಬಂದೇ ಬಂದಿದೆ.

ಇವು ಛಂದೋಲಕ್ಷಣಕ್ಕೆ ಸಂಬಂಧಪಟ್ಟ ಅಂಶವಾದರೆ, ಸಾಂಗತ್ಯಗಳನ್ನು ಇನ್ನೂ ಲಕ್ಷಣವಾಗಿಸುವ ಚಮತ್ಕಾರ ಕವಿಗಿದೆ. ಸಂಭಾಷಣೆಯಲ್ಲೇ ಸಾಂಗತ್ಯವನ್ನು ಮುಗಿಸಿ, ಒಂದು ಪರಿಸರವನ್ನು ಕಣ್ಣ ಮುಂದೆ ಪಸರಿಸುವ ಪರಿಣತಿ ಕೆಲವು ಪದ್ಯಗಳಲ್ಲಿ ಕಾಣುತ್ತದೆ. ಚಿಕ್ಕ ಚಿಕ್ಕ ನಾಲ್ಕು ಪಾದಗಳಲ್ಲೇ, ಪ್ರಶ್ನೆ ಉತ್ತರಗಳನ್ನು ಸೂಕ್ತವಾಗಿ, ಸೂಚ್ಯವಾಗಿ ಅಳವಡಿಸಿ, ಒಂದು ಸನ್ನಿವೇಶದ ಹಿನ್ನೆಲೆಯಲ್ಲಿ ಪಾತ್ರಗಳೇ ಮಾತಾಡುತ್ತಿರುವ ಚಿತ್ರವನ್ನು ಕಣ್ಮುಂದೆ ಸುಳಿಸುವ ಚಿತ್ರಕಶಕ್ತಿ ಕವಿಯ ಲೇಖನಿಗಿದೆ. ಅಸೌಖ್ಯದಲ್ಲಿದ್ದ ಪ್ರಿಯೆಯ ಕುಶಲವಾರ್ತೆಯನ್ನು ಸಖಿಯಲ್ಲಿ ಪ್ರಿಯನೊರ್ವ ವಿಚಾರಿಸುತ್ತಿದ್ದಾನೆ. ರುಗ್ಣಶಯ್ಯೆಯಲ್ಲಿರುವ ಕಾವಲೆಯ ಕ್ಷೇಮವಿಚಾರವನ್ನು ನೇರವಾಗಿ ಹೇಳಲು ಹಿಂಜರಿಯುತ್ತಾಳೆ ಸಖಿ.

ಬಳಿಸಿ ನುಡಿವ ಆಕೆಯನ್ನು ಮತ್ತೆ ಕೆದಕಿ ಕೇಳಲು, ವಾಸ್ತವ ಸ್ಥಿತಿಯನ್ನು ಆಕೆ ವಾಚ್ಯವಾಗಿಸುವಲ್ಲಿ, ಮಾತುಕತೆಯ ರಮ್ಯಜೋಡಣೆ ಆಕರ್ಷಣೀಯವಾಗಿದೆ.

'ಕಾದಲೆ ಕುಶಲವೆ' 'ಬದುಕಿಪಳಿಲಿ ಜೀಯ'
'ಕುಶಲವ ಕೇಳಿದೆ ಬಾಲೆ'
'ಬದುಕಿಹಳಿಲಿಜೀಯ' 'ನುಡಿದದ್ದೆ ನುಡಿವೆಯ ?'
'ಉಸಿರಾಡುತಿದೆ ಸತ್ತಳೆನಲೆ.'

ಭಿಕ್ಷುಪ್ರೌಢನ ಹುಳುಕುನಡೆಯನ್ನು ಅನಾಚಾರವನ್ನು ವ್ಯಕ್ತಪಡಿಸುವಲ್ಲಿ ತೋರಿದ ಕೌಶಲ ಮೆಚ್ಚುವಂಥದ್ದು. ಅವುಗಳನ್ನು ಪಟ್ಟಿಮಾಡಿ ವರದಿಯಾಗಿಸದೆ, ಪ್ರಶ್ನೋತ್ತರಗಳಲ್ಲಿ ಅಳವಡಿಸಿ, ದುರ್ವ್ಯಸನ ಸಮಸ್ತಕ್ಕೆ ಆತ ತವರೂರು ಎಂಬುದನ್ನು ಪ್ರಕಟಿಸಿದ ರೀತಿ ಸುಂದರವಾಗಿದೆ.

'ಮಾಂಸವ ತಿನುವೆಯ ?' 'ಸುರೆಯಿಲ್ಲದಿರಲೇಕೆ ?'
'ಭಿಕ್ಷುವೆ ಮದ್ಯವೂ ಪ್ರಿಯವೆ ?'
'ಹೆಣ್ಣಿದ್ದರಿಷ್ಟವೆ !' 'ಹಣವೆಲ್ಲಿ ? ' 'ನಿನಗೇಕೆ
ದ್ಯೂತಚೌರ್ಯಗಳಿಂದ ಪಡೆವೆ !'

ಈ ಸಂವಾದಕುಶಲತೆ, ಎಂತಹ ವಸ್ತು ವಿಷಯವನ್ನಾದರೂ ಸಾಂಗತ್ಯದಲ್ಲಿ ಅಡಕಗೊಳಿಸುವ ಸಾಮರ್ಥ್ಯ, ನಿಂತಲ್ಲಿ ಕೂತಲ್ಲಿ ಸಾಂಗತ್ಯವನ್ನು ಕಟ್ಟಿ ಹಾಡುವ ಸಾಧ್ಯತೆ—ಇವು ಭಟ್ಟರಿಂದ ಇನ್ನೂ ಹೆಚ್ಚಿನದನ್ನು ನಾವು ಅಪೇಕ್ಷಿಸುವಂತೆ ಮಾಡಿದೆ. ಮುಕ್ತಕಗಳಿಗೆ ಸಾಂಗತ್ಯವನ್ನು ಹೊಸಲಿರಿಸಿದ್ದ ಅವರು "ಕೃಷ್ಣಮೇಘ"ದಲ್ಲಿ ಸಾಂಗತ್ಯದಲ್ಲಿ ಕವನವನ್ನು ರಚಿಸಿದರು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ನಂಜುಂಡ, ರತ್ನಾಕರರಂತೆ ಮಹಾಕೃತಿಯೊಂದನ್ನು ಸಾಂಗತ್ಯದಲ್ಲೇ ಏಕೆ ಬರೆಯಬಾರದು? ಇಷ್ಟರವರೆಗೆ ಅವರು ಕನ್ನಡ ಸಾಹಿತ್ಯಕ್ಕೆ ಕೊಟ್ಟ ಸಾಂಗತ್ಯಕೃತಿಗಳೇ ಉತ್ತಮ ಕಾಣಿಕೆಗಳಾಗಿವೆ ಎಂಬುದನ್ನು ಅಲ್ಲಗಳೆವಂತಿಲ್ಲ. ಆ ಹಿನ್ನೆಲೆಯಲ್ಲಿ ಈ ಅಪೇಕ್ಷೆ ಹೆಚ್ಚು ಅರ್ಥವತ್ತಾಗಿದೆ, ಸಾಧುವಾಗಿದೆ.

'ಸುರಗಿ–ಸುರಹೊನ್ನೆ'ಯ ತ್ರಿಪದಿಗಳು ಬಿಡಿ ಬಿಡಿ ಮುಕ್ತಕಗಳು. ಒಬ್ಬ ಗೃಹಸ್ಥನು ತನ್ನ ಗೃಹಿಣಿಗೆ ಹೇಳಿದ ಮಾತುಗಳಿವು. 'ತನ್ನ ಗೃಹಿಣಿಯೊಂದಿಗೆ ಬಾಳುವೆ ಮಾಡಿದ ದಿನಗಳಲ್ಲಿ ಈ ಗೃಹಸ್ಥನು ಪಡೆದ ವಿನೋದ, ವಿಷಾದ, ಲಾಭ, ಅಲಾಭ, ಸರಸ, ವಿರಸ, ಜಯ, ಅಪಜಯ, ಇಂತಹ ನೂರಾರು ಅನುಭವಗಳು ಹಾಡಾಗಿ ಇಲ್ಲಿ ಹರಿದಿವೆ.' ಅದರಲ್ಲಿ ಎಲ್ಲರ ಅನುಭವವೂ ಬಂದಿರಬಹುದು. ಅವನ್ನೆ 'ಇಲ್ಲಿ ಕನ್ನಡಿಸಿ ಮತ್ತೊಮ್ಮೆ ತ್ರಿಪದಿಯ ಸೊಲ್ಲಿನೊಳಿಟ್ಟು'ದು ಕವಿ ಮಾಡಿದ ಕೆಲಸ. ಹಾಗೆಂದು, ತ್ರಿಪದಿಯ ಅಸ್ಥಿಪಂಜರದಲ್ಲಿ ಮಾತಿನ ಅಡಗನ್ನು ಅಡಕಗೊಳಿಸಲು ಹೊರಟ ಕಾಯಕವಲ್ಲ ಇದು. ಅವೆಲ್ಲ ಒಗ್ಗೂಡಿ ಹುಟ್ಟಿ, ಕವಿಹೃದಯದ ಕಂಪನ್ನು ಹೊತ್ತಿದೆ.

ಗುರುಲಘುವೆಣಿಸದೆ ಬರಿಯಂಶಘಟಕದ
ಸರಮಾಲೆಯೆನದೆ ಬಗೆಯಿಂದು – ನನ್ನೆದೆ
ನರುಗಂಪಿದೆಂದು ಸರಸಿಯೆ

ಚಿತ್ತಾಪಹಾರಿಕೃತಿಯಾಗಲು ಇದೇ ಕಾರಣ. ಭಾವಬಂಧಗಳ ಸುಂದರ ಸಾಮರಸ್ಯ ಒಳ್ಳೆಯ ಕವಿತೆಯ ಲಕ್ಷಣ. ಅಲ್ಲಿ ಪ್ರಯತ್ನದ ಅಂಶವಿಲ್ಲದೆ, ಪ್ರಸ್ಫುರಣೆಯ ಪ್ರಫುಲ್ಲತೆ ಇರುತ್ತದೆ. ಹಿಡಿದ ಲಯದಲ್ಲಿ ಹೃದಯ ಮಿಡಿಯುತ್ತದೆ, ಒಲಿದ ಛಂದದಲ್ಲಿ ಕವಿಯೆದೆ ಸ್ಪಂದಿಸುತ್ತದೆ. ಇಲ್ಲಿಯ ತ್ರಿಪದಿಗಳಲ್ಲಿ ಈ ಸಿದ್ಧಿಯಿದೆ.

ನಿಲುವುದು ಭಾವವು ಒಲಿದ ಈ ತ್ರಿಪದಿಯ
ಚೆಲುವಿನ ಲಯಕೆ ಪಾತ್ರೆಯ ಮಾಟಕೆ
ನಿಲುವಂತೆ ನೀರು ಸರಸಿಯೆ

ಸಾಂಗತ್ಯದ ಬಳಕೆಯಲ್ಲಿ ಶ್ರೀ ಭಟ್ಟರು ಕೃತಕೃತ್ಯರಾದಂತೆ, ತ್ರಿಪದಿಯೂ ಅವರ ಹಸ್ತದಲ್ಲಿ ಸಾರ್ಥಕವಾಗಿದೆ. ಜಗದಗಲ ಮುಗಿಲಗಲ ವ್ಯಾಪಿಸಬಹುದಾದ ಭಾವವನ್ನು ಹಿಡಿಯಲ್ಲಿ ಹಿಡಿದಿಡುವ, ಭೂಸ್ಪರ್ಶಿ ನಭೋತ್ಸರ್ಶಿ ವ್ಯಾಪ್ತಭಾವವನ್ನು ಕರತಲದಲ್ಲಿ ಹೃದಯಸ್ಪರ್ಶಿಯಾಗುವಂತೆ ಕಡೆದಿಡುವ ಶಕ್ತಿ ಕವಿಗೆ ಕರಗತವಾಗಿರಬೇಕು; ತ್ರಿಪದಿಯನ್ನು ಸಮರ್ಥವಾಗಿ ಬಳಸುವುದಕ್ಕೆ. ತ್ರಿಪದಿಯನ್ನು ಲಕ್ಷಣಬದ್ಧವಾಗಿ ರಚಿಸುವುದು ಕಷ್ಟವಲ್ಲ. ಲಕ್ಷಣಕ್ಕೆ ಅನುಗುಣವಾಗಿ ಅನುಭವವನ್ನು ಅದರಲ್ಲಿ ಭಟ್ಟಿಯಿಳಿಸುವುದು ಮುಖ್ಯ. ಮಾತು ಪೋಲಾಗಬಾರದು, ಅನವಶ್ಯ ಮಾತು ಬರಕೂಡದು. ಅದಕ್ಕೊಂದು ಹದಬೇಕು. ಇಟ್ಟ ಪದವನ್ನು ಮತ್ತೆ ಅಲುಗಿಸಲಾರದ, ನಲುಗಿಸಬಾರದ, ಭಾವ ಸಮಷ್ಟಿಯ ಪ್ರಕಟಣೆಯಲ್ಲಿ ತನ್ನನ್ನು ಅವಿಭಾಜ್ಯ ಅಂಗವಾಗಿಸಿಕೊಳ್ಳುವ ಪ್ರತಿಷ್ಠೆ ಅದಕ್ಕಿರಬೇಕು. ಆ ಒಳಹದ ಬಂದಾಗಲೆ ಕವಿತೆ ಆಕರ್ಷಕವಾಗುತ್ತದೆ. ಶ್ರೀ ಭಟ್ಟರಿಗೆ, ತಮ್ಮ ಚಿತ್ತಕ್ಕೆ ಬರುವ ಅನುಭವವನ್ನು ಬಿತ್ತರಿಸುವುದಕ್ಕೆ ಉತ್ತಮವಾದ ಮಾಧ್ಯಮವನ್ನು ಅರಸುತ್ತಿರುವಾಗ ಕಾಲಿಗೆ ಬಳ್ಳಿ ತೊಡರಿದ ಹಾಗೆ, ತ್ರಿಪದಿ ದೊರಕಿತಂತೆ.

> ಸರಳದೀ ತ್ರಿಪದಿಯ ವರರೂಪ ದೊರಕಿದು -
> ದರಸುವ ಬಳ್ಳಿ ಕಾಲಿಗೆ – ತೊಡರಿದ
> ತೆರನಾದುದೆನಗೆ ಸರಸಿಯೆ

ತ್ರಿಪದಿತ್ರಿಪುರಸುಂದರಿಯನ್ನು ಜಾನಪದ ಕವಿಗಳು ಗ್ರಾಮ್ಯಭಾಷೆ, ಭಾವಗಳಿಂದ ಸಿಂಗರಿಸಿದ್ದರೆ ಆಧುನಿಕ ವಿದ್ಯಾವಂತ ಕವಿ ಶ್ರೀ ಭಟ್ಟರ ಸಂಸರ್ಗದಲ್ಲಿ ಆಕೆ ಆಧುನಿಕಳಾಗಿದ್ದಾಳೆ. ಆದರೂ—ಅವಳು ನುಡಿವ ನುಡಿ ಶಿಷ್ಟವಾಗಿದ್ದು, ನಗರಭಾಷೆಯಾಗಿದ್ದು ಇಷ್ಟವಾದರೆ — ಅವಳ ನಡೆಯ ವಿನ್ಯಾಸ ಮೊದಲಿನಂತೆಯೆ. ಬಳುಕು ಥಳಕುಗಳು, ಬೆಡಗು ಬಿನ್ನಾಣಗಳು ಬದಲಾಗಿಲ್ಲ. ಇಲ್ಲಿ ಎದ್ದು, ಅಲ್ಲಿ ನಿಂತು ಇತ್ತ ಬಾಗಿ ಅತ್ತ ಬಳುಕಿ ನಾಟ್ಯವಾಡುತ್ತಾ ಹೋಗಿ ನಿಲುಗಡೆಗೆ ಬರುವುದು ಅವಳ ಜಾಯಮಾನ — ಅದಕ್ಕೆ ಊನ ಬಂದಿಲ್ಲ.

ಭಟ್ಟರ ತ್ರಿಪದಿಗಳಲ್ಲಿರುವುದು ಅಂಶಗಣಗಳೆ. ಮೊದಲ ಪಾದದಲ್ಲಿ ಎರಡು ವಿಷ್ಣುಗಣಗಳಾದ ಮೇಲೆ ಯತಿ ಬಂದು ಮತ್ತೆರಡು ವಿಷ್ಣುಗಣಗಳು. ಎರಡನೆಯ ಪಾದದಲ್ಲಿ ವಿಷ್ಣುಗಣವಾದ ಮೇಲೊಂದು ಬ್ರಹ್ಮಗಣ ಬಂದು ಇನ್ನೆರಡು ವಿಷ್ಣು ಗಣಗಳು. ಮೂರನೆಯ ಪಾದದಲ್ಲಿ ವಿಷ್ಣುಗಣ ಮೊದಲು, ಆ ಮೇಲೆ ಬ್ರಹ್ಮ ಮತ್ತೆ ಇನ್ನೊಂದು ವಿಷ್ಣು. ರಸದಶ ಸ್ಥಾನಗಳಲ್ಲಿ ತ್ರಿಪದಿಯ ಜೀವಾಳವಾದ ಬ್ರಹ್ಮಗಣ ತಪ್ಪದೆ ಬಂದಿದೆ. ಹೀಗೆ ಗಣವಿಭಜನೆ, ಆದಿಪ್ರಾಸ ನಿಯತವಾಗಿದೆ. ಮೊದಲ ಪಾದದ ಮೂರನೆಯ ವಿಷ್ಣುಗಣದಲ್ಲಿ ಒಳಪ್ರಾಸವಿದೆ. ಜಾನಪದ ತ್ರಿಪದಿಗಳಲ್ಲಿ ಪ್ರಾಸ ಇದ್ದರೆ ಉಂಟು, ಇಲ್ಲದಿದ್ದರೆ ಇಲ್ಲವೆಂಬಂತಿದೆ. ಆದರೆ ಭಟ್ಟರಿಗೆ ತ್ರಿಪದಿರಚನೆಯ ಸಂದರ್ಭದಲ್ಲಿ ಪ್ರಾಸದ ಬಗ್ಗೆ ಸರ್ವಜ್ಞನಿಗಿರುವ ಇಷ್ಟ, ನಿಷ್ಠೆ.

> ಕಿವಿಯವತಂಸವು ಕವಿಯ ಈ ಪ್ರಾಸವು
> ತ್ರಿವಿಧಿಯೊಳಿದರ ವಿಧವಿಧ – ಹಾಸವು
> ಸವಿಯಹುದ್ಯೆಸೆ – ಸರಸಿಯೆ

ವಿಷ್ಣುಗಣದ ಬದಲು ಕೆಲವೊಮ್ಮೆ ರುದ್ರಗಣ ಬರಬಹುದು ಎಂಬ ವಿಕಲ್ಪತೆ ಇದ್ದರೂ, ಭಟ್ಟರ ತ್ರಿಪದಿಗಳಲ್ಲಿ ರುದ್ರಗಣಗಳ ಬಳಕೆಯೇ ಇಲ್ಲವೆನ್ನಬಹುದು. ಇವರ ತ್ರಿಪದಿಗಳು ಹಾಡುವುದಕ್ಕೆ ಸೊಗಸಾಗಿವೆ. ಹಾಡಿದಾಗ ಮೊದಲ ವಿಷ್ಣುಗಣದೊಂದಿಗೆ ಏಳುವ ನಾದ, ಯತಿಪ್ರಾಸ ಪುನರಾವರ್ತನೆ ಗಳಿಂದ ತರಂಗಗಳಾಗಿ 'ಸರಸಿಯೆ' ಎಂಬಲ್ಲಿ ತಂಗುವಾಗ ಕಿವಿಗೆ ಸವಿಯಾಗುತ್ತದೆ, ಹೃದಯಕೆ ಹಿತವಾಗುತ್ತದೆ. ಇದಕ್ಕೆ ಭಾವದ ಪ್ರಸಾದವೈಖರಿಯೂ ಕಾರಣ. ಭಾವ ನಡುವೆಯೇ ಕುಗ್ಗದೆ ಬಗ್ಗದೆ, ತಗ್ಗದೆ, ಮುಗ್ಗದೆ ತುದಿಯಿಂದ ಬುಡದವರೆಗೂ ಸಾಂದ್ರವಾಗಿ ದಟ್ಟೈಸಿರುತ್ತದೆ. ಪುನರಾವರ್ತನೆಯ ಎಡೆಯಲ್ಲಿ ಭಾವದ ಕಿಂಚಿತ್ ನಿಲುಗಡೆ, ನಿಜವಾಗಿ ಅದರ ಓಟದ ಕ್ಷಣಿಕ ನಿಲುಗಡೆ-

ಯಾಗಿ ಪುನರಾವರ್ತನೆಯೊಂದಿಗೆ ಅದೇ ಪತ್ಯ್ಯಗದೆಯಾಗಿ ಭಾವದ ಬೀಸು ಸರಳವಾಗಿ ಕೊನೆಗೆ ಪಾಯಿಸುತ್ತದೆ. ಭಟ್ಟರು ಪ್ರತಿ ತ್ರಿಪದಿಯ ಕೊನೆಯಲ್ಲೂ ಸರಳವನ್ನು ಸಂಯೋಜಿಸುವ ಪರಿಪಾಠ ಇಟ್ಟುಕೊಂಡುದರಿಂದ, ಅವರು ಹೇಳಬೇಕಾದುದನ್ನೆಲ್ಲ ಪತ್ಯ್ಯಗಳಲ್ಲೇ ಸರಳಗೆ ಹೇಳಬೇಕಾದೆ. ಇಷ್ಟು ಸಂಯಮ ಇಲ್ಲಿ ಅವಶ್ಯವಿದೆ. ಸಂಯಮ ಅತಿಯಾಗಿ ಭಾವ ಪತ್ಯ್ಯಗಳಿಕ್ಕೆ ದೊರಕೇ ಪ್ರಕಾಶಿತವಾದರೆ, ಪಾದಪೂರಣಕ್ಕೆ ಪದಗಳ ದುಂದು—ಅನಪೇಕ್ಷಿತ ಉದ್ದೇಶಕ್ಕಾಗಿ. ಅದರೆ ಉದ್ದೇಶಿತ ಛಂದದ ಅಪೇಕ್ಷೆಗಾಗಿ—ಆಗಬೇಕಾಗುತ್ತದೆ. ಅತ್ತ ಬಿಗು ಅತಿಯಾಗದೆ, ಇತ್ತ ಸಡಿಲು ಪದ್ಯಾಗದೆ ಒಂದು ಹದದಲ್ಲಿ ಭಾವ ಪಸರಿದರೆ ಮಾತ್ರ ಬಂಧದಲ್ಲಿ ಬಂಧುರ, ಬಿಗಿ ಕಾಣುತ್ತದೆ. ಈ ಹದ, ಬಿಗಿ ಭಟ್ಟರ ತ್ರಿಪದಿಗಳ ಸೌಂದರ್ಯವರ್ಧಕ. ಅವರೊಂದು ನೀತಿ ಹೇಳಲಿ, ಕಾವ್ಯದ ರೀತಿಗೆ ಬಾಧಕವಿಲ್ಲ; ಒಂದು ಮಾತು ಆಡಲಿ. ಗೀತದ ಸೌರಭವಿಲ್ಲದಿಲ್ಲ. ವಿಡಂಬನೆ ಮಾಡಲಿ, ಕಾವ್ಯವಿನ್ಯಾಸವಿಲ್ಲದಿಲ್ಲ. ಮೆಚ್ಚಿನ ಮಾತು, ಚುಚ್ಚು ಮಾತು, ನಚ್ಚಿನ ಮಾತು, ಕೆಚ್ಚಿನ ಮಾತು ಇವೆಲ್ಲ ತ್ರಿಪದಿಯ ಅಭಿವ್ಯಕ್ತಿ ಕೊಂಡಾಗ, ಅವರು ಹೇಳುವ ತನ್ನತನದಿಂದಾಗಿ ಅಚ್ಚುಮೆಚ್ಚಾಗುತ್ತವೆ. "ಗಾತ್ರದಲ್ಲಲ್ಲದಿದ್ದರೂ ಗುಣದಲ್ಲಿ ಸರ್ವಜ್ಞನ ಸಮಸಮಾನತೆ ಇದೆ" ಎಂದು ಶ್ರೀ ಗುಂಡ್ಮಿ ಚಂದ್ರಶೇಖರ ಐತಾಳರು ಭಟ್ಟರ ತ್ರಿಪದಿಗಳ ಬಗ್ಗೆ ಹೇಳಿದ ಮಾತು ನಮಗೆ ಪ್ರಿಯವಾಗಿದೆ. ಸಮ್ಮತವಾಗಿದೆ.

'ತುಂಬೆ ಹೂವು' ಏಳೆಯಲ್ಲಿರುವ 200 ಮುಕ್ತಕಗಳು. ಛಂದಸ್ಸಿನ ದೃಷ್ಟಿಯಿಂದಲೂ ಈ ಕೃತಿಗೆ ವಿಶಿಷ್ಟ ಮಾನ್ಯತೆ ಉಂಟು. 'ಏಳೆ' ಪ್ರಾಚೀನವಾದ ದೇಶೀ ಛಂದೋರೂಪ. ಜನಪದ ಸಾಹಿತ್ಯದಲ್ಲಿ ಮಾತ್ರ ಅದು ದೊರೆಯುತ್ತದೆ. ನಾಗವರ್ಮ, ಜಯಕೀರ್ತಿ ಮೊದಲಾದವರು ಅದರ ಲಕ್ಷಣವನ್ನು ಹೇಳಿದರೂ, ಅದರ ಲಕ್ಷ್ಯಗಳಿಗೆ ಜನಪದ ಸಾಹಿತ್ಯಕ್ಕೇ ಹೋಗಬೇಕು. ಯಾವ ವಿದ್ಯಾವಂತ ಕವಿಯೂ ಅದನ್ನು ತನ್ನ ಕೃತಿಯಲ್ಲಿ ವೈವಿಧ್ಯಕ್ಕಾದರೂ ಬಳಸಿಲ್ಲ. ಈ ಗೇಯ ಪ್ರಧಾನವಾದ ಛಂದೋಪ್ರಕಾರ, ತ್ರಿಪದಿಗೂ ಮೂಲವಾದುದೆಂದೂ ಹೇಳಬಹುದು. ತ್ರಿಪದಿಗೆ ಮೂರು ಪಾದಗಳಾದರೆ, ಏಳೆ ಎರಡು ಪಾದಗಳುಳ್ಳದು. ತ್ರಿಪದಿಯ ನಡುವಿನ ಚರಣವನ್ನು ಬಿಟ್ಟರೆ ಏಳೆಯಾಗುತ್ತದೆ. ಅದರ ಗಣ ಸ್ವರೂಪ ಹೀಗೆ:

ಯತಿ

ವಿಷ್ಣು । ವಿಷ್ಣು ॥ ವಿಷ್ಣು । ವಿಷ್ಣು
ವಿಷ್ಣು । ಬ್ರಹ್ಮ । ವಿಷ್ಣು

ಆದಿಪ್ರಾಸವಿದೆ, ಮೊದಲಪಾದದ ಮೂರನೆಯ ಗಣದಲ್ಲಿ ಒಳಪ್ರಾಸವೂ ಇದೆ. ಎರಡು ವಿಷ್ಣುಗಣಗಳ ಅನಂತರ ಯತಿ ಇದೆ.

ಅತ್ತ ತಿರುವಿದ ಮಾರಿ ಇತ್ತ ತಿರುವಿಸ ಗೌರಿ
ಮುತ್ತು ಮುತ್ತೀಗಿ ತೊಡಕ್ಯಾವ

ಇದೊಂದು ಜಾನಪದ ಏಳೆ. ಈ ಎರಡಡಿಯ ಏಳೆಯೇ ಕನ್ನಡ ಛಂದಸ್ಸಿನ ಮೂಲವೆಂದು ಕಾಣುತ್ತದೆ. ಏಳೆ ಮುಕ್ತಕಗಳಾಗಿ ಅತ್ಯಂತ ಕಿರಿದರಲ್ಲಿ ಅರ್ಥಗರ್ಭಿತವಾದುದನ್ನು ಹೇಳುವುದಕ್ಕೆ ಬಳಕೆಯಾಗುತ್ತಿದ್ದಂತೆ ಸಂವಾದಶೈಲಿಯಲ್ಲಿಯೂ ಕಂಡುಬರುತ್ತದೆ.

ಕುದುರೇನ ತಂದೇನಿ ಜೀವ ಬಿಗಿಸಿದೇನಿ
ಬರಬೇಕ ತಂಗೀ ಮದುವೆಗೆ
ಬೇಸಗೆ ಬಿಸಿಲಣ್ಣ ಕೂಸಿನ ತಾಯಣ್ಣ
ಹೇಗೆ ಬರಲಣ್ಣ ಮದುವೆಗೆ

ಈ ಏಳೆಗಳಲ್ಲಿ ಪ್ರಾಸವನ್ನು ತಂದಿಲ್ಲ. ಜಾನಪದ ಏಳೆಗಳು ಕಟ್ಟುನಿಟ್ಟಾಗಿ ಪ್ರಾಸವನ್ನು ಒಳಗೊಂಡಿಲ್ಲ.

ಇಂಥ ಆಕರ್ಷಕ ಛಂದೋರೂಪ ಕವಿಗಳಾರ ಕಣ್ಣನ್ನು ಕೋರೈಸದಿದ್ದರೂ, ಎಸ್. ವಿ. ಪರಮೇಶ್ವರ ಭಟ್ಟರ ಕಣ್ಣಿಗೆ ಜೀಳದೆ ಹೋಗಲಿಲ್ಲ. ಬಿಡಿ ಬಿಡಿ ಮುಕ್ತಕಗಳನ್ನು ರಚಿಸುವುದಕ್ಕೆ ಅವರು ಏಳೆಯನ್ನೂ ಎತ್ತಿಕೊಂಡರು, ಎತ್ತಿ ಅದನ್ನು ಪ್ರಚುರ ಪಡಿಸಿದರು.

ಗೀತದೊಳೀತೆರ ನೂತನ ರೀತಿಯ
ಮಾತಿನ ಸೊಗಸು ಎಲ್ಲಿತ್ತು
ಇಲ್ಲಿಯ ವರೆಗಿಂಥ ಸೊಲ್ಲೆಂಬುದಿರಲಿಲ್ಲ
ಮೆಲ್ಲಗೆ ನಾನೆ ಹೇಳಿದೆ

ಎಂಬ ಅಭಿಮಾನ ಕವಿಗೆ. ಕನ್ನಡ ಸಾಹಿತ್ಯ ಇತಿಹಾಸದಲ್ಲಿ ಏಳೆಯನ್ನು ಇಷ್ಟು ಪ್ರಮಾಣದಲ್ಲಿ ರಚಿಸಿದವರು ಇಲ್ಲವೆನ್ನಬೇಕು. ಏಳೆಯನ್ನು ರಚಿಸಿದವರೇ ಇಲ್ಲವೆನ್ನುವಾಗ ದಿವಂಗತ "ಶ್ರೀ"ಯವರ ಒಂದು 'ಏಳೆ' ನೆನಪಿಗೆ ಬರುತ್ತದೆ. ನಾಗವರ್ಮ ಕೊಟ್ಟಿರುವ ಏಳೆಯ ಲಕ್ಷಣದ ಪಾಠವನ್ನು ಪರಿಷ್ಕೃತಗೊಳಿಸಿ ಕೊಟ್ಟಿರುವ "ಶ್ರೀ"ಯವರು ಅದಕ್ಕೆ ಒಂದು ಲಕ್ಷ್ಯ ಪದ್ಯವನ್ನೂ ಹೊಸೆದಿದ್ದಾರೆ. ಪ್ರಯೋಗಶೀಲ ಪ್ರವೃತ್ತಿಯ ಶ್ರೀಯವರ ಕನ್ನಡ ನುಡಿಯ ಬಗೆಗಿನ ಹಾರೈಕೆ, ಏಳೆಯಲ್ಲೇ ಘನೀಭೂತವಾಗಿ ಥಳಥಳಿಸುತ್ತಿದೆ. ಸದ್ಯ ಅದು ಉಲ್ಲೇಖನೀಯ.

ಕನ್ನಡ ನುಡಿಪಯಿರ್ ಮುನ್ನಡೆ ತೆನೆತುಂಬಿ
ಪೊನ್ನಡಕಿಲ್ಗಂ ಪೊನ್ನಕ್ಕೆ

ಇದೊಂದನ್ನು ಬಿಟ್ಟರೆ ಬಹುಶಃ ಭಟ್ಟರ ಹೊರತು ವಿದ್ಯಾವಂತ ಕವಿಗಳಿಂದ ಏಳೆಗಳು ರಚಿತ-ವಾದುದಿಲ್ಲ. ಕವಿಯೇ ಏಳೆಯಲ್ಲಿ ಹೇಳಿಕೊಂಡಿದ್ದಾರೆ.

ಪ್ರಾಚೀನ ಕೃತಿಗಳನಾಚೀಚೆ ಮಗುಚಿದೆ
ಈ ಚಾರು ಏಳೆ ಸಿಗಲಿಲ್ಲ

ಜನಪದಗೀತದಲ್ಲಿ ದೊರೆತ ಏಳೆಯನ್ನು ಕಂಡು, ಅದರ ಆಕಾರಕ್ಕೆ, ನಾದಕ್ಕೆ, ಲಯಕ್ಕೆ ಕವಿಹೃದಯ ಮಾರುಹೋಯಿತು. ಅಷ್ಟಕ್ಕೆ ಇದನ್ನು ಆರಿಸಿದ್ದಲ್ಲ. ಕಿರಿದರಲ್ಲಿ ಹಿರಿದರ್ಥವನ್ನು ಇಡಿಕಿರಿಸುವ ಸಾಧ್ಯತೆ ಕವಿಗೆ ಕಂಡುಬಂತು.

ಕಿರಿದಾದ ಮಾತೊಳು ಹಿರಿದಾದ ಅರ್ಥವು
ಹುರುಳಾಗಿ ನಿಲುವುದಿದರೊಳು
ಕೇಳಲು ಸುಲಭವು ಹೇಳಲು ಸುಲಭವು
ನಾಳೆಗೆ ಮನದೆ ನಿಲುವುದು

ಗಾದೆ ಮಾಡುವ ಕೆಲಸವನ್ನೆ ಅದು ಮಾಡುತ್ತದೆ. ಮಾತಿಗೆ ಬೆಂಬಲವಾಗಿ ಅರ್ಥಪುಷ್ಟವಾದ ಏಳೆಯನ್ನು ಬಳಸುವಷ್ಟು ಸಂಗೃಹೀತವಾಗಿರುತ್ತದೆ ಅನುಭವ ಅದರಲ್ಲಿ. ಏಳೆ ಗಾದೆಗಿಂತ ಅದರ ಛಂದೋನಿಷ್ಕೃಷ್ಟತೆಯಲ್ಲಿ ಭಿನ್ನ. ಏಳೆ ಗೇಯ ಸುಂದರವಾದುದು. ತುಂಬೆ ಹೂವಿನ ಏಳೆಗಳಂತೂ ಹಾಡುವುದಕ್ಕೆ ತಕ್ಕುದಾಗಿವೆ. ಅಪರೂಪವಾಗಿ ಕೆಲವು ಏಳೆಗಳಲ್ಲಿ ಗಣಪಲ್ಲಟವಾದುದುಂಟು.

ಸರಳರೇಖೆಯ ಹಾಗೆ ಇರಬಹುದೆಂಬೆಯ
ಮರುಳೆ ಋಜುಕುಟಿಲ ಸಂಸಾರ

ಈ ಏಳೆಯ ೬ನೆಯ ಸ್ಥಾನದಲ್ಲಿ ಬ್ರಹ್ಮ ಇರಲೇಬೇಕೆಂಬ ದೃಷ್ಟಿಯಿಂದ, ೫ನೆಯ ಗಣವನ್ನು 'ಮರುಳೆ ಋಜೂ' ಎಂದು ರುದ್ರವಾಗಿಸಿ, ದೀರ್ಘಿಸಿ ಓದಬೇಕಾಗುತ್ತದೆ. ಆದರೂ ಮತ್ತೆ ಬರುವ 'ಕುಟಿಲ' ಎಂಬ ಬ್ರಹ್ಮಗಣ ಅಂಶದೃಷ್ಟಿಯಿಂದ ಬ್ರಹ್ಮವಾದರೂ, ಬ್ರಹ್ಮಗಣದ ರಾಗದ ಏರಿಳಿತವನ್ನು ಅಲ್ಲಿ ತರಲಾಗುವುದಿಲ್ಲ — 'ಮರುಳೆ ಋಜೂ' ಎಂದು ಮೊದಲು ಸ್ವಲ್ಪ ಹೊತ್ತು ಸ್ವರವನ್ನು

ಬಿಡಿದು ನಿಲ್ಲಿಸಬೇಕಾದುದರಿಂದ ನಿಜವಾಗಿ ಓದುವಾಗ, ಹಾಡುವಾಗ 'ಝುಂಝುಕಟಿಲ' ಎಂಬ ಪದಬಂಧ ಒಟ್ಟಿಗೆ ನಿಂತು. 'ಮರುಳೆ' ಎಂಬ ಶಬ್ದವೇ ಬೇರೆ ನಿಲ್ಲುತ್ತದೆ. "ಮರುಳೇ" ಎಂಬುದೇ ಬ್ರಹ್ಮಗಣವಾಗಿ ಉಚ್ಚರಿಸಲ್ಪಡುತ್ತದೆ. ಇಲ್ಲಿಯ ಮಟ್ಟಿಗೆ ಹಾಗೆ ಹಾಡಿದರೆ ಸೊಗಸು. 'ಮರುಳೇ' ಎಂದು ವಿಸ್ತರಿಸಿ ಹೇಳಿ, 'ಝುಂಝುಕಟಿಲ'ವೆಂಬುದನ್ನು ತ್ವರಿತವಾಗಿ ಹೇಳುವಾಗ ಒಂದು ಬಿಗು ಕಂಡುಬರುತ್ತದೆ. ೬ನೆಯ ಸ್ಥಾನದಲ್ಲಿ ಬರಬೇಕಾದ ಬ್ರಹ್ಮ ೫ರಲ್ಲಿ ಬಂದು, ೬ನೆಯ ಗಣದಲ್ಲಿ ರುದ್ರಗಣ ಬಂದಿದ್ದರೂ— ಈ ವೈವಿಧ್ಯ ಒಂದು ಬೆಡಗು ತಂದಿದೆ. ಗಣಪಲ್ಲಟ ಇಲ್ಲಿ ಭಾವಕ್ಕೂ, ರಾಗಕ್ಕೂ, ಓಟಕ್ಕೂ ತತ್‌ಕ್ಷಣ ತಿರುವೊಂದನ್ನು ಕೊಟ್ಟು ಪುಷ್ಟಿಯನ್ನು ತಂದಿದೆ. ಎಲ್ಲ ಕಡೆಯಲ್ಲೂ ಹೀಗೆ ಗಣಪಲ್ಲಟ ಮಾಡಿದರೆ ಸೊಗಸಾದೀತು ಎಂದೇನಲ್ಲ.

ಇನ್ನೂ ಕೆಲವೆಡೆ ಓಟದ ದೃಷ್ಟಿಯಿಂದ ಬ್ರಹ್ಮಗಣ ೫ನೆಯ ಸ್ಥಾನದಲ್ಲಿ ಬಂದು, ೬ನೆಯ ಗಣ ವಿಷ್ಣುವಾಗಿರುವ ಉದಾಹರಣೆ ಸಿಗುತ್ತದೆ.

> ಮೋದದ ಪ್ರಾಸಕೆ ನಾದದಾನಂದಕೆ
> ಓದಿ ತಲೆದೂಗದವರುಂಟೆ
> ನೋವಿನ ಬೆಲೆಯನು ನಾವರಿತಿರಬೇಕು
> ನೋವು ನರಸಿಂಹ ನಖವಯ್ಯ

ಬ್ರ ವಿ ವಿ ಬ್ರ

ಈ ಪಳಿಗಳ ಎರಡನೆಯ ಪಾದಗಳನ್ನು, "ಓದಿ + ತಲೆದೂಗ + ದವರುಂಟೆ" "ನೋವು +

ವಿ ವಿ

ನರಸಿಂಹ + ನಖವಯ್ಯ" ಎಂದು ಗಣವಿಭಜನೆ ಮಾಡಿದಂತಾಗುತ್ತದೆ. ಓದುವಾಗ, ಹಾಗೆಂದು

ರು ಬ್ರ ವಿ ರು ಬ್ರ ವಿ

"ಓದಿತಲೆ + ದೂಗ + ದವರುಂಟೆ" "ನೋವುನರ + ಸಿಂಹ + ನಖವಯ್ಯ" ಎಂದು ವಿಭಜಿಸಲಾಗದೆಂದಿಲ್ಲ. ಆದರೆ ಮೊದಲಿನದೇ ಹೆಚ್ಚು ಸಹಜವಾಗಿದೆ. ಈ ತೊಂದರೆ ಏಕೆಂದರೆ ಆರನೆಯ ಗಣವನ್ನು ಬ್ರಹ್ಮವಾಗಿ ವಿಭಜಿಸಬೇಕಿದ್ದರೆ, ಐದನೆಯ ಗಣವನ್ನು ರುದ್ರವಾಗಿಸಬೇಕಾಗಿದೆ. ಕನ್ನಡದ (ಅಂಶ) ಗಣಗಳಲ್ಲಿ ದೀರ್ಘವಾದ ರುದ್ರಗಣವನ್ನು ಉಚ್ಚರಿಸಿದ ಮೇಲೆ, ಅದರೊತ್ತಿನಲ್ಲಿ ಬರುವ ಬ್ರಹ್ಮಗಣಕ್ಕೆ ಅದಕ್ಕೆ ಸಹಜವಾದ ಪಲುಕನ್ನು ತರುವುದು ಕಷ್ಟವಾಗುತ್ತದೆ. ಮೇಲಿನ ಪಳಿಗಳಲ್ಲಿ ಮತ್ತೊಂದು ಸ್ವಾರಸ್ಯವೆಂದರೆ ೬ನೆಯ ಗಣವನ್ನು ಬ್ರಹ್ಮವಾಗಿಸಿ ಒಡೆದರೆ ೫ನೆಯದು ರುದ್ರವಾಗುತ್ತದೆ; ಆದರೆ ೫ನೆಯ ಗಣವನ್ನು ಬ್ರಹ್ಮದಂತೆ ಒಡೆದರೆ, ೬ನೆಯದು, ಸ್ಥಾನಪಲ್ಲಟದಿಂದ ರುದ್ರವಾಗದೆ, ವಿಷ್ಣುಗಣವಾಗುತ್ತದೆ. ಅದು ಏಕೆಂಬುದು ಅಂಶಗಣ ಸ್ವರೂಪದ ವಿಶಿಷ್ಟತೆಯಿಂದ ತಿಳಿಯುತ್ತದೆ. ಈ ರೀತಿಯ ಪಳಿಗಳು ಇನ್ನೂ ಕೆಲವು ಸಿಗುತ್ತವೆ. ಹೀಗಿದ್ದರೂ, ಅದರ ಗೇಯತೆಗೆ ಭಂಗತಾರದಂತಹ ಪದಪುಂಜಗಳು, ರಚನಾನೈಪುಣ್ಯ ಇಲ್ಲಿ ಕಾಣುತ್ತದೆ.

ಪಳಿಗೆ "ಏಳು ಗಣ (೪ + ೩) ಒಟ್ಟಿನಲ್ಲಿ; ಆರನೆಯ ಗಣದಲ್ಲಿ ಬ್ರಹ್ಮ – ಮಿಕ್ಕುವು ವಿಷ್ಣು ಅಥವಾ ರುದ್ರ ಆಗಬಹುದೆಂಬಂತಿದೆ" ಎಂಬುದು ಪಳಿಯ ಬಗ್ಗೆ "ಶ್ರೀ"ಯವರ ಅಭಿಪ್ರಾಯ. ಭಟ್ಟರ ಪಳಿಗಳಲ್ಲಿ ರುದ್ರಗಣ ಬಂದುದೇ ಕಡಮೆ. ಅವರ ಪಳಿಯ ಮೊದಲ ಪಾದದಲ್ಲಿ ರುದ್ರಗಣ, ವಿಷ್ಣು ಗಣಕ್ಕೆ ಬದಲಾಗಿ ಬಂದುದು ನನ್ನ ಕಣ್ಣಿಗೆ ಬೀಳಲಿಲ್ಲ. ಎರಡನೆಯ ಪಾದದಲ್ಲಿ ಕೆಲವಲ್ಲಿ ರುದ್ರಗಣ ಬಂದುದಿದೆ. ಮೇಲೆ ಕಾಣಿಸಿದ ಎರಡು ಮೂರು ಪಳಿಗಳಲ್ಲಿ ಆರನೆಯ ಗಣವನ್ನು ಬ್ರಹ್ಮದಂತೆ ಪ್ರಸ್ತಾರಿಸಿದಾಗ, ಎರಡನೆಯ ಪಾದದ ಮೊದಲ ಗಣ (೫ನೆಯ ಗಣ) ರುದ್ರವಾಗುವುದನ್ನು ಗಮನಿಸ ಬಹುದು. ಆದರೆ, ಮೇಲೆ ವಿಶ್ಲೇಷಿಸಿದಂತೆ, ಈ ಪಳಿಗಳು ಹಾಡುವಾಗ ೫ನೆಯ ಗಣದಲ್ಲಿ ಬ್ರಹ್ಮದ ಪಲುಕನ್ನು ಹೊಂದಿ ಮುಂದುವರಿಯುತ್ತದೆ. ಹಾಗಾದಾಗ, ಉದಾಹರಿಸಿದ ಪಳಿಗಳಲ್ಲಿ, ಒಂದು ಪಳಿ ೬ನೆಯ ಸ್ಥಾನ–ಬ್ರಹ್ಮ ಬರಬೇಕಾದ ಸ್ಥಾನ–ದಲ್ಲಿ ರುದ್ರಗಣವನ್ನೂ, ಇನ್ನೆರಡು ಆ ಸ್ಥಾನದಲ್ಲಿ

ವಿಷ್ಣುಗಣವನ್ನೂ ಉಳ್ಳವಾಗುತ್ತವೆ. ಬ್ರಹ್ಮಗಣದ ಬದಲು ಅಪೂರ್ವವಾಗಿ ರುದ್ರ ಯಾ ವಿಷ್ಣುಗಣ ಬರುವುದು ಜಾನಪದ ಏಳೆಗಳಲ್ಲೂ ಇತ್ತೆಂದು ಕಾಣುತ್ತದೆ. ಇದನ್ನು ಪರಮೇಶ್ವರ ಭಟ್ಟರು ಗಮನಿಸಿದ್ದಾರೆ. "ಅಪೂರ್ವವಾಗಿ ಬ್ರಹ್ಮವಿರಬೇಕಾದ ಕಡೆಯೂ ವಿಷ್ಣುವೋ ರುದ್ರವೋ ಬರುವುದು ಕೂಡ ಉಂಟು" ಎಂದು 'ತುಂಬೆ ಹೂವಿ'ಗೆ ಬರೆದ ಹಿನ್ನುಡಿಯಲ್ಲಿ ಹೇಳಿದ್ದಾರೆ. ಆದರೆ ಹಾಗೆ ಬ್ರಹ್ಮದ ಸ್ಥಾನವಲ್ಲಿ (೩ನೆಯ ಗಣ) ರುದ್ರ ಅಥವಾ ವಿಷ್ಣುಗಣಗಳು ಬಂದ ಏಳೆಗಳಲ್ಲಿ ಬ್ರಹ್ಮಗಣ ೫ನೆಯ ಸ್ಥಾನವಲ್ಲಾದರೂ ಬಂದಿದೆಯೇ ಎಂಬುದನ್ನೂ ನೋಡಬೇಕಾಗಿದೆ. ಭಟ್ಟರ ಇಂಥ ಏಳೆಗಳಲ್ಲಾದರೆ ಬ್ರಹ್ಮ ಐದನೆಯ ಸ್ಥಾನದಲ್ಲಾದರೂ ಬಂದಿದೆ.

ನಾಲ್ಕು ಅಂಶಗಳುಳ್ಳ ರುದ್ರಗಣ, ಎರಡಂಶದ ಗಣವಾದ – ತ್ರಿಪದಿ, ಏಳೆಗಳ ಗೇಯತೆಗೆ ಅಧಿಕ ಕಾರಣವಾದ ಗಣವಾದ – ಬ್ರಹ್ಮಗಣದ ಮೊದಲಲ್ಲಿ ಬರುವುದು ಏಳೆಗೆ ಅಷ್ಟಾಗಿ ಭೂಷಣವಲ್ಲವೆನ್ನ ಬೇಕಾಗಿದೆ. ಅದರಿಂದ ಬ್ರಹ್ಮಗಣದ ಗೇಯತೆಯನ್ನು, ನಾದವನ್ನು ಇಳಿಕೆಗೈದಂತೆ ಆಗುತ್ತದೆ. ಬ್ರಹ್ಮಗಣವಾದ ಮೇಲೆ ರುದ್ರಗಣ ಬಂದರೆ, ಮೊದಲದರ ಸ್ವರಲಂಬನದೊಂದಿಗೆ, ಮತ್ತಿನದು ತ್ವರಿತವಾಗಿ ಉಚ್ಚರಿಸಲ್ಪಟ್ಟಾಗ, ಇಂಥ ತಿರುವಿನಿಂದೊಂದು ಸ್ವಾರಸ್ಯ ಬರುತ್ತದೆ.

ಹಿಡಿಬೂದಿ ಮಾಡೀತು ಇಡಿಯ ಕಾಡನೆ ಸುಟ್ಟು

ಬ್ರ ರು

ಕಿಡಿಯ । ಕಡೆಗಣಿಸ । ಲಾಗದು

"ಕಿಡಿಯ" ಎಂದು ರಾಗವನ್ನು ಹಿಡಿದಿಡುವಷ್ಟು ಸಮಯವ್ಯಾಪ್ತಿಯಲ್ಲೆ 'ಕಡೆಗಣಿಸ' ಎಂಬುದನ್ನು ಉಚ್ಚರಿಸಬೇಕು. ಆಗ ಅವೆರಡೂ 'ವಿಷ್ಣುಗಣ'ದ ಉಚ್ಚಾರ ವ್ಯಾಪ್ತಿಯನ್ನುಳ್ಳವಾಗುತ್ತವೆ. ಬ್ರಹ್ಮದ ಅನಂತರ ವಿಷ್ಣುಗಣ ಬಂದಲ್ಲಿ ರುದ್ರಗಣದಷ್ಟು ತ್ವರಿತವಾಗಿ ಉಚ್ಚರಿಸಲ್ಪಡುವುದಿಲ್ಲವೆಂಬುದೂ ಕೆಳಗಿನ ಏಳೆಯನ್ನು ಹಾಡಿದಾಗ ಅನುಭವಕ್ಕೆ ಬರುತ್ತದೆ.

ಮೋದದ ಪ್ರಾಸಕೆ ನಾದದಾನಂದಕೆ

ಬ್ರ ವಿ

ಓದಿ । ತಲೆದೂಗ । ದವರುಂಟೆ

ರು ಬ್ರ

ಇದನ್ನು "ಓದಿ ತಲೆ । ದೂಗ । ದವರುಂಟೆ" – ಹೀಗೆ ವಿಂಗಡಿಸಿ ಹಾಡಿದಾಗ ಗಣಗಣಗಳ ಮಧ್ಯೆ ಇರುವ ಸಮತೂಕಕ್ಕೆ, ಸಾಮರಸ್ಯಕ್ಕೆ ಭಂಗಬರುತ್ತದೆ. ಈ ಕಾರಣಕ್ಕಾಗಿಯೇ ಮೇಲೆ ಕಾಣಿಸಿದ ಕೆಲವು ಏಳೆಗಳಲ್ಲಿ ೫ನೆಯ ಸ್ಥಾನದಲ್ಲೇ ಬ್ರಹ್ಮಗಣ ಬರುತ್ತದೆ, ಹಾಗೆ ವಿಂಗಡಿಸುವುದೇ ಸಾಧು ಎಂದು ಹೇಳಿದ್ದು.

ಈ ಕೆಲವು ಏಳೆಗಳಷ್ಟೆ ವೈವಿಧ್ಯವನ್ನು ತೋರಿವೆಯಲ್ಲದೆ, ಉಳಿದ ಏಳೆಗಳೆಲ್ಲಾ ನಿರ್ಧರಿತ ಲಕ್ಷಣದ ಮಾದರಿಯಲ್ಲೆ ಪಡಿಮೂಡಿವೆ.

ಎರಡೆರಡೆ ಅಡಿಗಳಲ್ಲಿ ಪ್ರ್ಯಾಪ್ತಭಾವವನ್ನು ಸಂಚಿತಗೊಳಿಸಿದ, ಶಕ್ತಮುಕ್ತಕಗಳಾಗಿವೆ, ತುಂಬೆ ಹೂವಿನ ಏಳೆಗಳು. 'ಒಂದಡಿ ಇಳೆಗೆಲ್ಲ, ಒಂದಡಿ ನಭಕೆಲ್ಲ, ವಾಮನ ಬೆಳೆದೆದ್ದ ಹಾಗೆ' ಹಿಡಿದರೆ ಹಿಡಿತುಂಬವಾಗಿರುವ ಭಾವ, ಬಿಟ್ಟರೆ ಜಗವೆಲ್ಲ ವ್ಯಾಪಿಸುವಂತಿದೆ.

ಛಂದಸ್ಸನ್ನು ಇಟ್ಟು ಬಿಟ್ಟು ಬರೆಯುತ್ತಿರುವ ಕಾಲದಲ್ಲಿ, ಜೀವನದ ಸಂಕೀರ್ಣಾನುಭವಗಳನ್ನು ಅಭಿವ್ಯಕ್ತಿಸುವಲ್ಲಿ ನವ್ಯಮಾರ್ಗವೊಂದನ್ನು ಕಂಡುಕೊಂಡು, ಆ ದಾರಿಯಲ್ಲೆ ಹೆಚ್ಚಿನ ಕವಿಗಳು ಗಮಿಸುವ ಕಾಲದಲ್ಲಿ, ಸಮಕಾಲೀನ ಜೀವನದ ಅನುಭವಗಳನ್ನು, ಇನ್ನಿತರ ವಿಷಯಗಳನ್ನು ಪ್ರಾಚೀನ ದೇಶೀಯ ಛಂದಸ್ಸುಗಳಲ್ಲೆ ಅಭಿವ್ಯಕ್ತಿಸಿದ ಪ್ರೊ. ಪರಮೇಶ್ವರ ಭಟ್ಟರ ವಿಶಿಷ್ಟತೆಯನ್ನು ಗಮನಿಸಬೇಕು. ಈ

ಛಂದಸ್ಸುಗಳು ಅವರಿಗೆ ತೊಡಕಾಗದೆ ತೊಡವಾದುವು. ಅಂತೆಯೇ ದೇಶೀಯ ಛಂದಸ್ಸುಗಳ ಪುನರುತ್ಥಾನಕ್ಕೆ ಅವರು ತೊಡಗಿದಂತಿದೆ. ಗಾದೆಗಳನ್ನು ಅವರು ರಚಿಸಿದರು; ವಚನಗಳನ್ನು ಪ್ರಾಚೀನರ ವಚನರಚನಾವಿನ್ಯಾಸಕ್ಕನುಗುಣವಾಗಿ ಹೊಸೆದರು. ಪ್ರಯೋಗಕ್ಕೆಂದು ಅವರೆತ್ತಿಕೊಂಡವೆಲ್ಲ ಪ್ರಸಿದ್ಧಿಯನ್ನು ಪಡೆದುವು. ಅವರ ಪ್ರಯೋಗ ಪರಿಣತಿಯ ಪ್ರಕಾಶದಲ್ಲಿ ಇನ್ನೂ ಹಲವು ದೇಶೀಯ ಛಂದೋರೂಪಗಳು ಬೆಳಕುಕಂಡು ಪ್ರಚಲಿತವಾಗಬಹುದು, ಆಗಬೇಕು. ಕವಿಯ ಕೊರಳಿಂದ ಕೊಳಲಿಂದ ಬತ್ತೀಸರಾಗ ಹೊರಹೊಮ್ಮುವುದನ್ನು ಕನ್ನಡಿಗರ ಕಿವಿಗಳು ಕೇಳಬೇಕು.

## ೩೨. ನಾಮ ನೇಮಕ

**ನೊಸಂತಿ**

"ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕೋ" ಎಂದು ಹಾಡಿ ನಾಮದಲ್ಲೇ ನೇಮವನ್ನು ಮಾಡಿ ನಾಮಮಹಿಮೆಯನ್ನು ದಾಸರು ಎತ್ತಿಹಿಡಿದರು. ನಾಮದಲ್ಲೂ ಒಂದು ಬಲವಿದೆ, ಒಲವಿದೆ; ನಾಮದಲ್ಲೂ ಒಂದು ಅರ್ಥವಿದೆ, ಒಂದು ಅವ್ಯಕ್ತ ಶಕ್ತಿಯಿದೆ. ಯಾವುದೇ ಹೆಸರಿನ ಹಿಂದೆ ಭಾವದ ತುಯ್ತ ಇರುತ್ತದೆ. ಒಂದು ಅನುಭವ ಸಾಂದ್ರವಾಗಿರುತ್ತದೆ. ಆ ಹೆಸರು ವ್ಯಕ್ತಿಯದಾಗಿರಲಿ, ಪ್ರಾಣಿಯದಾಗಿರಲಿ, ಮರಗಿಡಗಳದಾಗಿರಲಿ, ಸ್ಥಳದ್ದಾಗಿರಲಿ, ವಸ್ತುಗಳ ದಾಗಿರಲಿ — ಎಲ್ಲದರ ಹಿಂದೂ ಒಂದು ಔಚಿತ್ಯ ಇರುತ್ತದೆ; ಇರಬೇಕು. ಸಮಗ್ರತೆಯ ಪ್ರತಿನಿಧಿಯಾಗಿ ಹೆಸರಿದ್ದರೇ ಅದಕ್ಕೊಂದು 'ಗುಣ' ಕೂಡಿಬರುತ್ತದೆ. ಔಚಿತ್ಯರಹಿತ ಹೆಸರು ಅಪಹಾಸ್ಯಕ್ಕೆ ಗುರಿಯಾಗುತ್ತದೆ. ಕಟಕಿಯ ಚಿತ್ರಕ್ಕೆ ಸಿಕ್ಕುತ್ತದೆ. ಆದ್ದರಿಂದ ಹೆಸರಿಡುವುದೂ ಒಂದು ಕಲೆ; ಅದಕ್ಕೂ ಕೌಶಲ ಬೇಕು ಸಂಸ್ಕಾರ ಬೇಕು; ಪ್ರತಿಭೆ ಬೇಕು.

ಹುಟ್ಟಿದ ಕೂಸಿಗೆ ಹೇಗೆ ಹೆಸರು ಅತ್ಯಾವಶ್ಯಕವೋ ಹಾಗೆಯೇ ಬರೆದ ಪುಸ್ತಕಕ್ಕೂ ಕೃತಿಯ ಹೆಸರು ಅತ್ಯಾವಶ್ಯಕ. ಕೃತಿಯ ಹೆಸರು ಕೃತಿಯ ಪ್ರತಿನಿಧಿ; ಸಮಸ್ತ ಸಾರವನ್ನೂ, ಧ್ಯೇಯವನ್ನೂ ಪ್ರತಿಬಿಂಬಿಸುವ ಕನ್ನಡಿ. ಈ ಹೆಸರಿಸುವ ಕಲೆಯಲ್ಲಿ ಸಿದ್ಧಿಪಡೆದವರು ವಿರಳ. ಅಂತಹ ವಿರಳರಲ್ಲಿ ಶ್ರೀ ಎಸ್. ವಿ. ಪಿ. ಒಬ್ಬರು. ಇವರ ಒಂದೊಂದು ಕೃತಿಯ ಹೆಸರೂ ಒಂದೊಂದು ತೊಡವು; ಒಂದೊಂದೂ ಕೃತಿಯ ನೇರಪ್ರತಿನಿಧಿಗಳು.

**ಇಂದ್ರಚಾಪ**

". . . . ಬೇರೆ ಬೇರೆ ಬಣ್ಣಗಳನ್ನು ಮೆರೆದು ಆಕಾಶದಲ್ಲಿ ಮೂಡುವ ಇಂದ್ರಚಾಪ ಹೇಗೆ ಮನಸ್ಸಿಗೆ ಆಹ್ಲಾದಕರವಾಗಿರುತ್ತದೋ ಹಾಗೆ ಬೇರೆ ಬೇರೆ ಭಾವಗಳನ್ನು ಮೆರೆದು ಮೂಡಿರುವ ಈ ಕವಿತೆಗಳೂ ಮನಸ್ಸಿಗೆ ಆಹ್ಲಾದಕರವಾಗಿರುತ್ತವೆ." ಎಂಬುದು ಕವಿಯ ಅಭಿಮತ. 'ಇಂದ್ರಚಾಪ' ಎಂದರೆ ಕಾಮನಬಿಲ್ಲು. ಅನಾಸಕ್ತರನ್ನೂ ಒಂದು ಕ್ಷಣ ಆಸಕ್ತರನ್ನಾಗಿಸುವ ನಯನಮನೋಹರ ದೃಶ್ಯ. ಈ ದೃಶ್ಯ ಮೂಡಬೇಕಾದರೆ ಒಂದು ದಿಕ್ಕಿನಲ್ಲಿ ಮಳೆ ಸುರಿಯುತ್ತಿರಬೇಕು ಮತ್ತೊಂದು ದಿಕ್ಕಿನಲ್ಲಿ ರವಿ ಮಿಂಚುತ್ತಿರಬೇಕು. ಆಗ ಸಪ್ತವರ್ಣ ದೃಗ್ಗೋಚರವಾಗುತ್ತದೆ. ಹಾಗೆಯೇ ಸಮಾಜದ ಒಂದು ದಿಕ್ಕಿನಲ್ಲಿ ಬೀಳುತ್ತಿರುವ ಮಳೆಗೆ ಮತ್ತೊಂದು ದಿಕ್ಕಿನಲ್ಲಿ ಮಿಂಚುವ ಈ ಕವಿರವಿ ಬೆಳಕನ್ನು ಬೀರಿ ಸಮಾಜದ ತೋರಿಕೆಯ ಬದುಕನ್ನು ವಿಭಜಿಸಿ ಅಲ್ಲಿ ವಾಸ್ತವವಾಗಿ ಇರುವ ಬಣ್ಣ ಬಣ್ಣದ ರೀತಿನೀತಿ ಗಳನ್ನು ಈ ಕೃತಿಯಲ್ಲಿ ಇಂದ್ರಚಾಪದಂತೆ ಮೂಡಿಸಿದ್ದಾರೆ. ಸ್ವವಿಚಾರಲಹರಿ ಮತ್ತು ಸುಭಾಷಿತ ಸಾರಗಳನ್ನೊಳಗೊಂಡ ಒಂದೊಂದು ಮುಕ್ತಕಗಳೂ ಒಂದೊಂದು ಬಣ್ಣವಾಗಿ ಮೂಡಿವೆ.

**ಉಪ್ಪುಕಡಲು** ಆಧುನಿಕ ವಚನಸಾಹಿತ್ಯದ ಶ್ರೇಷ್ಠ ಕೃತಿ.

"ಸಂಸಾರವನ್ನು ಸಾಗರಕ್ಕೆ ಹೋಲಿಸುವರಷ್ಟೆ! ಯಾರ ಜೀವನದಿಯ ಎಷ್ಟು ಸ್ವಾದೋದಕ ಹರಿದು ಬಂದರೂ ಕೆಲವರ ಸಂಸಾರಾಬ್ಧಿ ಉಪ್ಪಾಗಿಯೇ ಉಳಿಯುತ್ತದೆ. ಯಾರ ಪಾಲಿಗೆ ಬಾಳಕಡಲು ಹಾಲೋ. ಜೇನೋ, ಮೊಸರೋ! ಅನೇಕರ ಪಾಲಿಗೆ ಅದು ಉಪ್ಪೇ, ಆದರೇನು? ಕ್ಷಾರೋದಧಿಯೂ ರತ್ನಾಕರವಾಗಿರುವಾಗ ಚಿಂತಿಸಬೇಕಾದದ್ದಿಲ್ಲ ತಾನೆ! ಈ ಕಾರಣದಿಂದ "ಉಪ್ಪುಕಡಲು" ಎಂದು ಈ ಸಂಕಲನಕ್ಕೆ ಹೆಸರಿಟ್ಟಿದ್ದೇನೆ" ಎನ್ನುತ್ತಾರೆ.

ಸಂಸಾರವನ್ನು ಸಾಗರಕ್ಕೆ ಹೋಲಿಸುವುದು ಹಳೆಯ ಕವಿಗಳ ಮಾತು. ಹಾಗೆ ಹೋಲಿಸುವಾಗ ಸಾಗರದ ಒಂದಿನ ಉಪ್ಪನ್ನು ಮಾತ್ರ ಯಾರೂ ಗಮನಿಸಿದಂತಿಲ್ಲ. "ಉಪ್ಪು" ಎಂದ ಮಾತ್ರಕ್ಕೆ

ಮುಟಿ ಸೊಟ್ಟಗೆ ಮಾಡಬೇಕಿಲ್ಲ. ಅನ್ನ ನೀರುಗಳಷ್ಟೇ ಮನುಷ್ಯನಿಗೆ ಉಪ್ಪು ಅವಶ್ಯ. ಅದುವೆ "ಕ್ಷಾರೋದಧಿಯೂ ರತ್ನಾಕರ"ವಾಗಿದೆ. ಜೀವನ ಹಾಲ್ಗಡಲೂ ಅಲ್ಲ. ಜೇನ್ಗಡಲೂ ಅಲ್ಲ. ಅದು ವಾಸ್ತವವಾದದ್ದು ; ಪ್ರಪಂಚದ ಮೇಲೆ ವಾಸ್ತವವಾಗಿ ಇರುವ ಉಪ್ಪುಕಡಲು. ಈ ಉಪ್ಪುಕಡಲಲ್ಲಿ ಇದ್ದು "ಉಸಿರಾಡಿ ಈಸಾಡಿ ಬದುಕುವುದಕ್ಕೆ ಒಂದು ಮತ್ಸ್ಯಕಲೆ ಬೇಕು." ಅದೇ ಈ ಕೃತಿಯಲ್ಲಿನ ವಚನಗಳ ಸಾರ; ಅದೇ ಈ ಹೆಸರಿನ ಔಚಿತ್ಯ.

**ಕೃಷ್ಣಮೇಘ**

"ಮೈಸೂರು ವಿಶ್ವವಿದ್ಯಾನಿಲಯದ ಚಿನ್ನದ ಹಬ್ಬ; ವೀರವಾಹಿನಿಯ ಗಡಿ ಸಂರಕ್ಷಣೆಯ ಕಾಳಗ; ಕಾರಣಪುರುಷರಾದ ಬಸವೇಶ್ವರರ ಅವತಾರ ಲೀಲೆ ರಾಷ್ಟ್ರಪಿತ ಗಾಂಧೀಜಿಯವರ ಜನ್ಮಶತಾಬ್ದಿ ; ಚಂದ್ರಲೋಕಕ್ಕೆ ಮನುಷ್ಯನ ಉಡ್ಡಾಣ—ಇವು ಭವದ ತಾಪದಲ್ಲಿ ಸೊರಗಿ ಸೊಪ್ಪಾದ ಜೀವಸಸ್ಯಾವಳಿಗೆ ಅಮೃತಾಂಬುಧರಗಳಂತೆ ಒದಗಿಬಂದ ಘಟನೆಗಳೇ ಸರಿ. ನನ್ನ ಬಗೆಯ ಬಾನಿನಲ್ಲಿ ಸಾಂದ್ರವಾಗಿ ಕವಿದ ಈ ಘಟನೆಗಳ ಸಂಸ್ಮರಣೆಯ ಕೃಷ್ಣಮೇಘಗಳೇ ಇಲ್ಲಿ ಸಾಂಗತ್ಯದ ವೃಷ್ಟಿಗೆ ಕಾರಣಗಳಾಗಿವೆ" ಎಂಬುದು ಈ ಹೆಸರಿನ ಔಚಿತ್ಯ.

ಕೃಷ್ಣಮೇಘ ಎಂದರೆ ಕಪ್ಪುಮೋಡ; ಜಲಭರಿತ ಮೋಡ, ಮಳೆಯನ್ನು ಸುರಿಸಲಿರುವ ಮೋಡ. ಓದುಗನ ಹೃದಯ ತಣಿಯುವಂತೆ ಮಳೆಕರೆಯಲಿರುವ ಮೋಡ. ಈ ಕಾವ್ಯದಲ್ಲಿ ಬರುವ ಒಂದೊಂದು ವಿಚಾರಗಳೂ ಸಮಕಾಲೀನನೊಬ್ಬನ ಮೇಲೆ ಮಳೆಗರೆಯುತ್ತವೆ. ಇದು ಬರೀ ಕಪ್ಪು ಮೋಡ ಮಾತ್ರವಲ್ಲ. ಅದು "ಕೃಷ್ಣಮೇಘ"—ಪೌರಾಣಿಕ ಪ್ರಜ್ಞೆಯನ್ನು ಎಚ್ಚರಿಸುವ ಮೇಘ.

**ಇಂದ್ರಗೋಪ** ಐವತ್ತುಮೂರು ಹಾಡುಗಳ ಸಂಕಲನ. 'ಇಂದ್ರಗೋಪ'ವೆಂದರೆ ಒಂದು ಹುಳು.

"....ಇಂದ್ರಗೋಪಗಳಂತೆಯೇ ಇವೂ (ಇಲ್ಲಿನ ಹಾಡುಗಳೂ) ಪುಟ್ಟ ಪುಟ್ಟವು. ಅವುಗಳಂತೆಯೇ ಇವುಗಳ ಮಿನುಗು, ಇವುಗಳ ಮಿಣುಕು. ಈಗ ಹೊಳೆದು ಈಗ ಅಳಿದು ಇಲ್ಲಿ ಹೊಳೆದು ಅಲ್ಲಿ ಅಳಿದು ಇಂದ್ರಗೋಪಗಳು ತಣ್ಣನೆಯ ನುಣ್ಣನೆಯ ಹಸುರು ನೀಲಿಯ, ಬಿಳಿಯ ನೀಲಿಯ, ತಿಳಿಯ ತೆಳು ಹೊಳಪು ಕಾಣಿಸಿ ನಮ್ಮ ಮನಸ್ಸನ್ನು ಸೆಳೆಯುತ್ತವೆಯಷ್ಟೆ! ಇಲ್ಲಿಯ ಹಾಡುಗಳೂ ಹಾಗೆ ಮಾಡಿಯಾವು....ಈ ಬೆಳಕಿಗೆ ಸಂಬಂಧಿಸಿದಂತೆ ಕೀಟ ಶಾಸ್ತ್ರಜ್ಞರ ಮತ ಏನೇ ಇರಲಿ ಕವಿಯ ಕಣ್ಣಿಗೆ, ಕವಿಯ ಮನಸ್ಸಿಗೆ ಇಂದ್ರಗೋಪಗಳ ಈ ಬೆಳಕು ಚಿಮ್ಮಿಸುವ ಕಲೆ ಸುಂದರವಾದ ಒಂದು ಪ್ರತೀಕವೇ ಆದೀತು....ನಮ್ಮ ಮನಸ್ಸೂ ಇಂದ್ರಗೋಪವೇ. ಹೊತ್ತಿದಷ್ಟು ಹೊತ್ತು ಹೊಳೆದು, ಹೊಳೆದಷ್ಟು ಕಾಲ ಸುತ್ತಣದನ್ನು ಬೆಳಗಿ, ಮತ್ತೆ ಕತ್ತಲ ಮರೆಮುಸುಕು ಎಳೆದುಕೊಳ್ಳುವುದೇ ಮನಸ್ಸಿನ ಇಂದ್ರಗೋಪದ ಕರ್ಮ...."

**ಸೀಳುನೋಟ**

"ಸೀಳುನೋಟ" ಕವಿಕಾವ್ಯ ವಿಚಾರಾತ್ಮಕವಾದ ಐದು ಬರಹಗಳ ಒಂದು ಸಣ್ಣ ಸಂಕಲನ. "ಕವಿಯ ಕೃತಿ ಒಂದು ಅರ್ಥದಲ್ಲಿ ಶಿವಗಂಗೆ ಬೆಟ್ಟದ ಹಾಗೆ. ಒಂದು ದಿಕ್ಕಿನಿಂದ ನೋಡಿದವರಿಗೆ ಅದು ಸರ್ಪಾಕಾರ, ಮತ್ತೊಂದು ದಿಕ್ಕಿನಿಂದ ನೋಡಿದವರಿಗೆ ಅದು ವೃಷಭಾಕಾರ, ಮಗುದೊಂದು ದಿಕ್ಕಿನಿಂದ ನೋಡಿದವರಿಗೆ ಅದು ಲಿಂಗಾಕಾರ. ಆದರೆ ಅದರ ಸತ್ಯಸ್ಯ ಸತ್ಯದ ಸ್ಥಿತಿಯೇ ಬೇರೆ." ಆದ್ದರಿಂದ ಪ್ರಾಮಾಣಿಕನಾದ ವಿಮರ್ಶಕನೊಬ್ಬನು ಹೊರನೋಟದ ಪರಿಭಾವನೆ ಮಾತ್ರದಿಂದಲೇ ಕೃತಿಯ ನೆಲೆಬೆಲೆಗಳನ್ನು ಕಟ್ಟಲು ಸಾಧ್ಯವಿಲ್ಲ. ಒಳನೋಟದ ಅರಿವು, ದೃಷ್ಟಿಯಿಂದ ಸೃಷ್ಟಿಯನ್ನು ಸೀಳಿನೋಡುವ ಶಕ್ತಿ, ಅವನಿಗೆ ಬೇಕು. ಕಾವ್ಯಾರಾಧಕನಿರಲಿ, ಸಾಹಿತ್ಯೋಪಾಸಕನಿರಲಿ, ಸಾಹಿತ್ಯಕ್ಕೆ ಪ್ರವೇಶ ಮಾಡುವವನಿರಲಿ ಯಾರೇ ಆದರೂ ವಿಮರ್ಶಕಸ್ಥಾನದಲ್ಲಿ ನಿಂತಾಗ ಬಾಹ್ಯಭ್ರಮೆಯನ್ನು ಬದಿಗಿರಿಸಿ ಒಂದು ಸೀಳುನೋಟದ (ಕ್ರಾಸ್ ಸೆಕ್ಷನ್) 'ಕ್ಷ' ಕಿರಣವನ್ನು ಒಳಪದರಕ್ಕೆ ಹಾಯಿಸಿ ಆ ಬೆಳಕಿನಿಂದ ಕೃತಿ ಸ್ವರೂಪದ ಒಳ ಭಾವಚಿತ್ರವನ್ನು ತೆಗೆಯಬೇಕು. ಹಾಗೆಯೇ ಈ 'ಸೀಳುನೋಟ' ಕೃತಿ ಸುಂದರವಾದ ಭಾವಚಿತ್ರವನ್ನು ಒದಗಿಸಿದೆ.

ಇದೇ ರೀತಿ **ಅಂಚೆಯ ಪೆಟ್ಟಿಗೆ** ಹೇಗೆ ವಿವಿಧ ವಿಷಯಗಳನ್ನು ವಿವಿಧ ವ್ಯಕ್ತಿಗಳ ವಿಚಾರ ವಿನಿಮಯದ ಪತ್ರಗಳಲ್ಲಿ ಹೊಂದಿರುತ್ತದೋ ಹಾಗೆಯೇ ವಿವಿಧ ಛಂದಸ್ಸು, ವಿವಿಧ ಭಾವ, ವಿವಿಧ ವಿಚಾರಗಳನ್ನು ತುಂಬಿಕೊಂಡು ಅವರವರ ಪ್ರವೃತ್ತಿಗೆ ಸಂಬಂಧಪಟ್ಟುದನ್ನು ಕೊಡುವ **"ಅಂಚೆಯ ಪೆಟ್ಟಿಗೆ"**. ನಲ್ಲನಲ್ಲೆಯರ ಅನುಸಂಧಾನದ ಉಕ್ತಿಗಳ ಮುಕ್ತಕ ಪ್ರತಿನಿಧಿಯಾದ **"ಚಂದ್ರವೀಥಿ"** ತುಂಬೆಹೂವು ಎಷ್ಟು ಸಾರಳ್ಯ ಮತ್ತು ಶ್ರೇಷ್ಠವೋ ಅಷ್ಟೇ ಸಾರಳ್ಯ ಹಾಗೂ ಕಾವ್ಯ ಶ್ರೇಷ್ಠತೆಯಿಂದ ಕೂಡಿರುವ 'ಏಳ'ಯ **"ತುಂಬೆ ಹೂವು"**. ವಾಚಕ ಲೋಕದ ವಿಚಾರ ಮಥನಕ್ಕೆ ಮಂಥಾನ (ಕಡೆಗೋಲು) ದಂತಿರುವ ಗಾದೆಗಳ **"ಮಂಥಾನ"** ಅಲ್ಲದೆ **'ಸುರಗಿ ಸುರಹೊನ್ನೆ'** ಮೊದಲಾದ ಹೆಸರುಗಳು ಆಯಾ ಕೃತಿಯ ಹೆಸರಿಗೆ ತಕ್ಕಂತೆ ವಿಚಾರವನ್ನೂ ಭಾವವನ್ನೂ, ಸೃಷ್ಟಿಯನ್ನೂ ಮತ್ತು ಪ್ರತಿಪಾದನೆಯನ್ನೂ ಒಳಗೊಂಡಿವೆ.

ಹೀಗೆ ಮುಕ್ತಕ, ವಚನ, ಭಾವಗೀತೆ, ವಿಮರ್ಶೆ ಮೊದಲಾದ ಸಂಕಲನಗಳಿಗೆ ಪ್ರಮಾಣಕ್ಕೆ ಅನುಗುಣವಾಗಿ, ರುಚಿಗೆ ಅನ್ವರ್ಥವಾಗಿ, ರೀತಿಗೆ ತಕ್ಕುದಾಗಿ, ಹೆಸರಿಸುವ ಸಿದ್ಧಿ ಶ್ರೀ ಎಸ್. ವಿ. ಪಿ.ಯವರಿಗೆ ಸಿದ್ಧಿಸಿದೆ. ವರ್ಡ್ಸ್‌ವರ್ತ್ ಕವಿಯ "ಮೈಕೆಲ್"ನನ್ನು ಕನ್ನಡದ **'ಮಾಚಯ್ಯ'**ನನ್ನಾಗಿಸಿರುವ ಈ ಮಾಂತ್ರಿಕ **ನಾಮ ಸೇವಿಯ** ಕೌಶಲವನ್ನು ಮೆಚ್ಚದವರೂ ಉಂಟೆ?

# ೩೩. ಕನ್ನಡ ಕಾಳಿದಾಸ ಮಹಾಸಂಪುಟದ ಛಂದೋಬಂಧ

ಎ. ವಿ. ನಾವಡ

೧

ಕವಿಕುಲಗುರು ಎಂದು ಕೀರ್ತಿತನಾಗಿ, ವಿಶ್ವಸಾಹಿತ್ಯದಲ್ಲೇ ದೊಡ್ಡ ಹೆಸರಾಗಿರುವ ಕಾಳಿದಾಸನ ಎಲ್ಲ ಕೃತಿಗಳನ್ನೂ ಮೂಲದ ಸತ್ತ್ವಕ್ಕೆ ಊನಬಾರದಂತೆ, ಕುಂದುಬಾರದಂತೆ ಕನ್ನಡಕ್ಕೆ ಅನುವಾದಿಸಿದ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರಿಗೆ ಎಂಟೆದೆ ಇದ್ದರೂ ಇದ್ದೀತು. ಈ ಭಾಷಾಂತರದ ಕೆಲಸ ಸುಲಭಸಾಧ್ಯವಾದುದಲ್ಲ. ಶಬ್ದಕ್ಕೆ ತಕ್ಕ ಪ್ರತಿಶಬ್ದವನ್ನು ಜೋಡಿಸುವುದು ಅನುವಾದವಲ್ಲ. ಮೂಲ ಕವಿಯ ಅಂತರಂಗವನ್ನು ಅರಿತುಕೊಂಡು, ಅವನ ಭಾಷಾಶೈಲಿ, ನುಡಿಗಟ್ಟು, ಛಂದದ ವಿಲಾಸವಿಭ್ರಮಗಳನ್ನು ಅರಗಿಸಿಕೊಂಡು ತಾದಾತ್ಮ್ಯಸಿದ್ಧಿಯನ್ನು ಪಡೆದಾಗಲೇ ಅನುವಾದ ಯಶಸ್ವಿಯಾಗುತ್ತದೆ. ಪ್ರೊ. ಭಟ್ಟರ ಕೈಯಲ್ಲಿ ಕಾಳಿದಾಸನ ಎಲ್ಲ ಕೃತಿಗಳೂ ಕನ್ನಡದಲ್ಲಿ ಮರುಹುಟ್ಟು ಪಡೆದಿವೆ. ಸಂಸ್ಕೃತದ ಗತ್ತು ಗಾಂಭೀರ್ಯಗಳಿಗೆ ಕನ್ನಡ ಭಾಷೆಯ ಒನಪು ವಯ್ಯಾರಗಳ ಕಸಿಯಾಗಿ ನವೋನವವಾಗಿದೆ. ಭಾಷೆ–ಶೈಲಿ–ಛಂದಸ್ಸು ಎಲ್ಲವೂ ಅಭ್ಯಾಸಯೋಗ್ಯವಾಗಿವೆ.

ಸಂಸ್ಕೃತ ಕಾವ್ಯನಾಟಕಾದಿಗಳ ಅನುವಾದಕನಿಗೆ ಎದುರಾಗುವ ದೊಡ್ಡ ಸಮಸ್ಯೆಯೆಂದರೆ ಛಂದಸ್ಸಿನದು. ಮೂಲಛಂದೋಬಂಧಗಳ ಭಾವವನ್ನು ಕಳೆಗೆಡದಂತೆ ಸಮರ್ಪಕವಾಗಿ ಕನ್ನಡಿಸುವಲ್ಲಿ ಹಾಗೂ ಕನ್ನಡದ ಜಾಯಮಾನಕ್ಕೆ ಒಗ್ಗಬಲ್ಲ ಬಂಧಗಳನ್ನು ರೂಪಿಸುವುದು ಅವನ ಕೆಲಸ. ಬಂಧದಲ್ಲಿ ನಯ ನಾಜೂಕು ವೈವಿಧ್ಯ ಬಳುಕುಗಳನ್ನು ತರಬಲ್ಲನಾದರೆ ಅದು ಅವನ ಹಿರಿಮೆ.

೨

ಹತ್ತೊಂಬತ್ತನೆಯ ಶತಮಾನದ ಕೊನೆ—ಇಪ್ಪತ್ತನೆಯ ಶತಮಾನದ ಮೊದಲಿನಿಂದ ಕನ್ನಡ ಭಾಷೆ-ಸಾಹಿತ್ಯ-ಕಾವ್ಯ-ವಸ್ತುಗಳಲ್ಲಿ ಹೇಗೆ ಒಂದು ಬಗೆಯ ವಿನೂತನತೆ ಮೂಡಿಬಂತೋ ಛಂದಸ್ಸಿನಲ್ಲೂ ಹೊಸತೊಂದು ಹೆದ್ದಾರಿ ತೆರೆಯಿತು. ಆದರೆ ಹತ್ತೊಂಬತ್ತನೆಯ ಶತಮಾನದ ಕೊನೆಯ–ಹಳೆಯ ಸಂಧಿಕಾಲದಲ್ಲಿ ಇಂಗ್ಲಿಷ್ ಸಾಹಿತ್ಯದ ಅಭ್ಯಾಸದಿಂದ ಮೂಡಿಬಂದ ಅನೇಕ ಸ್ವತಂತ್ರ–ಅನುವಾದ ಕೃತಿಗಳೆಲ್ಲವೂ ಹಳೆಯ ಜಾಡನ್ನೇ ಅನುಸರಿಸಿದುವು. ಅಭಿನವಕಾಳಿದಾಸನೆಂದು ಹೆಸರಾಂತ ಬಸವಪ್ಪ ಶಾಸ್ತ್ರಿ, ಅಳಸಿಂಗರಾಚಾರ್ಯ ಮುಂತಾದವರು ತಮ್ಮ ಅನುವಾದ ಕೃತಿಗಳಿಗೆ ಹಳಗನ್ನಡವನ್ನೇ ಬಳಸಿಕೊಂಡರು. ಕಂದವೃತ್ತಗಳಷ್ಟರಲ್ಲೇ ಅವರ ಛಂದೋವೈವಿಧ್ಯ ಸೀಮಿತವಾಯಿತು. ಛಂದೋರಚನೆಗಳಿಗೆ ಸಂಸ್ಕೃತವನ್ನು ನೆಮ್ಮಿಕೊಂಡ ಕನ್ನಡದ ಮೊದಮೊದಲ ಕವಿಗಳು ಪ್ರಾಸದ ಬಗೆಗೆ ಮಾತ್ರ ನಾಗವರ್ಮನ 'ಕನ್ನಡಕ್ಕೆ ಸತತಂ ಪ್ರಾಸಂ' ಎಂಬ ಆಜ್ಞೆಗೆ ತಲೆಬಾಗಿದರು. ಭಾವಕ್ಕೆ ತಕ್ಕ ಛಂದಸ್ಸು ಎಂಬ ಮಾತಿಗೆ ಎರವಾಗಿ ಸಂಸ್ಕೃತದ ವೃತ್ತ, ಅನುಷ್ಟುಭ್ ಛಂದಗಳೊಳಗಿನ ವಸ್ತುವನ್ನು ಹಿಗ್ಗಿಸಿಯೋ ಕುಗ್ಗಿಸಿಯೋ ಕನ್ನಡದ ಕಂದವೃತ್ತಗಳ ಗೂಡಿನೊಳಗೆ ಅಮರಿಸಹತ್ತಿದರು. ಈ ವೇಳೆಗೆ 'ಶ್ರೀ'ಯವರ 'ಇಂಗ್ಲಿಷ್ ಗೀತಗಳು' ಪ್ರಕಟವಾಗಿ ಕನ್ನಡಿಗರಿಗೆ ಛಂದಸ್ಸಿನ ಬಗೆಗೆ ಆ ವರೆಗೆ ಇದ್ದ ಕಲ್ಪನೆಯೆಲ್ಲಾ ಬುಡಮೇಲಾಗಿ ಅವರಲ್ಲಿ ಹೊಸ ದೃಷ್ಟಿಯನ್ನು ಮೊಳೆಯಿಸಿತು: ಛಂದಸ್ಸಿನ ಹೊಸತೊಂದು ಪುಟವನ್ನೇ ತೆರೆಯಿಸಿತು. ಮಾತ್ರಾಗಣಗಳ ತಳಹದಿಯಲ್ಲಿ ಅದ್ಭುತ ಛಂದೋವೈವಿಧ್ಯವನ್ನು ತರಬಹುದೆಂಬ ಮನವರಿಕೆಯಾಯಿತು. "ಕನ್ನಡ ನುಡಿಯ ಜಾಯಮಾನಕ್ಕೆ ರಗಳೆ, ಷಟ್ಪದಿಗಳ ಕಾಲದಿಂದಲೂ ಒಗ್ಗಿ ಹದವಾಗಿ ಪಳಗಿರುವ ಮಾತ್ರಾಗಣಗಳನ್ನೇ ಇಟ್ಟಿಗೆಯಾಗಿ ಉಪಯೋಗಿಸಿ ಚರಣವಿನ್ಯಾಸ ಪ್ರಾಸವಿಲಾಸಗಳನ್ನು ಮಾತ್ರ ಬಗೆಬಗೆಯಾಗಿ ಪರ್ವಡಿಸಿ ಹೊಸಹೊಸ ಕಟ್ಟಡಗಳನ್ನು ರಚಿಸುವುದು ಸಾಧ್ಯ, ಉಚಿತ ಎಂಬುದು ಪಾಂಡಿತ್ಯದಿಂದ ಪರಿಪಕ್ವವಾದ ಶ್ರೀಯವರ ಸ್ವತಂತ್ರ ದೃಷ್ಟಿಗೆ ಹೊಳೆಯಿತು. ಹೀಗೆ 'ಶ್ರೀ'ಯವರು ನಾಲ್ಕಾರು ಮೂಲಲಯಗಳನ್ನು ಆಧರಿಸಿ ಅವುಗಳನ್ನೇ ವಿವಿಧ ಭಂಗಿಗಳಲ್ಲಿ ಕುಣಿಸಿ

ಮಣಿಸಿ ಹಳೆಯ ಲಯಗಳಿಗೆ ಹೊಸ ಉಸಿರನ್ನು ತುಂಬಿದರು. ಮುಂದೆ ಕುವೆಂಪು, ಬೇಂದ್ರೆ ಮುಂತಾದವರು ಈ ಮಾರ್ಗದಲ್ಲಿ ಇನ್ನಷ್ಟು ಪ್ರಯೋಗ ನಡೆಸಿದರು. 'ಶ್ರೀ'ಯವರ ವಿವಿಧ ಪ್ರಾಸ ವಿನ್ಯಾಸ, ಲಯಯೋಜನೆ, ಬೇಂದ್ರೆಯವರ ಜಾನಪದ ಛಂದದ ಗತ್ತು, ಕುವೆಂಪು ಅವರ ಆಂತರಿಕ ಲಯಯೋಜನೆ, ನೃತ್ಯೋಚಿತ ಲಯಗತಿ ಎಲ್ಲವೂ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ 'ಕನ್ನಡ ಕಾಳಿದಾಸ ಮಹಾ ಸಂಪುಟ'ದ ಕವಿತಾರಚನೆಯಲ್ಲಿ ಏಕತ್ರ ಮೇಳೈಸಿವೆ. 'ಪದ್ಯದಲ್ಲಿ ಭಾವಾಭಿವ್ಯಕ್ತಿಗೆ ಭಾಷೆಯ ಜತೆಗೆ ತಾಳಲಯವೂ ಸಾಧನವಾಗುತ್ತದೆ' ಎಂಬ ಮಾತಿನ ಸತ್ಯತೆಯನ್ನು ಇಲ್ಲಿ ಕಾಣಬಹುದಾಗಿದೆ.

೩

ಕವಿಯ ಅಂತರಂಗದ ವಿಶಿಷ್ಟ ಭಾವಭಾವನೆಗಳಿಗೆ ಕಾವ್ಯಾತ್ಮಕ ಮೂರ್ತರೂಪ ದೊರೆಯುವುದಕ್ಕೆ ಅತ್ಯಂತ ಸಹಕಾರಿಯಾದ ಛಂದಸ್ಸು ಕೆಲವೊಮ್ಮೆ ಭಾವಾಭಿವ್ಯಕ್ತಿಗೆ ಮಾರಕವಾಗುವುದೂ ಸಾಧ್ಯ. ಛಂದಸ್ಸಿನ ವಜ್ರಮುಷ್ಟಿಯಿಂದ ಬಿಡಿಸಿಕೊಳ್ಳಲಾರದೆ ಅಸ್ವತಂತ್ರನಾದ ಕವಿ ಛಂದಸ್ಸಿನ ಪರಿಮಿತಕ್ಕಾಗಿ ತನ್ನ ಭಾವಗಳನ್ನು ಹಿಗ್ಗಿಸಿಯೋ ಕುಗ್ಗಿಸಿಯೋ ಬರೆಯಬೇಕಾಗುತ್ತಿತ್ತು—ಒಂದು ಕಾಲದಲ್ಲಿ. ಹೀಗೆ ತನ್ನ ಆತ್ಮವನ್ನು ಸೂತ್ರಕ್ಕೆ ಮಾರಿಕೊಳ್ಳುವ ಅನುವಾದಕ ಪ್ರಾಸಕ್ಕಾಗಿಯೋ ಮಾತ್ರಾಸಂಯೋಜನಕ್ಕಾಗಿಯೋ ಅನೇಕವೇಳೆ ಮೂಲಕವಿಯ ಭಾವವನ್ನು ಮೊಟಕುಮಾಡಬೇಕಾಗುತ್ತದೆ, ಇಲ್ಲವೇ ಮೂಲದಲ್ಲಿಲ್ಲದ್ದನ್ನು ಇರುಕಿಸಬೇಕಾಗುತ್ತದೆ. ಸಂಸ್ಕೃತ ಶ್ಲೋಕದಲ್ಲಿರುವುದು ೩೨ ಅಕ್ಷರಗಳು. ಅದನ್ನು ಭಾಷಾಂತರಕಾರ ಕಂದದಲ್ಲಿ ಎರಕ ಹೊಯ್ಯುವಾಗ ಅನಿವಾರ್ಯವಾಗಿ ಭಾವವನ್ನು ಹಿಗ್ಗಲಿಸಬೇಕಾಗುತ್ತದೆ. ಜತೆಗೆ ಪ್ರಾಸದ, ಜಗಣ, ನಗಣಗಳ ಕಾಲ್ತೊಡಕು ಬೇರೆ. ಇಂತಹ ಹಲವಾರು ತೊಡಕುಗಳಿಂದ ಮೀರಿ ಭಾವಾನುಸಾರಿಯಾಗಿ ಛಂದಸ್ಸು ಮೂರ್ತಗೊಳ್ಳುವುದು ದುರ್ಲಭವೇ ಸರಿ.

ಉದಾಹರಣೆಗೆ:

> ತವಾಸ್ಮಿ ಗೀತರಾಗೇಣ ಹಾರಿಣಾ ಪ್ರಸಭಂ ಹೃತಃ ।
> ಏಷ ರಾಜೇವ ದುಷ್ಯಂತಸ್ಸಾರಂಗೇಣಾತಿರಂಹಸಾ ॥ (ಶಾಕುನ್ತಲಂ I ೫)

ಈ ಶ್ಲೋಕ ಬಸವಪ್ಪ ಶಾಸ್ತ್ರಿಗಳ ಕೈಯಲ್ಲಿ ಹೀಗೆ ಕನ್ನಡಿತವಾಗಿದೆ.

> ಅಂಗನೆ ಹೃತನಾದೆಂ ಹೃದ-
> ಯಂಗೊಳ್ವೀ ನಿನ್ನ ಗೀತರಾಗದೊಳೀಗಳ್ ।
> ತುಂಗತರ ವೇಗಶಾಲಿ ಕು-
> ರಂಗದೆ ಹೃತನಾದ ತೆರದೊಳೀ ದುಷ್ಯಂತಂ ॥

ಬಸವಪ್ಪ ಶಾಸ್ತ್ರಿಗಳು ಮೂಲದ ಸಂಸ್ಕೃತ ಶ್ಲೋಕವನ್ನು ಕಂದದಲ್ಲಿ ಅಡಕಗೊಳಿಸುವ ವೇಳೆ ವಸ್ತುವನ್ನು ಹಿಗ್ಗಲಿಸಬೇಕಾಯಿತು. ಕವಿಯ ಮನಸ್ಸಿನ ಭಾವದ ಸ್ವರಗತಿಯನ್ನು ಛಂದಸ್ಸು ಎಷ್ಟರ ಮಟ್ಟಿಗೆ ಅನುಸರಿಸಿದೆ ಎಂಬುದು ಪ್ರಧಾನವೇ ಹೊರತು ತತ್ಪ್ರತಿಯಾದ ಅನುವಾದ ನಮಗೆ ಬೇಕಿಲ್ಲ. ಈ ದೃಷ್ಟಿಯಿಂದ ಹಳಗನ್ನಡ ಭಾಷೆಯನ್ನು ವೃತ್ತಕಂದಗಳಲ್ಲಿ ನೆಯ್ದು ಭಾವಕ್ಕೆ ಬಂಧ ರೂಪಿಸುವುದರಲ್ಲಿ ಅನಿವಾರ್ಯವಾಗಿ ಬಸವಪ್ಪ ಶಾಸ್ತ್ರಿಗಳ ಅನುವಾದ ಸೋತಿದೆ ಎಂದರೆ ತಪ್ಪಾಗಲಾರದು.*

ಆ ಶ್ಲೋಕದ ಶ್ರೀ ಪರಮೇಶ್ವರ ಭಟ್ಟರ ಅನುವಾದ ಹೀಗಿದೆ:

> ಮನಸೆಳೆಯುವ ಈ ರಾಗದೆ ಹೃತನಾದೆನು ಭರದೆ
> ಅತಿ ವೇಗದೆ ಸಾರಂಗದೆ ದುಷ್ಯಂತನ ತೆರದೆ

---

*ಈ ಮಾತು ಬಸವಪ್ಪ ಶಾಸ್ತ್ರಿಗಳೊಬ್ಬರಿಗೆ ಮಾತ್ರ ಅನ್ವಯಿಸುವ ಮಾತಲ್ಲ. ವೃತ್ತ, ಕಂದ ಮುಂತಾದ ನಿಯತ ಬಂಧಗಳಲ್ಲಿ ಭಾವವನ್ನು ಬಂಧಿಸ ಹೊರಟ ಎಲ್ಲರಿಗೂ ಅನ್ವಯಿಸುತ್ತದೆ.

ಇಲ್ಲಿನ ಆರುಮಾತ್ರೆಯ ಲಯ ಓಡಾಡುತ್ತಿರುವ ಸಾರಂಗದ ವೇಗವನ್ನು ಅನುಸರಿಸುವಂತಿದೆ ಜೊತೆಗೆ ೬ ಮಾತ್ರೆಯ ಗಣದೊಳಗಿನ (೨+೪) ಮಾತ್ರೆಯ ಅಂತರ್ಲಯ ಹೊಸ ಸೊಗಸನ್ನು ತಂದಿದೆ. ಅಷ್ಟೇ ಅಲ್ಲದೆ ಅಂತ್ಯಪ್ರಾಸ ಕಿವಿಗೆ ಇಂಪನ್ನು ಕರೆಯುತ್ತದೆ. ಭಾವದ ಗತಿಯನ್ನು ಅನುಸರಿಸುವ ಛಂದದ ಗತಿ ಪ್ರೊ. ಭಟ್ಟರ ಅನುವಾದದ ಯಶಸ್ಸಿನ ಗುಟ್ಟು.

೪

ಸಂಸ್ಕೃತ ಛಂದೋಬಂಧಗಳ ಗಾತ್ರ, ಅವುಗಳು ಬಿಂಬಿಸುವ ಭಾವಕ್ಕನುಸರಿಸಿ ಅನುವಾದಕರು ಕನ್ನಡದಲ್ಲಿ ವಿವಿಧಛಂದೋಲಯಗಳನ್ನು ರೂಪಿಸಿಕೊಂಡಿದ್ದಾರೆ. ಇಲ್ಲಿ ಬಹುಪಾಲು ಮಾತ್ರಾಗಣದ ನಡೆಗಳು. ಅತ್ಯಪೂರ್ವವೆಂಬಂತೆ ಅಂಶಛಂದಸ್ಸು ಇಣಿಕಿದೆ. ೬, ೪, ೫, ೩+೪ ಮಾತ್ರೆಗಳ ಗಣಗಳೇ ಗೋಚರಿಸುತ್ತವೆ. ಕ್ವಚಿತ್ತಾಗಿ ೬ ಮಾತ್ರೆಯ ಗಣ ಯೋಜನೆಯೂ ಉಂಟು.

### ಉತ್ಸಾಹದ ನಡೆ

೩, ೩ ಮಾತ್ರೆಯ ಉತ್ಸಾಹದ ನಡೆ ಚಪಲ, ಚುರುಕು. ಹೆಸರಿನಂತೆ ಉತ್ಸಾಹಭಾವವೇ ಮೈದಳೆದು ಬಂದಂತೆ ಇಲ್ಲಿನ ನಡೆ ರೂಪುಗೊಂಡಿದೆ. ಒಂದೇ ಮೌಲ್ಯದ ಧಾಟಿ ಉದ್ದಕ್ಕೂ ಮುನ್ನಡೆದರೆ. ಕೇಳುವ ಕಿವಿಗೆ ಬೇಸರಬರುವುದು ಸಹಜ. ಆದುದರಿಂದ ಇಲ್ಲಿ ಕವಿ ೩+೩ರ ಸ್ಥಾನದಲ್ಲಿ ೨+೪ ಅಥವಾ ೪+೨ರ ಗಣವನ್ನಿರಿಸಿ ವೈವಿಧ್ಯಕ್ಕೆ ಎಡೆಮಾಡಿಕೊಟ್ಟಿದ್ದಾರೆ. ಕೊನೆಯ ಚರಣದ ಮುಡಿ ಆ ಪಾದಕ್ಕೆ ಒಂದು ಬಗೆಯ ಮುಗಿತಾಯವನ್ನು ಕೊಡುತ್ತದೆ.

| | |
|---|---|
| ತರು : ಲತೆಗಳ : ಬಂಧು : ವೆನಿಸಿ | ೨ : ೪ : ೩ : ೩ |
| ಖಗ : ಮೃಗಗಳ : ತ್ರಾಣ : ವೆನಿಸಿ | ೨ : ೪ : ೩ : ೩ |
| ಪ್ರಣಯಿ : ಜನರ : ಪ್ರಾಣ : ವೆನಿಸಿ | ೩ : ೩ : ೩ : ೩ |
| ಅಮಿತ : ಗುಣಗ : ಳಿಂದ : ಲೆಸೆದು | ೩ : ೩ : ೩ : ೩ |
| ಕಾಮಿನಿ : ಯರ : ಮನವ : ಸೆಳೆದು | ೪ : ೨ : ೩ : ೩ |
| ನಲಿಸ : ಲಿರುವ : ವರ್ಷ : ಋತುವು | ೩ : ೩ : ೩ : ೩ |
| ಕಾಂತೆ : ನಿನ್ನ : ಮನಸಿ : ನೆಲ್ಲ | ೩ : ೩ : ೩ : ೩ |
| ಕಾಮನೆ : ಗಳ : ಸಲಿಸ : ಲಿ (ಋತುಸಂಹಾರ II ೨೮) | ೪ : ೨ : ೩ : ಗುರು |

ರಭಸದಿಂದ ಕಡಲಕಡೆಗೆ ಧಾವಿಸುತ್ತಿರುವ ಹೊಳೆಯ ಓಟವನ್ನು ಅನುಕರಿಸುತ್ತದೆ ಕೆಳಗಿನ ಈ ಉತ್ಸಾಹಲಯ—ನೋಡಿ:

| | |
|---|---|
| ವೇಗ : ವಾಗಿ: ಹರಿದು : ಬರುವ : ಕೊಳೆಯ : ನೀರು : ಸೆಳೆಯ : ಲು | ೩ : ೩ : ೩ : ೩ : ೩ : ೩ : ೩ : ಗು |
| ದಡದ : ಬದಿಯ : ಮರಗ : ಳೆಲ್ಲ : ಕೊಚ್ಚಿ : ಉರುಳಿ : ಬೀಳ : ಲು | ೩ : ೩ : ೩ : ೩ : ೩ : ೩ : ೩ : ಗು |
| ಭ್ರಮಿತ : ದುಷ್ಟ : ಕಾಂತೆ : ಯಂತೆ : ಅಮಿತ : ವೇಗ : ಗಾಮಿ : ನಿ | ೩ : ೩ : ೩ : ೩ : ೩ : ೩ : ೩ : ಗು |
| ರಭಸ : ದಿಂದ : ಧಾವಿ : ಸುತಿದೆ : ಕಡಲ : ಕಡೆಗೆ : ವಾಹಿ : ನಿ | ೩ : ೩ : ೩ : ೩ : ೩ : ೩ : ೩ : ಗು |

ಪ್ರತಿ ಚರಣದ ಕೊನೆಗೆ ಬರುವ ಅಕ್ಷರವು ಸ್ವರಾಂದೋಲನವನ್ನು ಉಂಟುಮಾಡುತ್ತದೆ.

| | |
|---|---|
| ಮರೆತು : ಬೇರೆ : ಕಾರ್ಯ : ಗಳನು | ೩ : ೩ : ೩ : ೩ |
| ಮಂತ್ರಿ : ಜನರೊ : ಳಿರಿಸಿ : ಹೊರೆಯ | ೩ : ೩ : ೩ : ೩ |
| ನಿಂತು : ಬನದೊ : ಳಿರಲು : ನರಪ : ನು | ೩ : ೩ : ೩ : ೩ : ಗು |
| ನಿರುತ : ಮೊಲಿದ : ಕತದೆ : ಬೆಳೆದ | ೩ : ೩ : ೩ : ೩ |
| ಒಲವೊ : ಳಿಂದು : ಮೃಗಯೆ : ಚತುರ | ೩ : ೩ : ೩ : ೩ |
| ಕಾಮಿನಿ : ವೊಲು : ಕೂರ್ತ : ಳವರ : ನು (ರಘುವಂಶ ix ೬೯) | ೩ : ೩ : ೩ : ೩ : ಗು |

ಮೇಲಿನದು ಸ್ವಲ್ಪ ಮಟ್ಟಿಗೆ ಭೋಗ ಷಟ್ಪದಿಯನ್ನು ಹೋಲುತ್ತದೆ. ಆದರೆ ೩-೬ ಪಾದಗಳಲ್ಲಿ ಎರಡೆರಡು ಗಣಗಳು ಕಡಮೆಯಾಗಿವೆ.

ಉತ್ಸಾಹರಗಳೆಗೂ ಈ ಆಧುನಿಕ ಕೃತಿಯಲ್ಲಿ ಎಡೆ ದೊರೆತಿದೆ:

ಇನನ : ಕಿರಣ : ಮಿರಿಗೆ : ಸುಟ್ಟು : ಕಾದ : ಧೂಳಿ : ನಲ್ಲಿ : ಬೆಂದು ೩ : ೩ : ೩ : ೩ : ೩ : ೩ : ೩ : ೩
ಮೊಗವ: ನಿಳುಪಿ: ನರಳಿ: ನೊಂದು: ಬಿಲದಿ: ನೆಟ್ಟ: ಸರ್ಪ: ಪೊಂದು ೩ : ೩ : ೩ : ೩ : ೩ : ೩ : ೩ : ೩
ನವಿಲು : ಪಕ್ಕ : ಗರಿಯ : ನೆರಳೊ: ಳುಸಿರು: ಬಿಡುತ: ಲಿರುವು: ದು ೩ : ೩ : ೩ : ೩ : ೩ : ೩ : ೩ ಗು

(ಋತುಸಂಹಾರ I ೧೩)

ಮೂರುಸಾಲಿನ ಈ ತುಣುಕಿನ ಮೊದಲೆರಡು ಚರಣಗಳಲ್ಲಿ ಅಂತ್ಯಪ್ರಾಸವಿದ್ದು ಎಂಟೆಂಟು ಗಣಗಳಿಪ್ಪರೆ, ಮೂರನೆಯ ಸಾಲಿನಲ್ಲಿ ಕವಿ ಏಕತಾನಕ್ಕೆ ಅವಕಾಶ ಉಂಟಾಗದಂತೆ ಕೊನೆಯ ಎಂಟನೆಯ ಗಣದ ಸ್ಥಾನದಲ್ಲಿ ಒಂದು ಗುರುವನ್ನು ನಿಲ್ಲಿಸಿ ವೈವಿಧ್ಯವನ್ನು ತಂದಿದ್ದಾರೆ.

೩, ೩ ಮಾತ್ರೆಯ ಬದಲು ೨+೪ರಂತೆ ಗಣವಿಭಜನೆ ಮಾಡಿದಾಗ ಒದಗುವ ಗೇಯತೆ, ಅತ್ಯಪೂರ್ವವಾದುದು. ಈ ವಿನೂತನ ಅಂತರ್ಲಯಯೋಜನೆಯಿಂದ ಉತ್ಸಾಹಲಯ ತನ್ನ ಚಪಲತೆ ಚುರುಕುತನಗಳನ್ನು ಕಳೆದುಕೊಂಡು, ಛಂದೋವನಿತೆಗೆ ನವವಧುವಿನ ಲಾಸ್ಯ ಮೈಗೂಡುತ್ತದೆ:

| | |
|---|---|
| ಕಾ : ಶಾಂಬರ : ಸಂ : ಶೋಭಿತೆ | ೨ : ೪ : ೨ : ೪ |
| ಚಂ : ದ್ರೋದಯ : ಲಸಿತೆ | ೨ : ೪ : ೩ |
| ಹೇ : ಮಾಂಬುಜ : ರುಚಿ : ರಾನನೆ | ೨ : ೪ : ೨ : ೪ |
| ಇಂ : ದೀವರ : ರದನೆ | ೨ : ೪ : ೩ |
| ಸಾ : ರಸಕುಲ : ಕಲ : ಕಲರವ | ೨ : ೪ : ೨ : ೪ |
| ದಾ : ಲಾಪದ : ಬಿನದೆ | ೨ : ೪ : ೩ |
| ಪರಿ : ಣತವಹ : ಶಾ : ಲಿಯವನ | ೨ : ೪ : ೨ : ೪ |
| ದಾ : ನತತನು : ಶರದೆ | ೨ : ೪ : ೩ |
| ನವ : ವಧುವಿನ : ಶೃಂ : ಗಾರದೆ | ೨ : ೪ : ೨ : ೪ |
| ತೋ : ರಿಹಳಿದೊ : ಮುದದೆ | ೨ : ೪ : ೩ |

ಹೆಸರು ಮಂದಾನಿಲವೆಂದಿದ್ದರೂ ಈ ಲಯದ ನಡೆ ಮಂದವಲ್ಲ. ತೀವ್ರ ರಭಸ ಸೂಚಕ. ಆವೇಶ, ಆವೇಗ, ವೀರ ಕೌತುಕಗಳಿಗೆ ಈ ಲಯ ಹೇಳಿ ಮಾಡಿಸಿದಂತಿದೆ. ಶೃಂಗಾರರಸಮಯ ವಾತಾವರಣ ನಿರ್ಮಾಣಕ್ಕೂ ಈ ಲಯ ಯೋಗ್ಯವಾಗಿದೆ.

ಶರ ಷಟ್ಪದಿಯ ಅರ್ಧ ಪದ್ಯವನ್ನು ಎರಡು ಸಾಲಿನಲ್ಲಿರಿಸಿದ ಮಾದರಿ ಇಲ್ಲಿ ದೊರೆಯುತ್ತದೆ.

| | |
|---|---|
| ಸುಂದರ : ಚಂದಿರ : ಬಿಂಬವೆ : ಮೊಗವೆನೆ | ೪ : ೪ : ೪ : ೪ |
| ತಾರಾ : ಗಣ ಆ : ಭರಣವೆ : ನೆ | ೪ : ೪ : ೪ : ಗು |
| ತಿಳಿಬೆಳು : ದಿಂಗಳೆ : ಚೇನಾಂ : ಬರವೆನೆ | ೪ : ೪ : ೪ : ೪ |
| ವಿಕಸಿತ : ನೈದಿಲೆ : ಹಸಿತವೆ : ನೆ | ೪ : ೪ : ೪ : ಗು |
| ಶಾರದ : ಯಾಮಿನಿ : ಬೆಳೆಯುವ : ಳನುದಿನ | ೪ : ೪ : ೪ : ೪ |
| ವರ್ಧಿಸು : ತಿಹನವ : ಯುವತಿಯ : ನೆ | ೪ : ೪ : ೪ : ಗು |

ಶರ ಷಟ್ಪದಿಯ ಮೂರನೆಯ ಪಾದವನ್ನು ತೆಗೆದು ಉಳಿದ ಐದು ಸಾಲುಗಳನ್ನು ಮೂರು ಸಾಲುಗಳಲ್ಲಿ ಜೋಡಿಸಿದ ಕೆಳಗಿನ ಈ ಚರಣವಿನ್ಯಾಸ ಶೃಂಗಾರ ರಸಪೋಷಕವಾಗಿದೆ. ಅದರ ರೂಪಣ ಹೀಗಿದೆ.

ತೈಲಕ : ಪಾಯ : ಸ್ನಾನಾ : ನಂತರ ೪ : ೪ : ೪ : ೪
ತೆಳ್ಳನೆ : ಬೆಳ್ಳನೆ : ಚೀನಾ : ಅಂಬರ ೪ : ೪ : ೪ : ೪
ತನುವಿನೊ : ಳೊಪ್ಪುವ : ಅಲಸೆಯ : ರು ೪ : ೪ : ೪ : ಗು
ಚಂದನ : ಪಂಕವಿ : ಲೇಪದಿ : ಮೆರೆದಿದೆ ೪ : ೪ : ೪ : ೪
ಕಾಡಿಗೆ : ಗಣ್ಣನ : ನೋಟವ : ನೆಸೆದಿರೆ ೪ : ೪ : ೪ : ೪
ಆರಿಹ : ಳಿಕೆಯೊಳು : ಸೋಲದ : ರು (ಋತುಸಂಹಾರ I ೪) ೪ : ೪ : ೪ : ಗು

ಅಕ್ಕರಿಕೆಯ ಬಂಧವನ್ನು ಹೋಲುವ ಅಥವಾ ಪರಿವರ್ಧಿನೀ ಷಟ್ಪದಿಯ ದೀರ್ಘ ಪಾದಗಳನ್ನು ಒಂದರ ಕೆಳಗೊಂದರಂತೆ ನಾಲ್ಕಾಗಿ ಇರಿಸಿದ ಛಂದೋಬಂಧವೊಂದು ಈ ಸಂಪುಟದಲ್ಲಿದೆ. ದೀರ್ಘವಾದ ಭಾವವನ್ನು ಮಿಡಿಯಿಸುವುದಕ್ಕೆ ಒಪ್ಪವಾದ ಛಂದಸ್ಸು ಇದಾಗಿದೆ.

ಅರೆದಿಪ : ಕಾಡಿಗೆ : ಯಂದದ : ಬಣ್ಣದೆ : ನೀಲಿಯ : ನಭವಿರ : ಲು ೪ : ೪ : ೪ : ೪ : ೪ : ೪ ಗು
ಮಾಗಿದ : ಶಾಲಿಯ : ತೆನೆಗಳ : ಬಣ್ಣದೆ : ಹಳದಿಯ : ಹೊಲವಿರ : ಲು ೪ : ೪ : ೪ : ೪ : ೪ : ೪ ಗು
ಬಂದುಗೆ : ಹೂವಿನ : ದೂಳಿನ : ಬಣ್ಣದೆ : ಕೆಂಪಗೆ : ನೆಲವಿರ : ಲು ೪ : ೪ : ೪ : ೪ : ೪ : ೪ ಗು
ಈ ನೆಲ : ಹೊಲ ಆ : ಕಾಶಕೆ : ಸೋಲದ : ದಾವನ : ಮನದೊಲ : ವು ೪ : ೪ : ೪ : ೪ : ೪ : ೪ ಗು
(ಋತುಸಂಹಾರ III ೫)

ಪರಿವರ್ಧಿನೀ ಷಟ್ಪದಿಯ ೧, ೩, ೪, ೬ ಪಾದಗಳ ಲಯವು ಅಂತ್ಯಪ್ರಾಸದ ಬೆಡಗನ್ನು ಹೊತ್ತು ಹೀಗೆ ನಡೆದಿದೆ.

೪ ೪ ೪ ೪
ಪಟುಪಟ : ಹಸ್ವನ : ದಂತಿರು : ವಾನೆಯ

೪ ೪ ೪ ೪ ೪ ೪ ಗು
ಕಿವಿಗಳ : ಬಡಿತದಿ : ನೆಚ್ಚರ : ಗೊಂಡನು : ಉದಯದೊ : ಳವನಿಪ : ನು

೪ ೪ ೪ ೪
ವಿಹಗವಿ : ಕೂಜಿತ : ನಂದಿಗ : ಳೊಸಗೆಯ

೪ ೪ ೪ ೪ ೪ ೪ ಗು
ಸುಖಕರ : ಮಂಗಳ : ಗೇಯವ : ಕೇಳುತ : ನಲಿದನು : ದಶರಥ : ನು

ಪಂಪನಲ್ಲಿ ತೋರುವ ೩+೫ ಮಾತ್ರೆಗಳ ಮಿಶ್ರಗುಣ ಲಯವು ಪರಮೇಶ್ವರ ಭಟ್ಟರ ಅನುವಾದದಲ್ಲೂ ಸುಳುಹುದೋರಿದೆ. ಬಿಲ್ಲಿನಿಂದ ಹೊರಟ ಬಾಣದಂತೆ ನೇರವಾಗಿ ಸಾಗುವ ಮಂದಾನಿಲಲಯವು ಈ ಗಣಪರಿವೃತ್ತಿಯಿಂದಾಗಿ ಬಾಗಿ ಬಳುಕುತ್ತದೆ.

ಗಾಳಿ : ಬೀಸಿತೊ : ಬೆಂಕಿ : ಹೊತ್ತಿತೊ ೩ : ೫ : ೩ : ೫
ಗಿರಿಯ : ದರಿಯ : ನಾವರಿಸಿ ೩ : ೩ : ೫
ಛಳಿರು : ಛಟಿಲೆಂದು : ಬಿದಿರು : ಸುಟ್ಟಿತೊ ೩ : ೫ : ೩ : ೫
ಮೆಳೆಗ : ಳೊಣಗಿ : ಧಗಧಗಿಸಿ ೩ : ೩ : ೫
ಖಗವು : ನೊಂದಿತೋ : ಮೃಗವು : ಬೆಂದಿತೋ ೩ : ೫ : ೩ : ೫
ಕಾಡು : ಕಿಚ್ಚಿನಲಿ : ನಶಿಸಿ (ಋತುಸಂಹಾರ I ೨೫) ೩ : ೫ : ೩

ಒಂದು ಲಯದೊಳಗೆ ಇನ್ನೊಂದು ಲಯವಿರಿಸಿ ಮೇಲಿನ ಪದ್ಯದಲ್ಲಿ ಅಪೂರ್ವ ಸೊಗಸನ್ನು ಸಾಧಿಸಿದ್ದಾರೆ.

ನಾಲ್ಕು ಮಾತ್ರೆಯ ಲಯದಲ್ಲೇ ಎರಡೆರಡು ಪಾದಗಳಿಗೊಮ್ಮೆ ಹೊಸ ಲಯವನ್ನು ಜೋಡಿಸುವ ಜಾಣ್ಮೆ ಪ್ರೊ. ಎಸ್. ವಿ. ಪಿ. ಅವರ ಅನುವಾದದಲ್ಲೂ ಕಾಣುತ್ತದೆ.

ರತಿವೊಲು : ಮೆರೆಯುವ : ರಮಣಿಯ : ರಿಂದು ೪ : ೪ : ೪ : ೩
ಹೊರೆಯವ : ಭಾರದ : ವಸನವ : ನುಳಿದು ೪ : ೪ : ೪ : ೩
ಕಾಳಾ : ಗರುನರು : ಗಂಪನು : ಸೂಸುವ ೪ : ೪ : ೪ : ೪
ಲಾಕ್ಷಾ : ರಸರಂ : ಜಿತವೆನ : ಲೊಪ್ಪುವ ೪ : ೪ : ೪ : ೪
ತೆಳ್ಳನೆ : ವಸನವ : ನೆಳಸುವ : ರು (ಋತುಸಂಹಾರ VI ೧೩) ೪ : ೪ : ೪ : ಗು

ಕವಿ ಬೇಂದ್ರೆಯವರು ತಮ್ಮ ಮೇಘದೂತದ ಅನುವಾದದಲ್ಲಿ ಬಳಸಿಕೊಂಡ ಸುಶ್ರಾವ್ಯವಾದ–೩೫, ಮಾತ್ರೆಗಳ ಮೂರು ಗಣ ಮೇಲೆ ಒಂದು ಗುರು–ಛಂದೋಬಂಧ ವಿರಹ, ಶೃಂಗಾರಗಳ ಭಾವಾಭಿವ್ಯಕ್ತಿಗೆ ಮಧುರ ಮಾಧ್ಯಮ. ಕಾಳಿದಾಸ ಮಹಾಸಂಪುಟದಲ್ಲೂ ಈ ಲಯದ ಲಾಸ್ಯವನ್ನು ನೋಡಬಹುದು. ಅಂತ್ಯಪ್ರಾಸ ಬಂದಿದ್ದರೆ ಗತಿಯ ಗತ್ತು ಇನ್ನೂ ಸೊಗಸಾಗುತ್ತಿತ್ತು.

೩ ೫ ೩ ೫ ೩ ೫ ಗು
ಬಳ್ಳಿ । ಮಿಂಚು : ಮೇ । ಣೆಂದ್ರ । ಧನುವಿ : ನೊಂ । ದುಡಿಗೆ । ಯೆಸೆಯ : ಲಂ । ತೆ
ತೋಯ । ಭರದೆ : ಲಂ । ಬಾಯು । ಮಾನ ಮೆಂ । ದೆನಿಪ । ಮುಗಿಲ : ನೋ । ಡಿ
ದಾರಿ । ನಡೆವ : ಜನ । ಬೆರಗು । ಗೊಳ್ಳು : ತಿರೆ । ಮೋಹ । ವಿವಶ : ರಂ । ತೆ
ಗೆಜ್ಜೆ । ಪಟ್ಟಿ : ಮಣಿ । ಕುಂಡ । ಲಂಗ : ಳಿಂ । ದೊಪ್ಪಿ । ಮೆರೆಯು : ವಂ । ದು
ಕಾಂತಿ । ವೆತ್ತ : ನವ । ವಧುಗ । ಳೈದಿ : ಕ । ಣ್ಮನವ । ಸೆಳೆದು : ನಿಂ । ದು
ಎಂತು । ಮೇಘ: ತಾ । ವಂತ । ಮೋಘ : ವಾ । ದೊಂದು । ರೀತಿ : ಯ । ಲ್ಲಿ
ಪಾಂಥ । ಯುವಜ : ನರ । ಬಗೆಯ । ಕದಿಯು : ವರು । ಮಳೆಯ । ದಿನಗ : ಳ । ಲ್ಲಿ

## ಲಲಿತದ ಲಾಲಿತ್ಯ

ಡಾ. ಕರ್ಕಿಯವರು ಹೇಳುವಂತೆ "ಲಲಿತದ ನಡೆ ಮೆಲುನಡೆ; ತುಂಬಿಹರಿಯುವ ಹೊಳೆಯ ಪ್ರವಾಹವನ್ನು ಹೋಲುತ್ತದೆ ಅದರ ಗತಿ. ಆದುದರಿಂದ ಗಂಭೀರವಾದ ಭಾವವನ್ನು ವ್ಯಕ್ತಪಡಿಸಲು ಸಮರ್ಥವಾದ ಲಯವಿದು"* ಕಾಳಿದಾಸ ಸಂಪುಟದ ಬಹುಪಾಲು ಪದ್ಯಗಳು ಈ ಲಯದಲ್ಲಿವೆ. ಮೇಘಸಂದೇಶವು ಸಂಪೂರ್ಣ ಸೀಸ ಪದ್ಯದ ಲಯದಲ್ಲಿದೆ.

ಕುಸುಮ ಚೌಪದಿ (ಕಿರುಸೀಸ) ಎಂದು ಕರೆಯಬಹುದಾದ ಬಂಧದ ೫ + ೫ ರ ಗಣವನ್ನು ೩ + ೪ + ೩ ರಂತೆ ಒಡೆಯುವುದು ಹೆಚ್ಚು ಸಹಜ, ಸ್ವಾಭಾವಿಕ, ವೈವಿಧ್ಯಪೂರ್ಣ.

ಉದಾಹರಣೆಗೆ:

ಹುತವಹನ : ವೋಲುರಿವ : ನೇಸರಿನ : ಕಿರಣದಲಿ ೫ : ೫ : ೫ : ೫
ಬೆಂದು : ಬಸವಳಿ : ದಿರುವ ನವಿಲುವ : ಕ್ಕಿ ೩ : ೪ : ೩ : ಗು
ಬಳಿಯೆ : ಸುಳಿಯುವ : ಅಹಿಯ : ಹಿಂಸಿಸದೆ; ಸುಮ್ಮನಿದೆ ೩ : ೪ : ೩ : ೫ : ೫
ಹರಿಯ : ಮರೆಯಲಿ : ತನ್ನ : ಮೊಗವನಿಕ್ಕಿ ೩ : ೪ : ೩ : ೫ ಗು
(ಋತುಸಂಹಾರ I ೧೬)

ಚಿಕ್ಕ ಸೀಸದಂತೆ ಸ್ಪಂದಿಸುವ ಆದರೆ ಸಮಪಾದಗಳ ಕೊನೆಯಲ್ಲಿ ಮೂರು ಮಾತ್ರೆಯ ಮೌಲ್ಯದ ಪದ್ಮಗಣವು ನಿಂತು ಲಯವು ತರಂಗಿತಗೊಳ್ಳುವ ಛಂದೋರಚನೆಗಳು ಈ ಸಂಪುಟದಲ್ಲಿ ಅಪಾರ ಪ್ರಮಾಣದಲ್ಲಿ ದೊರೆಯುತ್ತವೆ. ಕೆಳಗಿನದು ಅಂತಹವುಗಳಲ್ಲಿ ಒಂದು:

---

*ಛಂದೋವಿಕಾಸ. ಡಾ. ಡಿ. ಎಸ್. ಕರ್ಕಿ.

ಅಲ್ಲಿ : ಉತ್ತರ : ದಿಶೆಯೊ : ಳಿರುವನು : ಹಿಮಾಲಯನು ೩ : ೪ : ೩ : ೫ : ೫
ದೇವ : ತಾತ್ಮನು : ತಾನು : ಪರ್ವತೇ : ಶ್ವರನು ೩ : ೪ : ೩ : ೫ : ೩
ಪೂರ್ವ : ಪಶ್ಚಿಮ : ಶರಧಿ : ಗವಗಾಹಿ : ನಿಂದಿಹನು ೩ : ೪ : ೩ : ೫ : ೫
ಪೃಥ್ವಿಯ ಮ : ಹಾ ಮಾನ : ದಂಡ ದಂ : ತಹನು ೫ : ೫ : ೫ : ೩

ಮೃದುವಾದ ಮಧುರಭಾವವನ್ನು ಮಿಡಿಯಿಸುವುದಕ್ಕೆ ಯೋಗ್ಯವಾದ ಛಂದೋವತಂಸದ ಲಯ (ಮಹಾನವಮಿಯ ಚೌಪದಿಗಳ ಲಯ) ಈ ಸಂಪುಟದಲ್ಲಿ ಬಹುಪ್ರಮಾಣದಲ್ಲಿ ದೊರೆಯುತ್ತದೆ. ಇಲ್ಲಿ ಪ್ರತಿಚರಣದ ಕೊನೆಯ ಗಣ ಮೊದಲ ಮೂರು ಗಣಗಳಿಗಿಂತ ಚಿಕ್ಕದಾಗಿದ್ದು ರಾಗಾಲಾಪಕ್ಕೆ ಎಡೆಮಾಡಿ ಕೊಡುತ್ತದೆ.

ತೆಳ್ಳನೆಯ : ನಡುವಿರುವ : ಕೆಲವರಬ : ಲೆಯರು ೫ : ೫ : ೫ : ೩
ಕೊಡವೊಲೆಯ : ಭಾರದೊಳು : ಸಲೆ ಬಳುಕು : ತಿಹರು ೫ : ೫ : ೫ : ೩
ತೋರಪೊರ : ವಾರಿನೊಳು : ತತ್ತರಿಸು : ತಿಹರು ೫ : ೫ : ೫ : ೩
ಕಳೆದಿರುಳ : ಸುಸಿಲಿನಾ : ಯಾಸದೊಳು : ನೊಂದು ೫ : ೫ : ೫ : ೩
ಮೆಲ್ಲಮೆ : ಲ್ಲನೆ ಅಡಿಯ : ನಿಡುತಲೈ : ತಂದು ೫ : ೫ : ೫ : ೩
ಹೆಗಲಿಗೊ : ಪ್ಪುವ ಉಡೆಯ : ನಾಂತೆಸೆವ : ರಿಂದು ೫ : ೫ : ೫ : ೩

(ಋತುಸಂಹಾರ IV ೧೪)

ಐದು ಮಾತ್ರೆಯ ಲಯದಲ್ಲಿ ಅನೇಕ ಹೊಸ ಛಂದೋಬಂಧಗಳನ್ನು ಶ್ರೀ ಭಟ್ಟರು ಈ ಕೃತಿಯಲ್ಲಿ ರೂಪಿಸಿಕೊಂಡಿದ್ದಾರೆ. ಗಂಭೀರವಾದ ಭಾವಪೂರ್ಣ ಸನ್ನಿವೇಶದಲ್ಲಿ ಈ ಕೆಳಗಿನ ದೀರ್ಘನಡೆ ಔಚಿತ್ಯಪೂರ್ಣವಾಗಿದೆ:

೫ ೫ ೫ ೫ ೩
ಚತುರಂತ : ಭೂಸತಿಯ : ಸವತಿಯೆನೆ : ಬಹುಕಾಲ : ಸಂದು
೫ ೫ ೫ ೫ ೩
ಪುತ್ರನ : ಪ್ರತಿರಥನ : ಪಡೆದುದೌ : ಷ್ಯಂತಿಗೆಳೆ : ಯರೆದು
೫ ೫ ೫ ೫ ೩
ಸಂಸಾರ : ಭರಣವನು : ತನಯನೊ : ಪ್ಪಿಸಿದ ಪತಿ : ವೆರೆದು
೫ ೫ ೫ ೫ ೩
ನೆಲಸಿದಪೆ : ಮಗುಳ್ದುಮೀ : ಶಾಂತಮಯ : ದಾಶ್ರಮಕೆ : ಬಂದು

(ಅಭಿಜ್ಞಾನ ಶಾಕುಂತಲ IV)

ಇನ್ನೊಂದು ದೀರ್ಘಬಂಧ:

೫ ೫ ೫ ೫ ೫ ೩
ಪೆರನೊಡವೆ : ಕನ್ಯೆದಿಟ : ಪತಿಯ ಬಳಿ : ಗಾಕೆಯನು : ಕಳುಹಿ ಮನ : ವಿಂದು
೫ ೫ ೫ ೫ ೫ ೩
ತನ್ನೊಳಿ : ಟ್ಟೊಡವೆಯನು : ಮಗುಳಿತ್ತ : ನಂದದೊಳು : ನೆಮ್ಮದಿಯೊ : ಳಿಹುದು

(ಅಭಿಜ್ಞಾನ ಶಾಕುಂತಲ IV)

## ಭಾಮಿನಿಯ ಬಳುಕು ನಡೆ

೩, ೪ ಮಾತ್ರೆಯ ಭಾಮಿನಿಯ ಲಯ (ಗೋವಿನ ಹಾಡಿನ ಮಟ್ಟು, ತ್ರಿಪ್ರಡೆ ಲಯ) ಭಾಮಿನಿಯರಂತೆ ಬೆಡಗಿನ ನಡೆ. ಬಾಗಿ ಬಳುಕಿ ಸಾವಧಾನವಾಗಿ ಸಾಗುವ ಈ ಲಯದಲ್ಲಿ ನಾವ

ಗಣಗಣಗಳಲ್ಲಿ ಜೀಕಿ ಮುಂದುವರಿಯುತ್ತದೆ. ನೋವು, ನಲಿವು, ಉಲ್ಲಾಸ, ವೀರ ಎಲ್ಲ ಭಾವಗಳ ಪರಿಮುಖಿಕೆಗೂ ಈ ಲಯ ತನ್ನ ಒಡಲಲ್ಲಿ ಅನುವು ಮಾಡಿಕೊಡುತ್ತದೆ.

ಕೆಳಗಿನ ತ್ರಿಪುಡೆಯ ಲಯದಲ್ಲಿ ಶೃಂಗಾರ ಚಿತ್ರಣವೊಂದು ಅಂತ್ಯಪ್ರಾಸದ ಬಿನ್ನಾಣದಿಂದ ಬಗೆಯನ್ನು ರಮಿಸುತ್ತದೆ.

ಖ ಳ ಖ ಳ ಖ ಳ ಖ ಗು

ಬೆವರು : ಮೈಯೊಳು : ಸುರಿವ : ದಿನದೊಳು : ಭಾರ : ದುಡೆಯನು : ತೊರೆವ : ರು

ಖ ಳ ಖ ಳ ಖ ಳ ಖ ಗು

ತೆಳ್ಳ : ನೆಯ ಬಿಳಿ : ದುಗುಲ : ವನು ಸಲೆ : ತುಂಗ : ಕುಚೆಯರು : ತಳೆವ : ರು

(ಋತುಸಂಹಾರ I ೭)

ದೀರ್ಘಭಾವವನ್ನು ಮಿಡಿಯಬೇಕಾದ ಸಂದರ್ಭದಲ್ಲಿ ಇದೇ ಲಯದ ಚರಣ ಹೀಗೆ ಬೆಳೆದಿದೆ.

ಖ ಳ ಖ ಳ ಖ ಳ ಖ ಳ ಖ ಗು

ಪತ್ನಿಯ : ರಿದಿರೊಳು : ಕಾಮ : ಕಾತರ : ವೆರೆದ : ಸತಿಯರು : ಭರದೆ : ಸುಯ್ಯುತ : ಲೈತ : ರೆ

ಖ ಳ ಖ ಳ ಖ ಳ ಖ ಳ ಖ ಗು

ಬಿಗಿದ : ಕಂಚುಕ : ಸಡಿಲ : ಗೊಳುತಿರೆ : ಕುಂಭ : ಕುಚಯುಗ : ಸಲೆವಿ : ಕಂಪನ : ಗೊಳುತಿ : ರೆ

ಖ ಳ ಖ ಳ ಖ ಳ ಖ ಳ ಖ ಗು

ನವವ : ಸಂತದೊ : ಳೋಪ : ರೀತೆರ : ಕಾಂತೆ : ಯರುಬರೆ : ರಾಗ : ಪರವಶ : ರಾಗ : ರೆ

(ಋತುಸಂಹಾರ VI ೮)

'ಕುಮಾರಸಂಭವ'ದ ರತಿವಿಲಾಪ ಪ್ರಸಂಗದ ಹೆಚ್ಚಿನ ಎಲ್ಲಾ ಪದ್ಯಗಳು ಈ ಭಾಮಿನೀಲಯದಲ್ಲೇ ರೂಪಗೊಂಡಿವೆ – ಎಷ್ಟಾದರೂ ಈ ಲಯ ಕರುಣರಸ ಪೋಷಕವಷ್ಟೆ!

ಖ ಳ ಖ ಳ ಖ ಳ

ಹೋದ : ನಾತನು : ನಿನ್ನ : ಗೆಳೆಯನು : ಮರಳಿ : ಬಾರನು

ಖ ಳ ಖ ಳ ಗು

ಅನಿಲ : ಆಹತ : ದೀಪ : ದಂದದೊ : ಳು

ಖ ಳ ಖ ಳ ಖ ಳ

ನೋಡು : ನಾನಿಂ : ದದರ : ದಶೆಯೊಲು : ಸಹಿಸ : ಲಸದಳ

ಖ ಳ ಖ ಳ ಗು

ವೆನಿಸು : ವಳಲಿನ : ಹೊಗೆಯೊ : ಳುಳಿದಿಹೆ : ನು

(ಕುಮಾರಸಂಭವ IV ೩೦)

ಭಾಮಿನೀಲಯದ ಇನ್ನೊಂದು ವಿನ್ಯಾಸ ಹೀಗಿದೆ :

ಖ ಳ ಖ ಳ

ಚಾರು : ಚಂದಿರ : ನುದಿಸಿ : ಬಂದಿರೆ

ಖ ಳ ಖ ಳ

ತಾರ : ಕೆಗಳ : ಲ್ಲಲ್ಲಿ : ಮಿನುಗಿರೆ

ಖ ಳ ಖ ಗು

ಸಂಜೆ : ಮುನಸೆಳೆ : ವಂದ : ದೆ

೩ ೪ ೩ ೪
ಓರೆ : ನೋಟದ : ಮುಗುಳು : ನಗೆಯಿರೆ

೩ ೪ ೩ ೪
ಮಾರ : ನಾಟದ : ಬೆಡಗು : ಬಗೆಯಿರೆ

೩ ೪ ೩ ಗು
ಸತಿಯು : ರೆಳೆವರು : ಪಾಂಥ : ರ

(ಋತುಸಂಹಾರ I ೧೨)

ಅನುಪ್ರಾಸ ವಿರಹಿತ ಶುದ್ಧ ಭಾಮಿನೀ ಷಟ್ಪದಿಯೂ ಕಾಳಿದಾಸ ಮಹಾಸಂಪುಟದಲ್ಲಿ ಮೈದೋರಿದೆ:

೩ ೪ ೩ ೪
ತಾಯ : ಮೊಲೆಯನು : ಕುಡಿಯ : ಲೆಳಸುತೆ

೩ ೪ ೩ ೪
ಕಾಲು : ಗಳಿಗಡಿ : ಗಡಿಗೆ : ತೊಡರುತೆ

೩ ೪ ೩ ೪ ೩ ೪ ಗು
ನಡಿಗೆ : ಯನು ಸಲೆ : ತಡೆಯು : ತೈತರೆ : ಹಿಂದೆ : ಮರಿವಿಂ : ಡು

೩ ೪ ೩ ೪
ಕೆಲವು : ಕುಶ ಸೂ : ಚಿಯನು : ಮೆಲುತಿರೆ

೩ ೪ ೩ ೪
ಮುಂದೆ : ಕೊಬ್ಬಿದ : ಕೃಷ್ಣ : ಮೃಗವಿರೆ

೩ ೪ ೩ ೪ ೩ ೪ ಗು
ಮೆರೆವ : ಹುಲ್ಲೆಯ : ಹಿಂಡ : ನೊಂದನು : ನಲಿದು : ದೊರೆಕಂ : ಡ

(ರಘುವಂಶ IX ೫೫)

## ಆರು ಮಾತ್ರೆಯ ಲಯ

ಆರು ಮಾತ್ರೆಯ ಲಯವೂ ಕಾಳಿದಾಸ ಮಹಾಸಂಪುಟದಲ್ಲಿ ಇಲ್ಲದಿಲ್ಲ — ಆದರೆ ಬೆರಳೆಣಿಕೆಯಷ್ಟು ಮಾತ್ರ. ಉತ್ಸಾಹಲಯದಂತೆ ಚುರುಕಿನ ನಡೆಯುಳ್ಳ ಈ ಲಯವು ರಾಮನ ಅಯೋಧ್ಯಾ ಪ್ರಯಾಣವನ್ನೂ ರಭಸವನ್ನೂ ಸೂಚಿಸುತ್ತದೆ.

೬ ೬ ೬ ೬ ಗು
ದಾರಿಯೆಡೆಯ : ರಮ್ಯಪಟಗೃ : ಹಂಗಳಲ್ಲಿ : ಕಳೆಯುತಿರುಳ । ನು

೬ ೬ ೬ ೬ ಗು
ಪ್ರಯಣಗೈದು : ಶರ್ವಕಲ್ಪ : ನೃಪ ತಿಲಕನು : ಬಂದು ಪೊಕ್ಕ । ನು
ಮೈಥಿಲಿಯನು : ನೋಡಲೆಳಸಿ : ದಾಪುರಾಂಗ : ನೆಯರ ಓಳಿ : ಯ
ಅಕ್ಷಿಕುವಲ : ಯಂಗಳಿಹಗ : ವಾಕ್ಷಚಯದೆ : ಮೆರೆವಯೋಧ್ಯೆ : ಯು

## ಅಂಶಲಯದ ನಡೆ

ಇದೀಗ ಹೊಸಗನ್ನಡದಲ್ಲಿ ಅಂಶಲಯವನ್ನು ಅಪಾರ ಪ್ರಮಾಣದಲ್ಲಿ ದುಡಿಸಿ, ನಡೆಸಿ ಕೈ ಪಳಗಿಸಿಕೊಂಡಿರುವ ಪ್ರೊ. ಪರಮೇಶ್ವರ ಭಟ್ಟರು 'ಕಾಳಿದಾಸ ಮಹಾಸಂಪುಟ'ದಲ್ಲಿ ಅಂಶಲಯವನ್ನು ವಿಶೇಷತಃ ಬಳಸಿಲ್ಲ. ಒಂದೆರಡು ಸಾಂಗತ್ಯಗಳು ಮಾತ್ರ ಇಣುಕು ಹಾಕಿವೆ. .

ವಿ ವಿ ವಿ ವಿ
ಓವೋವೊ : ಅಸುಗೆಯ : ಗೊಂಚಲ : ಕಿಸುವಣ್ಣ

ವಿ ವಿ ಬ್ರ
ದಂತಹ : ಮಣಿ ಕಾಣೆ : ರಣ್ಣ

ವಿ ವಿ ವಿ ವಿ
ಬೆಂಗದಿ : ರನು ತನ್ನ : ಕರಗಳ : ಚಾಚುತೆ

ವಿ ವಿ ಬ್ರ
ತೋರ್ಪನು : ಕೊಂಡಿಪ : ನಂತೆ

ಃ

ಅಭಿವ್ಯಕ್ತಪಡಿಸಬೇಕಾದ ಭಾವಭಾವನೆಗಳು ಕವಿಯ ಮನಸ್ಸಿನ ಕಾವು ಒತ್ತಡ ಏರಿಳಿತಗಳಿಗನುಸಾರವಾಗಿ ತಮಗೆ ತಾವೇ ಪದಪುಂಜಗಳನ್ನು ಆಯ್ಕೆಮಾಡಿಕೊಂಡು ನಾದಲಯಸಮನ್ವಿತವಾಗಿ ಛಂದಶ್ಶರೀರಿಯಾಗಿ ರೂಪಣಗೊಳ್ಳುತ್ತವೆ. ಹೀಗಾಗಿ ಛಂದಸ್ಸಿಗೂ, ಅದು ವ್ಯಕ್ತಪಡಿಸುವ ಭಾವನೆಗೂ ಒಂದು ಸಾವಯವ ಸಂಬಂಧ ಉಂಟು. ಇದ್ದಲಿನ ಅಂಗಾರದ ಕಣಗಳು ಯಾವುದೋ ಒಂದು ವಿಶಿಷ್ಟ ರೀತಿಯಲ್ಲಿ ಸೇರ್ಪಡೆಗೊಂಡಾಗ ಹೇಗೆ ವಜ್ರವಾಗುತ್ತವೋ ಹಾಗೆಯೇ ಶಬ್ದಗಳು ಯಾವುದೋ ಒಂದು ವ್ಯವಸ್ಥಿತ ರೂಪದಲ್ಲಿ ಜೋಡಣೆಗೊಂಡಾಗ ಕಾವ್ಯಬಂಧಕ್ಕೆ ಒಂದು ಅಲೌಕಿಕತೆ ಬರುತ್ತದೆ. ಕಾವ್ಯಕ್ಕೆ ಈ ಅಲೌಕಿಕತೆಯನ್ನು ತರುವ ಭಾವಾನುಸಾರಿಯಾದ ಛಂದದ ಬೆಡಗನ್ನು ಒಂದು ಉದಾಹರಣೆಯೊಂದಿಗೆ ದರ್ಶಿಸೋಣ:

ಅಭಿಜ್ಞಾನ ಶಾಕುಂತಲದ ಒಂದು ಸನ್ನಿವೇಶ. ದುಷ್ಯಂತನ ತೇರು ಹರಿಣವನ್ನು ಬೆನ್ನಟ್ಟಿ ಕಣ್ವಾಶ್ರಮವನ್ನು ಸಮೀಪಿಸಿದೆ. ದುಷ್ಯಂತ ಬಿಲ್ಲೇರಿಸಿ ಹರಿಣಕ್ಕೆ ಬಾಣವನ್ನು ಗುರಿಹಿಡಿದಿದ್ದಾನೆ. ಅಷ್ಟರಲ್ಲಿ ವೈಖಾನಸರು ನಡುವೆ ಬಂದು, "ಇದು ಆಶ್ರಮದ ಮೃಗ. ಕೊಲ್ಲಕೂಡದು" ಎನ್ನುತ್ತಾ ತಡೆವರು. ಆಶ್ರಮದ ಮೃಗಕ್ಕೆ ಬಾಧೆ ಸಲ್ಲದೆಂಬ ಅವರ ನೋವಿನ ಆವೇಗ, ಉದ್ವೇಗ, ಕಾತರ ಎಲ್ಲವೂ ಅವರ ಮಾತಿನ 'ಉತ್ಸಾಹ ಲಯ' (ಮೂರು ಮಾತ್ರೆಯ ಲಯ) ದಲ್ಲಿ ಸುವ್ಯಕ್ತವಾಗಿದೆ, ನೋಡಿ.

ಆಗ । ದಾಗ । ದೆಸೆಯೆ । ಕಣೆಯ । ಮೆಲ್ಲಿ । ತೆನುವ । ಹುಲ್ಲೆ । ಮೈಯೊಳು
ಹೂವಿನೊಂದು ರಾಶಿಯಲ್ಲಿ ಬೆಂಕಿಯುರಿಯನಿಡುವ ತೆರದೊಳು
ಹುಲ್ಲೆವಿಂಡಿನೊಂದು ಲೋಲಮಪ್ಪ ಬದುಕದೆಲ್ಲಿ ನೋಡಲು
ಎಲ್ಲಿ ವಜ್ರಸಾರಮೆನಿಪ ಭರದೆ ಬರುವ ನಿನ್ನ ಕಣೆಗಳು (ಅ. ಶಾಕುಂತಲ I)

ಇವರ ಮಾತನ್ನು ಕೇಳಿ ದುಷ್ಯಂತನು ಬಾಣವನ್ನು ಇಳಿಸಿದೊಡನೆ, ಮೇಲುಸಿರು ಬಿಡುತ್ತಿದ್ದ ವೈಖಾನಸರ ಹೃದಯದ ಉದ್ವೇಗ ಆರಿತು, ಚಿತ್ತ ತಣಿಯಿತು. ತೃಪ್ತ ಮನಸ್ಸಿನಿಂದ ಸಾವಧಾನವಾಗಿ ಅರಸನಿಗೆ ಮಾಡುವ ಆಶೀರ್ವಾದದ ಮಾತುಗಳಲ್ಲಿ ಹಿಂದಿನ ತವಕವಿಲ್ಲ, ಉದ್ವೇಗವಿಲ್ಲ. ಈ ಆಶೀರ್ವಚನದ ಗಂಭೀರಭಾವ ಐದು ಮಾತ್ರೆಯ ಲಲಿತಲಯದಲ್ಲಿ ಹರಿದಿದೆ.

ಪುರುವಂಶ । ಸಂಭೂತ । ನಾದವನಿ । ಗಿದುಯುಕ್ತ । ಕೇಳು
ಇಂಥ ಗುಣಯುತ ಚಕ್ರವರ್ತಿ ಪುತ್ರನ ಪಡೆದು ಬಾಳು.

* * * *

ಶ್ರೀ ಎಸ್. ವಿ. ಪಿ. ಅವರ ಕಲ್ಪಸಾರಂಗದಲ್ಲಿ ಕುಣಿದ ಛಂದೋನಟಿಯ ಹೆಜ್ಜೆಯನ್ನು, ಗತಿಯ ಗತ್ತನ್ನು ಗುರುತಿಸುವ ಪ್ರಯತ್ನ ಇದು. ಅನುವಾದಕರು ಛಂದಸ್ಸಿನ ಕಟ್ಟುನಿಟ್ಟುಗಳಿಂದ ಕಳಚಿಕೊಂಡು, ಹಳೆಯ ಛಂದೋಲಯಗಳಿಗೆ ಹೊಸ ಉಸಿರನ್ನು ತುಂಬಿ 'ತಾನು ಒಲಿದಂತೆ' ಹಾಡಿದ್ದಾರೆ. ಸಹೃದಯರ ಹೃನ್ಮನಗಳನ್ನು ಸೂರೆಗೊಂಡಿದ್ದಾರೆ—ಕವಿತೆಯ ಭಾವಸೌಂದರ್ಯಕ್ಕಾಗಿ—ನಾದ ಮಾಧುರ್ಯಕ್ಕಾಗಿ.

# ೩೪. ಎಸ್. ವಿ. ಪರಮೇಶ್ವರ ಭಟ್ಟರ ಕವನಗಳಲ್ಲಿ ಕಾವ್ಯಮೀಮಾಂಸೆ

ಬಿ. ಎ. ವಿವೇಕ ರೈ

ಕಾವ್ಯದ ಲಕ್ಷಣ, ಆಕರ, ಪರಿಕರ, ಉದ್ದೇಶ, ವ್ಯಾಪ್ತಿ, ಪ್ರಯೋಜನ ಮುಂತಾದವನ್ನು ಒಳಗೊಂಡ ಚರ್ಚೆಯೇ ಕಾವ್ಯಮೀಮಾಂಸೆ. ಕಾವ್ಯ ಎನ್ನುವುದು ಜೀವನ ಮೀಮಾಂಸೆ ಎನ್ನುವುದಾದರೆ ಕಾವ್ಯ ಮೀಮಾಂಸೆ ಎನ್ನುವುದು ಜೀವನ ಮೀಮಾಂಸೆಯ ಮೀಮಾಂಸೆಯಾಗುತ್ತದೆ. 'ನಾಟ್ಯಶಾಸ್ತ್ರ'ದ ಭರತನಿಂದ 'ರಸಗಂಗಾಧರ'ದ ಜಗನ್ನಾಥನ ವರೆಗೆ ಭಾರತೀಯ ಕಾವ್ಯಮೀಮಾಂಸೆಯು ಹಲವು ವಿವಿಧ ಪ್ರಸ್ಥಾನಗಳ ಮಂಡನೆ. ಖಂಡನೆಗಳ ಮೂಲಕ ನಡೆದುಬಂದಿದೆ. ಅಲಂಕಾರ, ಗುಣ, ರೀತಿ, ಧ್ವನಿ, ರಸ, ವಕ್ರೋಕ್ತಿ, ಔಚಿತ್ಯ ಮುಂತಾದುವುಗಳು ಕಾವ್ಯದ ಒಂದೊಂದು ಅಂಗಗಳು. ಇವುಗಳ ಸಮಷ್ಟಿಯೇ ಕಾವ್ಯ. ವಿವಿಧ ಅಂಶಗಳ ಸಮಷ್ಟಿಯೇ ಮನುಷ್ಯ. ಆಯಾಯ ಅಂಶಗಳಿಗೆ ಅವುಗಳಿಗೇ ವಿಶಿಷ್ಟವಾದ ಸ್ಥಾನಗಳಿವೆ. ಯಾವುದೇ ಒಂದೆರಡು ಅಂಶಗಳು ಸೇರಿದ ಮಾತ್ರಕ್ಕೆ ಮನುಷ್ಯನಾಗುವುದಿಲ್ಲ. ಕಾವ್ಯದ ಬಗೆಗೂ ಇದೇ ಮಾತು. ಕಾವ್ಯನಿರ್ಮಾಣದ ಬಳಿಕ ಅದರ ಬಗೆಗಿನ ಅಭಿಪ್ರಾಯ, ಚರ್ಚೆ, ಒಳಿತು ಕೆಡುಕಿನ ವಿವೇಚನೆ, ಮೌಲ್ಯನಿರ್ಧಾರ ಇತ್ಯಾದಿಗಳನ್ನೊಳಗೊಂಡ ಕಾವ್ಯವಿಮರ್ಶೆಗೆ ಕಾವ್ಯಮೀಮಾಂಸೆ ಪೂರ್ವಭಾಗ, ಪೂರಕ.

ಕನ್ನಡದಲ್ಲಿ ಕಾವ್ಯಮೀಮಾಂಸೆಯನ್ನು ಕುರಿತ ಸ್ವತಂತ್ರ ಕೃತಿಗಳು ವಿರಳ. ಆಧುನಿಕ ಕನ್ನಡ ಕವಿಗಳಲ್ಲಿ ಅನೇಕರು ಕಾವ್ಯಮೀಮಾಂಸೆಗೆ ಕೊಟ್ಟ ಹೊಸ ದೃಷ್ಟಿ ವಿಶೇಷವಾದುದು. ಇವರಲ್ಲಿ ಕುವೆಂಪು. ಪುತಿನ ಅವರು ಕಾವ್ಯಮೀಮಾಂಸೆಯನ್ನು ಕುರಿತ ತಮ್ಮ ಸ್ವತಂತ್ರ ದೃಷ್ಟಿಯ ಗ್ರಂಥಗಳನ್ನು ರಚಿಸಿದ್ದಾರೆ, ಬೇಂದ್ರೆ, ಎಸ್. ವಿ. ಪಿ. ಯವರ ವಿಚಾರಗಳೆಲ್ಲಾ ಅವರ ಕವನಗಳಲ್ಲಿ ಹಂಚಿಹೋಗಿವೆ. ಎಸ್. ವಿ. ಪಿ.ಯವರ ಕವನಗಳಲ್ಲಿ ಕಂಡುಬರುವ ಕಾವ್ಯಮೀಮಾಂಸೆಯ ದೃಷ್ಟಿಯ ಒಟ್ಟೈಕೆಗೆ ಈ ಲೇಖನವನ್ನು ಸೀಮಿತಗೊಳಿಸಿದೆ.

**ಕಾವ್ಯನಿರ್ಮಾಣ:** ಒಳ್ಳೆಯ ಕಾವ್ಯ ಹೇಗೆ ಹುಟ್ಟುತ್ತದೆ ಎಂಬ ಪ್ರಶ್ನೆಗೆ ಬಂದ ಉತ್ತರಗಳು ಹಲವಾರು. ಇದನ್ನು ಕುರಿತು ಎಸ್. ವಿ. ಪಿ. ಯವರು ಒಂದೆಡೆ ಹೀಗೆ ಹೇಳುತ್ತಾರೆ:

"ಹೊಗಳಿಕೆಯನು ಮೀರಿ ತೆಗಳಿಕೆ ಬಂದರೆ
ಸೊಗಸಾದ ಕಾವ್ಯ ಬಂದೀತು." (ತುಂಬೆ ಹೂವು)

ಅಂದರೆ, ಮನಸ್ಸಿಗೆ ಕಾವು ಬಂದರೆ ಕಾವ್ಯ ಹುಟ್ಟುತ್ತದೆ. ಇದೇ ಭಾವ ಇನ್ನೊಂದೆಡೆ ಹೀಗೆ ಬಂದಿದೆ:

"ತತ್ತಿಗೆ ಕಾವನು ಇತ್ತಲ್ಲದೊಡೆಯದು
ಚಿತ್ತಕೆ ಕಾವು ಕೊಡದದೆಯೆ ಕಾವ್ಯವು
ಬಿತ್ತರಗೊಳದು ಸರಸಿಯೆ" (ಸುರಗಿ–ಸುರಹೊನ್ನೆ)

ಕವಿಯ ನಲಿವು ನೋವುಗಳ ಅಂದರೆ ಆತನ ಸಂವೇದನೆಯ ಅಭಿವ್ಯಕ್ತಿ ಕಾವ್ಯದ ರೂಪವನ್ನು ತಾಳುತ್ತದೆ:

"ತಲೆಯೊಳು ತುಂಬಿದ ನಲಿವು ನೋವುಗಳನು
ಕಲೆಗೈವ ತೆರನು ಹೀಗೆಂದು ನನಗಿಂದು
ಕಲಿಸಿದೆ ನೀನು ಸರಸಿಯೆ" (ಸುರಗಿ–ಸುರಹೊನ್ನೆ)

ಕವಿತೆಯ ಇಂದ್ರಚಾಪ ಮೂಡಲು ದುಗುಡವೆ ಮಳೆಮೋಡ:

"ಮನವೆ ಬಾನಂಗಳ ದುಗುಡವೆ ಮಳೆಮೋಡ
ಕವಿಗಣ ಸೂಕ್ತಿಯೆ ದಿನಪ
ಮೂಡಿತು ಮಳೆ ಬಿಸಿಲಿನ ಮೇಳದೊಳು ನೋಡ
ಕವಿತೆಯ ಈ ಇಂದ್ರಚಾಪ" (ಇಂದ್ರಚಾಪ)

ಪಲವು ಪಾಡಿನ ಪಕ್ಕಿಗಳು, ಪಲವು ಭಾವದ ಪಕ್ಕಿಗಳು ಬಂದು ಬೀಡು ಬಿಟ್ಟಿರುವ ರಂಗನ ತಿಟ್ಟಿನಂತೆ ಕಾವ್ಯ.

ಒಳ್ಳೆಯ ಕವಿತೆ ಹುಟ್ಟಲು ದೈವಾನುಗ್ರಹವೂ ಬೇಕು:

"ಅರಿಯದ ನಾನೇನ ವಿರಚಿಸಬಲ್ಲೆನು
ಸರುವರ ಒಳಗೆ ಕುಳಿತಂಥ ದೈವವು
ವಿರಚಿಸಿತಿದನು ಸರಸಿಯೆ" (ಸುರಗಿ – ಸುರಹೊನ್ನೆ)
"ಅವನೊ ಬರುವನದಾವುದೊ ಕೃತಿಯನು
ವಾಣಿಯ ಕೃಪೆಯೊಳು ತಾನು
ಅವುದೊ ಕಾಲದೊಳೊರೆವನು ಲೋಗರು
ಅದನೋದಿ ಪಂಡಿತರಹರು" (ಇಂದ್ರಚಾಪ)

'ಮರೆತು ಹೋಗಿರುವುದು ಬರುವಂತೆ ನೆನಪಿಗೆ ಬರುತಿದೆ ಕವಿತೆ' ಎಂಬ ಮಾತು ಕಾವ್ಯದಲ್ಲಿ ಸ್ಫೂರ್ತಿಯ ಸ್ಥಾನವನ್ನು ನಿರ್ದೇಶಿಸುತ್ತದೆ:

"ಮರೆತು ಹೋಗಿರುವುದು ಬರುವಂತೆ ನೆನಪಿಗೆ
ಬರುತಿದೆ ಕವಿತೆ ಅದು ಬಂದ ಹಾಗೆಯೆ
ಬರೆದಿಹೆನನಿತೆ ಸರಸಿಯೆ" (ಸುರಗಿ – ಸುರಹೊನ್ನೆ)

ಗಟ್ಟಿಭಾವದ ರಸಕಾವ್ಯ ಹಸಿಯ ಹುಸಿಗಬ್ಬದ ಬಳಿಕವೇ ಬರುತ್ತದೆ. ಅಂದರೆ, ಅನುಭವ ಮಾಗಿದಂತೆ ಕಾವ್ಯ ರಸವತ್ತಾಗುತ್ತದೆ:

"ಮೊದಲು ಹುಟ್ಟುವುದು ಹಾಲು ಹಲ್ಲು,
ಅದು ಬಿದ್ದು ಹುಟ್ಟುವುದು ಗಟ್ಟಿ ಹಲ್ಲು.
ಮೊದಲು ಕೇಳುವುದು ತೊದಲು ಸೊಲ್ಲು,
ಅದು ತಿದ್ದಿ ಮೂಡುವುದು ಶುದ್ಧ ಸೊಲ್ಲು,
ಮೊದಲು ಬರುವುದು ಹಸಿಯ ಹುಸಿಗಬ್ಬ,
ಆ ಮೇಲೆ ಬಂದಪುದು ಗಟ್ಟಿಭಾವದ ರಸಕಾವ್ಯ ಸದಾಶಿವಗುರು. (ಉಪ್ಪುಕಡಲು)

ಹುಸಿಗಬ್ಬ ಹಾಲುಹಲ್ಲಿನಂತೆ, ತೊದಲು ಸೊಲ್ಲಿನಂತೆ. ಆದರೆ ರಸಕಾವ್ಯ ಗಟ್ಟಿ ಹಲ್ಲಿನಂತೆ, ಶುದ್ಧ ಸೊಲ್ಲಿನಂತೆ. ಆದರೂ, ಹಾಲುಹಲ್ಲು ಬರದೆ ಗಟ್ಟಿಹಲ್ಲು ಹುಟ್ಟಲಾರದು. ತೊದಲು ಸೊಲ್ಲು ಇಲ್ಲದೆ ಶುದ್ಧ ಸೊಲ್ಲೇ ಆರಂಭದಲ್ಲಿ ಆವಿರ್ಭವಿಸದು. ಹಾಗೆಯೇ ಪ್ರಾರಂಭದಲ್ಲಿ ಹುಟ್ಟುವುದು ಹುಸಿಗಬ್ಬ. ಮುಂದೆ ಈ ಕವಿತಾ ಸೃಷ್ಟಿ ಪಕ್ವವಾಗಿ ಗಟ್ಟಿಭಾವದ ರಸಕಾವ್ಯ ಉದ್ಭವಿಸುತ್ತದೆ.

ಜನಪದ ಕವಿತೆಗಳ ಸೃಷ್ಟಿ :

"ನಾಡಿನ ಜನಗಳು ಆಡಿದ ನುಡಿಗಳು
ಹಾಡಿನ ಲಯಕೆ ಜೋಡಿಸಿ ಕೊಂಡವು
ಮೂಡಿತು ಕವಿತೆ ಸರಸಿಯೆ" (ಸುರಗಿ – ಸುರಹೊನ್ನೆ)

ಯಾವುದೇ ಒಂದು ಕಾವ್ಯ ಹುಟ್ಟಬೇಕಾದರೆ ಅದಕ್ಕೆ ಉಚಿತಕಾಲ ಬರಬೇಕು, ಅಂದರೆ ಯೋಗ್ಯ ವಾತಾವರಣ ಕಲ್ಪಿತವಾಗಬೇಕು. ಜೊತೆಗೆ ದೈವಾನುಗ್ರಹವೂ ಬೇಕು:

"ಕೋಶದ ಅವಸ್ಥೆಯೊಳು ಸತ್ತವೊಲು ಇರುವ ಕಂಬಳಿ ಹುಳು,
ಕಾಲಬಂದಾಗ ಬಣ್ಣದರೆಂಕೆಯ ಚಿಟ್ಟೆಯಾಗಿ ಬರುವುದು ಹೇಗೆ;
ಯೋಗದ ಅವಸ್ಥೆಯೊಳು ಹೊರಗಿನ ಲೌಕಿಕಕೆ ಸತ್ತವೋಲಿರುವ ಕವಿ,
ಕಾಲಬಂದಾಗ ರಮ್ಯಾದ್ಭುತ ರಸಕೃತಿಯ ತಂದವನು ಹೊರಗೆ ಹಾಗೆ!
ನಿನ್ನನುಗ್ರಹವಾಗೆ ನಾನು ಸಹ ಹೀಗೆ ಮಾಳ್ಪುದೇನಚ್ಚರಿಯೆ
ಸದಾಶಿವ ಗುರು? (ಉಪ್ಪು ಕಡಲು)

ಕೋಶ ಮತ್ತು ಹುಳು, ಕಾಲ ಮತ್ತು ಚಿಟ್ಟೆ — ಇವುಗಳ ಸಂಬಂಧ; ಯೋಗ — ಸುಪ್ತಕವಿ, ಕಾಲ — ರಸಕವಿ — ಇವುಗಳ ಸಂಬಂಧ. ಇದು ಕಾವ್ಯದ ಹುಟ್ಟನ್ನು ಹೇಳುವ ಎಸ್. ವಿ. ಪಿ. ಯವರ ಸ್ವೋಪಜ್ಞಶೀಲ ಪ್ರಜ್ಞೆ.

**ಕಾವ್ಯ ಲಕ್ಷಣ:**

"ಭುವನದ ಚೆಲುವನು ಕವಿಯೊಂದು ನಿಲುವೊಳು
ಸವಿದು ಬಣ್ಣಪುದೆ ಕಾವ್ಯವು" (ತುಂಬೆ ಹೂವು)
"ಕಾಂತಿಯ ತವನಿಧಿ ಶಾಂತಿಯ ಸನ್ನಿಧಿ
ಕಾಂತೆಯ ಹಾಗೆ ಕಾವ್ಯವು" (ತುಂಬೆ ಹೂವು)

ಕಾವ್ಯ ಎಂಬುದು ಜೀವನದ ಪ್ರತಿಮಾರೂಪ ಎಂಬುದನ್ನು ಮೊದಲನೆಯ ಮಾತು ಧ್ವನಿಸಿದರೆ, ಎರಡನೆಯ ಮಾತು ಕಾವ್ಯದ ಕಾಂತಾಸಮ್ಮಿತ ಗುಣವನ್ನು ಎತ್ತಿ ತೋರಿಸುತ್ತದೆ.

'ಕಾವ್ಯವೆಂಬುದು ಕವಿಯ ಎದೆಯ ಸರುಗಂಪು' ಎನ್ನುವ ಎಸ್. ವಿ. ಪಿ. ಯವರು ಕಾವ್ಯವನ್ನು ಮಗುವಿನ ನಾದಕ್ಕೆ ಹೋಲಿಸುತ್ತಾರೆ:

"ವಾದವು ಗಂಡು ಸಂವಾದವು ಹೆಣ್ಣು ಸಂ
ಮೋದವು ಮಗುವು ಕಾವ್ಯವು ಅದರೊಂದು
ನಾದವು ಕೇಳೆ ಸರಸಿಯೆ" (ಸುರಗಿ – ಸುರಹೊನ್ನೆ)

ವಾದ ಸಂವಾದಗಳ ಕೂಟದಿಂದ ಜನಿಸಿದ 'ಸಂಮೋದ'ವೆಂಬ ಮಗುವಿನ ಕೇಕೆಯೇ ಕಾವ್ಯ.

ಕಾವ್ಯದಲ್ಲಿ ದಿವ್ಯ, ಭವ್ಯ, ನವ್ಯದ ಪಾಕವಿರಬೇಕು; ಅದು ಒಂದು ಪಂಚಗವ್ಯ. ಇಲ್ಲಿನ 'ಪಂಚಗವ್ಯ' ಎಂಬ ಶಬ್ದ ಬಹಳ ಧ್ವನಿಪೂರ್ಣವಾಗಿ ಕಾವ್ಯದ ಉದ್ದಗಲಗಳನ್ನು ವ್ಯಾಪಿಸುತ್ತದೆ:

"ದಿವ್ಯ ನಿಸರ್ಗದ ಭವ್ಯ ಸುಂದರವಾದ
ನವ್ಯದ ಪಾಕ ಈ ಕಾವ್ಯ ಈ ಪಂಚ
ಗವ್ಯವ ಸವಿಯೆ ಸರಸಿಯೆ" (ಸುರಗಿ – ಸುರಹೊನ್ನೆ)

ಕಾವ್ಯ ರಮ್ಯವೋ ನವ್ಯವೋ ಎನ್ನುವುದಕ್ಕಿಂತ ಅದು ಸವ್ಯವಾಗಿದೆಯೇ ಎಂಬುದು ಮುಖ್ಯ; ಇದು ಕಾವ್ಯದ ಬಗ್ಗೆ ಎಸ್. ವಿ. ಪಿ. ಯವರ ಅಭಿಮತ.

ಕಾವ್ಯದಲ್ಲಿ ಕವಿ ತನ್ನ ಸ್ವಂತಿಕೆಯನ್ನು ಮೆರೆಯಬೇಕು, ಆತನ ಪ್ರಭಾವಮುದ್ರೆ ಅದರಲ್ಲಿ ಚೆನ್ನಾಗಿ ಒತ್ತಬೇಕು:

"ಹೊನ್ನನು ಕರಗಿಸಿ ತನ್ನ ಮುದ್ರೆಯನೊತ್ತಿ
ಘನ್ನ ಮಹಿಪನು ನಾಣ್ಯವು ಎನುವಂತೆ
ನನ್ನವೀ ತ್ರಿಪದಿ ಸರಸಿಯೆ" (ಸುರಗಿ – ಸುರಹೊನ್ನೆ)

ಹೊನ್ನು ಹಳೆಯದಿರಬಹುದು. ಆದರೆ ಅದನ್ನು ಕರಗಿಸಿ, ಬೇರೆಯೇ ಆಕಾರಕ್ಕೆ ತಂದು, ತನ್ನ ಮುದ್ರೆಯನ್ನು ಅದರ ಮೇಲೆ ಒತ್ತಲಾಗಿದೆ ಎಂಬುದನ್ನು ಮರೆಯುವಂತಿಲ್ಲ.

ಕಾವ್ಯದ ವಸ್ತು, ಪ್ರತಿಮೆ ಬೇರೆಯಾಗಿರಬಹುದು. ರಚಿಸುವ ಕವಿ ಬೇರೊಬ್ಬನಾಗಿರಬಹುದು. ಆದರೆ ಅದರ ಮೂಲಭೂತ ತತ್ತ್ವ ಬೇರೆಯಾಗಬೇಕೆಂದಿಲ್ಲ:

"ಬೇರೆಯೆ ರೈತನು ಬೇರೆಯೆ ನೇಗಿಲು
ಬೇರೆಯೆ ಬೀಜವಾದರು ಹೇಳಿದು
ಬೇರೆಯೆ ಹೊಲವು ಸರಸಿಯೆ" (ಸುರಗಿ – ಸುರಹೊನ್ನೆ)

ನಾವು ನೋಡುವ ನೋಟವಾಗಲೀ, ಹಾಡುವ ಹಾಡಾಗಲೀ ಯಾವುದೂ ಹೊಸತಲ್ಲ. ಮರಿ ಹಕ್ಕಿಯಲ್ಲಿರುವುದು ಅಜ್ಜಿಹಕ್ಕಿಯ ಸಿಳ್ಳೆ. ಮಗನಲ್ಲಿರುವುದು ತಾತನ ಕಣ್ಣು, ಅಜ್ಜಿಯ ಬಣ್ಣ, ತಂದೆಯ ಗೂನು. ಕವಿಗಿರುವ ಪರಂಪರೆಯ ಪ್ರಜ್ಞೆಯನ್ನು ಇಲ್ಲಿ ಗುರುತಿಸಬಹುದು:

"ಹೊಸತನು ಹಾಡುವುದೆನ್ನಿಂದಲಾಗದು
ಹೊಸತಾವುದಿರುವುದು ಹೇಳು
ಈ ಜಗದೊಳಗಿಹುದೆಲ್ಲವು ಹಳೆಯದು
ನನ್ನ ಸುಭಾಷಿತ ಕೇಳು" (ಇಂದ್ರಚಾಪ)

ಕವಿಯ ಸಂವೇದನೆಯ ಅಭಿವ್ಯಕ್ತಿಯೇ ಕಾವ್ಯ:

"ಯಾರು ಓದಿದರು ಸರಿಯೆ ಓದದಿದ್ದರು ಸರಿಯೆ
ಮನಕೆ ಹೊಳೆದಂತೆ ನನಗೆ ತಿಳಿದಂತೆ ನನ್ನ ಕಟುವಾದ ಕೃತಿಯನು
ನಾ ಹಾಡಿಕೊಂಡಲ್ಲದೆ ನನಗೆ ನಿದ್ದೆ ಬಾರದು" (ಉಪ್ಪುಕಡಲು)

ಕಾವ್ಯಮೀಮಾಂಸಕರ ಪ್ರಕಾರ ರಸ, ಧ್ವನಿ, ಔಚಿತ್ಯ — ಇವು ಭಾರತೀಯ ಕಾವ್ಯಮೀಮಾಂಸೆಯ ಗಾಯತ್ರಿ. 'ವಾಕ್ಯಂ ರಸಾತ್ಮಕಂ ಕಾವ್ಯಂ' ಎನ್ನುತ್ತಾನೆ 'ಸಾಹಿತ್ಯ ದರ್ಪಣ'ಕಾರ ವಿಶ್ವನಾಥ. ರಸದ ಬಗ್ಗೆ ಎಸ್. ವಿ. ಪಿ. ಯವರ ಮಾತು:

"ಉಪ್ಪಿನ ಕಡಲೊಳು ಕಪ್ಪೆಯ ಚಿಪ್ಪೊಳು
ಒಪ್ಪಾಗಿ ಮುತ್ತು ಇರುವಂತೆ ರಸವುಂಟು
ಹೆಪ್ಪಾಗಿ ಇಲ್ಲಿ ಸರಸಿಯೆ" (ಸುರಗಿ – ಸುರಹೊನ್ನೆ)

ಹಿಂದಿನ ಎಲ್ಲ ಆಲಂಕಾರಿಕರಂತೆ ಎಸ್. ವಿ. ಪಿ. ಯವರೂ ರಸಗಳಲ್ಲಿ ಶೃಂಗಾರ ಮತ್ತು ಹಾಸ್ಯಗಳಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದ್ದಾರೆ:

"ಹಾಸ್ಯದ ರಸಜೇನು ಒಸರುತಲಿಹುದಿಲ್ಲಿ
ಶೃಂಗಾರ ಕಟ್ಟಿಹುದಿಲ್ಲಿ" (ಇಂದ್ರಚಾಪ)

ಆದರೆ ಇವರು ಶಾಂತರಸಕ್ಕೂ ಹೆಚ್ಚಿನ ಮಹತ್ವ ಕೊಟ್ಟಿರುವುದು ಕಂಡುಬರುತ್ತದೆ. 'ಮಂಥಾನ' ವೆಂಬ ಅವರ ಸ್ವತಂತ್ರ ಗಾದೆಗಳ ಸಂಕಲನದಲ್ಲಿ ಒಂದು ಕಡೆ "ಶಾಂತಿಗಿಂತ ರಸವಿಲ್ಲ, ವಾಂತಿಗಿಂತ ಕಸವಿಲ್ಲ"ವೆಂಬ ಗಾದೆ ಇದೆ. ನಮ್ಮ ಪ್ರಾಚೀನ ಲಾಕ್ಷಣಿಕರ ಅಭಿಮತದಂತೆ ಇದು 'ಶಾಂತರಸ' ವೆಂದಾಗಬೇಕು. ಆದರೆ ಬೇಂದ್ರೆಯವರ 'ಬೆಳಗು' ಕವನದ ಅಂತ್ಯದಲ್ಲಿ 'ಶಾಂತಿರಸವೇ ಮೈಗೂಡಿತಲ್ಲಾ' ಎಂಬ ಮಾತು ಬರುತ್ತದೆ. ಶಾಂತಿಯು ರಸವಾಗಬಲ್ಲುದೇ ಎಂಬ ಪ್ರಶ್ನೆಗೆ ಹೌದು ಎಂದೇ ಉತ್ತರಿಸಬೇಕಾಗುತ್ತದೆ. ಇಲ್ಲಿ ಶಾಂತಿರಸವೆಂಬುದು ಶಾಂತರಸಕ್ಕಿಂತ ಬೇರೆಯಾದುದಲ್ಲ. ಎಸ್. ವಿ. ಪಿ. ಯವರ ಅಭಿಪ್ರಾಯದಂತೆ 'ಎಲ್ಲಾ ಸಂಚಾರಿಭಾವಗಳೂ ರಸವಾಗಬಲ್ಲುವು. ಆದ್ದರಿಂದ ರಸಗಳು ಬರೀ ಒಂಬತ್ತು ಮಾತ್ರ ಅಲ್ಲ. ದೈವಭಕ್ತಿ, ದೇಶಭಕ್ತಿಗಳೂ ರಸವಾಗಬಲ್ಲುವು.' ನಮ್ಮ ಹೃದಯ

ವನ್ನು ಯಾವುದು ಸ್ಪಂದಿಸುತ್ತದೆಯೋ, ಯಾವುದು ಆಹ್ಲಾದಿಸುತ್ತದೆಯೋ ಅದು ಎಲ್ಲಾ ರಸ ಎಂದು ಇಟ್ಟುಕೊಳ್ಳುವುದು ಉಚಿತ.

'ಕಾವ್ಯಸ್ಯಾತ್ಮಾ ಧ್ವನಿಃ' ಎಂಬುದು ಭಾರತೀಯ ಕಾವ್ಯಮೀಮಾಂಸೆಯಲ್ಲಿ ಪ್ರಸಿದ್ಧವಾದ ಮಾತು. ಇಂತಹ ಧ್ವನಿಗೆ ಎಸ್. ವಿ. ಪಿ. ಯವರು ಕೊಟ್ಟ ಸ್ಥಾನ ಅದಕ್ಕಿಂತ ಕಡಮೆಯದೇನೂ ಅಲ್ಲ. ಧ್ವನಿಯ ಲಕ್ಷಣಕ್ಕೆ ತಮ್ಮದೇ ಅರ್ಥ ಮೀಮಾಂಸೆಯನ್ನು ಕೊಡುತ್ತಾರೆ:

"ಬೇಕು ಎಂದಾಗ ಬೇಡವೆಂದು ಅರ್ಥ ಮಾಡಿದರೆ ಅದೇ ಧ್ವನಿ
ಬೇಡ ಎಂದಾಗ ಬೇಕು ಎಂದು ಅರ್ಥಮಾಡಿದರೆ ಅದೇ ಧ್ವನಿ
ಕವಿ ಸಹೃದಯರ ಕಾವ್ಯಪ್ರಪಂಚದೊಳು ಮಾತ್ರ ಈ ಧ್ವನಿ
ಉಪಾದೇಯ ಸದಾಶಿವ ಗುರು." (ಉಪ್ಪು ಕಡಲು)

ಕಾವ್ಯದಲ್ಲಿ ಧ್ವನಿ ಹೇಗೆ ಶೋಭಿಸುತ್ತದೆ ಎಂದು ತಿಳಿಸುವ ಉಪಮೆ ಧ್ವನಿ ಪೂರ್ಣವಾದುದು:

"ರಮಣೀಯವಾದೊಂದು ರತ್ನ ಭೂಷಣದಿಂದೆ
ಭಾಮಿನಿ ಶೋಭಿಸುವಂತೆ
ಧ್ವನಿ ರಮ್ಯವಾದೊಂದೆ ಪದವನಿಟ್ಟುದರಿಂದೆ
ಕವಿವಾಣಿ ಶೋಭಿಸುವುದಲ್ತೆ." (ಇಂದ್ರಚಾಪ)

"ರೀತಿರಾತ್ಮಾ ಕಾವ್ಯಸ್ಯ" ಎಂದ ವಾಮನ. ರಸ–ಧ್ವನಿಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟ ಎಸ್. ವಿ. ಪಿ. ಯವರಿಗೆ ರೀತಿಯ ಮಹತ್ವದ ಬಗೆಗೂ ಸ್ಪಷ್ಟ ಪ್ರಜ್ಞೆ ಇದೆ. ಒಂದು ಕೃತಿಯ ಸೌಂದರ್ಯವಿರುವುದು ವಸ್ತುವಿಗಿಂತ ಹೆಚ್ಚು ಅದರ ರೀತಿಯಲ್ಲಿ :

"ನಾನು ಹೇಳುವೆ ಹೇಗೆ ನಾನು ಹೇಳುವೆ ಏನು
ನೀನಿವುಗಳಲಿ ಮೊದಲಿನ ಮಾತನು
ಜಾನಿಸಿ ನೋಡು ಸರಸಿಯೆ" (ಸುರಗಿ – ಸುರಹೊನ್ನೆ)

ಕವಿ ಏನು ಹೇಳುತ್ತಾನೆ ಎನ್ನುವುದಕ್ಕಿಂತ ಹೇಗೆ ಹೇಳುತ್ತಾನೆ ಎಂಬುದು ಮುಖ್ಯ. ಕಾವ್ಯದಲ್ಲಿ ರೀತಿಯ ಸ್ಥಾನ ಹಿರಿದು.

ಕಾವ್ಯದಲ್ಲಿ ಕಲ್ಪನೆ – ಸಂಕಲ್ಪಗಳು ಬೆರೆತಿರಬೇಕು:

"ಕಲ್ಪನೆಯೊಳು ನಿನಗೇತರ ಬಡತನ
ಸಂಕಲ್ಪ ಭವ್ಯವಾಗಿರಲಿ
ಶಿಲ್ಪದ ಚಿತ್ರದ ಕಾವ್ಯದ ಸಿರಿತನ
ಕಲ್ಪಾಂತ ದಿವ್ಯವಾಗಿರಲಿ" (ಇಂದ್ರಚಾಪ)

"ಕಲ್ಪನೆ ಅಲ್ಪ, ಕವಿತೆ ಜಲ್ಪ" (ಮಂಥಾನ)

ಪಾತ್ರೆಯ ಆಕಾರಕ್ಕೆ ಅನುಸಾರವಾಗಿ ನೀರು ತನ್ನ ಆಕಾರವನ್ನು ಬದಲಾಯಿಸುತ್ತದೆ ಎಂಬ ವೈಜ್ಞಾನಿಕ ತತ್ತ್ವವನ್ನು ಕಾವ್ಯದಲ್ಲಿ ಭಾವ ಮತ್ತು ಲಯಗಳ ಸಂಬಂಧಕ್ಕೆ ಹೋಲಿಸಲಾಗಿದೆ. ಕಾವ್ಯದಲ್ಲಿ ಭಾವಾನುಸಾರಿಯಾದ ಲಯದ ಪ್ರತಿಪಾದನೆ:

"ನಿಲುವುದು ಭಾವವು ಒಲಿದ ಈ ತ್ರಿಪದಿಯ
ಚೆಲುವಿನ ಲಯಕೆ ಪಾತ್ರೆಯ ಮಾಟಕೆ
ನಿಲುವಂತೆ ನೀರು ಸರಸಿಯೆ" (ಸುರಗಿ – ಸುರಹೊನ್ನೆ)

ಲಯದಲ್ಲಿ ವೈವಿಧ್ಯವಿರಬೇಕು:

"ನಿಯಮ ವೈವಿಧ್ಯವೆ ಲಯದ ಸರ್ವಸ್ವವು
ಲಯವೆ ಸೌಖ್ಯವನು ಈವುದು" (ತುಂಬೆ ಹೂವು)

ಕಾವ್ಯವನ್ನು ಒಂದು ಸರೋವರಕ್ಕೆ ಹೋಲಿಸಿ, ಅವುಗಳೆರಡರ ಘಟಕಗಳನ್ನು ತುಲನೆ ಮಾಡಲಾಗಿದೆ:

"ಶಬ್ದಾರ್ಥವೇ ನೀರು, ಅರ್ಥಾಲಂಕಾರವೇ ಮೆಟ್ಟಿಲು,
ಶಬ್ದಾಲಂಕಾರವೇ ನೊರೆಗುಳ್ಳೆ,
ಅಪೂರ್ವ ಭಾವಸಂಪದವೇ ಮುತ್ತು ರತ್ನ,
ಅಸದೃಶವಾದ ಕಲ್ಪನೆಯೆ ಊರ್ಮಿ,
ಅನುಭವವೇ ಸೆಲೆ, ಕವಿ ಮನವೇ ನೆಲೆ,
ಇಂತು ಕಟ್ಟಿದ ಕಾವ್ಯ ಕಾಸಾರದೊಳು;
ರಸಧ್ವನಿಯೇ ಜಲಕೇಳಿಯಾಡುವ ಮೀನನೇತ್ರೆ !
ಆ ಅನಿಮಿಷೆಯ ಕೇಳಿಯೊಳು ತಲ್ಲೀನರಾದೆವೆನೆ
ನಾವೆ ಅನಿಮಿಷರು ಸದಾಶಿವ ಗುರು !" (ಉಪ್ಪು ಕಡಲು)

ಕಾವ್ಯದಲ್ಲಿ ಶಬ್ದ – ಅರ್ಥ, ಶಬ್ದಾಲಂಕಾರ, ಅರ್ಥಾಲಂಕಾರ, ಭಾವಸಂಪತ್ತು, ಕಲ್ಪನೆ, ಅನುಭವ, ಕವಿ ಮನಸ್ಸು, ರಸಧ್ವನಿ ಇವು ಕೊಳ ಅಥವಾ ಸರೋವರದಲ್ಲಿನ ನೀರು, ಮೆಟ್ಟಿಲು, ನೊರೆಗುಳ್ಳೆ, ಮುತ್ತುರತ್ನ, ಊರ್ಮಿ, ಸೆಲೆ, ನೆಲೆ, ಜಲಕೇಳಿಯಾಡುವ ಮೀನನೇತ್ರೆ ಇವುಗಳಂತೆ ಇವೆ ಎಂಬಲ್ಲಿ, ಕಾವ್ಯದ ಬೇರೆ ಬೇರೆ ಅಂಗಗಳಿಗೆ ಅವುಗಳ ಮರ್ಯಾದೆಗೆ ತಕ್ಕಂತೆ ಮಣೆಹಾಕಲಾಗಿದೆ.

**ಕವಿತೆಯ ಪರಿಕರಗಳು:** ಕವಿತೆಯ ಪರಿಕರಗಳು ಯಾವುವು ?

"ನಾನು ಕಿರಿಯನು, ನನ್ನ ಮಾತು ಹಿರಿದು.
ಕಿರಿಯನ ಮಾತು ಹಿರಿದಾಯಿತ್ತು ವ್ಯುತ್ಪತ್ತಿಯ ಬಲದಿಂದ.
ಕಿರಿಯನ ಮಾತು ಹಿರಿದಾಯಿತ್ತು ಅಭ್ಯಾಸದ ಬಲದಿಂದ.
ಕಿರಿಯನ ಮಾತು ಹಿರಿದಾಯಿತ್ತು ಉತ್ಪಾದ್ಯ ಪ್ರತಿಭೆಯಿಂದ.
ವೃದ್ಧ ಸೇವಾನುರಾಗದಿಂದ ಈ ಪ್ರತಿಭೆಗೆ ಕಳೆಯೇರಿತ್ತು.
ಚಿತ್ತದೇಕಾಗ್ರತೆಯಿಂದ ಈ ಪ್ರತಿಭೆಗೆ ಕಾವೇರಿತ್ತು.
ಇಂಥ ಪ್ರತಿಭೆಗೆ ಮುಂದೆ ಹೊಳೆದ ಹಿಂದಿನ ಅನುಭವ
ನವೋನವವಾಗಿತ್ತು ಸದಾಶಿವ ಗುರು." (ಉಪ್ಪು ಕಡಲು)

ಕವಿತೆಗೆ ಪ್ರತಿಭೆ, ವ್ಯುತ್ಪತ್ತಿ, ಅಭ್ಯಾಸ, ವೃದ್ಧ ಸೇವಾನುರಾಗ, ಚಿತ್ತದೇಕಾಗ್ರತೆ – ಇವೆಲ್ಲಾ ಪರಿಕರಗಳು ಎಂದು ಹಿಂದಿನ ಲಾಕ್ಷಣಿಕರು ಹೇಳಿರುವುದನ್ನು ಇಲ್ಲಿ ಬೇರೊಂದು ರೀತಿಯಲ್ಲಿ ಹೇಳಲಾಗಿದೆ. ಪ್ರತಿಭೆ ಎಂಬುದು ನವನವೋನ್ಮೇಷಶಾಲಿ ಎಂಬುದು ಕೂಡಾ ಇಲ್ಲಿ ವ್ಯಕ್ತವಾಗಿದೆ.

ಕವಿಗೆ ಪಾಂಡಿತ್ಯ ಕೂಡಾ ಬೇಕು:

"ಕಮನೀಯವಾದರು ಪಾಂಡಿತ್ಯವಿರದಿರೆ
ಧರೆಯೊಳು ಕವಿ ಶೋಭಿಸುವನೆ?" (ಇಂದ್ರಚಾಪ)

ಕವಿತೆ ರಚಿಸಲು ಅನುಭವ ಕೂಡಾ ಮುಖ್ಯ ಎಂಬುದು ಎಸ್. ವಿ. ಪಿ. ಯವರಿಗೆ ಅನುಭವದಿಂದ ಗೊತ್ತು:

"ತಿಳಿದೋದಿಕೊಳಬೇಕು ಒಳನೋಟವಿರಬೇಕು
ಬಳಸಿ ಓಡಾಡಿದನುಭವ ಇರಬೇಕು
ಒಳಿತಿನ ಕೃತಿಗೆ ಸರಸಿಯೆ" (ಸುರಗಿ – ಸುರಹೊನ್ನೆ)

"ನನ್ನಷ್ಟು ಉಪ್ಪನು ತಿನ್ನದೆ ನೀನೆಂತು
ನನ್ನಂತೆ ಕವನ ಕಟ್ಟುವೆ" (ತುಂಬೆ ಹೂವು)

ಪ್ರತಿಭೆ ಮತ್ತು ಅಭ್ಯಾಸಗಳೆರಡೂ ಮೇಳೈಸಿದರೆ ಕವಿಕೃತಿ ಸೊಗಸಾಗುವುದು:

"ಪ್ರತಿಭೆ ಅಭ್ಯಾಸಗಳೆರಡನು ಕೂಡಿಸಿ
ಕೊಂಡರೆ ಕವಿಕರ್ಮ ಸೊಗಸು.
ಹರಿಯುವ ಹೊಳೆಗೊಂದು ಕಟ್ಟೆಯ ವಿರಚಿಸಿ
ಕೊಂಡರೆ ಕೃಷಿಕರ್ಮ ಹುಲುಸು." (ಇಂದ್ರಚಾಪ)

ಪ್ರತಿಭೆ, ವ್ಯುತ್ಪತ್ತಿ, ಅಭ್ಯಾಸಗಳ ಕೊರತೆಯಿಂದ ಕವಿತೆ ಹೇಗೆ ದುರ್ಬಲವಾಗುತ್ತದೆ ಎಂಬುದನ್ನು ಔಚಿತ್ಯಪೂರ್ಣ ದೃಷ್ಟಾಂತಗಳ ಮೂಲಕ ತೋರಿಸಿಕೊಟ್ಟಿದ್ದಾರೆ. ಜೊತೆಗೆ ಈ ಪರಿಕರಗಳಿಗೆ ಆಕರ ಯಾವುದು ಎಂಬುದರ ಸೂಚನೆಯನ್ನು ಕೂಡಾ ಕೊಟ್ಟಿರುವುದು ಅವರ ನೈಪುಣ್ಯದ ಸಂಕೇತ:

"ಬ್ಯಾಟರಿ ದುರ್ಬಲನಾದವನ ಟಾರ್ಚು ಹೇಗೆ
ಪ್ರತಿಭೆ ದುರ್ಬಲನಾದವನ ಕವಿತೆ ಹಾಗೆ
ಕಾಲು ದುರ್ಬಲನಾದವನ ನಡಿಗೆ ಹೇಗೆ
ವ್ಯುತ್ಪತ್ತಿ ದುರ್ಬಲನಾದವನ ಕವಿತೆ ಹಾಗೆ
ಸೋಮಾರಿಯಾದವನ ಬೇಹಾರ ಹೇಗೆ
ಅಭ್ಯಾಸ ಕಡಿಮೆಯಾದವನ ಕವಿತೆ ಹಾಗೆ
ಮೊದಲನೆಯದಕ್ಕೆ ನೀನು ಹೊಣೆ,
ಎರಡನೆಯದಕ್ಕೆ ನಾನು ನನ್ನ ಓಜರು ಹೊಣೆ,
ಮೂರನೆಯದಕ್ಕೆ ನಾನೊಬ್ಬನೆ ಹೊಣೆ ಸದಾಶಿವ ಗುರು." (ಉಪ್ಪು ಕಡಲು)

ಪ್ರತಿಭೆ ದೈವದತ್ತ. ವ್ಯುತ್ಪತ್ತಿಗೆ ಕವಿ ಹಾಗೂ ಗುರು ಕಾರಣ. ಅಭ್ಯಾಸ ಕವಿಯೇ ರೂಢಿಸಿಕೊಳ್ಳಬೇಕಾದದ್ದು. ಈ ಭಾವವನ್ನು ವಚನದ ರೂಪದಲ್ಲಿ ಮೇಲೆ ಪ್ರತಿಪಾದಿಸಲಾಗಿದೆ.

ಇಂದಿನ ವಾತಾವರಣಕ್ಕೆ ತಕ್ಕಂತೆ ಕವಿತೆಯ ಪರಿಕರಗಳ ಪಟ್ಟಿಗೆ ಹೊಸತೊಂದನ್ನು ಸೇರಿಸಿದ ಕೀರ್ತಿ ಎಸ್. ವಿ. ಪಿ. ಯವರದು—

"ಪ್ರತಿಭೆಯೊಂದಿರಬೇಕು ವ್ಯುತ್ಪನ್ನಮತಿ ಬೇಕು
ಅಭ್ಯಾಸ ಗುರುಸೇವೆ ಬೇಕು
ಈ ಹಳೆಯ ಪಟ್ಟಿಗಿನ್ನೊಂದು ಸೇರಿಸಬೇಕು
ಕವಿಗೆ ಜಾಹೀರಾತು ಬೇಕು." (ಇಂದ್ರಚಾಪ)

'ಕವಿಗೆ ಜಾಹೀರಾತು ಬೇಕು'. ಈ ಮಾತನ್ನು ಒಂದು ಒಳ್ಳೆಯ ಅರ್ಥದಲ್ಲಿ ಅವರು ಹೇಳಿದ್ದಾರೆ. ಬರೇ ಜಾಹೀರಾತಿನಿಂದಲೇ ಒಬ್ಬ ವ್ಯಕ್ತಿ ಕವಿಯಾಗುತ್ತಾನೆ ಎಂದು ಇದರರ್ಥವಲ್ಲ. ಪ್ರತಿಭೆ, ವ್ಯುತ್ಪತ್ತಿ, ಅಭ್ಯಾಸ, ಗುರುಸೇವೆ—ಇವುಗಳೆಲ್ಲ ಇದ್ದಾಗ್ಯೂ ಒಬ್ಬ ಕವಿ ಎಲೆಮರೆಯ ಕಾಯಂತೆ ಇರುತ್ತಾನೆ. ಆತನ ಕಾವ್ಯ ಸತ್ವ ಸಹೃದಯರಿಗೆ ದೊರಕಬೇಕಾದರೆ ಆತನ ಬಗ್ಗೆ ಅವರಿಗೆ ಯಾರಾದರೂ ತಿಳಿಸಬೇಕು. ಕನ್ನಡ ಕವಿ ಮುದ್ದಣನನ್ನು ನಾವು ಈ ಸಂದರ್ಭದಲ್ಲಿ ನೆನಪಿಗೆ ತಂದುಕೊಳ್ಳಬಹುದು. ಈ ಅರ್ಥದಲ್ಲಿ ಕವಿಗೆ ಜಾಹೀರಾತು ಬೇಕು ಎಂಬುದು ಎಸ್. ವಿ. ಪಿ. ಯವರ ಆಶಯ. ಆಧುನಿಕ ಪ್ರಜ್ಞೆಯುಳ್ಳ ಅವರು ಕವಿತೆಯ ಪರಿಕರಗಳ ಪಟ್ಟಿಗೆ ಈ ಹೊಸ ವಿಷಯವನ್ನು ಸೇರಿಸಿರುವುದು ಅವರ ಸ್ವೋಪಜ್ಞತೆಯ ಪ್ರತೀಕ.

ಪ್ರತಿಭೆ ಒತ್ತಾಯದಿಂದ ಬರುವಂತಹದ್ದಲ್ಲ. ಆದರೆ ಬರುವ ಕಾಲಕ್ಕೆ ಯಾವ ಅಡೆತಡೆಗಳಿದ್ದರೂ ಬಂದೇ ಬರುತ್ತದೆ. ಅದು ಒಂದು ರೀತಿಯಲ್ಲಿ ಚಂಡಿಯಂತೆ!

"ಬಾರೆಂದು ಕರೆದರೆ ಬರುವುದಿಲ್ಲೆನುವೆ
ಹೋಗೆಂದರೊಡನೆಯೆ ಬರುವೆ

ಚಂಡಿಯ ಕಥೆಯನು ನೆನಪಿಗೆ ನೀ ತರುವೆ
ಪ್ರತಿಭೆಯೆ ನಿನಗಿದು ತರವೆ." (ಇಂದ್ರಚಾಪ)

**ಪ್ರಾಸ:** ಪ್ರಾಸದ ಬಗ್ಗೆ ಎಸ್. ವಿ. ಪಿ. ಯವರು ತಮ್ಮ ನಿಲುವನ್ನು ಅನೇಕ ಕವನಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ತೋರ್ಪಡಿಸಿದ್ದಾರೆ. ಕವಿತೆಯಲ್ಲಿ ಪ್ರಾಸವು ಅನಾಯಾಸವಾಗಿ ಬರಬೇಕು ಎಂಬುದು ಅವರ ಅಭಿಪ್ರಾಯ:

"ಪ್ರಾಸವು ಕವಿತೆಯ ಶ್ವಾಸದ ವೋಲನಾ
ಯಾಸವೆಂದೆನಿಸುತಿರಬೇಕು." (ತುಂಬೆ ಹೂವು)

ಮನಸ್ಸಿಗೆ ಆಮೋದ ಕೊಡುವ ಪ್ರಾಸಕ್ಕೆ ಸಹೃದಯರು ತಲೆದೂಗುತ್ತಾರೆ:

"ಮೋದದ ಪ್ರಾಸಕೆ ನಾದದಾನಂದಕೆ
ಓದಿ ತಲೆದೂಗದವರುಂಟೆ." (ತುಂಬೆ ಹೂವು)

ಸಹಜವಾದ ಪ್ರಾಸ ತ್ರಾಸವಾಗದಂತೆ ಬರಬೇಕು:

"ಪ್ರಾಸವ ಕೂಡಿಸಿ ಬರೆದೆ ನಾ ಮನಸಾರೆ
ತ್ರಾಸವಾಗದ ಹಾಗೆ ಹೀಗೆ" (ಇಂದ್ರಚಾಪ)

ಆದರೆ ಬರೀ ಪ್ರಾಸ ಬಂದ ಮಾತ್ರಕ್ಕೆ ಅದು ಕವಿತೆಯಾಗುವುದಿಲ್ಲ:

"ಹೊಸ್ತಿಲು ಸಾರಿಸಿದ ಮಾತ್ರಕೆ ಹಬ್ಬವಾದೀತೆ
ಹೊಟ್ಟೆಯುಬ್ಬಿದ ಮಾತ್ರಕೆ ಗಬ್ಬವಾದೀತೆ
ಪ್ರಾಸ ಕೂಡಿಸಿದ ಮಾತ್ರಕೆ ಕಬ್ಬವಾದೀತೆ ಸದಾಶಿವ ಗುರು." (ಉಪ್ಪು ಕಡಲು)

**ಕವಿ–ರವಿ:** "ರವಿ ಕಾಣದುದಂ ಕವಿ ಕಂಡಂ" ಎಂಬ ಮಾತೊಂದು ಬಳಕೆಯಲ್ಲಿದೆ. ಎಸ್. ವಿ. ಪಿ. ಯವರು ಕವಿ ಮತ್ತು ರವಿ—ಇವರಲ್ಲಿ ಕಾಣುವ ಸಮಾನ ಧರ್ಮಗಳನ್ನ ಬೇರೆ ಬೇರೆ ಕಡೆಗಳಲ್ಲಿ ಚಿತ್ರಿಸಿದ್ದಾರೆ:

"ಕವಿ ಕಾಣನಜ್ಞಾನದವಿರಳವಮಾಯೆಯ
ರವಿ ಕಾಣದಂತೆ ತಮವನು." (ತುಂಬೆ ಹೂವು)

"ಕವಿಮತಿಯೆದುರೊಳು ಅವಮತಿಯುಳಿವುದೆ
ರವಿಯೆದುರುಳಿವೆ ಮಂಜಿಗೆ." (ತುಂಬೆ ಹೂವು)

"ರವಿಯಂಥ ಮಗ ಬೇಕು, ಕವಿಯಂಥ ಕೀರ್ತಿ ಬೇಕು" (ಮಂಥಾನ).

ರವಿ—ಕವಿಗಳ ಸಂಬಂಧದ ಒಂದು ತುಣುಕು 'ಗಗನ ಚುಕ್ಕಿ' ಕವನ ಸಂಕಲನದ 'ಬೈಗು ಭೈರವಿ' ಕವನದ ಅಂತ್ಯದಲ್ಲಿದೆ:

"ಬೆಂದು ಬಿದ್ದನದೋ ರವಿ
ಗಿರಿಯ ಆಚೆ ಕಡೆಯಲಿ
ಧ್ಯಾನದಗ್ಧನಾದ ಕವಿ
ಬೂದಿರಾಶಿಯಡಿಯಲಿ." (ಗಗನಚುಕ್ಕಿ)

ರವಿ–ಕವಿಗಳ ಆಗಮನ–ನಿರ್ಗಮನಗಳಿಂದಲೇ ಲೋಕದಲ್ಲಿ ಉದಯ ಅಸ್ತ:

"ಬಂದರೆ ಲೋಕಕೆ ಉದಯ
ಹೋದರೆ ಲೋಕಕೆ ಅಸ್ತ
ರವಿಯು ಹಾಗೆ ಕವಿಯು ಬಾಳು ಸದಾಶಿವ ಗುರು." (ಉಪ್ಪು ಕಡಲು)

**ಸಹೃದಯ:** ಕವಿಯ ಹೃದಯಕ್ಕೆ ಸಮಾನವಾದ ಹೃದಯವುಳ್ಳವನೇ ಸಹೃದಯ. ಈತನಿಗೆ ಭಾರತೀಯ ಕಾವ್ಯಮೀಮಾಂಸೆಯಲ್ಲಿ ದೊರೆತಿರುವಷ್ಟು ಪ್ರಾಶಸ್ತ್ಯ ಮತ್ತೆಲ್ಲಿಯೂ ದೊರೆತಿಲ್ಲ. ಎಸ್. ವಿ. ಪಿ. ಯವರೂ ಆತನಿಗೆ ಹೆಚ್ಚಿನ ಮಹತ್ವಕೊಟ್ಟು, ತನ್ನ ಕವಿತೆಗಳಿಗೆ ಆತನ ಶಿಫಾರಸನ್ನು, ಮೆಚ್ಚನ್ನು ಅಪೇಕ್ಷಿಸುತ್ತಾರೆ:

"ಸರಸರು ಸಹೃದಯರರಿತ ಒಬ್ಬಿಬ್ಬರು
ಪರಮನ ಕವಿತೆ ಚೆಲುವಿದು ಎಂದರು
ಹಿರಿಹಿಗ್ಗು ನನಗೆ ಸರಸಿಯೆ." (ಸುರಗಿ–ಸುರಹೊನ್ನೆ)
"ಆಡಿದ ಮಾತಿಗೆ ಹಾಡಿದ ಗೀತೆಗೆ
ಮಾಡಿದ ಕೃತಿಗೆ ರಸಿಕರ ಮೆಚ್ಚನು
ಬೇಡುವೆ ನಾನು ಸರಸಿಯೆ" (ಸುರಗಿ–ಸುರಹೊನ್ನೆ)

ಸಹೃದಯರು ರಸಗ್ರಾಹಿಗಳಾಗಲಿ ಎಂಬ ಭಾವ:

"ಅವನೀಜರೀನನ್ನ ಕವಿತೆಯ ರಸವನು
ಸವಿಯಲಿ ತಮಗೆ ಬಿಡುವುಂಟು ಎಂಬಾಗ
ಸವಿನೋದರಾಗಿ ಸರಸಿಯೆ" (ಸುರಗಿ–ಸುರಹೊನ್ನೆ)

ಅರಿತವರು ತನ್ನ ಕವಿತೆಗಳನ್ನು ಓದಿ ಒಮ್ಮೆ ತಲೆದೂಗಿದರೆ ಸಾಕು ಎಂಬ ಭಾವನೆ ಎಸ್. ವಿ. ಪಿ. ಯವರದು:

"ಅರಿತವರೊಮ್ಮೆ ತಲೆದೂಗಿದರಿನ್ನೆಮ
ಗದಕಿಂತ ಹೆಚ್ಚೇನು ಬೇಕು" (ಇಂದ್ರಚಾಪ)

ಸಹೃದಯ ಕಾವ್ಯವೆಂಬ ಕೊಳಲನ್ನು ನುಡಿಸಿದಾಗಲೇ ಅದರ ಸುಮಧುರ ನಾದದ ಅರಿವು ಜನತೆಗಾಗುತ್ತದೆ; ಇಲ್ಲವಾದರೆ ಅದು ಸಾಮಾನ್ಯ ವಸ್ತುವಾಗಿಯೇ ಲೋಕದ ಕಣ್ಣಿಗೆ ಕಾಣಿಸುತ್ತದೆ:

"ನೀನೂದಿ ತೋರದೆ ಹೋದರೆ ಏನಿದೆ
ಇದು ಒಂದು ಬಿದಿರಿನ ಕೊಳಲು
ನಾನೂದಿ ನೋಡಿದೆ ಹೋಯೆಂಬ ಸುಯ್ಯೊಂದೆ
ನಾಚುವೆ ಹೀಗೆಂದುಕೊಳಲು." (ಇಂದ್ರಚಾಪ)

ಸಹೃದಯ ಹೂವಿನ ಕಂಪನ್ನು ಆಘ್ರಾಣಿಸಿ, ನಾನಾ ಕಡೆಗಳಿಗೆ ಪ್ರಸಾರಮಾಡುವ ಮಾರುತನಂತೆ:

"ಕವನವನೊಂದನು ಕವಿ ವಿರಚಿಸುವನು
ಲಾಲಿಪರುತ್ತಮರದನು
ಗಿಡವು ಹೂ ಬಿಡುವುದು ಹೂವಿನ ಕಂಪನು
ಸವಿವನು ಒಯ್ದು ಮಾರುತನು" (ಇಂದ್ರಚಾಪ)

ಕವಿಕೃತಿಯ ಸಾಫಲ್ಯ ರಸಿಕನ ಹೃದಯದಲ್ಲಿ:

"ಭುವನದ ಭಾಗ್ಯವು ಬಿರಿಬಿರಿ ಬಿರಿದಾಗ
ಕವಿ ರಚಿಪನು ತನ್ನ ಕೃತಿಯ
ರಸಿಕರ ಮನವುಕ್ಕಿ ತೆರೆತೆರೆ ಹರಿದಾಗ
ಕೃತಿ ಪಡೆವುದು ಸಫಲತೆಯ" (ಇಂದ್ರಚಾಪ)

ರಸಿಕರಿಗೆ ಕಾವ್ಯ ಅಮೃತ ಸಮಾನ:

"ಕಾವ್ಯವು ರಸಿಕರಿಗಮೃತವು ಅಮೃತವು
ಕಾಮಿನಿಯರು ಕಾಮಿಗಳಿಗೆ
ವಿತ್ತವು ಜೀನರಿಗಮೃತವು ಅಮೃತವು
ಚಿರಶಾಂತಿ ಸನ್ಯಾಸಿಗಳಿಗೆ (ಇಂದ್ರಚಾಪ)

ಸಹೃದಯರಿಗೆ ಎಳ್ಳಷ್ಟು ಸುಖವಾದರೂ ಪರ್ವತದಷ್ಟು ಹಿಗ್ಗುತ್ತಾನೆ ಕವಿ. ಏಕೆಂದರೆ ಅವನು ಅದನ್ನು ರಚಿಸಿದ್ದೇ ಅವರ ಸುಖಕ್ಕಾಗಿ:

"ಸುಖ ನಿಮಗಿದರಿಂದಲಾದರೆ ಎಳ್ಳಷ್ಟು
ಹಿಗ್ಗುವೆ ಪರ್ವತದಷ್ಟು
ಮನಕೀಯಲಿದು ಎಂದು ಸುಖದೊಂದು ಸುಗ್ಗಿಯ
ರಚಿಸಿದೆ ನಾನು ಈ ಕೃತಿಯ" (ಚಂದ್ರವೀಧಿ)

ಸಹೃದಯರಿಗೆ ತನ್ನ ಕಾವ್ಯದಿಂದ ನೆಮ್ಮದಿಯಾದರೆ ಕವಿ ಕೃತಾರ್ಥನಾಗುತ್ತಾನೆ:

"ನಿಮಗೂವೆ ಮನಸಿಗೆ ನೆಮ್ಮದಿಯೆನಲದೆ
ಸಾಕು ಕೃತಾರ್ಥನು ನಾನು" (ಚಂದ್ರವೀಧಿ)

ಲಲಿತಕಲೆಗಳ ಆಸ್ವಾದನ ಸಹೃದಯನಿಗಲ್ಲದೆ ಉಳಿದವರಿಗೆ ಆಪ್ಯಾಯಮಾನವಾಗಲಾರದು:

"ಸಂಸ್ಕೃತಿಯ ಸುಸೂಕ್ಷ್ಮಮತಿಯ ಸಂವೇದನೆಯ
ಸಹೃದಯಿಯಾದವಂಗಲ್ಲದೆ ಗಾನ ನರ್ತನ ಚಿತ್ರ
ನಾಟಕ ಕಾವ್ಯಂಗಳ ಆಸ್ವಾದನವೆಂತು ಆಪ್ಯಾಯಮಾನವೆನಿಸೀತು? (ಉಪ್ಪು ಕಡಲು)

"ಸಹೃದಯನಲ್ಲದ ಶ್ರೋತೃವಿಗೋದಿಸಬಾರದಯ್ಯ" (ಉಪ್ಪುಕಡಲು)

**ಕಾವ್ಯ ಮತ್ತು ಅರಸಿಕ:** ಅರಸಿಕರ ಎದುರು ಕೃತಿಯನ್ನೊಪ್ಪಿಸುವ ಕರ್ಮ ತನಗೆ ಬರದಿರಲೆಂದು ಕವಿ ದೇವರನ್ನು ಪ್ರಾರ್ಥಿಸುತ್ತಾರೆ:

"ಅರಸಿಕರೆದುರೊಳು ಕೃತಿಯನೊಪ್ಪಿಸಲಾರೆ
ಹಣೆಯೊಳು ಬರೆಯದಿರಿದನು" (ಇಂದ್ರಚಾಪ)

ಅರಸಿಕರೆದುರು ಕವಿತೆಯೋದುವುದು ನಿಷ್ಪ್ರಯೋಜಕ:

"ಅರಸಿಕರೆದುರೇಕೆ ಕವಿತೆಯನೋದುವೆ
ವ್ಯರ್ಥಸಾಹಸಬೇಡ ಮನವೆ
ಕೋಣನ ಮುಂದೇಕೆ ಕಿನ್ನರಿ ಮಿಡಿಯುವೆ
ಬೆರಳನು ನೋಯಿಸಿಕೊಳುವೆ" (ಇಂದ್ರಚಾಪ)

ಅಜ್ಞಾನಿಗೆ ಕವಿತೆಯನ್ನು ತಿಳಿಯಹೇಳುವುದು ವ್ಯರ್ಥ, ರಸಿಕನಿಗೆ ಮಾತ್ರ ಗೊತ್ತು ಅದರ ಅರ್ಥ:

"ಅಜ್ಞನಾದವನಿಗೆ ಕವಿತೆಯನೊರೆವುದು
ಹೆಣಕೆ ಕಚಕುಳಿ ಇಟ್ಟ ಹಾಗೆ
ರಸಿಕ ಶೇಖರನಿಗೆ ಕವಿತೆಯನೊರೆವುದು
ವೀಣೆ ತಂತಿಯ ಮಿಡಿದ ಹಾಗೆ" (ಇಂದ್ರಚಾಪ)

ಅರಸಿಕನಿಗೆ ಕಾವ್ಯದ ಗಮಕವನ್ನು ಸವಿಯುವ ಶಕ್ತಿ ಇಲ್ಲ ಎಂಬುದರ ಸ್ಪಷ್ಟೀಕರಣಕ್ಕಾಗಿ ಕೊಟ್ಟಿರುವ ಹೋಲಿಕೆಗಳು ಕವಿಯ ಆಧುನಿಕ ಪ್ರಜ್ಞೆಯ ಪ್ರತೀಕಗಳು:

“ಸ್ಕೂಟರು ಹೆಳವನಿಗೇನುಪಯೋಗವು
ಬೋಳನಿಗೇಕೆ ಬಾಚಣಿಗೆ
ಅರಸಿಕನಿಗೆ ಏಕೆ ಕಾವ್ಯದ ಗಮಕವು
ಟ್ರಾನ್ಸಿಸ್ಟರೇಕೆ ಕಿವುಡನಿಗೆ” (ಇಂದ್ರಚಾಪ)

“ಅರಸಿಕನೆದುರಿನ ವರಕಾವ್ಯವಾಚನ
ಕುರುಡನ ಕೈಯ ಗಡಿಯಾರ.” (ತುಂಬೆಹೂವು)

“ಮಾತಿಗೆ ಮರುಳಾಗದಾತನ ಬಳಿಯೊಳು
ಏತರ ಕವಿತೆ ಹಾಡುವೆ” (ತುಂಬೆಹೂವು)

“ಕತ್ತೆಗೆ ಕೇಸರಿಭಾತಿನ ರುಚಿಯೇಕೆ
ಮಣಿಹಾರ ಬೇಕೆ ಸೂಕರಗೆ
ಕಾವ್ಯಕಥಾಮೃತದಾಸ್ವಾದವೇತಕೆ
ಮೂರ್ಖ ಶಿಖಾಮಣಿ ನಿನಗೆ.” (ಇಂದ್ರಚಾಪ)

ಚಂದ್ರೋದಯಕ್ಕೆ ಅಂಬುಧಿ ಉಕ್ಕುವುದೇ ಹೊರತು ಕೆರೆಯಲ್ಲ. ಕವಿ ವಾಣಿಗೆ ಹಿಗ್ಗುವವರು ರಸಿಕರೇ ಹೊರತು ಕುಜನರಲ್ಲ:

“ನಲಿಯರು ಕುಜನರು ರಸಿಕರು ನಲಿವಂತೆ
ಕವಿಯ ಸುಭಾಷಿತ ಕೇಳಿ
ಚಂದ್ರನ ಉದಯಕೆ ಕಡಲುಕ್ಕಿ ಮೊರೆವಂತೆ
ಕೆರೆಯುಕ್ಕಿ ಮೊರೆವುದೆ ಹೇಳಿ” (ಇಂದ್ರಚಾಪ)

**ವಿಮರ್ಶಕ:** “ಹಾಡುವ ಹಕ್ಕಿಗಳು ನಾವು
ನಮಗೆ ದಾರಿತೋರುವ ಕಾರುಣ್ಯವೇಕೆ ವಿಮರ್ಶಕನಿಗೆ
ಹಕ್ಕಿಗೆ ಹಾರಿದ್ದೇ ದಾರಿ
ಹಾಡು ಬೇಕಾದರೆ ಹಿಂಬಾಲಿಸಿ ಬರಲಿ ಸದಾಶಿವಗುರು.” (ಉಪ್ಪು ಕಡಲು)

ಎನ್ನುವ ಎಸ್. ವಿ. ಪಿ. ಯವರು ವಿಮರ್ಶಕ ಕವಿಗೆ ದೀಪಧಾರಿ ಅಲ್ಲ ಎಂದು ಸ್ಪಷ್ಟಪಡಿಸಿದ್ದಾರೆ. ಕಾವ್ಯದಿಂದ ಸಿಕ್ಕುವ ಆನಂದ ಹೃದಯಕ್ಕೆ, ವಿಮರ್ಶೆಯಿಂದ ಸಿಕ್ಕುವ ಆನಂದ ಬುದ್ಧಿಗೆ. ಕಾವ್ಯ ಮತ್ತು ವಿಮರ್ಶೆಗಳ ಪಠನದಿಂದಾಗುವ ಅನುಭವಗಳ ವ್ಯತ್ಯಾಸ:

“ಕಾವ್ಯವನು ಓದಿದರೆ ಆಗುವ ಅನುಭವ ಬೇರೆ,
ಅದರ ವಿಮರ್ಶೆಯನು ಓದಿದರೆ ಆಗುವ ಅನುಭವ ಬೇರೆ,
ಪರಿಮಳದ ಪರಿಕರಗಳಂಗಡಿಗೆ ಹೋದರೆ ಆಗುವ ಅನುಭವವೆ ಬೇರೆ,
ಹೂವಿನ ತೋಟದೊಳು ತಿರುಗಿದರೆ ಆಗುವ ಅನುಭವವೆ ಬೇರೆ,
ಯಾವ ಅನುಭವ ಮೇಲೆಂದು ರಸಿಕರು ಬಲ್ಲರು ಸದಾಶಿವ ಗುರು.” (ಉಪ್ಪು ಕಡಲು)

‘ಮಂಥಾನ’ದಲ್ಲಿ “ಕವಿಗೆ ಕಸವೂ ರಸವೇ, ವಿಮರ್ಶಕನಿಗೆ ರಸವೂ ಕಸವೇ” ಎಂಬ ಒಂದು ಗಾದೆ ಇದೆ. ಇಲ್ಲಿ, ವಿಮರ್ಶಕ ಎಂದರೆ ಕಾವ್ಯದ ಹುಳುಕನ್ನೇ ಹೆಕ್ಕಿ ತೆಗೆಯುವ ಕುವಿಮರ್ಶಕ ಎಂದು ಅರ್ಥಮಾಡಿಕೊಳ್ಳಬೇಕು. ಇಂತಹ ವಿಮರ್ಶಕರ ಬಗ್ಗೆ ಎಸ್. ವಿ. ಪಿ. ಯವರು ಅನೇಕ ಕಡೆಗಳಲ್ಲಿ ಕುವಿಮರ್ಶೆ ಮಾಡಿದ್ದಾರೆ. ಕವಿಗೆ ವಿಮರ್ಶಕ ಮಾರ್ಗದರ್ಶಕನಲ್ಲ:

"ಸರಿಯಲ್ಲವೀ ದಾರಿ ನಿನಗೆಂದು ಶುನಿಯೊಂದು
ಬೊಗಳಿದರೆನಗೇಕೆ ಚಿಂತೆ
ಮತ್ತೊಂದು ಶುನಿಯದಕುತ್ತರವೀವುದು
ನಾ ದಾರಿ ನಡೆವೆನೋರಂತೆ." (ಇಂದ್ರಚಾಪ)

ಕುವಿಮರ್ಶಕನಿಗೆ ಸುಕಾವ್ಯದ ದೋಷದ ಕಡೆಗೆ ಮಾತ್ರ ದೃಷ್ಟಿ. ಏಕೆಂದರೆ ಅವನ ಸಂಸ್ಕಾರವೇ ಅಂತಹದು:

"ಸುಂದರ ಕೃತಿಯೊಳು ಕುಂದಿರುವೆಡೆಯೊಳೆ
ಬೆರಳಿಡುವನು ನೋಡು ಖಳನು
ಸುಂದರ ವಪುವೊಳು ವ್ರಣವಿರುವೆಡೆಯೊಳೆ
ಕುಳಿತುಕೊಳ್ಳುವದು ನೋಡು ನೊಳನು" (ಇಂದ್ರಚಾಪ)

ಕುವಿಮರ್ಶಕ ಹುಣ್ಣಿನ ಮೇಲಿನ ನೊಣದಂತೆ ಮಾತ್ರವಲ್ಲ, ಮುಳ್ಳನ್ನು ಸವಿಯುವ ಒಂಟೆಯಂತೆ ಕೂಡಾ:

"ಕರ್ಣರಸಾಯನವೆನಿಸುವ ಕೃತಿಯೊಳು
ದೋಷೈಕ ದೃಷ್ಟಿಯ ಖಳರು
ಮುಳ್ಳನೆ ಸವಿಯುವ ಒಂಟೆಯ ತೆರದೊಳು
ಕುಂದನೆ ಪರಿಗಣಿಸುವರು" (ಇಂದ್ರಚಾಪ)

ಸಭ್ಯನಾದ ಕವಿ – ವಿಮರ್ಶಕ ಹೇಗಿರುತ್ತಾನೆ? :

"ತನ್ನನು ಹೊಗಳನು ಪರರನು ತೆಗಳನು
ಆಡನು ಬಿರುನುಡಿಗಳನು
ಕೇಡನು ಬಗೆಯನು ಕೋಡನು ಕೊಂಕನು
ಕರುಬನು ಸಭ್ಯನಾದವನು" (ಇಂದ್ರಚಾಪ)

ಕವಿತೆಯ ಗುಟ್ಟು ಕವಿಗೇ ಗೊತ್ತು:

"ಸುಕವಿಯೆ ಬಲ್ಲನು ಮಿಕ್ಕವರರಿಯರು
ಸುಕವಿಯ ಕಾವ್ಯಮರ್ಮವನು
ಸ್ವರ್ಣಕಾರನೆ ಬಲ್ಲನುಳಿದವರರಿಯರು
ಚಿನ್ನದ ಚಿತ್ರಕರ್ಮವನು" (ಇಂದ್ರಚಾಪ)

ಶಿವನ ಗುಟ್ಟು ಶಿವನೇ ಬಲ್ಲ; ಕವಿತೆಯ ಮರ್ಮ ಕವಿಯೇ ಬಲ್ಲ:

"ಶಿವನೆಲ್ಲ ಗುಟ್ಟನು ಶಿವನೆಯೆ ಬಲ್ಲಂತೆ
ಕವಿತೆಯ ಎಲ್ಲ ರಚನೆಯ ಗುಟ್ಟನು
ಕವಿ ತಾನೆ ಬಲ್ಲ ಸರಸಿಯೆ" (ಸುರಗಿ – ಸುರಹೊನ್ನೆ)

"God writes the first line, poet writes the second line" — ಈ ಭಾವವನ್ನು ಹೊಂದಿರುವ ಎಸ್. ವಿ. ಪಿ. ಯವರು ಇದರ ಧ್ವನಿತಾರ್ಥವನ್ನು ಮೇಲಿನ ಮಾತಿನಲ್ಲಿ ಹುದುಗಿಸಿದ್ದಾರೆ.*

**ಕಾವ್ಯದಲ್ಲಿ ನೀತಿ:** ಉತ್ತಮ ಕಾವ್ಯದಲ್ಲಿ ನೀತಿಬೋಧೆ ನೇರವಾಗಿ ಬರಬಾರದು. ಏಕೆಂದರೆ ಕಾವ್ಯವೆಂಬುದು ಕಾಂತಾಸಮ್ಮಿತವೇ ಹೊರತು ಪ್ರಭುಸಮ್ಮಿತ ಅಥವಾ ಮಿತ್ರಸಮ್ಮಿತವಲ್ಲ :

* ಈ ವಿಚಾರವನ್ನು ಅವರೇ ನನಗೆ ಒಮ್ಮೆ ತಿಳಿಸಿದರು.

"ಕಾವ್ಯದ ಮಾತಾಗಿ ನವಸುಭಾಷಿತವಾಗಿ
ಸುಂದರ ಸಾಮತಿಯಾಗಿ
ನೀತಿಯನೊರೆವೆನು ಸುಕುಮಾರಮತಿಗಾಗಿ
ಗುಡ ಜಿಹ್ವಿಕಾ ನ್ಯಾಯವಾಗಿ" (ಇಂದ್ರಚಾಪ)

"ಕವಿಯಾಗಿ ನೀತಿಯ ಸವಿಯಾಗಿ ನುಡಿದೆನು
ತ್ರಿವಿಧಿಯೊಳಿವನು ಪೋಣಿಸಿ ಕೇಳ್ವರ
ಕಿವಿದೊಡವಾಗಿ ಸರಸಿಯೆ" (ಸುರಗಿ – ಸುರಹೊನ್ನೆ)

'ಕಾವ್ಯದ ಮಾತಿನಲಿ ನೀತಿಯನೊರೆವೆನು' ಎಂಬ ಮಾತು 'ಇಂದ್ರಚಾಪ'ದಲ್ಲಿ ಒಂದು ಕಡೆ ಬರುತ್ತದೆ.

**ಕಾವ್ಯ ಪ್ರಯೋಜನ:** ಮಮ್ಮಟನೇ ಮುಖ್ಯವಾಗಿ ಅನೇಕ ಭಾರತೀಯ ಕಾವ್ಯಮೀಮಾಂಸಕರು ಕಾವ್ಯಪ್ರಯೋಜನದ ಬಗ್ಗೆ ತಮ್ಮ ಹೇಳಿಕೆಗಳನ್ನು ಇತ್ತಿದ್ದಾರೆ. ಅವುಗಳೆಲ್ಲವುಗಳ ಸಾರವೊಂದೆ — ಉತ್ತಮ ಕಾವ್ಯದ ಪರಮ ಪ್ರಯೋಜನ. 'ಮನಸ್ಸಿಗೆ ಆನಂದ.' ಈ ಭಾವವನ್ನು ಹೊಂದಿರುವ ಎಸ್. ವಿ. ಪಿ. ಯವರು ತಮ್ಮ ಕವನಗಳಲ್ಲಿ ಇದನ್ನು ನಾನಾ ರೀತಿಯಲ್ಲಿ ತಿಳಿಯಹೇಳಿದ್ದಾರೆ:

"ಚಿತ್ತ ವಿಶ್ರಾಂತಿಯೆ ಉತ್ತಮೋತ್ತಮ ಕಾವ್ಯ
ದುತ್ತಮವಾದ ಫಲವೈಸೆ" (ತುಂಬೆ ಹೂವು)

ಕವಿತೆಯ ಪದಗಳಿಂದ ಮನಸ್ಸಿಗೆ ಮುದ ದೊರಕಬೇಕು:

"ಮುದವಾಗುತಿರಬೇಕು ಪದವನು ಹೇಳಿದ
ರದು ಕೇಳಿದವರ ತಣಿಸುತೆ" (ತುಂಬೆ ಹೂವು)

ಕಾವ್ಯ ಎಂಬುದು ಚಿತ್ತಾಪಹಾರಿಯಾಗಿರಬೇಕೇ ಹೊರತು, ಪಿತ್ತಾಪಹಾರಿಯಾಗಿರಬಾರದು:

"ಪಿತ್ತಾಪಹಾರಿಗಳೆತ್ತಲು ಬಂದಿವೆ
ಚಿತ್ತಾಪಹಾರಿ ಕೃತಿಗಳು ಎಷ್ಟಿವೆ
ಬಿತ್ತರಿಸೆನಗೆ ಸರಸಿಯೆ" (ಸುರಗಿ – ಸುರಹೊನ್ನೆ)

ಇಲ್ಲಿ 'ಚಿತ್ತಾಪಹಾರಿ' ಎಂಬ ಪದವನ್ನು ಚಿತ್ + ತಾಪಹಾರಿ ಅಥವಾ ಚಿತ್ತ + ಅಪಹಾರಿ ಎಂದು ಬಿಡಿಸಬಹುದು. ಮನಸ್ಸಿನ ಬೇಸರವನ್ನು ಹೋಗಲಾಡಿಸುವುದು ಮತ್ತು ಮನಸ್ಸನ್ನು ಅಪಹರಿಸುವುದು – ಎರಡೂ ಕಾವ್ಯಪ್ರಯೋಜನಗಳು ಹೌದು.

ಮನಸ್ಸಿಗೆ ಬೆಳಕು ಅಥವಾ ಆನಂದ ಬರುವುದೇ ಕಾವ್ಯಪ್ರಯೋಜನ:

"ಹೆರವರ ಬರಹದೊಳಿರುವ ಸಂಗತಿಗಳು
ಮನ್ಮತಿಯನು ಬೆಳಗುವುವು
ಕತ್ತಲು ಹೋಹುದು ತೆರೆದ ಹೊತ್ತಗೆಯೊಳು
ನಲಿವುದು ಬೆಳಕಿಗೆ ಮನವು" (ಇಂದ್ರಚಾಪ)

**ಪದ್ಯ – ಗದ್ಯ:** "ಪದ್ಯಂ ಸಮಸ್ತ ಜನತಾ ಹೃದ್ಯಂ" "ಗದ್ಯಂ ಕವೀನಾಂ ನಿಕಷಂ ವದಂತಿ" ಇಂತಹ ಮಾತುಗಳು ರೂಢಿಯಲ್ಲಿವೆ. 'ಪದ್ಯ ಮೊದಲು ಹುಟ್ಟಿತು, ಗದ್ಯ ಆ ಮೇಲೆ ಬಂದಿತು' ಎಂಬುದು ಎಸ್. ವಿ. ಪಿ. ಯವರ ಅಭಿಪ್ರಾಯ.*

---

* "Thus, it is fairly obvious that poetry, whose primary concern is feeling, and whose primary instrument is the imagination, must have come earlier in human developments than any but the most rudimentary prose."— Jacob Korg: An Introduction to poetry", P. 5—ಈ ಮಾತನ್ನು ಇಲ್ಲಿ ಗಮನಿಸಬಹುದು.

"ಗದ್ಯದ ಹಿರಿಯಕ್ಕ ಪದ್ಯವು ಇದು ಬಹು
ಹೃದ್ಯವು ದಿಟವು ಅದಕಾಗಿ ಕೈಗೊಂಡೆ
ಉದ್ಯಮವಿದನು ಸರಸಿಯೆ" (ಸುರಗಿ – ಸುರಹೊನ್ನೆ)

ಗದ್ಯದಿಂದ ಮನಸ್ಸಿಗೆ ಸವಿ, ಪದ್ಯದಿಂದ ಆತ್ಮಕ್ಕೆ ಸವಿ:

"ಗದ್ಯವು ಒರೆವುದು ಸವಿಯನು ಚಿತ್ತಕೆ
ಸ್ನೇಹಿತರೊರೆದಪರದೆಗೆ
ಪದ್ಯವು ಸವಿಯನು ಪೇಳುವುದಾತ್ಮಕೆ
ಮಿಕ್ಕವು ನುಡಿವುವು ಕಿವಿಗೆ" (ಇಂದ್ರಚಾಪ)

ಕುಕವಿ – ಕುಕಾವ್ಯ ನಿಂದೆ: ಕುಕವಿ ಬರೀ ಶಬ್ದಾಡಂಬರದಿಂದ ಮಾತ್ರ ಕವಿತೆ ರಚಿಸುತ್ತಾನೆ. ಅವನು ಬಾಲಕನಿಗೆ ಸಮಾನ:

"ಚರಣವಿನ್ಯಾಸದೊಳಪ್ರಗಲ್ಭನು ತಾನು
ಜನನೀರಾಗ ಕಾರಣನು.
ಆಲಾಪ ಬಾಹುಳ್ಯದಿಂದೊಪ್ಪುವಾತನು
ಕುಕವಿಯು ಬಾಲಕನಿವನು." (ಇಂದ್ರಚಾಪ)

ಅಭ್ಯಾಸ, ವ್ಯುತ್ಪತ್ತಿಗಳಿಲ್ಲದ ಕವಿಯಿಂದ ರಚಿತವಾದ ಕವಿತೆ ಎಂದೂ ಜನಪ್ರಿಯವಾಗಲಾರದು ಎಂಬುದರ ವಿಡಂಬನೆ:

"ಅಯತ್ನಪೂರ್ವಕವಾಗಿ ರಚನೆಗೊಂಬ ಕವಿತೆ
ಯತ್ನಪೂರ್ವಕವಾಗಿ ಅಚ್ಚಾಗಬಹುದು
ಆದರೆ ಎಂತು ಮಾರಾಟವಾಗಬಹುದು ಸದಾಶಿವ ಗುರು!" (ಉಪ್ಪು ಕಡಲು)

**ಸುಕವಿ – ಸುಕಾವ್ಯ ಪ್ರಶಂಸೆ:** ಸುಕವಿ ತನ್ನ ಕೃತಿಯಲ್ಲಿ ಸದಾ ಅಮರ:

"ಕವಿ ಸತ್ತನೆನಬೇಡ ಅವ ತನ್ನ ಕೃತಿಯೊಳು
ಭುವಿಯೊಳಗಿವನು ನಿತ್ಯವು" (ತುಂಬೆ ಹೂವು)

ಕವಿಗೆ ಆತನ ಕವನವೇ ಆಶ್ರಯ ಸ್ಥಾನ:

"ಕವನದೊಳಲ್ಲದೆ ಕವಿಗೆಲ್ಲಿ ನೆಲೆಯಿದೆ
ಕವಿ ತನ್ನ ಕೃತಿಯೊಳುಳಿವನು" (ತುಂಬೆ ಹೂವು)

ಸುಕವಿಗಳು ಕೆಲವರೇ ಇರುವರು:

"ಸಾವಿರಗಟ್ಟಲೆ ಶಾಬ್ದಿಕರಿರುವರು
ತಾರ್ಕಿಕರಿರುವರು ಬಹಳ
ಜಗದೊಳು ಚಾರು ಸರಸಾಲಾಪ ಚತುರರು
ಕವಿವರರಿರುವುದು ವಿರಳ." (ಇಂದ್ರಚಾಪ)

ಇನಿಯನಂತೆ ಕವಿಯೂ ರಸ – ಧ್ವನಿಗಳಲ್ಲಿ ನಿರತನು:

"ಪದಶಬ್ದ ಕಾತರನಾಗಿಹನೀತನು
ಮಾರ್ಗದರ್ಶನ ಸುಖಿಯಿವನು
ರಸಭೋಗಿಯೀತನು ಧ್ವನಿಮಗ್ನನೀತನು
ಕವಿಯಂತೆ ಕಾದಲನಿಹನು" (ಇಂದ್ರಚಾಪ)

ಕಾವ್ಯದಂತೆ ಅದರ ಕರ್ತೃವೂ ಮಾನ್ಯ:

"ಹಸು ಬೇಕು, ಅದರ ಹಾಲು ಬೇಕು. ಅದರ ಕೋಡು ಬೇಡ ಎನ್ನಬಹುದೆ? ಪಾಪವು.
ತಾಯಿ ಬೇಕು. ಅದರ ಕಾವಲು ಬೇಕು, ಅದರ ಚಾಳಿ ಬೇಡ ಎನ್ನಬಹುದೆ? ಪಾಪವು.
ಕಾವ್ಯ ಬೇಕು. ಅದರ ರಸ ಬೇಕು, ಅದರ ಕರ್ತೃ ಬೇಡ ಎನ್ನಬಹುದೆ? ಪಾಪವು,
ಸದಾಶಿವ ಗುರು ! (ಉಪ್ಪು ಕಡಲು)

ವಿಜ್ಞಾನಿಗಿಂತ ಕವಿ ಶ್ರೇಷ್ಠ ಎಂಬ ಅಭಿಪ್ರಾಯ 'ಮಂಥನ'ದಲ್ಲಿರುವ "ಹಾರಿ ಹೋಗಿ ವಿಜ್ಞಾನಿ ಕಲ್ಲು ಮಣ್ಣು ತಂದ, ಇದ್ದಲ್ಲೇ ಇದ್ದ ಕವಿ ತಿಂಗಳ ಬೆಳಕು ಮಿಂದ" ಎಂಬ ಗಾದೆಯಲ್ಲಿ ಅಭಿವ್ಯಕ್ತವಾಗಿದೆ.

ವರಕವಿಗೆ ಪರಿಸರ ಪ್ರಜ್ಞೆ ಇರಬೇಕು:

"ಪರಿಸರವನು ಕುರಿತರಿಯುತಲಿರುವುದೆ
ವರಕವಿ ಪಂಥವೆನಿಸದೆ" (ತುಂಬೆ ಹೂವು)

ಹಲಗೆ ಬಳಪವ ಪಿಡಿಯದೊಂದಗ್ಗಳಿಕೆ. ಪದವಿಟ್ಟಳುಪದೊಂದಗ್ಗಳಿಕೆ ತನ್ನದೆಂದು ಕುಮಾರವ್ಯಾಸ ಹೇಳಿಕೊಂಡ. ಈ ಮಾತು ಎಷ್ಟು ಸತ್ಯ ಎನ್ನಲು ಬರುವುದಿಲ್ಲ. ಆದರೆ ಒಂದು ಕಾವ್ಯ ಸುರಮ್ಯವಾಗಬೇಕಾದರೆ, ಅದನ್ನು ಮತ್ತೆ ಮತ್ತೆ ಪರೀಕ್ಷಿಸಿ, ತಿದ್ದಿ ತೀಡಿ ಬರೆದು ಒಂದು ರೂಪಕ್ಕೆ ತರಬೇಕು:

"ಬರೆದೋದುತಿರಬೇಕು ಪರಿಕಿಸುತಿರಬೇಕು
ಪರಿಪರಿ ತಿದ್ದುತಿರಬೇಕು ಕಾವ್ಯವು
ಸುರರಮ್ಯವಾಗ ಸರಸಿಯೆ" (ಸುರಗಿ – ಸುರಹೊನ್ನೆ)

"ಕವಿಗೆ ಒಂದೇ ನಾಲಗೆ. ಕವಿತೆಗೆ ಸಾವಿರ ನಾಲಗೆ" ಎಂಬ ಒಂದು ನವೀನ ಗಾದೆ 'ಮಂಥನ'ದಲ್ಲಿದೆ.

ಕವಿಯ ಸುಭಾಷಿತ ಕಿರಿದರಲ್ಲಿ ಹಿರಿದರ್ಥ ಹೇಳುವಂತಿರಬೇಕು ಎನ್ನುವಲ್ಲಿ ಪುರಾಣದ ವಾಮನ ಸಂಕೇತ:

"ಹಿಡಿದರೆ ಹಿಡಿತುಂಬ ಬಿಟ್ಟರೆ ಜಗವೆಲ್ಲ
ಕವಿಯ ಸುಭಾಷಿತ ಹೀಗೆ,
ಒಂದಡಿ ಇಳೆಗೆಲ್ಲ ಒಂದಡಿ ನಭಕೆಲ್ಲ
ವಾಮನ ಬೆಳೆದೆದ್ದ ಹಾಗೆ." (ಇಂದ್ರಚಾಪ)

ಜೇನು – ಅಮೃತಗಳನ್ನು ಹಿಂದೆ ಹಾಕುತ್ತದೆ ಕವಿ ಸುಭಾಷಿತ:

"ರುಚಿಯೊಳು ಮಧುರವು ಮಧುವಹುದದಕಿಂತ
ಮಧುರವು ತಾನಹುದಮೃತ
ಮಧುಸುಧೆಗಳಿಗಿಂತ ಕವಿಯ ಸುಭಾಷಿತ
ಮಧುರವೆನ್ನುವ ಮಾತು ನಿರುತ." (ಇಂದ್ರಚಾಪ)

ಕವಿಕೃತಿಯ ಮೌಲ್ಯ ನಿರ್ಣಯ:

"ನವರತ್ನಗಳಿಗಿಂತ ನವನಿಧಿಗಳಿಗಿಂತ
ಕವಿಯ ಕೃತಿರತ್ನ ದೊಡ್ಡದು" (ತುಂಬೆ ಹೂವು)

'ಅಂಚೆಯ ಪೆಟ್ಟಿಗೆ' ಕವನ ಸಂಕಲನದ 'ಕವಿ' ಎಂಬ ಕವನದಲ್ಲಿ ಕವಿಯು 'ವರ್ಣನ'ವಾಗುತ್ತದೆ :

"ವನವನವನಲೆದಲೆದು ಹಲವು ಹೂಗಳ ತಿರಿದು
ಮಾಲೆಗಟ್ಟುವ ರಸಿಕ ಹೂವಡಿಗನಂತೆ;
ಹೂವು ಹೂವಿಗೆ ಹಾರಿ ಮಕರಂದವನು ಹೀರಿ

ಇನಿದಾದ ಮಧುವೀವ ಹೆಜ್ಜೇನಿನಂತೆ;
ಜಗದ ಜೀವರ ಚರಿತದನುಭವ ವಿಶೇಷಗಳ
ತಾನಾಯ್ದು ಜಾಣ್ಮೆಯಲಿ ಸವಿನುಡಿಯೊಳಿರಿಸಿ;
ಲೋಕಕೀವನು ಕವಿಯು ತನ್ನಮರ ಕಾವ್ಯವನು
ತಾ ನಲಿದ ಆನಂದದಾಕೃತಿಯ ಸಲಿಸಿ" (ಅಂಜೆಯ ಪೆಟ್ಟಿಗೆ)

ಆನಂದದಾಯಕ ಅಮರಕಾವ್ಯವನ್ನು ರಚಿಸಿದ ಕವಿ ಅಮರ.

ಕಾವ್ಯ ಹಳೆಯದಾದ ಮಾತ್ರಕ್ಕೆ ಅದನ್ನು ದೂರೀಕರಿಸಬಾರದು:

"ಹಳೆಯ ಕಾವ್ಯವೆ ಲೇಸು ಹಳೆಯ ವಾದ್ಯವೆ ಲೇಸು
ಹಳೆಯ ಓಜಯ್ಯ ಬಹುಲೇಸು—ಬಹುಲೇಸು
ಹಳೆಯ ಸಂಬಂಧ ಸರಸಿಯೆ." (ಸುರಗಿ–ಸುರಹೊನ್ನೆ)

'ಹಳೆಯದೆಲ್ಲವೂ ಹೊನ್ನಲ್ಲ' ಎಂಬ ಮಾತೊಂದಿದೆ. ಆದರೆ ಹಳಬರ ಮತದಂತೆ ಹಳೆಯದೇ ಉತ್ಕೃಷ್ಟ. ಎಳೆಯರಿಗೆ ಹಳೆಯದನ್ನು ಕಂಡರೆ ತಿರಸ್ಕಾರ. ಇದೇ ಎಳೆಯರು ಹಳಬರಾದಾಗ ಅವರೇ ಹೇಳುತ್ತಾರೆ ಹಳೆಯದು ಉತ್ತಮವೆಂದು. ಈ ಲೋಕಸತ್ಯ ಕಾವ್ಯಕ್ಕೂ ಅನ್ವಯ:

"ಹಳೆಯದು ಎಲ್ಲವು ಒಳಿತಾದುದೆಂಬರು
ಹಳಬರಾದವರು ಒಪ್ಪುವರೆಳೆಯರು
ಹಳಬರಾದಾಗ ಸರಸಿಯೆ" (ಸುರಗಿ–ಸುರಹೊನ್ನೆ)

ರಾಜರು, ಆಶ್ರಯದಾತರು ಹಲವರು; ಆದರೆ ಸುಕವಿಗಳು ಕೆಲವರು ಮಾತ್ರ:

"ಅರಿಕೇಸರಿಯರಿಹರರಸರು ಹಲವರು
ಇರುವರೆ ಹಲವು ಪಂಪರು ? " (ತುಂಬೆ ಹೂವು)

ಕವಿವ್ಯಕ್ತಿ ಬೇರೆ, ಲೋಕವ್ಯಕ್ತಿ ಬೇರೆ. ಕವಿಯ ವೈಯಕ್ತಿಕ ಜೀವನದಿಂದ ಆತನ ಕಾವ್ಯದ ಮೌಲ್ಯ ನಿರ್ಧರಿಸಬಾರದು. ಈ ವಿಚಾರವನ್ನು ಗಾದೆ ಮಾತಿನ ಸಹಾಯದಿಂದ ನಿರೂಪಿಸಲಾಗಿದೆ:

"ಕತ್ತಿಯ ಬಾಯಿ ತಾ ಡೊಂಕಾದ ಮಾತ್ರಕೆ
ಕತ್ತರಿಸಿದ ಕಬ್ಬು ಡೊಂಕೆ ?
ಮತ್ತಿನ ಚಿತ್ರವು ಡೊಂಕಾದ ಮಾತ್ರಕೆ
ಬಿತ್ತರಿಸಿದ ಕಬ್ಬ ಡೊಂಕೆ ? " (ಇಂದ್ರಚಾಪ)

ಕಾವ್ಯವನ್ನು ಆಸ್ವಾದಿಸುವಾಗ ವ್ಯಾಕರಣದ ವಿಚಾರವನ್ನು ಮರೆಯಬೇಕು. ಏಕೆಂದರೆ ವ್ಯಾಕರಣಕ್ಕಾಗಿ ಕಾವ್ಯ ಎಂದೂ ಅಲ್ಲ:

"ವ್ಯಾಕರಣವನೋದಲೀ ಕಾವ್ಯ ಕಲಿವವಿ
ವೇಕಕೆ ಮಿಗಿಲು ಪೆರತುಂಟೆ ? " (ತುಂಬೆ ಹೂವು)

ಒಳ್ಳೆಯ ಕವಿಗೆ ಜನತೆ ಸರಿಯಾಗಿ ಪ್ರೋತ್ಸಾಹ ಕೊಡುತ್ತಿಲ್ಲವೆಂಬ ವೇದನೆ:

"ಥಳ ಥಳ ಹೊಳೆಯುವ ಚಿನ್ನಕೆ ಕುಪಿಲ್ಲ
ಭಲೆಯೆಂಬರಿಲ್ಲವೊ ಕವಿಗೆ." (ಇಂದ್ರಚಾಪ)

ಭಾವಗೀತೆ—ರುದ್ರನಾಟಕಗಳ ವ್ಯತ್ಯಾಸ ಹಳ್ಳಿ–ನಗರ ಜೀವನಗಳ ತಾರತಮ್ಯದಂತೆ:

"ಭಾವಗೀತೆಯ ಹಾಗೆ ಹಳ್ಳಿಯ ಜೀವನ
ದೇವನೆ ಈ ಗೀತಕಾರ."

ರುದ್ರನಾಟಕದಂತೆ ನಗರದ ಜೀವನ
ನರಸೆ ಈ ನಾಟಕಕಾರ"  (ಇಂದ್ರಚಾಪ)

ಕವಿ ದೀನದಲಿತರ ಬಗ್ಗೆ ಕವಿತೆ ರಚಿಸಬೇಕೆಂಬ ಪ್ರಗತಿಶೀಲ ಆಶಯ 'ಅಂಚೆಯ ಪೆಟ್ಟಿಗೆ' ಸಂಕಲನದ 'ಕವಿಗೆ' ಎಂಬ ಕವನದಲ್ಲಿ ವ್ಯಕ್ತವಾಗಿದೆ. ಕವಿ ಕೇವಲ ಕಲ್ಪನಾವಿಲಾಸಿಯಾಗದೆ, ತನ್ನ ಯುಗಧರ್ಮಕ್ಕೆ ನಾಲಗೆಯಾಗಬೇಕು:

"ಇಂದಿನೀ ಯುಗಧರ್ಮವೆಂತಿರುವುದದನರಿತು
ಕೃತಿಶತವ ರಚಿಸಿ ನೀಂ ಕೃತಕೃತ್ಯನಾಗು
ವಿಶ್ವವ್ಯಾಪಕ ತತ್ವವಾವುದೆಂಬುದ ಕುರಿತು
ಅದನೆ ನೆನೆನೆನೆದರಿತು ಅದಕೆ ಶಿರಬಾಗು"  (ಅಂಚೆಯ ಪೆಟ್ಟಿಗೆ)

ಎಸ್. ವಿ. ಪಿ. ಯವರ ಲೋಕವ್ಯಕ್ತಿತ್ವ ಕವಿವ್ಯಕ್ತಿತ್ವದ ವಲಯಕ್ಕೆ ಸಂಕ್ರಮಿಸುತ್ತದೆ. ಅದರ ಫಲವಾಗಿ, ಅವುಗಳೆರಡೂ ಅವಿನಾಭಾವಹೊಂದಿ. ಅವರ ಸಂವೇದನೆಯು ಸಾಧಾರಣೀಕರಣವಾಗುತ್ತದೆ:

"ನಿಮ್ಮ ಕಾವ್ಯವನೋದಿ ಕಣ್ಣೀರು ಕರೆದೆನು
ಎಂದಿದ್ದಳೆನ್ನಾಕೆ ಹಿಂದೆ
ನಿನ್ನ ಪಾಡನೆ ಹಾಡು ಮಾಡಿ ಹಾಡಿರುವೆನು
ಅತ್ತಾರು ನಿನ್ನನ್ನರೆಂದೆ"  (ಚಂದ್ರವೀಧಿ)

ಎಸ್. ವಿ. ಪಿ. ಯವರ ಕವನಗಳಲ್ಲಿ ಕಂಡುಬರುವ ಕಾವ್ಯಮೀಮಾಂಸೆಯು ಈ ಹೊಳನೋಟ ಕಾವ್ಯದ ಅವರ ವೈಯಕ್ತಿಕ ನಿಲುವು ಹಾಗೂ ಭಾರತೀಯ ಕಾವ್ಯಮೀಮಾಂಸೆಗೆ ಅವರ ಸಲುವಳಿಯನ್ನು ತೋರಿಸುತ್ತದೆ. ಪ್ರಥಮದರ್ಜೆಯ ಕವಿ ಹಾಗೂ ಸಮತೂಕದ ಪ್ರಜ್ಞಾವಂತ ವಿಮರ್ಶಕರಾಗಿರುವ ಇವರು ತಮ್ಮ ಕವನಗಳಲ್ಲಿ ಕಾವ್ಯಮೀಮಾಂಸೆಯ ಕುರಿತು ತಿಳಿಸಿರುವುದರಿಂದ, ಅಂತಹ ವಿಚಾರಗಳಿಗೆ ಹೆಚ್ಚಿನ ತೂಕ ಬಂದಿದೆ. ಅವುಗಳ ಮೌಲ್ಯ ಅಧಿಕವಾಗಿದೆ. ಆಧುನಿಕ ಕನ್ನಡ ಕವಿಗಳಲ್ಲಿ ಕಾವ್ಯಮೀಮಾಂಸೆಗೆ ಇವರು ಕೊಟ್ಟ ಕಾಣಿಕೆ ವಿಶಿಷ್ಟವಾದುದು. ಆಧುನಿಕ ಪ್ರಜ್ಞೆ, ವೈಜ್ಞಾನಿಕ ದೃಷ್ಟಿ, ವಿಮರ್ಶಕ ಮನೋಧರ್ಮ, ಪಾಶ್ಚಾತ್ಯ ಸಾಹಿತ್ಯದ ಅರಿವು, ಪ್ರಾಚೀನ ಕೃತಿಗಳ ತಿಳಿವು, ಕವಿಹೃದಯ—ಇವೆಲ್ಲ ಒಟ್ಟಾದ ಎಸ್. ವಿ. ಪಿ. ಯವರ ಕವನಗಳಲ್ಲಿ ಕಂಡುಬರುವ ಕಾವ್ಯಮೀಮಾಂಸೆಯ ದೃಷ್ಟಿ—ಒಂದು ವಿಧದ ಸೃಷ್ಟಿ.

# ೨೫. 'ಕೃಷ್ಣಮೇಘ'—ಒಂದು ಸಮೀಕ್ಷೆ

ಎ. ಎಸ್. ಕಾಳೇಗೌಡ

೧

ಕವಿಯ ಮನಸ್ಸು ಪ್ರಶಾಂತವಾದ ಸರೋವರವಿದ್ದ ಹಾಗೆ. ಇದನ್ನೇ ಮಹಾಕವಿ ಕುವೆಂಪು ಅವರು 'ಕವಿಯ ಹೃದಯವೊಂದು ವೀಣೆ, ಲೋಕವದನು ಮಿಡಿವುದು' ಎಂದಿರುವುದು. ದೇಶದಲ್ಲಿ ಪ್ರತಿದಿನವೂ ನೂರಾರು ಘಟನೆಗಳು ಸಂಭವಿಸುತ್ತಿರುತ್ತವೆ. ಜನಸಾಮಾನ್ಯರ ಮನಸ್ಸಿನಿಂದ ಅಷ್ಟೇ ಬೇಗ ಮರೆಯಾಗುತ್ತವೆ. ಆದರೆ ಸಂವೇದನಾಶೀಲನಾದ ಕವಿಗೆ ಒಂದೊಂದು ಘಟನೆಯೂ ಪ್ರತಿಕ್ರಿಯೆಯನ್ನುಂಟುಮಾಡುತ್ತದೆ, ಭಾವತರಂಗಗಳನ್ನೆಬ್ಬಿಸುತ್ತದೆ. ಕವಿಯಾದವನು ಆ ಘಟನೆಯನ್ನು ಅನುಭವಿಸಿ ಅದರಲ್ಲಿ ಲೀನವಾಗುತ್ತಾನೆ. ಅವನು ಪಡೆದ ರಸಾನಂದವೇ ಅಭಿವ್ಯಕ್ತಿಯ ರೂಪದಲ್ಲಿ ಹೊರಗೆ ಬರುತ್ತದೆ.

ಪ್ರಯೋಗಶೀಲ ಮರಕವಿಯಾದ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ 'ಕೃಷ್ಣಮೇಘ'ವನ್ನು ನೋಡಿದವರಿಗೆ ಮೇಲಿನ ಮಾತಿನ ಸತ್ಯ ಗೋಚರವಾಗದಿರದು. ಕವಿಯ ಬಗೆಯ ಬಾನಿನಲ್ಲಿ ಸಾಂದ್ರವಾಗಿ ಕವಿದ ಘಟನೆಗಳ ಸಂಸ್ಮರಣೆಯ ಕೃಷ್ಣಮೇಘಗಳೇ ಇಲ್ಲಿ ಸಾಂಗತ್ಯದ ಕಾವ್ಯದೃಷ್ಟಿಗೆ ಕಾರಣವಾಗಿವೆ. ಕವಿಯೇ ತಮ್ಮ ಕೃತಿಯನ್ನು ಕುರಿತು ಹೇಳಿರುವಂತೆ "ಮೈಸೂರು ವಿಶ್ವವಿದ್ಯಾನಿಲಯದ ಚಿನ್ನದ ಹಬ್ಬ, ವೀರಪಾಂಡಿಯ ಗಡಿ ಸಂರಕ್ಷಣೆಯ ಕಾಳಗ, ಕಾರಣಪುರುಷರಾದ ಬಸವೇಶ್ವರರ ಅವತಾರಲೀಲೆ, ರಾಷ್ಟ್ರಪಿತ ಗಾಂಧಿಜೀಯವರ ಜನ್ಮಶತಾಬ್ದಿ, ಚಂದ್ರಲೋಕಕ್ಕೆ ಮನುಷ್ಯನ ಉಡ್ಡಾಣ ಇವು ಭವದ ತಾಪದಲ್ಲಿ ಸೊರಗಿ ಸೊಪ್ಪಾದ ಜೀವ ಸಸ್ಯಾವಳಿಗೆ ಅಮೃತಾಂಬುಧರಗಳಂತೆ ಒದಗಿಬಂದ ಘಟನೆಗಳು." ಕವಿ ತನ್ನ ಕಾಲದಲ್ಲಿಯೇ ನಡೆದ ಈ ಅಮೂರ್ತ ಸನ್ನಿವೇಶಗಳನ್ನು ಜೀವಂತವಾಗಿ ಅನುಭವಿಸಿ, ಹೃದಯದುಂಬಿ ಹಾಡಿದ್ದಾರೆ. ಹೇಳುವ ರೀತಿ ಬಹಳ ಸರಳವಾದರೂ ಅದರ ಹಿಂದೆ ವಿಶಿಷ್ಟತಮ ಅನುಭವವಿದೆ. ಇತರರಿಗೆ ಒಂದು ಮಾರ್ಗದರ್ಶನವಿದೆ.

ಪ್ರೊ. ಪರಮೇಶ್ವರ ಭಟ್ಟರ ಕೃತಿಗಳನ್ನು ಅವಲೋಕಿಸಿದ ಪ್ರತಿಯೊಬ್ಬ ಸಹೃದಯನೂ ಹೇಳುವ ಮಾತನ್ನೇ ನಾನೂ ಮತ್ತೊಮ್ಮೆ ಹೇಳಬೇಕು. ಕನ್ನಡ ನಾಡಿಗೆ, ಕನ್ನಡ ಸಾಹಿತ್ಯಕ್ಕೆ ಇವರಿತ್ತ ಕೆಲವು ಅಪೂರ್ವ ವಿಶಿಷ್ಟ ಕಾಣಿಕೆಗಳಿವೆ. ಈ ಇಪ್ಪತ್ತನೆಯ ಶತಮಾನದಲ್ಲಿ ಒಂದು ರೀತಿಯ ಪಂಥ ಮನೋಭಾವ ಬೆಳೆದು, ಬಿಸಿರಕ್ತದವರು ತಿಕ್ಕಾಡುತ್ತಿರುವ ಪರಿಸ್ಥಿತಿಯಲ್ಲಿ, ಪ್ರೊ. ಭಟ್ಟರು ಯಾವ ಸದ್ದುಗದ್ದಲವೂ ಇಲ್ಲದೆ ತಮ್ಮ ಶ್ರೀಮಂತ ಪ್ರತಿಭೆಯಿಂದ ವೈವಿಧ್ಯಪೂರ್ಣವಾದ ಸಾಹಿತ್ಯಕೃತಿಗಳನ್ನು ಅರ್ಜಿಸುತ್ತಿರುವುದು ಸ್ವಾಗತಾರ್ಹ. ಸಾಹಿತ್ಯಪ್ರಕಾರದ ಎಲ್ಲಾ ನಿಟ್ಟಿನಲ್ಲಿಯೂ ಪ್ರಯೋಗ ನಡಸಿ ಯಶಸ್ವಿಯಾಗಿರುವುದು ಇವರ ವಿದ್ವತ್ತಿಗೆ ಸಾಕ್ಷಿ. ಇವರ ಶ್ರೇಷ್ಠ ಕೃತಿಗಳಲ್ಲೊಂದಾದ 'ಉಪ್ಪುಕಡಲಿ'ಗೆ ಮುನ್ನುಡಿಯನ್ನು ಬರೆಯುತ್ತಾ ಡಾ. ಹಾ. ಮಾ. ನಾಯಕರು "ಪ್ರೊ. ಭಟ್ಟರು ಸ್ವತಂತ್ರಕೃತಿಗಳಿಂದ ಅನುವಾದಗಳಿಂದ ಈಗಾಗಲೇ ಹೆಸರುಗಳಿಸಿದ್ದಾರೆ. ಕಾವ್ಯಕ್ಷೇತ್ರದ ಅವರ ವಿವಿಧ ಪ್ರಯೋಗ-ಸಿದ್ಧಿಗಳು ಅವರಿಗಾಗಿಯೇ ಒಂದು ವಿಶಿಷ್ಟ ಸ್ಥಾನವನ್ನು ಮೀಸಲಾಗಿರಿಸಿವೆ. ಆಧುನಿಕ ಕನ್ನಡದ ದೀಪ ಹತ್ತಿಸಿದವರಲ್ಲಿ ಇವರೂ ಒಬ್ಬರು. ಈಚಿನ ವರ್ಷಗಳಲ್ಲಿ ಅವರು ಅನೇಕ ಹಳೆಯ ಛಂದಸ್ಸುಗಳನ್ನು ಚಾಲ್ತಿಗೆ ತಂದು ಒಂದು ಬಗೆಯ ಪ್ರಯೋಗ ನಡಸಿದ್ದಾರೆ. ಸಾಂಗತ್ಯವನ್ನು ಅತ್ಯಂತ ಸಮರ್ಥವಾಗಿ ಜೀವಂತವಾಗಿ ಬಳಸಿ ನಮ್ಮ ಸಾಹಿತ್ಯದಲ್ಲಿ ಆ ಛಂದಸ್ಸನ್ನು ಬಳಸಿ ಯಶಸ್ವಿಯಾದ ಪೂರ್ವಾಚಾರ್ಯರಿಗೆ ಹೆಗಲೆಣೆಯಾಗಿದ್ದಾರೆ." ಎಂದು ಹೇಳುವ ಮಾತಿನ ಸತ್ಯತೆ ಈ ಕವಿಯನ್ನು ಬಲ್ಲ ಯಾವ ಸಹೃದಯನಿಗೂ ಹೊಸದಲ್ಲ. ಈ ದಾರಿಯಲ್ಲಿಯೇ ಸಾಂಗತ್ಯದಲ್ಲಿ ರಚಿತವಾದ 'ಕೃಷ್ಣಮೇಘ'ವನ್ನು, ಕವಿಯ ಮಾತುಗಳನ್ನೇ ಬಳಸಿಕೊಂಡು ಪರಿಚಯ ಮಾಡಿಕೊಡುವುದು ಈ ಚಿಕ್ಕ ಲೇಖನದ ಉದ್ದೇಶ.

ಈ ಸಂಕಲನದ ಮೊದಲನೆಯ ಕವನ ಕನ್ನಡ ತಾಯಿಯ ಹಿರಿಮೆಯ ಗುಣಗಾನದ ಮೈಸೂರು 'ವಿಶ್ವವಿದ್ಯಾನಿಲಯವನ್ನು ಕುರಿತದ್ದು.' ಕನ್ನಡ ನಾಡಿನ ಅನ್ನ ತಿಂದು ಬೆಳೆದು ನಲಿಯುವಂತೆ, ಕನ್ನಡನಾಡಿನ ಸುಪುತ್ರನೊಬ್ಬನು, ತನ್ನ ತಾಯಿಯ ಹಿರಿಮೆಯನ್ನು ಭಕ್ತಿಪೂರ್ವಕವಾಗಿ, ಅಷ್ಟೇ ಹೆಮ್ಮೆಯಿಂದ ಹಾಡಿ ಕೊಂಡದ್ದು. ವಿಶ್ವವಿದ್ಯಾನಿಲಯ ನಿಜವಾಗಿಯೂ ಕೂಪಮಂಡೂಕದಂತಿದ್ದ ಮನುಷ್ಯನನ್ನು ವಿಶ್ವಮಾನವ ನನ್ನಾಗಿ ಮಾಡುತ್ತದೆ. ನಾಡಿನ ಮೂಲೆಮೂಲೆಯಲ್ಲಿಯೂ ಜನಜಾಗೃತಿಯನ್ನುಂಟುಮಾಡಿ ಸಂಸ್ಕೃತಿ ಪ್ರಸಾರಕಾರ್ಯದಲ್ಲಿ ಪಾಲುಗೊಳ್ಳುತ್ತದೆ. ಕವಿ ತನ್ನ ನಾಡಿನ, ತನ್ನ ತಾಯಿಯ ಹಿರಿಮೆಯನ್ನು ಹೇಳಿ ಕೊಳ್ಳುವುದಕ್ಕೆ ಹಿಂದಿನ ಮಹಾತ್ಮರನ್ನೂ, ಆ ಭವ್ಯ ಇತಿಹಾಸವನ್ನೂ, ಇಂದಿನ ಪರಿಸ್ಥಿತಿಯನ್ನೂ ನೆನಪಿಗೆ ತಂದುಕೊಳ್ಳುತ್ತಾರೆ. ತನ್ನ ಯುಗವನ್ನು ಸುವರ್ಣಯುಗವಾಗಿ ಮಾಡಿದ ತನ್ನ ಮಹಾಕಾವ್ಯ ಗಳಲ್ಲಿ ಧರ್ಮ-ಕಾವ್ಯಧರ್ಮಗಳನ್ನು ಮೇಳವಿಸಿದ ಆದಿಕವಿ ಪಂಪ, ಹನ್ನೆರಡನೆಯ ಶತಮಾನದಲ್ಲಿ ಕ್ರಾಂತಿಯನ್ನುಂಟುಮಾಡಿದ ಕಾರಣಪುರುಷ ಬಸವಣ್ಣ, ಭಕ್ತಕವಿ ಗದುಗಿನ ನಾರಣಪ್ಪ, ನಾವಲಿಂದು ಲಕ್ಷ್ಮೀಶ ಇವರೆಲ್ಲರೂ ಈ ತಾಯಿಯ ಹಾಲು ಕುಡಿದು ಬೆಳೆದವರು. ಧರ್ಮಮರ್ಮಗಳನ್ನರಿತು ಕಾವ್ಯಕರ್ಮಗಳನ್ನು ಕೈಗೊಂಡವರು. ಗಿಟುಕಿನ ಕೊಬ್ಬರಿಯಾದ ಸಕ್ಕದವನ್ನೂ, ತನಿಬೆಲ್ಲವಾದ ಕನ್ನಡವನ್ನೂ ಬೆರೆಸಿ ಕಜ್ಜದ ರುಚಿಯನ್ನು ಮೆರೆದವರು. ಇದಕ್ಕೆ ಕವಿ ಕೊಡುವ ಕಾರಣ,

ನಮ್ಮ ಕನ್ನಡ ತಾಯಿ ಹಳಬರ ಹಳಬಳು
ಪಳವಾತಿನವಳು ಸರಸತಿ
ಹೊಸಬರ ಹೊಸಬರಿಗೆದೆ ಹಾಲು ಕೊಡುವಳು
ಬೆಳೆವೊಲು ಚಿಣ್ಣರ ಸುಮತಿ

ವೀರಭೂಮಿಯಾದ ಕನ್ನಡ ನಾಡಿನಲ್ಲಿ ಜನಿಸಿದ ಅರಸರು ಎಷ್ಟು ಪ್ರಸಿದ್ಧಿ ಪಡೆದರು? ಮುತ್ತು ರತ್ನಗಳನ್ನು ಬೀದಿಬೀದಿಯಲ್ಲಿ ಮಾರುತ್ತಿದ್ದ ದೃಶ್ಯ ಸಾಮಾನ್ಯವಾಗಿತ್ತು. ಶರಣರು, ವಚನಕಾರರು, ಪುರಂದರದಾಸರು, ಕನಕದಾಸರು ಕೊಟ್ಟ ಕಾಣಿಕೆಯೇನು ಕಡಿಮೆಯೆ? ಇದು ಒಂದು ಮುಖವಾದರೆ, ನಾಡಿನ ಸಂಸ್ಕೃತಿಯ ಪ್ರತೀಕವಾಗಿರುವ ಪ್ರಪಂಚದಲ್ಲೇ ಶಿಲ್ಪಶಾಸ್ತ್ರದಲ್ಲಿ ಹೆಸರು ಪಡೆದಿರುವ ಕಲೆಯ ಇನ್ನೊಂದು ಮುಖದ ಬಗ್ಗೆ ಕವಿಯ ಮನಸ್ಸು ಹೊರಳುತ್ತದೆ. 'ಕಲೆಗಾರರೆಮ್ಮವರೆಮಗಾಗಿ ಸಲೆ ದುಡಿದಿಟ್ಟಂತಹ ಕಲೆಯ ಭಂಡಾರ' ನಾಡಿನ ಮೂಲೆಮೂಲೆಯಲ್ಲೂ ಕಾಣಸಿಗುತ್ತದೆ. ಇದಕ್ಕೆ ಕಾರಣರಾದ ಶ್ರೇಷ್ಠ ಶಿಲ್ಪಿಗಳ ಕಾಯಕವನ್ನು ಕವಿ ಉಬ್ಬಿ ನುಡಿಯುತ್ತಾರೆ.

ಶಿಲೆಯನು ಹಿಡಿದಳಿಸಿದರು ನಗಿಸಿದರು
ಹಾಡಿಸಿ ಕುಣಿಸಿದರಿವರು
ಕಲೆಯೋಜರಿವರನುಪಮ ಕರಕೌಶಲ
ಹರಿದಿದೆ ನಾಡಿನುದ್ದಗಲ

ಹೀಗೆ ಶತಶತಮಾನಗಳ ಭವ್ಯ ಪರಂಪರೆಯಿರುವ ಕನ್ನಡಿಗರಿಗೆ ಅದೆಷ್ಟು ಸ್ಫೂರ್ತಿ ಬರಬೇಡ! ಐವತ್ತು ವರ್ಷಗಳ ಹಿಂದೆ ಜನ್ಮತಾಳಿದ ಮೈಸೂರು ವಿಶ್ವವಿದ್ಯಾನಿಲಯ ವಟವೃಕ್ಷದಂತೆ ಹಬ್ಬಿರುವುದನ್ನು ನೋಡಿ ಕವಿಗೆ ಆನಂದವಾಗಿದೆ. ಕನ್ನಡ ಕಣ್ವರ ಶ್ರೀಕಾರದಿಂದ ಆಕಾರಗೊಂಡ ನಾವು ಸ್ತುತ್ಯಕಾರ್ಯವನ್ನು ಮಾಡಿದ್ದೇವೆ. ರಸಋಷಿಯಿಂದ ಮಹಾಕಾವ್ಯ ಮೂಡಿಬಂದಿದೆ. ಕವಿಭೂತಿಯಿಂದ ಸನಾತನ ಋತಕೆ ಗೇಯತೆಯೊದಗಿದೆ. ಜ್ಞಾನಸತ್ರದ ರೂಪತಳೆದು ಗಂಗೋತ್ರಿ ಮೂಡಿನಿಂತಿದೆ ಎಂಬ ಸಂತೃಪ್ತಿ ಕವಿಗಿದೆ. ಆದರೂ ಅಷ್ಟಕ್ಕೇ ಅವರ ಉತ್ಸಾಹ ನಿಲ್ಲುವುದಿಲ್ಲ.

ಶೋಧನವೆನುವ ಶಿಲಾತಲ ಜಲದೊಳು
ತಿಳಿವಿನ ಶೀತಲ ಜಲವು

ಸೆಲೆಯೊಡೆದುಗುತಂದು ಮನವೆಂಬ ಕೊಳದೊಳು
ತುಂಬುವುದಿದು ಪುಣ್ಯಫಲವು

[illegible] ಚಿನ್ನದ ಹಬ್ಬವನ್ನು ಕಂಡ ಕವಿ, ನಾಳೆಯ ವಜ್ರದ ಹಬ್ಬವನ್ನು ನೋಡಲು 'ಎದೆಯೊರೆಯಲಿ ನನಗಾ ದಿವ್ಯಗಾಥಕೆ' ಎಂದು ಹಾರೈಸುತ್ತಾರೆ. ಈ ಕವಿಯ ಆಸೆ ನೆರವೇರಲಿ ಎಂಬ ಮಾತನ್ನು ಬಿಟ್ಟು ನಾವು ಏನು ಹೇಳಲು ಸಾಧ್ಯ ?

'ನಮ್ಮ ಯೋಧರ ಸಾಹಸಗಳನ್ನು ನೆನೆದು' ಎಂಬ ಕವನ ದೇಶಕ್ಕಾಗಿ ತಮ್ಮ ಪ್ರಾಣವನ್ನೇ ಪಣವಾಗಿಟ್ಟು ಶತ್ರುಗಳೊಡನೆ ಹೋರಾಡುವ ದೇಶಭಕ್ತ ಸೈನಿಕರ ಚಿತ್ರವನ್ನು ಕಣ್ಣ ಮುಂದೆ ಕಟ್ಟಿ ನಿಲ್ಲಿಸುತ್ತದೆ. ನಮ್ಮ ಹಿಂದಿನ ಸಾಹಿತ್ಯ ಪರಂಪರೆಯನ್ನು ನೋಡಿದಾಗ, ಅಲ್ಲಿ ಸಾಹಿತ್ಯವನ್ನು ರಚಿಸುವಂತಹ ಕವಿ, ಕಲಿಯೂ ಆಗಿದ್ದನು ಎಂಬುದು ತಿಳಿಯುತ್ತದೆ. ಲೇಖನಿಯನ್ನು ಹಿಡಿದ ಕೈಯೇ ಖಡ್ಗವನ್ನೂ ಹಿಡಿಯುತ್ತಿತ್ತು. ಆ ವೀರ ಯುಗವೇ ಹಾಗಿತ್ತು. ನಮ್ಮ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈ ಶತಮಾನದ ಕವಿಗಳೂ ತಮ್ಮ 'ಅಳಿಲುಸೇವೆ'ಯನ್ನು ಸಲ್ಲಿಸಿದ್ದಾರೆ. ತಮ್ಮ ಶಕ್ತಿಯುತವಾದ, ಪ್ರಚೋದಕವಾದ, ಹೇಡಿಯನ್ನೂ ತಟ್ಟಿ ಎಚ್ಚಿಸುವಂತಹ ಬರೆವಣಿಗೆಗಳಿಂದ ಜನರನ್ನು ಜಾಗ್ರತಗೊಳಿಸಿದ್ದಾರೆ. 'ದೇಶ ನನ್ನದು, ನನ್ನದು ನಾಡು – ಎನ್ನದ ಮಾನವನೆದೆ ಸುಡುಗಾಡು' ಎಂದರು ಕವಿಗಳು. 'ದೇಶದ್ರೋಹಿಗೆ ಗತಿಯಿಲ್ಲ ಮಲಗಲು ಚಿತೆಯಿಲ್ಲ' ಎಂದು ಹೇಡಿಯನ್ನು ಹೀಗಳೆದರು. ಆದರೆ ತಮ್ಮ ನೆತ್ತರನ್ನು ಸುರಿದು ಸ್ವಾತಂತ್ರ್ಯವೃಕ್ಷವನ್ನು ಪೋಷಿಸಿದ, ಈಗ ಪೋಷಿಸುತ್ತಿರುವ ಈ ವೀರರಿಗೆ ಸಲ್ಲಬೇಕಾದ ಗೌರವ, ಬಹುಮಾನ ಸಂದಿದೆಯೆ ಎಂಬುದು ಯೋಚಿಸಬೇಕಾದ ಪ್ರಶ್ನೆ. ಕವಿ ಈ ಕವನದಲ್ಲಿ ಅವರಿಗೆ ಭರವಸೆ ಕೊಡುತ್ತಾರೆ.

ಶತಶತಮಾನಗಳಾಚೆಗೆ ಸಹ ಹಸಿ-
ರಾಗಿರುವುದು ನಿಮ್ಮ ಹೆಸರು
ಶತಶತ ಭೀರುಗಳೆದೆಯನು ಸಹ ಬಿಸಿ-
ಗೊಳಿಸುವುದೀ ನಿಮ್ಮ ಉಸಿರು

ಇತಿಹಾಸಕಾರನು ಇವರ ರಣಸಾಹಸವನ್ನು ಹೆಮ್ಮೆಯಿಂದ ಬರೆಯುತ್ತಾನೆ. ಮುಂದಿನ ಪೀಳಿಗೆ ಇವರನ್ನು ಹೆಮ್ಮೆಯಿಂದ ಸ್ಮರಿಸಿಕೊಳ್ಳುತ್ತದೆ. ಭಾರತಮಾತೆಯ ವೀರಪುತ್ರರಾದ ಈ ಯೋಧರಿರುವ ತನಕ ವೈರಿಗಳು ನಮಗೆ 'ಸಿಂಹದ ಮುಂದಿನ ಶುನಕ'ವಲ್ಲದೆ ಮತ್ತೇನು ? ಈ ಭರವಸೆಯೊಂದಿಗೆ ಶಾಂತಿಯ ಬೀಡಾದ, ಗಾಂಧೀಜೀಯವರಂಥ ಮಹಾತ್ಮರಿಗೆ ಜನ್ಮವಿತ್ತ ನಮ್ಮ ನಾಡಿನ ತತ್ತ್ವವನ್ನೂ ಸಾರುತ್ತಾರೆ.

ಶಾಂತಿಯೆ ಮಂತ್ರವು ಸಹನೆಯೆ ತಂತ್ರವು
ಸಹಬಾಳುವೆಯೆ ನಮ್ಮ ಒಲವು
ಆದರು ಕೆಮ್ಮನೆ ಕೆಣಕಿ ಬಂದವರನು
ಹೊಡೆದಟ್ಟುವುದೆ ನಮ್ಮ ನಿಲವು

ಇಂಗಳೇಶ್ವರ ಬಾಗೇವಾಡಿಯಲ್ಲಿ ಬಸವೇಶ್ವರರ ಎಂಟುನೂರನೆಯ ಹಬ್ಬವನ್ನು ವೈಭವದಿಂದ ಆಚರಿಸಿದ ಸಂದರ್ಭದಲ್ಲಿ ಕವಿ ರಚಿಸಿರುವ ಕವನ 'ಬಸವೇಶ್ವರರನ್ನು ಕುರಿತು' ಎಂಬುದು. ಕವಿಗೆ ಈ ಉತ್ಸವ ಸಾಮಾನ್ಯ ಹಬ್ಬವಾಗಿ ಕಾಣುತ್ತಿಲ್ಲ. 'ಸಂಗಮನಾಥನಿಗೆ ಸಂತೋಷವಾಗುವಷ್ಟು, ಶಿವೆಗೆ ಸುಮ್ಮಾನವೆನಿಸುವಷ್ಟು' ವೈಭವ ಅಲ್ಲಿ ಕಾಣುತ್ತಿದೆ. ಎಂಟುನೂರು ವರ್ಷಗಳ ಹಿಂದಕ್ಕೆ ತಮ್ಮ ಮನವನ್ನು ಹರಿಯಿಸಿ ಆ 'ಶಿವ'ನನ್ನು ಮನದಣಿಯೆ ಹೊಗಳುತ್ತಾರೆ, ಸ್ತುತಿಸುತ್ತಾರೆ. ಲೋಕಕಲ್ಯಾಣವನ್ನೂ, ಆತ್ಮಕಲ್ಯಾಣವನ್ನೂ ಏಕಕಾಲದಲ್ಲಿ ಸಾಧಿಸಿದವರು ಬಸವಣ್ಣ. ಮುಕ್ತಿಯ ಮನೆಗೆ ಹಾಕಿದ್ದ ಚಿಲಕವನ್ನು ತೆಗೆದು ಎಲ್ಲರನ್ನೂ ಮನೆಯೊಳಕ್ಕೆ ಸೇರಿಸಿದವರು. ಇದೆಲ್ಲಕ್ಕಿಂತ ಹೆಚ್ಚಾಗಿ ಶಿವಾನುಭವಗಳನ್ನು ಕನ್ನಡ ಮಾಧ್ಯಮದಲ್ಲಿ ಅರುಹಿದ್ದು ಕವಿಗೆ ಎಲ್ಲಿಲ್ಲದ ಸಂತೋಷವನ್ನುಂಟುಮಾಡಿದೆ. 'ಕಾಯಕದಲ್ಲಿಯೇ ಕೈಲಾಸ' ಎಂದ ಬಸವಣ್ಣನವರ ಬಗ್ಗೆ ಅಪರಿಮಿತವಾದ ದೈವಭಾವನೆಯಿದೆ. ವಚನ ಸುಧಾರಸವೂಡಿ

ಕನ್ನಡಮ್ಮನ ಗುಡಿಗೆ [illegible] ಕಲಶವಿಟ್ಟ [illegible]
ಹಂಬಲಿಸುವ ಮನಸ್ಸು ಹೀಗಿದೆ.

> ಕಾಯ ಸಾಹಿತ್ಯವನೆಲ್ಲರುಮೊರೆವರು
> ಬಹರು ಮತ್ತಿಂಥವರಿಳೆಗೆ
> ಆತ್ಮಸಾಹಿತ್ಯವನೊರೆವ ಸಿನ್ನನ್ನರು
> ಬಹರೆಂದು ಮತ್ತೆಮ್ಮ ಬಳಿಗೆ

ಕವಿ ಪರಮೇಶ್ವರಭಟ್ಟರ 'ಗಾಂಧಿಯವರನ್ನು ಕುರಿತು' ಎಂಬ ತಮ್ಮ ಕವನದ ಮೂಲಕ ಮಹಾತ್ಮರಿಗೆ ತಮ್ಮ ಕಾಣಿಕೆಯನ್ನು ಒಪ್ಪಿಸಿದ್ದಾರೆ. ಯಾರೊಬ್ಬರೇ ಆಗಲಿ ಒಂದು ಕೃತಿಯನ್ನು ಮಾಡಬೇಕಾದಲ್ಲಿ, ಒಂದು ಕವನವನ್ನು ರಚಿಸಬೇಕಾದಲ್ಲಿ, ತಾನು ಆರಿಸಿಕೊಂಡ ವಸ್ತುವಿನ ಸಂಪೂರ್ಣವಾಗಿ ವಶನಾಗಿರಬೇಕು. ಅದರ ಬಗ್ಗೆ ಪೂಜ್ಯಭಾವನೆಯಿರಬೇಕು. ಅದನ್ನು ತಮ್ಮ ಆದರ್ಶವನ್ನಾಗಿ ತಿಳಿದಿರಬೇಕು ಎಂದು ಮೊದಲೇ ಹೇಳಿದ ಅಭಿಪ್ರಾಯಕ್ಕೆ ಪ್ರೊ. ಭಟ್ಟರ ಈ ಕವನವೇ ಉದಾಹರಣೆ. ಸುಮಾರು ಐವತ್ತು ಪದ್ಯಗಳಲ್ಲಿ ಹರಿದಿರುವ ಈ ಕವನದಲ್ಲಿ ಸರಳವಾದ ಭಾಷೆಯಲ್ಲಿ ಗಾಂಧೀಜಿಯ ಚಿತ್ರವನ್ನು ಕಡೆದು ನಿಲ್ಲಿಸಿದ್ದಾರೆ. ಒಂದಕ್ಕೊಂದು ಒಂದಾದ ಹೋಲಿಕೆಯಂತೆ ಬರುವ ವಿಶೇಷಣಗಳು, ಸಾಧನೆಗಳು ಓದುಗರಿಗೆ ಆ ಭವ್ಯಮೂರ್ತಿಯನ್ನು ಮರೆಯಲು ಸಾಧ್ಯವಿಲ್ಲದಂತೆ ಮಾಡುತ್ತವೆ. ಕವನದ ಪ್ರಾರಂಭವೇ ಪರಿಣಾಮಕಾರಿಯಾಗಿದೆ.

> ಭಾರತ ಪುತ್ರನು ಪ್ರೇಮಪವಿತ್ರನು
> ಲೋಕ ಸುಮಿತ್ರನು ನೀನು
> ಶಾಂತಿ ನಿಯೋಗಿಯು ವಿಮಲವಿರಾಗಿಯು
> ತ್ಯಾಗಿಯು ಗಾಂಧಿಯು ನೀನು

ಕಲಿಯುಗವನ್ನು ಕೃತಯುಗವನ್ನಾಗಿ ಮಾಡಿದ ಗಾಂಧಿಯಂತಹ ಶಾಂತಿಯುಪೂತನು, ಮಹಾಪುರುಷನು, ಆತ್ಮಾಭಿರಾಮನು, ಆನಂದಧಾಮನು, ಸದಯನು, ಸಜ್ಜನಸಖನು, ಪೂಜ್ಯನು, ಉದಾರನು, ಶಾಂತನು, ದಾಂತನು, ಮಹಾತ್ಮನು ಮತ್ತೆ ಬರುತ್ತಾನೆಯೇ ಎಂಬ ಕಳಕಳಿ ಕವಿಗೆ. ಮತ್ತೆ ನೀನೇ ಜನ್ಮವೆತ್ತಿ 'ಬಾ ತಂದೆ ಬೇಗ ಬಾರಯ್ಯ' ಎಂಬ ಪ್ರಾರ್ಥನೆ.

ತಾವು ಉದ್ದೇಶಿಸಿ ಹೇಳುತ್ತಿರುವ ವ್ಯಕ್ತಿಯ ಜತೆಯಲ್ಲಿ ಲೌಕಿಕ ವ್ಯಾಪಾರಗಳನ್ನು ಹೋಲಿಸಿ ನೋಡಿ ಅದರಿಂದ ಅವರ ಶ್ರೇಷ್ಠತೆಯನ್ನು ಎತ್ತಿಹಿಡಿಯುವ ತಂತ್ರ ಪ್ರೊ. ಭಟ್ಟರದು. ಸಾಮಾನ್ಯವ್ಯಕ್ತಿಗೂ, ಮಹಾತ್ಮನಿಗೂ ಅವರವರ ಆದರ್ಶಗಳಲ್ಲೇ ಅಂತರವಿರುತ್ತದೆ. ಲೌಕಿಕ ಜಂಜಡದಲ್ಲಿ ಒಬ್ಬ ಸಿಕ್ಕಿಬಿದ್ದರೆ ಮತ್ತೊಬ್ಬ ಅದನ್ನೂ ಮೆಟ್ಟಿ, ನೀರಿನಲ್ಲಿರುವ ಕಮಲದಂತೆ, ಅದರ ಹೊರಗುಳಿಯುತ್ತಾನೆ. ಗಾಂಧೀಜಿಯವರು ಎರಡನೆಯವರ್ಗಕ್ಕೆ ಸೇರಿದವರು. ಆಧುನಿಕ ಸಾಹಿತ್ಯ ಪ್ರಪಂಚದಲ್ಲಿ ಒಂದು ವಿಶಿಷ್ಟಸ್ಥಾನವನ್ನು ಪಡೆದಿರುವ ಕವಿ ಪ್ರೊ. ಪರಮೇಶ್ವರಭಟ್ಟರು, ಗಾಂಧೀಜಿಯವರು ನಡೆದ ದಾರಿಯನ್ನು ಹೇಳುವ ರೀತಿ ಚೆನ್ನಾಗಿದೆ. ರಾಜಕೀಯದಲ್ಲಿದ್ದುಕೊಂಡು, ಆ ಕಲುಷಿತ ವಾತಾವರಣದಲ್ಲೂ ಆದರ್ಶ ಸಾಧಿಸಿದವರು ಬೆರಳೆಣಿಕೆಯಷ್ಟು ಮಂದಿ. ಆದರೆ ಗಾಂಧೀಜಿಯವರು ರಾಜಕಾರಣದಲ್ಲೂ ಅಧ್ಯಾತ್ಮವನ್ನು ತಂದು, ತಮ್ಮ ಸತ್ಯ ಅಹಿಂಸೆಯೆಂಬ 'ಇಬ್ಬಾಯ ಸುರಗಿ'ಯಿಂದಲೇ ಬೆಂಕಿಯನ್ನು ನೀರನ್ನಾಗಿ ಮಾಡಿದರು. ನಂಜು ಹಾಲಾಯಿತು, ಹಾವು ಹೂವಾಯಿತು. ಗಾಂಧೀಜಿಯವರು ಎಲ್ಲಾ ವಿಧದಲ್ಲೂ ಬಲಿಷ್ಠರಾದ ಆಂಗ್ಲೇಯರನ್ನು ಮಣಿಸಿದ್ದಕ್ಕೆ ಕವಿ ಕೊಡುವ ಕಾರಣವನ್ನು ನೋಡಿ.

> ಮೊದಲು ನೀನೊಳಗನು ಶೋಧಿಸಿ ಶುಚಿಗೈದೆ
> ಕರಣಂಗಳನು ಪಳಗಿಸಿದೆ
> ಹೊರಗನು ಬಳಿಕ ಸುಧಾರಿಸಲಣಿಯಾಗೆ
> ಲೋಕವೆ ಮಣಿಯಿತು ನಿನಗೆ

'ಶ್ರೀರಾಮಾಯಣದ ಸ್ನೇಹ ಸದ್ಭಾವವೆ' ಗಾಂಧಿಯಾಗಿದೆಯಂತೆ. ಇಂಥ ಗಾಂಧಿಹೋದದ್ದು ನಾಡಿನ ಜನರನ್ನು ಕತ್ತಲೆಗೆ ತಳ್ಳಿದಂತಾಗಿದೆ. ಕ್ಷಣಕ್ಷಣವೂ ಕೆಡುತ್ತಿರುವ ಈ ಜನರನ್ನು ಎತ್ತಿ ಉದ್ಧರಿಸಲು ಈ ಮಹಾತ್ಮ ಮತ್ತೆ ಅವತಾರ ಮಾಡಬೇಕು ಎಂದು ಹೇಳುವ ಕವಿಯ ಭಾವ ಅದ್ಭುತವಾಗಿದೆ.

ಈ ಸಂಕಲನದ ಎಲ್ಲಾ ಕವನಗಳೂ ಸಾಹಿತ್ಯಿಕ ದೃಷ್ಟಿಯಿಂದ ಚೆನ್ನಾಗಿದ್ದರೂ, ಕೊನೆಯ ನೀಳ್ಗವಿತೆ (longer poem) 'ಅಪೋಲೋ ಹನ್ನೊಂದು' ವಿಶಿಷ್ಟ ರೀತಿಯದಾಗಿದ್ದು ಸಫಲವಾಗಿದೆ. ವಿಜ್ಞಾನದ ಬಲದಿಂದ ಪ್ರಕೃತಿ ಶಕ್ತಿಯನ್ನು ತನ್ನ ಅಡಿಯಾಳುಮಾಡಿಕೊಂಡ ಮಾನವ, ಮೊತ್ತಮೊದಲು ಚಂದ್ರನ ಮೇಲೆ ಕಾಲಿಟ್ಟ ಸಾಹಸವನ್ನು ಕವಿ ಆಶ್ಚರ್ಯದೊಡನೆ ಈ ಕವನದಲ್ಲಿ ಹೇಳಿದ್ದಾರೆ.

ಮಾನವನ ಸಂಸ್ಕೃತಿಯ ಬಹುಮುಖಿ ಸೌಧಕ್ಕೆ ತಳಹದಿ ರೂಪವಾದ ಎರಡು ಶಕ್ತಿಗಳು ಸಾಹಿತ್ಯ ಮತ್ತು ವಿಜ್ಞಾನ. ಒಂದು ಆತನಲ್ಲಿರುವ ಭಾವನಾ ಶಕ್ತಿಯನ್ನು ಪ್ರತಿಬಿಂಬಿಸಿದರೆ ಇನ್ನೊಂದು ಆತನ ಬುದ್ಧಿಶಕ್ತಿಯನ್ನು ಪ್ರತಿಫಲಿಸುತ್ತದೆ. ಸೃಷ್ಟಿಯ ವಿವಿಧ ವ್ಯಾಪಾರಗಳನ್ನು ಕಂಡು ಆಲೋಚನಾಪರವಾದ ಮನಸ್ಸು ತೋರಿಸಿದ ಪ್ರತಿಕ್ರಿಯೆಯ ಎರಡು ಬಗೆಗಳಿವು—ಎಂಬ ಮಾತು ಎಲ್ಲರೂ ಒಪ್ಪಿರುವಂತಹುದು. ಸಾಹಿತ್ಯ ಮತ್ತು ವಿಜ್ಞಾನ ಪರಸ್ಪರ ಪೂರಕವಾದವುಗಳು. 'ಕಲ್ಪನಾ ಪ್ರತಿಭೆಗೆ ವಿಜ್ಞಾನವು ಶತ್ರು' ಎಂಬ ಮಾತಿಗೆ ಅರ್ಥವಿಲ್ಲ. ವೈಜ್ಞಾನಿಕ ದೃಷ್ಟಿಕೋನದ ಆಧಾರದ ಮೇಲೆ ಮೂಡಿಬರುತ್ತಿರುವ ಇಂದಿನ ಸಾಹಿತ್ಯವೇ ಇದಕ್ಕೆ ಸಾಕ್ಷಿ. ಕವಿ ಪರಮೇಶ್ವರ ಭಟ್ಟರು ಬರೆದಿರುವ 'ಅಪೋಲೊ ಹನ್ನೊಂದು' ಎಂಬುದು ವೈಜ್ಞಾನಿಕ ಘಟನೆಯನ್ನು ಕುರಿತು ಪದ್ಯರೂಪದಲ್ಲಿ ಬಂದಿರುವ ಮೊತ್ತಮೊದಲ ಕವನ. ಇದುವರೆಗೂ ವಿಜ್ಞಾನದ ವಿಷಯವನ್ನು ಕುರಿತು ಗದ್ಯದಲ್ಲಿ ಬರೆದಿದ್ದಾರೆ, ಬರೆಯುತ್ತಿದ್ದಾರೆ. ವೈಜ್ಞಾನಿಕ ವಸ್ತುವೂ ಹೇಗೆ ಕಾವ್ಯದ ವಸ್ತುವಾಗಬಲ್ಲುದು ಎಂಬುದನ್ನು ಪರಮೇಶ್ವರಭಟ್ಟರು ಈ ಮೂಲಕ ತೋರಿಸಿ ಎಲ್ಲರ ಕಣ್ಣನ್ನೂ ತೆರೆಸಿದ್ದಾರೆ. ಇದುವರೆಗೂ ವಿಜ್ಞಾನದ ಉಪಮೆಯನ್ನು ತಮ್ಮ ಕಾವ್ಯದಲ್ಲಿ ಬಳಸಿದ್ದಾರೆ, ವೈಜ್ಞಾನಿಕ ಹಿನ್ನೆಲೆಯಲ್ಲಿ ಪಾತ್ರ ಸೃಷ್ಟಿ ಮಾಡಿದ್ದಾರೆ. (ಇದಕ್ಕೆ, ಕುವೆಂಪು ಅವರ 'ಶ್ರೀರಾಮಾಯಣ ದರ್ಶನಂ' ಅನ್ನು ನೋಡಬಹುದು) ಆದರೆ ವಿಜ್ಞಾನದ ಸಾಧನೆಯನ್ನೇ ಕಾವ್ಯವಸ್ತುವನ್ನಾಗಿ ಬಳಸಿದವರಲ್ಲಿ ಪ್ರೊ. ಭಟ್ಟರೇ ನನಗೆ ತಿಳಿದ ಮಟ್ಟಿಗೆ ಮೊದಲಿಗರು.

ಇಂದಿನ ಸಂಕೀರ್ಣ ಜಗತ್ತಿನಲ್ಲಿ, ವಿಜ್ಞಾನವೂ ಮಹಾಕಾವ್ಯದ ವಸ್ತುವಾಗಬಲ್ಲುದು. ಹಾಗೆ ಆದಾಗಲೇ ವಿಜ್ಞಾನದ ಸಿದ್ಧಿಸಾಧನೆಗಳು ಜನಮನದಲ್ಲಿ ಅಚ್ಚೊತ್ತಿದಂತೆ ಉಳಿಯುವುದು. ವಾಲ್ಮೀಕಿ ರಾಮಾಯಣ ಇಂದಿಗೂ ಪಾರಾಯಣಗ್ರಂಥವಾಗಿ ಜನಸಾಮಾನ್ಯರ ಬಾಯಲ್ಲೂ ಏಕೆ ಉಳಿದು ಕೊಂಡಿದೆಯೆಂದರೆ, ಅದು ಮಹಾಪುರುಷನ ಕಥೆಯೊಂದನ್ನು ಕಾವ್ಯಮಯವಾಗಿ ಹೇಳಿರುವುದರಿಂದ. ಈ ಮಾತನ್ನು ಹೇಳಲು ಕಾರಣವಿಷ್ಟೆ. ಪ್ರಕೃತಿಯ ಮೇಲೆ ಮಾನವನ ಪ್ರಭುತ್ವ ಗಾಢವಾಗಿ ಮೊತ್ತಮೊದಲು ಅಮೇರಿಕನರು ಚಂದ್ರನ ಮೇಲೆ ಕಾಲಿಟ್ಟಾಗ ಇಡೀ ಪ್ರಪಂಚವೇ ಆಶ್ಚರ್ಯಪಟ್ಟಿತು. ಆದರೆ ಇದೇ ಕುತೂಹಲ, ಆಶ್ಚರ್ಯ ಮತ್ತೊಂದುಸಾರಿ ಹೋದಾಗ ಆಗದೆ ಹೋಗಬಹುದು. ಕ್ರಮೇಣ ಇದು ಸಾಮಾನ್ಯ ವಿಷಯವಾಗಿ ಪರಿಣಮಿಸಬಹುದು. ಆದರೆ ಪ್ರತಿಭಾವಂತನಾದ ಕವಿಯೊಬ್ಬನಿಂದ ಈ ವಿಷಯವನ್ನೇ ಒಳಗೊಂಡ ಕಾವ್ಯ ಮಾತ್ರ ಹೀಗಾಗಲು ಸಾಧ್ಯವಿಲ್ಲ. ಕಾಲ ಕಳೆದಂತೆ ಅದು 'ನಿತ್ಯಂ ಹೊಸತು.' ಚಂದ್ರ ಮಹಾಕಾವ್ಯದ ವಸ್ತುವಾಗಲು ಸಾಧ್ಯವೆ ಎಂದು ಕೇಳುವವರಿಗೂ ಕಾರಣ ಕೊಡಬಹುದು. ದೇವಾಸುರರು ಸಮುದ್ರಮಥನ ಮಾಡಿದಾಗ ಹುಟ್ಟಿದ ಐಶ್ವರ್ಯಗಳಲ್ಲಿ ಚಂದ್ರನೂ ಒಬ್ಬ. ಆ ಮೇಲೆ ಚಂದ್ರ ಕವಿಸಮಯದ ವಸ್ತುವಾಗಿ, ಕಲ್ಪನೆಯ ವಸ್ತುವಾಗಿ, ಚಂದಮಾಮ ನಾಗಿಯೇ ಇದ್ದ. ಶಿವನ ಮುಡಿಯನ್ನೇರಿದ ಈ ಚಂದ್ರನನ್ನೇ ಇಂದಿನ ವಿಜ್ಞಾನಿ ಮತ್ತೆ ತನ್ನ ಹತೋಟಿಗೆ ತಂದುಕೊಂಡಿರುವುದು ಅಲೌಕಿಕ ಕಾರ್ಯವೇ ಸರಿ.

'ಅಪೋಲೊ ಹನ್ನೊಂದು'—ವಿಜ್ಞಾನದ ಸಾಧನೆಯ ವಿಷಯವಾಗಿ ಕೇವಲ ವರದಿಯಾಗದೆ, ಒಳ್ಳೆಯ ಕವನವಾಗಿ ಮೂಡಿಬಂದಿರುವುದಕ್ಕೆ ಕವಿ ಬಳಸಿರುವ ಕಾವ್ಯಮಯವಾದ ವರ್ಣನೆಗಳು,

ಕಲ್ಪನೆಗೇ ಕಾರಣ. ಕವನದ ಪ್ರಾರಂಭದಲ್ಲಿ ಕವಿ ಸೂರ್ಯನ ಬಾಯಿಂದ ಮಾನವನ ಹಿರಿಮೆಯನ್ನು ಹೊಗಳಿಸಿರುವುದು ಅವರ ಅದ್ಭುತ ಕಲ್ಪನಾ ಪ್ರತಿಭೆಗೆ ಸಾಕ್ಷಿ. 'ಚಂದ್ರ ಕನ್ಯೆ' ತನ್ನ ಸುಂದರ ಚಂದ್ರಲೋಕದಲ್ಲಿ ನಡೆಯುವ ಸಾಹಸಕಾರ್ಯವನ್ನು ನೋಡಿ ಚಕಿತಳಾಗುತ್ತಾಳೆ. ಈ ಮಾನವನ ಧೈರ್ಯ ಸಾಹಸಗಳನ್ನು ನೋಡಿ ಅವನಿಗೂ ಆಶ್ಚರ್ಯ.

ಅವುದೊ ಚೀಲದೊಳೇನೇನೊ ಹೊಳೆದಿವೆ
ಓವ್ಹೋವ್ಹೊ ಏನಿವು ಎಲ್ಲ
ಮಾನವಲೋಕದ ವಸ್ತುಗಳಂತಿವೆ
ಓಹೋಹೊ ತಿಳಿಯಿತು ಎಲ್ಲ

ಅಮೇರಿಕದ ಕಾಲಿನ್ಸ್, ಆಲ್ಡ್ರಿನ್ ಮತ್ತು ನೀಲಾರ್ಮ್‌ಸ್ಟ್ರಾಂಗ್—ಈ ಮೂವರು ಗಗನ ಯಾತ್ರಿಗಳು ಅಪೋಲೊ ಹನ್ನೊಂದರಲ್ಲಿ ಹೊರಟಾಗ ಪ್ರಪಂಚವೇ ಅವರಿಗೆ ಶುಭವನ್ನು ಕೋರಿತು. ಅಂದು ಉಡಾಯಿಸಿದ ಅಪೊಲೊ ಹನ್ನೊಂದರಿಂದ ಹೊರಟ ಧೂಮವನ್ನು ಕುರಿತು ಕವಿ ಹೇಳುವುದನ್ನು ನೋಡಿ.

ಭೂಮಿದೇವಿಯೆ ತನ್ನ ಕುವರರು ಮೂವರು
ನಿನ್ನೆಡೆಗೈತಹರೆಂದು
ಚಂಪ್ರನಿಗರುಹಲು ಕಳುಹಿದ ದೂತರು
ಎನೆ ಧೂಮ ನೆಗೆಯಿತು ಅಂದು

ಚಂದ್ರಲೋಕವನ್ನು ಸುಖವಾಗಿ ತಲುಪಿ ಅಲ್ಲಿಂದ ಕ್ಷೇಮವಾಗಿದ್ದೇವೆ ಎಂಬ ಸುದ್ದಿಯು ಬಂದುದನ್ನು ಕವಿ 'ಇಳೆಯೆದೆಗುಸಿರೂಡಿದಂತೆ' ಎನ್ನುತ್ತಾರೆ. ಚಂದ್ರನನ್ನು ತಲುಪಿದ್ದನ್ನು ಕೇಳಿದ ಜನರಿಗೆ 'ಬಾಯಿಗೆ ಏದೆ ಬಂದ' ಹಾಗಾಯಿತಂತೆ. ವಿಜ್ಞಾನಿಗಳ ಸಾಧನೆಗೆ ತಲೆದೂಗುತ್ತಾ ಸಧ್ಯತೋತ್ರಗಳಾಗಿ ಕವಿ ಕುಳಿತಿದ್ದಾರೆ. ಅವರ ಉದ್ಗಾರ,

ಚಂದ್ರನ ಮೇಲ್ಮೆಯ್ಯ ಯಾನವು ಸೋಂಕಿತು
ಏನಯ್ಯ ಮನುಜನ ಪೆರ್ಮೆ
'ಈಗಲ್ಲು' ತಳವೂರಿ ಧೂಳಪ್ಪು ಹಾರಿತು
ಹೇಳಯ್ಯ ಜಯವೆಂದು ಒರ್ಮೆ

ಕೆನೆಡಿಯ ಕನಸು ನನಸಾಯಿತು. ಮಾನವ ಸಂಘರ್ಷದಲ್ಲಿ 'ಸಿದ್ಧ'ನಾದನು. ಅಮೇರಿಕದ ಬಾವುಟ ಚಂದ್ರಲೋಕದಲ್ಲಿ ನೆಡಲ್ಪಟ್ಟಿತು. ಚಂದ್ರನನ್ನು ಸ್ಪರ್ಶಿಸಿದ ಆ ವಾರ ವಿಶೇಷವಾಗಿ ಕಾಣುತ್ತಿತ್ತು ಎಂಬುದನ್ನು ಕವಿ ಉಬ್ಬಿ ನುಡಿಯುತ್ತಾರೆ.

ಸೃಷ್ಟಿಯ ಆದಿಯಿಂದೆನಿತುದಯಿಸಿ
ಅಸ್ತಮಿಸಿದವು ವಾರಗಳು
ಈ ವಾರ ಮಾತ್ರವೆ ಅತಿಶಯವೆನ್ನಿಸಿ
ಬಿಟ್ಟರು ಗಗನಯಾತ್ರಿಗಳು

ಸಾವಿರ ಸೋಲಿನ ಸೋಪಾನವನ್ನೇರಿಯೇ ಈ ಸಿದ್ಧಿ ಆಗಿರುವುದು. ಅವರ ಶ್ರಮಕ್ಕೆ ತಕ್ಕ ಫಲ ಸಿಕ್ಕಿದೆ. ಕವಿ ಅವರ ವಿಜಯವನ್ನು ದೀರ್ಘವಾಗಿ ವಿವರಿಸಿರುವ ರೀತಿ ಮೆಚ್ಚುವಂತಹದಾಗಿದೆ. 'ತಂತ್ರವಿಜ್ಞಾನವನ್ನು ಹೇಳುವ ಸಲುವಾಗಿ ಈ ಕಬ್ಬವನ್ನು ಬರೆದಿಲ್ಲ. ಇದರ ಅದ್ಭುತವನ್ನಷ್ಟೇ ಬಣ್ಣಿಸುವ ಮನಸ್ಸಾಗಿ ಈ ಸಾಂಗತ್ಯವನ್ನು ಬರೆದಿದ್ದೇನೆ' ಎಂಬ ಕವಿಯ ಹೇಳಿಕೆಯ ಸತ್ಯ ಈ ಕವನದ ಪದ್ಯಪದ್ಯದಲ್ಲೂ ಕಾಣುತ್ತದೆ. ಈ ನೀಳ್ಗವನದ ಕೊನೆಯಂತೂ ಅರ್ಥಗರ್ಭಿತವಾಗಿ ಅಸಾಧಾರಣವಾಗಿ ಬಂದಿದೆ ಎಂದು ಹೇಳಬಹುದು.

ವಿದ್ಯೆಗೆ ತುದಿಯೆಂಬುದೊಂದುಂಟೆ
ತುದಿಮುಟ್ಟಿ ಹೋದವೆ ನಾವು
ನಾಳೆಗೆ ಆ ಶುಕ್ರ ದೂರವಾಗಿಹುದುಂಟೆ
ಇಲ್ಲಿಗೆ ಮುಗಿಯಿತೆ ಗೆಲುವು

ಈ ವರ್ಷ ಮಳೆಯಿಷ್ಟು ಸುರಿಯಿತೆಂದಾಕ್ಷಣ
ಬರವೇನು ಮುಂದಿನ ವರ್ಷ
ನವ ಕೃಷ್ಣಮೇಘನಮೋಘ ವಿಸ್ಫೂರಣ-
ದಿಂದಿಳೆ ತಳೆಯದೆ ಹರ್ಷ

೩

ನವಭಾರತದ ಪುನರ್ನಿರ್ಮಾಣಯುಗದಲ್ಲಿ ಬರುತ್ತಿರುವ ಸಾಹಿತ್ಯವೆಲ್ಲವೂ ಹೆಚ್ಚಾಗಿ ನಿರಾಶೆಯಿಂದ ಕೂಡಿದುದಾಗಿಯೂ, ಪರಾನುಕರಣೆಯ ಮೋಹಕ್ಕೆ ಸಿಕ್ಕಿರುವುದಾಗಿಯೂ ಇರುವಾಗ ಪ್ರೊ. ಪರಮೇಶ್ವರ ಭಟ್ಟರ ಕೃತಿಗಳು ಎಲ್ಲಾ ರೀತಿಯಿಂದಲೂ ಹೊಸ ಬೆಳಕನ್ನು ಬೀರುತ್ತಿವೆ. ನಿಗರ್ವಿಯಾದ, ಶಿಷ್ಯವತ್ಸಲರಾದ ಶ್ರೇಷ್ಠ ವಿದ್ವಾಂಸರಾದ ಇವರ ನಡೆನುಡಿಗಳೇ ಕಾವ್ಯದ ಪುಟಪುಟದಲ್ಲೂ ಪ್ರತಿಬಿಂಬಿತವಾಗಿರುತ್ತವೆ.

ಚೇತನದ ಚಿಲುಮೆಯಾದ ಇವರ ನಗುಮೊಗದಿಂದ, ಹೃದಯವಂತಿಕೆಯಿಂದ ಬಂದ ಮಾತೆಲ್ಲವೂ ತೂಕವುಳ್ಳವು, ಸ್ಫೂರ್ತಿದಾಯಕಗಳವು. ವಸ್ತುವಿಗೆ ತಕ್ಕ ಭಾವ, ಭಾವಕ್ಕೆ ತಕ್ಕ ಛಂದಸ್ಸು ಇವರ ಕವನಗಳ ಯಶಸ್ಸಿಗೆ ಕಾರಣ. ಹೇಳುವ ರೀತಿ, ನಯವಂತಿಕೆ ಓದುಗರನ್ನು ಸೂಜಿಗಲ್ಲಿನಂತೆ ಸೆಳೆಯುತ್ತದೆ. ಹೇಳುವ ವಿಷಯವನ್ನು ಸ್ಪಷ್ಟವಾಗಿ ಸರಳವಾಗಿ ಅಷ್ಟೇ ಪ್ರಭಾವಶಾಲಿಯಾಗಿ ಹೇಳುವ ಕಲೆಗಾರಿಕೆ ಇವರಿಗೆ ಮೈಗೂಡಿಬಂದಿದೆ. ಅರ್ಥಗರ್ಭಿತವಾದ ಹೆಸರನ್ನು ಹೊಂದಿರುವ 'ಕೃಷ್ಣಮೇಘ'ವೂ ಈ ಹೇಳಿಕೆಗೆ ಹೊರತಾಗದೆ, ಮತ್ತೆ ಮತ್ತೆ ಓದುವಂತಹ ಕೃತಿಯಾಗಿದೆ.

## ೩೬. ಕೆಲವು ಇಂಗ್ಲಿಷ್ ಪ್ರಬಂಧಗಳು

ಬಿ. ಎಂ. ಶ್ರೀನಿವಾಸ

೧

ಆಚಾರ್ಯ ಬಿ. ಎಂ. ಶ್ರೀಯವರು ಕನ್ನಡ ಸಾಹಿತ್ಯದ ಬಗೆಗೆ ಬರೆಯುತ್ತ "ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯವೇ ಪ್ರೇರಕ, ಪೋಷಕ, ಗುರು" ಎಂಬ ಮಾತನ್ನು ಹೇಳಿದ್ದಾರೆ. ಇದನ್ನು ಸ್ವಲ್ಪ ವ್ಯತ್ಯಾಸ ಮಾಡಿ ಹೇಳುವುದಾದರೆ ಆಧುನಿಕ ಕನ್ನಡ ಸಾಹಿತ್ಯಕ್ಕೆ ಇಂಗ್ಲಿಷ್ ಸಾಹಿತ್ಯವೇ ಪ್ರೇರಕ, ಪೋಷಕ, ಗುರು ಎಂದೆನ್ನಬಹುದು. ಪಾಶ್ಚಾತ್ಯ ಸಾಹಿತ್ಯದ ಸಂಪರ್ಕ ಮತ್ತು ಪ್ರಭಾವಗಳ ಫಲವಾಗಿ ಉಗಮವಾದ ಹೊಸಗನ್ನಡ ಸಾಹಿತ್ಯದ ಹೊಳೆ ೫೦–೬೦ ವರ್ಷಗಳ ಹಿಂದೆ ಆರಂಭವಾಯಿತು. ಇಂದು ಸಮೃದ್ಧ ಹರಿದುಬಂದಿದೆ. ಇದರಿಂದಾಗಿ ಇಂದು ನಮ್ಮ ಸಾಹಿತ್ಯದಲ್ಲಿ ಇರುವ ಎಲ್ಲಾ ಸಾಹಿತ್ಯ ಪ್ರಕಾರಗಳು ಸೃಷ್ಟಿಹೊಂದಿ ಸುಪುಷ್ಟವಾಗಿ, ಸುಂದರವಾಗಿ ಬೆಳೆಯುತ್ತಿವೆ. ಭಾವಗೀತೆ, ಸುನೀತ, ನಾಟಕ, ಕಾದಂಬರಿ, ಸಣ್ಣಕಥೆ, ಪ್ರಬಂಧ ಮೊದಲಾದ ಇನ್ನೂ ಹಲವು ಪ್ರಕಾರಗಳು ಬಗೆಬಗೆಯಾಗಿ ವೃದ್ಧಿಗೊಳ್ಳುತ್ತಲಿವೆ.

ಹೊಸ ಕಾವ್ಯಪ್ರಕಾರವೊಂದನ್ನು ನಿರ್ಮಿಸಲೇ ಬೇಕು ಎಂಬ ಉತ್ಕಟ ಆಸೆಯಿಂದ ಶ್ರೀಯವರು 'ಇಂಗ್ಲಿಷ್ ಗೀತಗಳ'ನ್ನು ಬರೆದರು. ಹೀಗೆ ಹೊಸಗನ್ನಡ ಕಾವ್ಯಕ್ಕೆ ಮೊದಲನೆಯ ಪ್ರೇರಕ ಶಕ್ತಿಯಾಗಿ ಪರಿಣಮಿಸಿತು. ಕನ್ನಡ ಕಾವ್ಯಪ್ರಪಂಚದಲ್ಲಿ ಯಾವ ಬದಲಾವಣೆಯಾಗಬೇಕು ಎಂದು ಶ್ರೀಯವರು ಹಂಬಲಿಸಿದ್ದರೋ, ಆ ಆಸೆ ಈಡೇರಿದೆ. ಹೊಸಗನ್ನಡ ಕಾವ್ಯ ಸುಭದ್ರವಾಗಿ ಪ್ರತಿಷ್ಠಿತವಾಗಿದೆ. ಶ್ರೀಯವರ ಶಿಷ್ಯವರ್ಗದಲ್ಲಿ ಒಬ್ಬರಾದ ಶ್ರೀ ಎಸ್. ವಿ. ಪರಮೇಶ್ವರಭಟ್ಟರವರು, ಅವರಿಂದಲೇ ಸ್ಫೂರ್ತಿ ಪಡೆದು, ಅವರ ದೃಷ್ಟಿಯನ್ನೇ ಇಟ್ಟುಕೊಂಡು ರಚಿಸಿರುವ ಕೃತಿ "ಕೆಲವು ಇಂಗ್ಲಿಷ್ ಪ್ರಬಂಧಗಳು." ಮೊದಲನೆಯ ಕೃತಿ ಹೊಸಗನ್ನಡ ಕಾವ್ಯದ ದಿಶೆಯಲ್ಲಿ ಹೊಸಬೆಳಕನ್ನು, ನವ ಪ್ರೇರಣೆಯನ್ನು ಕೊಡಲು ಪ್ರವೃತ್ತಿಸಿದ್ದರೆ ಎರಡನೆಯದು ಪ್ರಬಂಧಗಳ ದಿಕ್ಕಿನಲ್ಲಿ ಅದೇ ಕೆಲಸವನ್ನು ಮಾಡಲು ಜನ್ಮತಾಳಿತು. ಎರಡೂ ಅನುವಾದ ಕೃತಿಗಳು. "ಇಂಗ್ಲಿಷ್ ಗೀತಗಳು" ಆಧುನಿಕ ಕಾವ್ಯಪ್ರಕಾರದಲ್ಲಿ ಮೊಟ್ಟಮೊದಲ ಕೃತಿಯಾದರೆ "ಕೆಲವು ಇಂಗ್ಲಿಷ್ ಪ್ರಬಂಧಗಳು" ಪ್ರಬಂಧ ಪ್ರಕಾರದ ಮೊಟ್ಟಮೊದಲನೆಯ ಪುಸ್ತಕರೂಪದಲ್ಲಿ ಬೆಳಕಿಗೆ ಬಂದ ಅನುವಾದ ಕೃತಿ ಎಂಬ ಹೆಸರಿಗೆ ಪಾತ್ರವಾಗುತ್ತದೆ.

ಶ್ರೀ ಎಸ್. ವಿ. ಪರಮೇಶ್ವರಭಟ್ಟ ಅವರ 'ಇಂಗ್ಲಿಷ್ ಪ್ರಬಂಧಗಳು' ಪ್ರಕಟವಾದದ್ದು ೧೯೩೭ರಲ್ಲಿ. ಇದಕ್ಕೆ ಮೊದಲು, ಪ್ರಬಂಧಗಳ ಅನುವಾದ ಕೃತಿರೂಪವಾಗಿ ಜನ್ಮತಾಳಿರಲಿಲ್ಲ; ಅದಕ್ಕೆ ಬದಲು ಕೆಲವು ಪತ್ರಿಕೆಗಳಲ್ಲಿ ಈ ರೀತಿಯ ಪ್ರಬಂಧಗಳು ಬರುತ್ತಿದ್ದುವೆಂದು ತಿಳಿದುಬರುತ್ತದೆ. ೧೯೫೭ರಲ್ಲಿ, ಇಂತಹುದೇ ಆದ ಇನ್ನೊಂದು ಅನುವಾದಕೃತಿ ಬಿ. ಎಂ. ರಾಮರಾವ್ ಅವರಿಂದ "ಇಪ್ಪತ್ತಾರು ಇಂಗ್ಲಿಷ್ ಪ್ರಬಂಧಗಳು" ಎಂಬ ಅಂಕಿತದೊಡನೆ ಪ್ರಕಟವಾಯಿತು.

೧೫೯೭ರಿಂದ ೧೯೩೦ರ ವರೆಗೆ ಇದ್ದ ಬಹು ಸುಪ್ರಸಿದ್ಧ ಪ್ರಬಂಧಕಾರರ ಪ್ರಬಂಧಗಳನ್ನು ತಲಾ ಎರಡೆರಡರಂತೆ ಕನ್ನಡಕ್ಕೆ ಶ್ರೀ ಎಸ್. ವಿ. ಪರಮೇಶ್ವರ ಭಟ್ಟರು ಭಾಷಾಂತರ ಮಾಡಿಕೊಟ್ಟಿದ್ದಾರೆ. ಇದರಿಂದ ಭಾಷಾಂತರಕಾರರ ದೃಷ್ಟಿ ಏನು ಎಂಬುದು ಸ್ವಲ್ಪಮಟ್ಟಿಗಾದರೂ ತಿಳಿಯುತ್ತದೆ. ಇಂಗ್ಲಿಷ್ ಸಾಹಿತ್ಯದಲ್ಲಿ ಪ್ರಬಂಧಪ್ರಕಾರ ಹೇಗೆ ಬೆಳೆಯಿತು? ಯಾವ ಯಾವ ಘಟ್ಟಗಳಲ್ಲಿ ಯಾವ ಯಾವ ಸಿದ್ಧಿಯನ್ನು ಪಡೆಯಿತು? ಎಂತಹ ವ್ಯಕ್ತಿಗಳಿಂದ ಹೇಗೆ ಪೋಷಿಸಲ್ಪಟ್ಟಿತು? ಈ ಐತಿಹಾಸಿಕ ಬೆಳವಣಿಗೆಯಲ್ಲಿ ಅದು ಪಡೆದುಬಂದ ಕೆಲವು ವಿಶಿಷ್ಟ ಲಕ್ಷಣಗಳಾವುವು? ಎಂಬಂತಹ ಕೆಲವು ಪ್ರಶ್ನೆಗಳಿಗೆ ಈ ಪುಸ್ತಕ ಸ್ವಲ್ಪಮಟ್ಟಿಗಾದರೂ ಉತ್ತರವಾಗಲಿ, ಕನ್ನಡದಲ್ಲಿ ಪ್ರಬಂಧ ಬರೆಯುವವರಿಗೆ ಪ್ರಪಾಠಶಾಲೆಯಾಗಲಿ, ಎಂಬ ಉದ್ದೇಶ ಶ್ರೀ ಭಟ್ಟರಲ್ಲಿದ್ದಂತೆ ಕಾಣುತ್ತದೆಯೇ ಹೊರತು ಇಂಗ್ಲಿಷ್ ಭಾಷೆಯ ಶ್ರೇಷ್ಠ ಪ್ರಬಂಧಗಳನ್ನು ಕನ್ನಡಕ್ಕೆ ಅನುವಾದ ಮಾಡಬೇಕು ಎಂಬ ಉದ್ದೇಶ

ಕೆಲವು ಪ್ರಬಂಧಗಳಾಗಿ ಕಾಣುವುದಿಲ್ಲ. ಇಂಗ್ಲಿಷ್ ಭಾಷೆಯಲ್ಲಿ ಈಗ ಅತ್ಯುತ್ತಮ ಮಟ್ಟದ ಪ್ರಬಂಧಗಳು ಹೊರಬರುತ್ತಿವೆ. ಶ್ರೀ ಎಸ್. ವಿ. ಪರಮೇಶ್ವರ ಭಟ್ಟರ ದೃಷ್ಟಿ, ಕೇವಲ ಉತ್ತಮ ಮಟ್ಟದ ಪ್ರಬಂಧಗಳನ್ನು ಭಾಷಾಂತರ ಮಾಡಿ ಕೊಡುವುದಾಗಿದ್ದ ಪಕ್ಷದಲ್ಲಿ ಈಗ ಬರುತ್ತಿರುವ ಪ್ರಬಂಧಗಳನ್ನು ಕನ್ನಡಿಸಬಹುದಿತ್ತು. ಆದರೆ ಹಾಗೆ ಮಾಡಲಿಲ್ಲ. ಕಾರಣ ಮೊದಲೇ ಹೇಳಿದೆ.

ಈಗ ಇಂಗ್ಲಿಷ್ ಭಾಷೆಯಲ್ಲಿ ಬರುತ್ತಿರುವ ಪ್ರಬಂಧಗಳನ್ನು ಅನುವಾದ ಮಾಡುವುದೂ ಕಷ್ಟದ ಕೆಲಸ. ವೈಯಕ್ತಿಕವಾದ ಪಲವಾರು ಸೂಕ್ಷ್ಮ ಅನುಭವಗಳನ್ನು ಮನಸ್ಸಿನ ಪದರು ಪದರುಗಳನ್ನು ಪ್ರಬಂಧಗಳಲ್ಲಿ ಚಿತ್ರಿಸುತ್ತಾರೆ. ಮನಸ್ಸಿನ ನಿಗೂಢ ರಹಸ್ಯಗಳನ್ನು ನವ ಪ್ರಬಂಧದ ವಸ್ತುವಾಗಿಸಿದ್ದಾರೆ. ಈ ರೀತಿಯ ಪ್ರಬಂಧಗಳನ್ನು ಭಾಷಾಂತರಿಸುವುದು ಅಷ್ಟು ಸುಲಭವಾದ ಕೆಲಸವಲ್ಲ. ಭಾಷಾಂತರಿಸುವಾಗ ಸ್ವಲ್ಪ ವ್ಯತ್ಯಾಸವಾದರೂ ಪ್ರಬಂಧದ ಮೂಲ ಉದ್ದೇಶವೇ ಮಾಯವಾಗಿ ಬಿಡಬಹುದು. ಅದಕಾರಣ, ಇಂದು ಕನ್ನಡ ಪ್ರಬಂಧಸಾಹಿತ್ಯದಲ್ಲಿ ಬಹಳ ತ್ವರೆಯಿಂದ ನಡೆಯಬೇಕಾಗಿರುವುದು ಭಾಷಾಂತರವಲ್ಲ; ಸ್ವತಂತ್ರ ಪ್ರಬಂಧಗಳ ಸೃಷ್ಟಿ. ಈ ರೀತಿಯಾದ ಪ್ರಬಂಧಗಳ ಸೃಷ್ಟಿಗೆ ಶ್ರೀ ಎಸ್. ವಿ. ಪರಮೇಶ್ವರ ಭಟ್ಟರ "ಕೆಲವು ಇಂಗ್ಲಿಷ್ ಪ್ರಬಂಧಗಳು" ಪ್ರೇರಕವಾಗಿ, ತೋರುಗಂಬವಾಗಿ, ಮಾರ್ಗದರ್ಶಿಯಾಗಿ ನಿಲ್ಲುತ್ತವೆ ಎಂಬುದರಲ್ಲಿ ಸಂದೇಹವಿಲ್ಲ.

೨

ಭಾಷಾಂತರಕಾರರನ್ನು ಕೊಲೆಗಾರರೆಂದು, ಮುದ್ರಿತ ಪ್ರತಿಗಳೆಂದು ಮುಂತಾಗಿ ಟೀಕಿಸುವವರಿದ್ದಾರೆ. ಇದು ತಪ್ಪಲ್ಲವೆಂದು ಹೇಳುವವರಲ್ಲಿ ನಾನು ಒಬ್ಬನಾಗಿದ್ದೇನೆ. ಆದರೆ ಭಾಷಾಂತರಕಾರರೆಲ್ಲರನ್ನೂ ಒಂದೇ ದೃಷ್ಟಿಯಿಂದ ನೋಡುವುದು ತಪ್ಪಾಗುತ್ತದೆ. ಮೇಲೆ ತಿಳಿಸಿದಂತಹ ಕಾಕುನುಡಿಗಳೆಲ್ಲ ಒಂದು ವರ್ಗದ ಭಾಷಾಂತರಕಾರರಿಗೆ ಸೀಮಿತವಾಗುತ್ತದೆ, ಆಗಬೇಕು. ಒಳ್ಳೆಯ "ಭಾಷಾಂತರಕಾರ ಕವಿಯಷ್ಟೇ ಪ್ರತಿಭಾವಂತನಾಗಿರಬೇಕು. ಒಂದು ಕೈ ಅವನಿಗಿಂತ ಮಿಗಿಲಾಗಿರಬೇಕು; ಅವನಲ್ಲಿರುವ ಗುಣಗಳ ಜೊತೆಗೆ ಅವನಲ್ಲಿಲ್ಲದ ವಿಶಿಷ್ಟ ಸಾಮರ್ಥ್ಯವನ್ನು ಪಡೆದಿರಬೇಕು" ಎಂದು ಶ್ರೀ ದೇಜಗೌ ಭಾಷಾಂತರಕಾರನ ಲಕ್ಷಣವನ್ನು ತಿಳಿಸಿದ್ದಾರೆ. ಶ್ರೀ ಎಸ್. ವಿ. ಪರಮೇಶ್ವರ ಭಟ್ಟರು ಈ ವರ್ಗದ ಭಾಷಾಂತರಕಾರರು.

"ಭಾಷಾಂತರ ಒಂದು ಕಲೆ; ಯಾರುಬೇಕಾದರೂ ಎಸಗಬಹುದಾದ ಯಾಂತ್ರಿಕ ಕರ್ಮವಲ್ಲ; ಕೇವಲ ಅನುಕರಣವಲ್ಲ; ಅದೊಂದು ಪುನಸ್ಸೃಷ್ಟಿ" ಎಂಬ ಮಾತಿನ ಸತ್ಯತೆಯನ್ನು "ಕೆಲವು ಇಂಗ್ಲಿಷ್ ಪ್ರಬಂಧ" ಗಳಲ್ಲಿ ಮನಗಾಣಬಹುದು. ಯಾವ ಪುಟವನ್ನು ತೆಗೆದು ನೋಡಿದರೂ ಇದು ಒಂದು ಭಾಷಾಂತರ ಕೃತಿ ಎಂಬ ಭಾವನೆ ಮೂಡುವುದೇ ಇಲ್ಲ. ಅಷ್ಟು ಸಹಜ ಸುಂದರವಾಗಿದೆ. ಶ್ರೀ ಪರಮೇಶ್ವರ ಭಟ್ಟರು ಭಾಷಾಂತರಕಾರರೊಂದೇ ಆಗಿಲ್ಲ, ಶ್ರೇಷ್ಠಕವಿಗಳೂ ಆಗಿದ್ದಾರೆ. ಮೂಲಕವಿಯ ಅಥವಾ ಪ್ರಬಂಧಕಾರನ ಭಾವನೆ ಏನು, ಇಲ್ಲಿ ಏನನ್ನು ಹೇಳಹೊರಟಿದ್ದಾನೆ ಎಂಬ ಅಂಶಗಳನ್ನು ಸೂಕ್ಷ್ಮವಾಗಿ ಗುರುತಿಸಬಲ್ಲರು ಮತ್ತು ಅಷ್ಟೇ ಬೇಗನೆ ಗ್ರಹಿಸುವ ಶಕ್ತಿಯನ್ನು ಪಡೆದು ಬಂದಿದ್ದಾರೆ. ಕನ್ನಡ, ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಗಳಲ್ಲಿ ಒಳ್ಳೆಯ ಪಾಂಡಿತ್ಯವಿದೆ. ಈ ಕಿರುಹೊತ್ತಗೆಯಲ್ಲಿನ ಭಾಷೆ ಬೇರೆಯಾಗಿದೆಯೇ ವಿನಾ ಮಿಕ್ಕ ಎಲ್ಲ ಅಂಶಗಳು ಮೂಲ ಪ್ರಬಂಧಗಳ ರೀತಿಯಲ್ಲಿಯೇ ಇವೆ. ನಿಜವಾದ ಭಾಷಾಂತರ ಕೃತಿ ಹೇಗಿರಬೇಕು ಎಂದು ನಾವು ಭಾವಿಸುತ್ತೇವೆಯೋ, ಹಾಗಿದೆ.

ಭಾಷಾಂತರದಲ್ಲಿ ಸಾಮಾನ್ಯವಾಗಿ ಮೊದಲು ಏಳುವ ಪ್ರಶ್ನೆಯೆಂದರೆ ನಿಷ್ಠೆ ಅಥವಾ ಪ್ರಾಮಾಣಿಕತೆಯ ಬಗೆಯದಾಗಿರುತ್ತದೆ. ಅಂದರೆ, ಮೂಲಕೃತಿಯ ಸತ್ತ್ವವನ್ನೆಷ್ಟರಮಟ್ಟಿಗೆ ಭಾಷಾಂತರ ಕೃತಿ ಪ್ರತಿಬಿಂಬಿಸುತ್ತದೆ ಎನ್ನುವುದು. ಶ್ರೀ ಪರಮೇಶ್ವರ ಭಟ್ಟರು ಭಾಷಾಂತರದಲ್ಲಿ ಸಫಲರಾಗಿದ್ದಾರೆ. ಉದಾ: ಚಾರಲ್ಸ್‌ಲ್ಯಾಂಬನ 'Dream children' ನ ಕೆಲವು ಸಾಲುಗಳು—"Cancer, came, and bowed her down with pain; but it could never bend her good spirits, or make them stop, but they were still upright because she was so good and religious." ಇದರ ಭಾಷಾಂತರ ಹೀಗಿದೆ: "'ಕ್ಯಾನ್ಸರ್' ಎಂಬ ಘನರೋಗ ಬಂದು ಮುತ್ತಜ್ಜಿ

ಏರಲಿಲ್ಲ. ಅದಲ್ಲದೆ, ಇಲ್ಲಿ ಭಾಷಾಂತರವಾಗಿರುವ ಪ್ರಬಂಧಗಳು ಈಗಿನ ಕಾಲದ ಮಟ್ಟದಲ್ಲಿ ಅಷ್ಟು ಬೇನೆ ತಿಂದು ಬಗ್ಗಿ ಹೋದಳು. ಆದರೇನು! ಅವಳ ಸದ್ಗುಣಗಳನ್ನು ರೋಗ ಬಗ್ಗಿಸಲಾಗಲಿಲ್ಲ. ಅವೂ ಜಗ್ಗಲಿಲ್ಲ. ಆಕೆ ಒಳ್ಳೆಯ ಧರ್ಮಾರತಳಾದ ಹೆಂಗಸಾದ್ದರಿಂದಲೇ ಅವಳ ಗುಣಗಳು ಎಂದಿನಂತೆ ಉನ್ನತೋನ್ನತವಾಗಿಯೆ ಇದ್ದುವು."

ಮೇಲಿನ ಭಾಷಾಂತರದಲ್ಲಿ ಶ್ರೀ ಪರಮೇಶ್ವರ ಭಟ್ಟರ ಪ್ರಾಮಾಣಿಕತೆಯನ್ನು, ದಕ್ಷತೆಯನ್ನು ಮನಗಾಣಬಹುದು. ಮೂಲ ಪ್ರಬಂಧಕಾರ ಎಷ್ಟು ಹೇಳಿದ್ದನೋ, ಏನು ಹೇಳಿದ್ದನೋ, ಹಾಗೆಯೇ, ಅದನ್ನೇ, ಭಾಷಾಂತರದಲ್ಲೂ ಪಡಿಮೂಡಿದೆ. ಮೂಲದ ಸೊಗಸು ಅಳಿದಿಲ್ಲ, ಮಾಸಿಲ್ಲ, ಕಳೆಗುಂದಿಲ್ಲ. ಬದಲು ಮೂಲಕ್ಕೆ ಮೆರುಗುಕೊಡುವಂತೆ ಮೂಡಿಬಂದಿದೆ.

ಶ್ರೀ ಪರಮೇಶ್ವರ ಭಟ್ಟರಿಗೆ ಭಾಷೆಯ ಮೇಲಿನ ಹಿಡಿತ ಸಾಧಿಸಿದೆ, ಶೈಲಿಗೆ ಒಗ್ಗಿಹೋಗಿದೆ. ಬೇರೆಯವರು ಹಲವಾರು ಮಾತುಗಳಲ್ಲಿ ಹೇಳುವ ವಿಷಯವನ್ನು ಕೆಲವೇ ಮಾತುಗಳಲ್ಲಿ ಮೂಲಕ್ಕೆ ಸ್ವಲ್ಪವೂ ಊನವಾಗದಂತೆ ಹೇಳುವ ಶಕ್ತಿ ಲಭಿಸಿದೆ. ಫ್ರಾನ್ಸಿಸ್ ಬೇಕನ್‌ನ "Of Travel" ಮತ್ತು "Of Study" ಎಂಬ ಲೇಖನಗಳನ್ನು ಶ್ರೀ ಭಟ್ಟರು ಮತ್ತು ಶ್ರೀ ಎಂ. ರಾಮರಾವ್ ಇಬ್ಬರೂ ಭಾಷಾಂತರಿಸಿದ್ದಾರೆ. "Of Travel" ನ ಕೆಲವು ಸಾಲುಗಳು:

"It is a strange thing, that in sea voyages, where there is nothing to be seen but sky and sea, men should make diaries; but in land travel, wherein so much is to be observed, for the most part they amit it; as if chances were fitter to be registered than observation: Let diaries, therefore, be brought in use."

ಶ್ರೀ ಪರಮೇಶ್ವರ ಭಟ್ಟರವರ ಭಾಷಾಂತರ:

"ಕಡಲು ಬಾನುಗಳಲ್ಲದೆ ಬೇರೆ ಯಾವುದೂ ಕಾಣದ ಸಮುದ್ರಯಾನದಲ್ಲಿ ದಿನಚರಿ ಬರೆಯುವುದು ವಿಚಿತ್ರ. ಆದರೆ ನೋಡಬೇಕಾದದ್ದು ಹೇರಳವಾಗಿರುವ ಭೂಪ್ರಯಾಣದಲ್ಲಿ ಅನಿರೀಕ್ಷಿತ ಘಟನೆಗಳೇ ಹೆಚ್ಚು ಉಲ್ಲೇಖನಾರ್ಹವೆಂಬಂತೆ ಅನೇಕ ಸಂಗತಿಗಳನ್ನು ಕೈಬಿಟ್ಟು ಬಿಡುತ್ತಾರೆ. ಆದ್ದರಿಂದ ದಿನಚರಿ ಬರೆಯುವುದನ್ನು ರೂಢಿಸಿಕೊಳ್ಳಿ."

ಭಾಷಾಂತರಕಾರನು, ಭಾಷಾಂತರಿಸುವ ಭಾಷೆಯ ಜಾಯಮಾನಕ್ಕೆ ಒಗ್ಗುವಂತ ತನ್ನ ಶೈಲಿಯನ್ನು ರೂಢಿಸಿಕೊಳ್ಳಬೇಕು. ಇದು ಪರಮೇಶ್ವರ ಭಟ್ಟರಿಗೆ ಸಾಧಿಸಿದೆ ಎನ್ನಬಹುದು. ಶ್ರೀ ರಾಮರಾವ್ ಮತ್ತು ಇವರು ಭಾಷಾಂತರಿಸಿರುವ ಒಂದು ಸಾಲನ್ನು ನೋಡೋಣ ... "Studies serve for delight, for ornament, and for ability."

ಶ್ರೀ ರಾಮರಾವ್ "ಗ್ರಂಥವಾಚನ ಆನಂದದಾಯಕವಾದುದು, ಭೂಷಾಪ್ರಾಯವಾದುದು, ಶಕ್ತಿಸಾಮರ್ಥ್ಯಸಂಜನಕವಾದುದು." ಶ್ರೀ ಪರಮೇಶ್ವರ ಭಟ್ಟರು "ಅಧ್ಯಯನದಿಂದ ಆನಂದ, ಅಲಂಕಾರ, ಅರ್ಹತೆ ಸಿದ್ಧಿಸುತ್ತದೆ."

ಇಂಗ್ಲಿಷ್ ಪದಗಳಿಗೆ ಸರಿಯಾದ ಕನ್ನಡ ಪದಗಳನ್ನು ಗೊತ್ತುಮಾಡುವುದರಲ್ಲಿ ಶ್ರೀ ಪರಮೇಶ್ವರ ಭಟ್ಟರು ಯಶಸ್ವಿಗಳಾಗಿದ್ದಾರೆ ಎನ್ನಬಹುದು. ಈ ರೀತಿ ಮಾಡುವಾಗ ಭಾಷಾಂತರಕಾರರು ತಮ್ಮ ಪ್ರತಿಭೆ ಮತ್ತು ಪಾಂಡಿತ್ಯಗಳೆರಡನ್ನೂ ವಿನಿಯೋಗಿಸಬೇಕಾಗುತ್ತದೆ. "Study" ಎಂಬ ಇಂಗ್ಲಿಷ್ ಪದಕ್ಕೆ ನಮ್ಮಲ್ಲಿ ಹಲವು ಅರ್ಥಗಳಿವೆ—ವಿದ್ಯಾರ್ಜನೆ, ವಿದ್ಯಾಭ್ಯಾಸ, ಓದು, ಚಿಂತನ, ಮನನ, ವ್ಯಾಸಂಗ, ಕಲಿ ಮುಂತಾಗಿ. ಇಂತಹ ಸಂದರ್ಭಗಳಲ್ಲಿ ಮೂಲ ಪದದ ಅರ್ಥವ್ಯಾಪ್ತಿಯನ್ನು ತಿಳಿದು ಅದಕ್ಕೆ ತಕ್ಕ ಪದವನ್ನು ಕೊಡಬೇಕಾಗುತ್ತದೆ. ಮೇಲಿನ ಪದವನ್ನು ಶ್ರೀ ರಾಮರಾವ್‌ರವರು — "ಗ್ರಂಥವಾಚನ" ಎಂದೂ ಶ್ರೀ ಪರಮೇಶ್ವರಭಟ್ಟರು "ಅಧ್ಯಯನ"ವೆಂದೂ ಭಾಷಾಂತರಿಸಿದ್ದಾರೆ. ಮೇಲುನೋಟಕ್ಕೆ

ಇವೆರಡೂ ಒಂದೇ ಎಂದು ಕಂಡರೂ "ಅಧ್ಯಯನ" ಎಂಬ ಪದ ಹೊರುವಷ್ಟು ಅರ್ಥವ್ಯಾಪ್ತಿಯನ್ನು "ಗ್ರಂಥವಾಚನ" ಎಂಬ ಪದ ಧರಿಸಲಾರದು. ಹೀಗೆ ಹೇಳುತ್ತಾ ಹೋಗಬಹುದು.

ಒಟ್ಟಿನಲ್ಲಿ ಭಾಷಾಂತರ ಕಲೆ ಪರಮೇಶ್ವರಭಟ್ಟರಿಗೆ ಕರಗತವಾಗಿದೆ. ದೇಜಗೌರವರ ಮಾತಿನಲ್ಲಿ ಹೇಳುವುದಾದರೆ" ಮೂಲದ ಸೊಗಸು ಸೊಗಡುಗಳು ಆವಿಯಾಗಿ ತೇಲಿಹೋಗದಂತೆ, ತರ್ಕಸರಣಿಗೆ ಭಂಗಬರದಂತೆ. ಆಲೋಚನಾಪ್ರವಾಹಕ್ಕೆ ಪ್ರತಿಬಂಧಕವೊದಗದಂತೆ, ವಿಚಾರ ಗಾಂಭೀರ್ಯಕ್ಕೆ ಬಾಧೆಯುಂಟಾಗದಂತೆ. ಶೈಲಿಯ ಪೋಷಕತೆ ಕೆಡದಂತೆ ಈ ಕಾರ್ಯವನ್ನು ಸಾಂಗಗೊಳಿಸಿ ಸಫಲರಾಗಿದ್ದಾರೆ; ಕನ್ನಡದ ಹೆಮ್ಮೆಗೆ ಕೋಡುಮೂಡಿದಂತೆ ಹೊಸ ಪರಿಭಾಷೆಯನ್ನು ಸೃಷ್ಟಿಸಿ ಕೃತಾರ್ಥರಾಗಿದ್ದಾರೆ."

ಈ ಪುಸ್ತಕಕ್ಕೆ ಶ್ರೀ ಬಿ. ಎಸ್. ಶಾಮರಾವ್‌ರವರು ವಿದ್ವತ್‌ಪೂರ್ಣವಾದ ಒಂದು ಮುನ್ನುಡಿಯನ್ನು ಬರೆದಿದ್ದಾರೆ. ಇದರಲ್ಲಿ, ಇಂಗ್ಲಿಷ್ ಪ್ರಬಂಧಸಾಹಿತ್ಯದ ಇತಿಹಾಸವನ್ನು ಸಂಕ್ಷಿಪ್ತವಾಗಿ, ಸ್ಪಷ್ಟವಾಗಿ ಹೇಳಿದ್ದಾರೆ. ಪ್ರಬಂಧಗಳ ಬೆಳವಣಿಗೆ, ಅವುಗಳಲ್ಲಿ ಹೆಸರುಗಳಿಸಿದ ಮಹನೀಯರ ಸಂಕ್ಷಿಪ್ತ ಪರಿಚಯ, ಅವರ ಶೈಲಿ ಮುಂತಾದುವುಳನ್ನೆಲ್ಲ ವಿವರಿಸಿದ್ದಾರೆ.

# ೩೭. "ಲೇಖನಗಳು" — ಒಂದು ಸಮೀಕ್ಷೆ

ಯಸ್. ಜಯರಾಮ ರೈ

ಕನ್ನಡದಲ್ಲಿ ಇಂದು ಬೆಳೆಯುತ್ತಿರುವ ಲೇಖನಸಾಹಿತ್ಯ, ಕನ್ನಡಸಾಹಿತ್ಯಕ್ಕೆ ಇಂಗ್ಲಿಷ್ ಸಾಹಿತ್ಯದ ಕೊಡುಗೆ. ಇದು ಹುಟ್ಟಿದ್ದು ಫ್ರಾನ್ಸಿನಲ್ಲಿ. ಕ್ರಿ. ಶ. ೧೬೦೦ರಲ್ಲಿ ಮಾಂಟೇನನ ಪ್ರಬಂಧಗಳು ಇಂಗ್ಲಿಷಿಗೆ ಅನುವಾದವಾಗಿ ಇಂಗ್ಲೆಂಡಿನಲ್ಲಿ ಪ್ರಚಾರವಾದುವು. ಇದರ ಕುರಿತು ವಿಮರ್ಶಕನಾದ ಸರ್ ಎಡ್ಮಂಡ್ ಗಾಸ್ "ಜಗತ್ತು ಬರೆಹಗಾರನಿಗೆ ಹೇಗೆ ಕಾಣುತ್ತದೋ ಹಾಗೆ ತೋರಿಸಿದ. ವಾಸ್ತವವಾಗಿ ಪ್ರತಿಯೊಂದು ಉತ್ತಮ ಪ್ರಬಂಧದ ಲಕ್ಷಣಗಳೂ ಇವೇ ಆಗಿವೆ" ಎಂದಿದ್ದಾನೆ. ಪ್ರಬಂಧ ಮತ್ತು ಲೇಖನಗಳಿಗೆ ಬಹಳ ಸ್ವಲ್ಪ ವ್ಯತ್ಯಾಸ ಕಂಡುಬರುವುದು. ಪ್ರಬಂಧ (ಒಟ್ಟಾಗಿ ಕಟ್ಟಿದ್ದು) ಎನ್ನುವುದು ಶಬ್ದಾರ್ಥ ಸೂಚಿಸುವಂತೆ, ವಿಷಯದ ಕುರಿತಾದ ಆಳವಾದ ವಿಚಾರ, ವಿಷಯಪ್ರತಿಪಾದನೆಗೆ ಬೇಕಾದ ಸಮರ್ಥನೆಗಳಿಂದ ಕೂಡಿದ್ದು. ಲೇಖನಕ್ಕಿಂತ ಹೆಚ್ಚು ವಿಷಯವ್ಯಾಪ್ತಿಯುಳ್ಳದ್ದು. ಲೇಖನವು ಅದಕ್ಕಿಂತ ವ್ಯಾಪ್ತಿಯಲ್ಲಿ ಕಿರಿದಾಗಿ, ಯಾವುದಾದರೂ ಒಂದು ಮುಖದ ಕುರಿತಾಗಿ, ಆದರೆ ಸ್ವತಂತ್ರ ವಿಚಾರಗಳಿಂದ ಕೂಡಿದ್ದಾಗಿರಬೇಕು (Independent literary composition forming part of magazine). ಈ ಎರಡು ಸಾಹಿತ್ಯರೂಪಗಳೂ ಇಂಗ್ಲಿಷಿನ ಪ್ರಭಾವದಿಂದ ಹುಟ್ಟಿ, ಸುಮಾರು ಮುಕ್ಕಾಲು ಶತಮಾನದಿಂದ ತಕ್ಕಮಟ್ಟಿಗೆ ಹುಲುಸಾಗಿ ಬೆಳೆಯುತ್ತಾ ಬಂದಿವೆ. ಈ ಕ್ಷೇತ್ರದಲ್ಲಿ ಕೆಲಸಮಾಡಿದ ಹಲವಾರು ಪ್ರತಿಭಾವಂತರಲ್ಲಿ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರೊಬ್ಬರು. ಮೂಲತಃ ಕವಿಯಾದುದರಿಂದ ಅವರ ಕಾವ್ಯದ ಗುಣ ಔಚಿತ್ಯದ ಕೈಬಿಡದೆ ಗದ್ಯಶೈಲಿಯನ್ನು ಸಮರಸವಾಗಿ ಮುನ್ನಡೆಸುತ್ತದೆ. ತಮ್ಮ ಹೃದಯದ ಪರಿಪಕ್ವತೆಯಿಂದ ಪ್ರತಿಯೊಂದನ್ನು ವಸ್ತುನಿಷ್ಠವಾಗಿ ನೋಡುವ ಶಕ್ತಿ ಇವರಿಗೆ ಸಿದ್ಧಿಸಿದೆ. ಪ್ರಕೃತ ಇವರ 'ಲೇಖನಗಳು' ಎನ್ನುವ ಗ್ರಂಥ, ಎಂಟು ಲೇಖನಗಳಿಂದ ಕೂಡಿರುವ ಒಂದು ಕೃತಿ. ಇವರಲ್ಲಿ ಮೊದಲ ಎರಡು, ವಿದ್ಯಾರ್ಥಿಯಾಗಿದ್ದಾಗಲೂ, ಉಳಿದ ಆರು ಅಧ್ಯಾಪಕರಾದ ಮೇಲೆ ಬೇರೆ ಬೇರೆ ಸಂದರ್ಭಗಳಲ್ಲಿ ಬರೆದವುಗಳೂ ಆಗಿವೆ.

ಮೊದಲನೆಯ ಲೇಖನ "ಲಲಿತಕಲೆಗಳೂ ಜನತೆಯ ಏಳಿಗೆಯೂ". ಕಲೆ, ಲಲಿತಕಲೆಗಳೊಳಗಿನ ವ್ಯತ್ಯಾಸ, ಜನತೆಗೆ ಇವರೊಂದಿಗಿರುವ ಸಂಬಂಧ, ಜನರ ಮೇಲೆ ಇವರ ಪ್ರಭಾವ ಪರಿಣಾಮಗಳ ಕುರಿತು ಚರ್ಚಿಸಿದ್ದಾರೆ. ಜಗದ್ವ್ಯಾಪಿಯಾದ ಸೌಂದರ್ಯವನ್ನು ಸವಿಯುವ ಸಹಜ ಬಯಕೆ, ಪ್ರಪಂಚದ ಅತ್ಯಂತ ನಾಗರಿಕ ಜನಾಂಗದಿಂದ ಹಿಡಿದು ಆಫ್ರಿಕದ ಕಾಡುನಿವಾಸಿಗಳ ವರೆಗೂ ಇದ್ದೇ ಇದೆ. ಈ ಸೌಂದರ್ಯವನ್ನು ಪ್ರತಿಬಿಂಬಿಸುವುದು ಕಲೆಯ ಉದ್ದೇಶ. ಕಲಾನುರಾಗದಿಂದ ಲಭಿಸುವುದು ಆನಂದ. ಒಂದು ರಾಷ್ಟ್ರದ ನಾಗರಿಕತೆ, ಸಂಸ್ಕೃತಿ, ಸ್ಥಾನಗಳನ್ನು ಆ ರಾಷ್ಟ್ರದ ಕಲೆಗಳು ಸಾರುತ್ತವೆ. "ಸೌಂದರ್ಯ ನಿರೂಪಣವೇ ಲಲಿತಕಲೆಗಳ ಕೆಲಸ. ಆನಂದವೇ ಅದರ ಸತ್ಪರಿಣಾಮ. ಇಂತಹ ಲಲಿತಕಲೆಗಳಲ್ಲೆಲ್ಲಾ ಚಿತ್ರ, ಶಿಲ್ಪ, ಗಾನ, ನಾಟಕ ಮತ್ತು ಕಾವ್ಯ ಇವು ಮುಖ್ಯವಾದುವು." ನೂರಾರು ಮುಖವುಳ್ಳ ನೂರಾರು ಸಂದೇಶಗಳನ್ನು ಸಾರುವ ಇವು ಒಂದೊಂದೂ "ಜನತೆಯ ಹೃದಯದ ಒಳ ಅರನ್ನು ಹೊಕ್ಕು ಕರುಣೆ, ಮಮತೆ, ಸುಖ, ದುಃಖ, ಪ್ರೇಮ, ಭಕ್ತಿಗಳ ಉಬ್ಬು ತಗ್ಗಿನಲ್ಲಿ ಜನತೆಯನ್ನು ಎತ್ತಿಳಿಸಿ ಸುಸಂಸ್ಕೃತವನ್ನಾಗಿ ಮಾಡುತ್ತವೆ." ವಿಜ್ಞಾನ ಮತ್ತು ಅಜ್ಞಾನದ ನಡುವೆ ಇರುವ ಜಡತ್ವದ ಹೊನಲಿಗಾಗಿ ರಚಿಸಿರುವ ಸೇತುವೆಯೇ ಲಲಿತಕಲೆಗಳು ಎಂದು ವಿವರಿಸಿ ಮುಂದೆ ಚಿತ್ರ, ಶಿಲ್ಪ, ಗಾನ, ನಾಟಕ ಮೊದಲಾದುವುಗಳ ಕುರಿತು ಸಂಕ್ಷಿಪ್ತವಾಗಿ ಆದರೆ ಸ್ಫುಟವಾಗಿ ವಿವರಿಸಿದ್ದಾರೆ. ವಿವರಣೆಯ ಸ್ಪಷ್ಟತೆಗೆ ಸ್ವಲ್ಪ ಭಾಗವನ್ನು ಉದಾಹರಿಸಬಹುದು. "ಶಿಲ್ಪದಲ್ಲಿ ವಾಸ್ತು, ಪ್ರತಿಮಾ, ಚಿತ್ರವೆಂಬ ಮೂರು ಬಗೆ ಇವೆ. ವಾಸ್ತುಶಿಲ್ಪವು ವಿಗ್ರಹಾದಿಗಳನ್ನು ರಚಿಸುವುದರಲ್ಲಿಯೂ, ಚಿತ್ರಶಿಲ್ಪಗಳು ಗುಡಿಗೋಪುರಗಳನ್ನು ಕಟ್ಟುವುದರಲ್ಲಿಯೂ ಪರ್ಯವಸಾನವಾಗಿವೆ." ಇಷ್ಟೇ ಸ್ಪಷ್ಟವಾದ ವಿವರಣೆಯನ್ನು ಗಾನ, ನಾಟಕಗಳ ಕುರಿತಾಗಿಯೂ ನೋಡಬಹುದು. ಹೀಗೆ ಲಲಿತಕಲೆಗಳ ಪರಿಚಯ

ಮಾಡಿಕೊಟ್ಟ "ಲಲಿತ ಕಲೆಗಳು ಜನತೆಯ ಈಪ್ಸಿತಾರ್ಥಸಿದ್ಧಿಗೆ ಕಾಮಧೇನುವಿನಂತಿವೆ." ಎಂದು ತಮ್ಮ ಅಭಿಪ್ರಾಯವನ್ನು ತಿಳಿಸಿ ಕೊನೆಗೊಳಿಸಿದ್ದಾರೆ.

ಎರಡನೆಯ ಲೇಖನ "ಕಾವ್ಯಸತ್ಯ"ದ ಕುರಿತು. ಕೆಲವು ಉದಾಹರಣೆಗಳಿಂದ ವಿಷಯದ ವಿವರಣೆಗೆ ಪ್ರಯತ್ನಿಸಿದ್ದಾರೆ. ನೃತ್ಯ, ಸಂಗೀತ, ಚಿತ್ರ, ಶಿಲ್ಪಗಳೇ ಮೊದಲಾದ ಕುಶಲಕಲೆಗಳಲ್ಲಿ ವಿಶೇಷ ಆಸ್ಥೆಯನ್ನು ತೋರುವ ಜನರು, ಕವಿ ಕಾವ್ಯಗಳ ಕುರಿತಾಗಿ ತೋರುವ ಉಪೇಕ್ಷೆ, ಅನಾದರಗಳಿಗೆ ಕಾರಣ "ಕವಿ ಬರೆದ ಕಾವ್ಯ ಅಸತ್ಯ, ಅಸಂಗತ" ಎನ್ನುವ ಅಭಿಪ್ರಾಯ. ಇದು ಪ್ಲೇಟೋನ ಕಾಲದಿಂದ ಇಂದಿನವರೆಗೂ ಉಳಿದಿರುವ ಒಂದು ಆರೋಪ. ಆದರೆ ಕಾವ್ಯಸತ್ಯ ಜೀವನಸತ್ಯಕ್ಕಿಂತ ಬೇರೆ ಯಾದುದು. ಅದು ಅಸಂಭಾವ್ಯ ಸತ್ಯ. ನೇಮಿಚಂದ್ರ ಹೇಳುವಂತೆ "ಕಪಿಸಂತತಿ ಕಡಲನ್ನು ಕಟ್ಟಲಿ, ಕಟ್ಟದಿರಲಿ. ವಾಮನ ನಭವನ್ನು ಮುಟ್ಟಲಿ, ಮುಟ್ಟದಿರಲಿ, ಹರನ ಗಂಟಲನ್ನು ನರ ಒತ್ತಿಮೆಟ್ಟಲಿ, ಮೆಟ್ಟದಿರಲಿ ಕವಿಮಾತ್ರ ಕಟ್ಟಿಸುತ್ತಾನೆ, ಮುಟ್ಟಿಸುತ್ತಾನೆ, ಮೆಟ್ಟಿಸುತ್ತಾನೆ. ಕವಿಪ್ರತಿಭೆಯ ಲೀಲಾ ವ್ಯಾಪಾರಕ್ಕೆ ಲೋಕವ್ಯವಹಾರವೇ ಆಧಾರವಾದರೂ, ಲೋಕದಲ್ಲಿ ಅಸಾಧ್ಯವಾದ ಸಂಗತಿಗಳು ಇಲ್ಲಿ ಸಹಜವೆಂಬಂತೆ ಉಲ್ಲಿಖಿತವಾಗುತ್ತವೆ. ಈ ಲೇಖನದಲ್ಲಿ ಕಾವ್ಯಗದ್ಯಗಳೊಳಗಣ ತರ್ಕಪದ್ಧತಿಯಲ್ಲಿ ರುವ ಸೂಕ್ಷ್ಮವ್ಯತ್ಯಾಸವನ್ನು ಸ್ವಾರಸ್ಯವಾದ ಉದಾಹರಣೆಯೊಂದಿಗೆ ವಿವರಿಸಿದ್ದಾರೆ. ಅನುಭವಕ್ಕೆ ಮೂಲಕಾರಣವಾದ ಸತ್ಯ ಒಂದೇ ಆದರೂ, ಅನುಭವಿಸುವವರಲ್ಲಿರುವ ವೈವಿಧ್ಯದಿಂದ ಅದು ವ್ಯತ್ಯಾಸ ಗೊಳ್ಳುತ್ತದೆ. ದೃಷ್ಟಿ ಸರಿಯಿದ್ದವನಿಗೆ, ಕಣ್ಣಿನಿಂದ ಕಂಡದ್ದು ಸತ್ಯ; ಕುರುಡನಿಗೆ ಶ್ರವಣೇಂದ್ರಿಯ ದಿಂದಲೋ, ಸ್ಪರ್ಶದಿಂದಲೋ ತಿಳಿದುದು ಸತ್ಯ, ವಸ್ತುವಿನ ಪೂರ್ಣಜ್ಞಾನ ಲಭಿಸದಿದ್ದರೂ ಬೇರೆ ಬೇರೆ ಮಾರ್ಗಗಳಿಂದ ಬಂದ ಅನುಭವಜ್ಞಾನ ಮಾತ್ರ ಸತ್ಯ. "ಸತ್ಯದ ಒಂದು ಮುಖವನ್ನಾದರೂ ತಿಳಿದುಕೊಳ್ಳಲು ನಮ್ಮ ಇಂದ್ರಿಯವನ್ನೇ ನಾವು ಶರಣುಹೋಗಬೇಕು. ಹೊರಗಣ ನಿಜಸ್ಥಿತಿಯು ಇಂದ್ರಿಯಗಳನ್ನು ಹೊಕ್ಕು ಅಲ್ಲಿ ಅವರವರ ಸಂಸ್ಕಾರದಂತೆ." ಇಲ್ಲಿ ವಿಷಯ ಪ್ರತಿಪಾದನೆಗೆ ಆರಿಸಿ ಕೊಂಡ ಉದಾಹರಣೆಗಳು ಜನಸಾಮಾನ್ಯರ ದೈನಂದಿನ ಜೀವನದಿಂದ. ಸಾಮಾನ್ಯರಿಗೆ ಥಕ್ಕನೆ ಅರ್ಥ ವಾಗದ ಜಟಿಲ ವಿಚಾರಗಳನ್ನು ಇಂತಹ ಸರಳವಾದ ಉದಾಹರಣೆಗಳ ಮೂಲಕ ಹೇಳಿರುವುದರಿಂದ ಓದುಗನಿಗೆ ತಮ್ಮ ವಿಚಾರವನ್ನು ತಿಳಿಸುವುದರಲ್ಲಿ ಸಂಪೂರ್ಣ ಯಶಸ್ವಿಯಾಗಿದ್ದಾರೆ. ಒಂದು ಉದಾ- ಹರಣೆಯನ್ನೇ ನೋಡಬಹುದು "ಬೇಸಗೆಯ ಬಿಸಿಲಲ್ಲಿ ಮೈಬೆವರಿರಲು ಸಾಲಗಾರರ ಮನೆಗೆ ಹೋಗಿ ಕೊಟ್ಟ ಹಣ ಕೈಗೆ ಬರದೆ ಹಿಂದಿರುಗುವಾಗ ನಾವು ನಡೆದುಹೋದ ಒಂದು ಮೈಲಿ ಹತ್ತು ಮೈಲಿಯಂತೆ ತೋರುವುದು. ಆದರೆ ಅದೇ ಒಂದು ಬೆಳ್ದಿಂಗಳ ರಾತ್ರಿ ಯಕ್ಷಗಾನವನ್ನು ನೋಡಲು ಹತ್ತು ಜನ ಕೂಡಿ ಹೋಗುವುದಾದರೆ ಹತ್ತುಮೈಲಿಯೂ ಒಂದು ಮೈಲಿಯಂತೆ ಭಾಸವಾಗುವುದು . . . . ಇಲ್ಲಿ ಯಾವುದು ಸತ್ಯ? ಯಾವುದು ಅಸತ್ಯ ? ಇಲ್ಲಿಯೂ ಸತ್ಯವು ದ್ವಿಮುಖವಾಗಿಲ್ಲವೇ ? ಆದ್ದರಿಂದ ಒಂದು ಸತ್ಯ ವಿಷಯಪ್ರಾಮಾಣ್ಯವನ್ನೊಳಗೊಂಡ ಶಾಸ್ತ್ರಸತ್ಯ. ಮತ್ತೊಂದು ವಿವಿಧ ದೃಷ್ಟಿಕೋನ ಗಳಿಂದ ಇಂದ್ರಿಯಗಳ ಮೂಲಕ ಅನುಭವಿಸಿದ ಕಾವ್ಯಸತ್ಯ. ಮೊದಲನೆಯದು ಬುದ್ಧಿಗೋಚರ. ಎರಡನೆಯದು ಹೃದಯಗೋಚರ. ಎಂದಮೇಲೆ ಕಾವ್ಯಸತ್ಯ ಭಾವನಾಮಯವಾದ ಅನುಭವ ಪ್ರಾಮಾಣ್ಯವುಳ್ಳ, ಹೃದಯಕ್ಕೆ ಮಾತ್ರ ಗೋಚರವಾಗಬಲ್ಲ ಸತ್ಯ" ಎಂದು ತೀರ್ಮಾನಿಸಿದ್ದಾರೆ. ಮೇಲಿನ ಎರಡು ಲೇಖನಗಳಲ್ಲೂ, ಪಾಶ್ಚಾತ್ಯ ಬರಹಗಾರರ ವಾಕ್ಸರಣಿ, ಅಭಿಪ್ರಾಯಸರಣಿಗಳ ದಟ್ಟ ಪ್ರಭಾವವನ್ನು ಗುರುತಿಸಬಹುದು. ಆದರೆ ವಿಷಯಸಂಗ್ರಹ, ನಿರೂಪಣಾಸಾಮರ್ಥ್ಯ, ಬರಹದ ಶೈಲಿಯಲ್ಲಿ, ವಿದ್ಯಾರ್ಥಿಯಾಗಿದ್ದಾಗ ಬರೆದುದಾದರೂ ಪ್ರಬುದ್ಧತೆಯನ್ನು, ಪರಿಪಕ್ವತೆಯನ್ನು ಗಮನಿಸ ಬಹುದು.

ಕರ್ಣಾಟಕದಲ್ಲಿ ಅತ್ಯಂತ ಜನಪ್ರಿಯವಾಗಿರುವ "ಗೋವಿನ ಹಾಡು" ಮೂರನೆಯ ಲೇಖನ. ಇಲ್ಲಿ ಡಾ. ಡಿ. ಎಲ್. ನರಸಿಂಹಾಚಾರ್ ಸಂಪಾದಿಸಿದ ೧೧೪ ಪದ್ಯಗಳನ್ನವಲೋಕಿಸಿ, ಮೊದಲ ಭಾಗದಲ್ಲಿ ಅಲ್ಲಲ್ಲಿ ಪದ್ಯಗಳನ್ನು ಉದಾಹರಿಸಿ, ಸ್ಥೂಲವಾಗಿ ಕತೆಯ ಪರಿಚಯವನ್ನು ಮಾಡುತ್ತಾರೆ. ಗೋವಿನ ಕತೆಯನ್ನು ಕೇಳಿದಾಗ "ಸಲೆ ಪೆರ್ಬುಲಿ ಬಲ್ಪನಟಿಗುಂ ಕೈವಾರಮುಂ ಕೂಡೆ ಕೂರಿಸುಗುಂ" ಎಂಬ ಆದಿಕವಿ

ಜೀವನ ಪಾಠವನ್ನು ಕಲಿಸಿಕೊಳ್ಳುತ್ತಾರೆ. ಲೇಖಕರಿಗೆ ಪ್ರಿಯವಾದುದು ಸತ್ವಗುಣ. ಅದರಿಂದ ರಜೋಗುಣವನ್ನು ಗೆಲ್ಲುವುದರಲ್ಲಿ. ಬುದ್ಧಗುರು ಅಂಗುಲಿಮಾಲನನ್ನು, ವಿನೋಬಾ ಡಕಾಯಿತ ಮೋಳನನ್ನು, ಗಾಂಧೀಜಿ ಬ್ರಿಟಿಷ್ ಸಾಮ್ರಾಜ್ಯದ ಶೌರ್ಯವನ್ನು ಗೆದ್ದ ಗೋತತ್ತ್ವವೇ ಕಂಡುಬರುತ್ತದೆ. ಕನ್ನಡಗೋವಿನ ಕತೆಯ ಮೂಲ ಆಕರ ಸಂಸ್ಕೃತದ ಇತಿಹಾಸ ಸಮುಚ್ಚಯವೆಂಬ ಗ್ರಂಥದಲ್ಲಿ ಬರುವ 'ಬಕುಳೋಪಾಖ್ಯಾನ'ವೆಂಬ ಕತೆ. ಆದರೆ ಇದು ಅಲ್ಪಸ್ವಲ್ಪ ವ್ಯತ್ಯಾಸದ ಇದೇ ಕರ್ನಾಟಕದಲ್ಲಿ ಹಬ್ಬಿ ಜನಪ್ರಿಯವಾಗಿದೆ. ಕರ್ನಾಟಕದ ಜನಪದ ಸಾಹಿತ್ಯ ಸಂಪತ್ತನ್ನು ಸಾರುತ್ತದೆ. ಈ ಲೇಖನದಲ್ಲಿ, ಕತೆಯುಳ್ಳಡಗಿರುವ ತತ್ತ್ವವನ್ನು ಸಾರಿ, ಸಹಜ ಹಲವಾರು ಘಟನೆಗಳನ್ನು ಉದಾಹರಣೆಯಾಗಿಟ್ಟು, ಅಸುರೀಶಕ್ತಿ, ದೈವೀಶಕ್ತಿಗಳ ಹೋರಾಟದಲ್ಲಿ ಕೊನೆಗೆ ಹೇಗೆ ಸತ್ಯಕ್ಕೆ, ದೈವಿಕತೆಗೆ ಜಯವಾಗುವುದು ಎಂಬುದನ್ನು ಸುದೀರ್ಘವಾಗಿ ಚರ್ಚಿಸಿದ್ದಾರೆ. ಕನ್ನಡ ನಾಡಿನ ಜನರ ಜೀವನವೆಲ್ಲ ಆದಿಯಿಂದಲೂ ಯಾವುದಾಗಿತ್ತು ಎನ್ನುವುದಕ್ಕೆ ಈ ಕತೆಯ ಜನಪ್ರಿಯತೆ ಸಾಕ್ಷಿ. ಸ್ವಾರ್ಥತ್ಯಾಗಕ್ಕೆ, ಪರಾರ್ಥಪ್ರೇಮಕ್ಕೆ, ಬಲಿದಾನಕ್ಕೆ ಈ ನಾಡು ಪ್ರಸಿದ್ಧವಾಗಿದೆ. ಕೊನೆಯಲ್ಲಿ "ಕನ್ನಡದ ಗಾಳಿ, ಕನ್ನಡದ ಬೆಳಕು, ಕನ್ನಡದ ಹುಲ್ಲು, ಕನ್ನಡದ ನೀರು ಇವುಗಳಿಂದ ಬದುಕಿದ ಈ ಕನ್ನಡದ ಹಸು, ಕನ್ನಡ ಗಾಳಿ, ಬೆಳಕು, ನೀರುಗಳಿಂದ ಬದುಕುತ್ತ, ಕನ್ನಡದ ಜೀವತಿನ್ನುವ ಕನ್ನಡದಲ್ಲಿಯೇ ಹುಟ್ಟಿಬೆಳೆದ ಹುಲಿಗೆ ಹೃದಯ ಪರಿವರ್ತನೆಗೊಳಿಸಿಕೊಳ್ಳುವ ಸತ್ಪ್ರೇರಣೆಯನ್ನು ಉಂಟುಮಾಡಲಿ ಎಂಬುದು ನನ್ನ ಆಶಯ" ಎಂದು ಯಥೋಚಿತವಾದ ಬಯಕೆಯನ್ನು ವ್ಯಕ್ತಪಡಿಸಿದ್ದಾರೆ.

ನಿಸರ್ಗಪ್ರೇಮಿಯಾಗಿದ್ದು, ತಮ್ಮ ಭಾವಗೀತಗಳಲ್ಲಿ, ಮಹಾಕಾವ್ಯದಲ್ಲಿ ಪ್ರಕೃತಿಯ ಎಳೆ ಎಳೆಯನ್ನು ಬಿಡಿಸಿ, ಅತ್ಯಂತ ಸೂಕ್ಷ್ಮವಾಗಿ ತನ್ಮಯಗೊಳಿಸುವ, ತಲೆದೂಗುವ ರೀತಿಯಲ್ಲಿ ಪ್ರಕೃತಿಯನ್ನು ಚಿತ್ರಿಸಿರುವ "ಶ್ರೀ ಕುವೆಂಪು ಅವರ ಸೂರ್ಯೋದಯ ಗೀತಗಳು" ನಾಲ್ಕನೆಯ ಲೇಖನ. ಮಳೆಗಾಲದಲ್ಲಿ, ಬಯಲು ಸೀಮೆಯಲ್ಲಿ, ಗ್ರೀಷ್ಮಋತುವಿನಲ್ಲಿ, ಶರದೃತುವಿನಲ್ಲಿ, ಹೇಮಂತಋತುವಿನಲ್ಲಿ, ಬ್ರಾಹ್ಮೀ ಮುಹೂರ್ತದಲ್ಲಿ, ಅರುಣೋದಯದಲ್ಲಿ ಹೀಗೆ ಬೇರೆ ಬೇರೆ ಕಾಲದಲ್ಲಿ ತಮ್ಮ ಜೀವನಮಾರ್ಗಕ್ಕೂ ನಡೆಸಿದ ಸೂರ್ಯೋಪಾಸನೆಯ ಫಲವಾಗಿ ಕಂಡುಂಡ ಸೂರ್ಯಸೌಂದರ್ಯದಿಂದಾದ ರಸಾನಂದವನ್ನು ಕನ್ನಡಿಸಿ ಕೊಟ್ಟಿರುವುದನ್ನು ವಿವರಿಸಿ, ಕುವೆಂಪು ಅವರ ಸೂರ್ಯೋದಯ ಗೀತಗಳಲ್ಲಿ ಇತರರಲ್ಲಿ ಕಂಡುಬರದ ವಿಶಿಷ್ಟತೆಯನ್ನು ತಿಳಿಸಿದ್ದಾರೆ. ತಮಗೆ ಸಾಧ್ಯವಾದಷ್ಟು ವಿವರಿಸಿದರೂ ತೃಪ್ತಿಯಿಲ್ಲದೆ "ಈ ಕವಿಯ ಸೌಂದರ್ಯೋಪಾಸನೆ, ರಸಿಕತೆ, ಪ್ರಕೃತಿಯ ಆರಾಧನೆ, ಏಕಾಂತಪ್ರಿಯತೆ, ವಿನಯಬುದ್ಧಿ, ಹೃದಯ ಶುದ್ಧಿ, ರಸಸಿದ್ಧಿ ಈ ಮುಂತಾದ ಗುಣವಿಶೇಷಗಳನ್ನು ಇನ್ನಷ್ಟು ವಿವರವಾಗಿ ಹೇಳಬೇಕು. ಎಷ್ಟು ಹೇಳಿದರೂ ಹೇಳಿ ಮುಗಿಯದೆಂಬ ಮಾತುಹೇಳಿ, ಈ ಸೂರ್ಯಗೀತಗಳನ್ನು ಮೂಲದಲ್ಲಿಯೇ ಓದಬೇಕೆಂದು ವಾಚಕಲೋಕವನ್ನು ಪ್ರಾರ್ಥಿಸಿಕೊಳ್ಳುತ್ತೇನೆ" ಎಂದು ವಿಜ್ಞಾಪಿಸಿಕೊಂಡಿದ್ದಾರೆ. ಪ್ರಕೃತಿಯ ಆರಾಧನೆಯೇ ಪರಮನ ಆರಾಧನೆ, ಆದ್ದರಿಂದ ಇವು ಸೂರ್ಯೋದಯ ಗೀತಗಳಲ್ಲ ಶಿವೋದಯ ಗೀತಗಳು ಎನ್ನುವುದು ಲೇಖಕರ ಅಭಿಮತ.

"ಕನ್ನಡದಲ್ಲಿ ಜೀವನ ಚರಿತ್ರೆಗಳು" ಐದನೆಯ ಲೇಖನ. 'ಜೀವನ ಚರಿತ್ರೆ' ಎಂದರೇನು ಎನ್ನುವುದನ್ನು ಹಲವರ ಅಭಿಪ್ರಾಯಗಳನ್ನು ಉಲ್ಲೇಖಿಸಿ, ಕಾದಂಬರಿ, ಜೀವನ ಚರಿತ್ರೆಗಳೊಳಗಿನ ವ್ಯತ್ಯಾಸವನ್ನು ತೋರಿಸಿ 'ಜೀವನ ಚರಿತ್ರೆಯಲ್ಲಿ ಪ್ರತಿಭಾವಂತ ಕವಿ ಕಾದಂಬರಿಯ ಕಲ್ಪನಾವಿಲಾಸವನ್ನು ತರುವುದು ಸಾಧ್ಯ' ಎಂದಭಿಪ್ರಾಯಿಸಿದ್ದಾರೆ. "ಪ್ರತಿಯೊಬ್ಬರು ತಮ್ಮ ತಮ್ಮ ಜೀವನವನ್ನು ತಾವೇ ಬರೆದಿಡುವುದು ಸರ್ವೋತ್ತಮ" ಎಂಬ ಡಾ. ಜಾನ್‌ಸನ್‌ನ ಮಾತನ್ನು ಉಲ್ಲೇಖಿಸಿ, ಇದರಿಂದಾಗುವ ಒಳಿತು ಕೆಡುಕುಗಳನ್ನು ಚರ್ಚಿಸಿದ್ದಾರೆ. ಜೀವನಚರಿತ್ರೆ ಸುಂದರವೂ, ಸತ್ಯಪೂರ್ಣವೂ ಆಗಲು ಅನುಸರಿಸಬೇಕಾದ ತಂತ್ರಗಳಲ್ಲಿ ಮುಖ್ಯವಾದವುಗಳ ಕುರಿತು ಹೇಳಿ, ಬರಹಗಾರ ಎದುರಿಸುವ ಸಮಸ್ಯೆಗಳನ್ನು, ಅವುಗಳನ್ನು ಪರಿಹರಿಸುವ ರೀತಿಯನ್ನು ವಿವರಿಸಿದ್ದಾರೆ. ಕನ್ನಡದಲ್ಲಿ ಇರುವ ಜೀವನ ಚರಿತ್ರೆಗಳಲ್ಲಿ ಮುಖ್ಯವೂ, ಉತ್ತಮವೂ ಆದವುಗಳನ್ನು ಕೆಲವು ಗುಂಪುಗಳಲ್ಲಿ ಕಾಣಿಸಿ ಅವುಗಳ ಕುರಿತು ಒಂದೆರಡು ಮಾತನ್ನು ಹೇಳಿದ್ದಾರೆ. ಆದರೆ ಜೀವನ ಚರಿತ್ರೆ ಎನ್ನುವುದು ಪರಿಪೂರ್ಣವಾಗಿ ಬರುವುದು ಸಾಧ್ಯವಿಲ್ಲ

ಎನ್ನುವುದು ಲೇಖಕರ ಅಭಿಮತ." ಒಳ್ಳೆಯ ಬದುಕು ಬಾಳಿದ ವ್ಯಕ್ತಿ ದುರ್ಲಭವಾಗಿರುವಂತೆ ಒಳ್ಳೆಯ ಬದುಕನ್ನು ಒಳ್ಳೆಯ ರೀತಿಯಲ್ಲಿ ಚಿತ್ರಿಸುವ ಜೀವನ ಚರಿತ್ರಕಾರನೂ ದುರ್ಲಭನೇ ಸರಿ."

"ರಂಗಣ್ಣನವರ ಕೃತಿಗಳು" ಎಂಬ ಲೇಖನದಲ್ಲಿ 'ಶೈಲಿ,' 'ರುಚಿ,' 'ವಿಡಂಬನ' ಮತ್ತು 'ಕುಮಾರವ್ಯಾಸ' ಈ ಕೃತಿಗಳನ್ನು ಇಂಗ್ಲಿಷ್, ಕನ್ನಡ ಉಭಯಭಾಷಾವಿಶಾರದರಾಗಿತ್ತರೆ ಇವುಗಳಲ್ಲಿ ಕಂಡುಬರುವ ಸ್ಪಷ್ಟತೆ, ಆಳವೂ ವಿಶಾಲವೂ ಆದ ಪಾಂಡಿತ್ಯ, ರಸಭರಿತ ಮತ್ತು ಲೋಕಾನುಭವಗಳನ್ನು ಯಾರೂ ಅಲ್ಲಗಳೆಯಲಾರರು ಎಂದು ಅಭಿಪ್ರಾಯಿಸಿದ್ದಾರೆ. ಮೇಲೆ ಹೇಳಿದ ರಂಗಣ್ಣನವರ ಬರಹಗಳಲ್ಲಿರುವ ಒಂದೊಂದು ಲಕ್ಷಣದ ಕುರಿತೂ ಸಾಕಷ್ಟು ಉದಾಹರಣೆಗಳಿಂದ ಚರ್ಚಿಸಿದ್ದಾರೆ. ಶೈಲಿ ಮತ್ತು ಪ್ರಸಿದ್ಧ ಕನ್ನಡಕವಿಗಳ ಶೈಲಿಯ ಕುರಿತು, 'ಶೈಲಿ'ಯಲ್ಲಿ ರಂಗಣ್ಣನವರು ಹೇಳಿದ್ದರೆ, ಅವರ "ಶೈಲಿ" ಯಿಂದ ರಂಗಣ್ಣನವರ ಶೈಲಿಯ ಪರಿಚಯವನ್ನು ಲೇಖಕರು ನಮಗೆ ಮಾಡಿಸಿಕೊಡುತ್ತಾರೆ. 'ವಿಡಂಬನ' 'ರುಚಿ' ಈ ಗ್ರಂಥಗಳ ವಿಷಯ ವಿಭಜನೆಯನ್ನು ಉಲ್ಲೇಖಿಸಿ ಈ ವಿಭಜನೆ ಸ್ಪಷ್ಟತೆಗೆ ಹೇಗೆ ನೆರವಾಗಿದೆ ಎಂಬುದನ್ನು ತಿಳಿಸಿದ್ದಾರೆ. ಸೂತ್ರಪ್ರಾಯವಾಗಿರುವ ಅವರ ಬರಹ ಕೆಲವುಬಾರಿ ಒಳ್ಳೆಯ ನಾಣ್ಣುಡಿಗಳಾಗಿಯೇ ಪರಿಣಮಿಸಿವೆ. ಅವರ ಕವಿಕೃತಿ ವಿಮರ್ಶೆ ಹೇಗೆ ಒಂದು ಸುಂದರ ಕಾವ್ಯವೇ ಆಗಿದೆ ಎನ್ನುವುದನ್ನು ಹಲವಾರು ಉದಾಹರಣೆಗಳಿಂದ ಸಮರ್ಥಿಸಿದ್ದಾರೆ. "ಈ ಸಹಜಶಕ್ತಿಯಿಂದ ಅವರ ಬರವಣಿಗೆ ಹೃದ್ಯವಾಗಿದೆ, ಹ್ಲಾದವಾಗಿದೆ, ರಮ್ಯೋಜ್ವಲ ಕಾವ್ಯಚಿತ್ರವಾಗಿದೆ" ಎಂದು ರಂಗಣ್ಣನವರ ವಿಮರ್ಶಾಕೃತಿಗಳ ಕುರಿತು ವಿವೇಚಿಸಿ, ಹೊಸಗನ್ನಡ ಸಾಹಿತ್ಯದ ಪ್ರತ್ಯೇಕ ಪ್ರಕಾರವಾಗಿ ವಿರಾಜಿಸುವ, ಕನ್ನಡ ಸಾಹಿತ್ಯಕ್ಕೆ ವೈಶಿಷ್ಟ್ಯಪೂರ್ಣ ಕೊಡುಗೆಯಾದ, ವಿಶಿಷ್ಟಮಾದರಿಯ ವಚನರಚನೆಯ "ರಂಗಯ್ಯನ ವಚನಗಳ" ಕುರಿತು, ಸಾಕಷ್ಟು ಉದಾಹರಣೆಗಳಿಂದ, ವಚನಗಳಲ್ಲಿ ಕಂಡುಬರುವ ಕಾವ್ಯಗುಣವುಳ್ಳ ಸರಸಗದ್ಯವನ್ನು, ಲೌಕಿಕ ದೃಷ್ಟಾಂತಗಳನ್ನು, ಗಾದೆ ಮಾತುಗಳನ್ನು, ಕಲ್ಪನಾಬೃಹತ್ತನ್ನು, ಭೀಮ ಬಂಧುರತೆಯನ್ನು, ಬುದ್ಧಿ ಭಾವಗಳ ಸಾಂಗತ್ಯವನ್ನು, ಛಂದಸ್ಸುಲಯಗಳ ಮಾಧುರ್ಯವನ್ನು, ಶೈಲಿಯ ಸೊಗಸನ್ನು ಕುರಿತಾಗಿ ಚರ್ಚಿಸಿದ್ದಾರೆ. "ರಂಗಣ್ಣನವರ ಗದ್ಯವನ್ನು ಒಂದು ರಥಕ್ಕೆ ಹೋಲಿಸಬಹುದು. ಅದರ ಒಂದು ಗಾಲಿ ಅರ್ಥವ್ಯಕ್ತಿಯಾದರೆ ಇನ್ನೊಂದು ಗಾಲಿ ಹೃದ್ಯತೆ ಶಬ್ದಲಾಲಿತ್ಯ, ತಾಳಲಯ ಲಾಲಿತ್ಯಗಳೇ ಎರಡು ಅಶ್ವಗಳು" ಎಂದು ತಮ್ಮ ಸಿದ್ಧಾಂತವನ್ನು ಮುಂದಿಟ್ಟು, ಅಪ್ರಕಟಿತವಾದ, ವಿಪುಲವಾದ ಅವರ ಗ್ರಂಥ ವಾಙ್ಮಯವು ಪ್ರಕಟವಾಗಿ ಕನ್ನಡಿಗರಿಗೆ ಅವುಗಳ ರಸಾಸ್ವಾದನದ ಪರಿಣಾಮಸುಖ ದೊರೆಯುವಂತಾಗಲಿ ಎಂದು ಹಾರೈಸಿದ್ದಾರೆ.

ಏಳನೆಯ ಲೇಖನದಲ್ಲಿ ಕುವೆಂಪು ಅವರ 'ಸಂನ್ಯಾಸಿ ಮತ್ತು ಇತರ ಕಥೆಗಳು' ಎಂಬ ಸಂಕಲನದಲ್ಲಿ ಬರುವ ಒಂಬತ್ತು ಕತೆಗಳ ಸ್ವಾರಸ್ಯವನ್ನು ಸ್ವಲ್ಪದರಲ್ಲಿಯೇ ತಿಳಿಸುವುದನ್ನು ಉದ್ದೇಶವಾಗಿಟ್ಟುಕೊಂಡಿದ್ದಾರೆ. ಕುವೆಂಪು ಅವರ ಕತೆಗಳು ಸಂಖ್ಯೆಯಲ್ಲಿ ಕಡಮೆಯಾದರೂ, ವಸ್ತು, ವರ್ಣನೆ, ತಂತ್ರ, ನಿರೂಪಪಣೆಗಳಲ್ಲಿ ವೈವಿಧ್ಯದಿಂದ ಕೂಡಿದ್ದು, ಅಂತರಾಳದಲ್ಲಿ ಅಮೃತಶಕ್ತಿಯಾಗಿ ಪ್ರವಹಿಸುತ್ತಿರುವ ಅನನ್ಯವಾದ, ಅಗಾಧವಾದ ಲೋಕಪ್ರಜ್ಞೆಯಿಂದ, ಕಲಾತ್ಮಕ ಸಮತೋಲನದ ವಿಶಿಷ್ಟ ಸೌಂದರ್ಯದಿಂದ ಕೂಡಿರುವುದು ಎಲ್ಲರೂ ಗಮನಿಸುವ ವಿಚಾರ. ಈ ಲೇಖನದಲ್ಲಿ ಪ್ರತಿಯೊಂದು ಕತೆಯ ವಸ್ತುವನ್ನು ಸಂಕ್ಷೇಪವಾಗಿ ತಿಳಿಸಿ, ಪ್ರತಿಯೊಂದರಲ್ಲೂ ಕಂಡುಬರುವ, ಸಂಭಾಷಣೆ, ವಸ್ತುಸಂವಿಧಾನದಲ್ಲಿರುವ ಸೊಗಸು, ಪ್ರಕೃತಿ ಸೌಂದರ್ಯದ ವರ್ಣನೆ, ಹಾಸ್ಯಪೂರ್ಣ ಶೈಲಿ, (ಈಶ್ವರನೂ ಸಕ್ಕರೆಬೇಕು ಎಂಬ ಕತೆಯಲ್ಲಿ) ಕಂಡುಬರುವ, ರಮ್ಯ, ವಿಸ್ಮಯ, ಅಕೃತಕವಾದ ಕಲಾತ್ಮಕತೆ ಮೊದಲಾದವುಗಳ ಕುರಿತು ಆ ಕತೆಯ ಅಂತ್ಯದಲ್ಲೇ ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ಹೀಗೆ ಬಿಡಿ ಬಿಡಿಯಾಗಿ ಪ್ರಸ್ತಾವ ಮಾಡಿ, ಕೊನೆಯಲ್ಲಿ ನಿರೂಪಣಾಕೌಶಲತೆ, ಮಾತುಗಾರಿಕೆಯ ಬೆಡಗು, ಶೈಲಿಯ ಸೊಗಸುಗಳನ್ನು ಉದಾಹರಣೆಗಳಿಂದ ಓದುಗರ ಮುಂದಿಟ್ಟಿದ್ದಾರೆ. "ಹಾಸ್ಯವನ್ನೂ, ಗಾಂಭೀರ್ಯವನ್ನೂ ಬರವಣಿಗೆಯಲ್ಲಿ ಸೊಗಸಾಗಿ ಈ ಕತೆಗಾರರು ಪ್ರಕಟಪಡಿಸಿದ್ದಾರೆ. ವಸ್ತುವಿಗೆ ಅನುಗುಣವಾದ ನಿರೂಪಣಾಶೈಲಿ ಇಲ್ಲಿದೆ. ಕಥೆಗಳ ಆರಂಭ, ಬೆಳವಣಿಗೆ, ಮುಕ್ತಾಯ ಇವು ಕಲಾತ್ಮಕವಾಗಿ ಬಂದಿವೆ."

ಕೊನೆಯ ಲೇಖನ "ಶಾಸ್ತ್ರಿಗಳವರ ಭಾಷಣಗಳು." ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳು

# ೩೮. "ಕವಿ ಕೌಮುದಿ"

**ಬಪ್ಪನಾಡು ಪ್ರೇಮಾನಂದ ಕಿಶೋರ್**

೧

ಎಲ್ಲ ಭಾರತೀಯ ಭಾಷೆಗಳ ಮೇಲೆ, ಸಾಹಿತ್ಯ ಸೃಷ್ಟಿಯ ಮುಂಬೆಳಕಿನ ದಿನಗಳಿಂದ ಮೊನ್ನೆಮೊನ್ನೆಯ ವರೆಗೆ — ಪಾಶ್ಚಾತ್ಯ ಸಾಹಿತ್ಯಗಳ ನೇರ ಸಂಪರ್ಕವಾಗುವ ವರೆಗೆ — ಸಂಸ್ಕೃತ ಒಂದಲ್ಲ ಒಂದು ರೀತಿಯಿಂದ ತನ್ನ ಪ್ರಭಾವವನ್ನು ಬೀರುತ್ತ ಬಂದಿದೆ. ಈ ಭಾಷೆಗಳ ಬಹು ಅಂಶ ಪ್ರಾಚೀನ ಕಾವ್ಯಗಳೆಲ್ಲ ಸಂಸ್ಕೃತ ಭಾಷೆಯ ಕಾವ್ಯಗಳ ಅನುವಾದ ಅಥವಾ ರೂಪಾಂತರ. ಎಷ್ಟೋ ಛಂದೋರೂಪಗಳಂತೂ ನೇರವಾಗಿ ಸಂಸ್ಕೃತದಿಂದಲೇ ಬಂದವು. ಸಾಹಿತ್ಯ, ಸಂಸ್ಕೃತಿ, ಧರ್ಮಗಳಿಗೆ ಸಂಬಂಧಪಟ್ಟಂತೆ ಅಸಂಖ್ಯಾತ ಸಂಸ್ಕೃತಪದಗಳನ್ನು ಉಳಿದ ಭಾಷೆಗಳು ಹಾಗೆ ಹಾಗೆಯೇ ಎತ್ತಿಕೊಂಡಿವೆ. ಸಂಸ್ಕೃತವನ್ನು ಒಂದು ಮಾದರಿಯಾಗಿ ಸ್ವೀಕರಿಸಿ, ಆ ದೇವಭಾಷೆಯ ನೆರಳಿನಲ್ಲಿ ಉಳಿದ ಭಾರತೀಯ ಭಾಷೆಗಳ ಸಾಹಿತ್ಯ ಸೃಷ್ಟಿಯಾಯಿತು. ಆದುದರಿಂದಲೇ ಸಂಸ್ಕೃತ ಮಾತೃಭಾಷೆ ಎಂದು ಕರೆಯಿಸಿಕೊಳ್ಳುತ್ತಿದೆ. ಕನ್ನಡದಂತಹ ಭಾಷೆ ಸಂಸ್ಕೃತದಿಂದ ಪಡೆದುದನ್ನು ಹೆಚ್ಚಿನ ಬದಲಾವಣೆಗಳಿಲ್ಲದೆ ಉಳಿಸಿಕೊಂಡಿತು. ತಮಿಳಿನಂತಹ ಭಾಷೆ ಅಲ್ಪ ಸ್ವಲ್ಪ ವ್ಯತ್ಯಾಸಗಳನ್ನು ಮಾಡಿಕೊಂಡು ತಮ್ಮದಾಗಿಸಿಕೊಂಡುವು. ಒಟ್ಟಿನಲ್ಲಿ ಇಷ್ಟು ಹೇಳಬಹುದು — ಇತರ ಭಾರತೀಯ ಭಾಷೆಗಳ ಸಂಸ್ಕೃತಋಣ ತೀರಲಾರದಷ್ಟಿದೆ.

ಇಂದು ಸಂಸ್ಕೃತಭಾಷೆ ಜನಸಾಮಾನ್ಯರ ಬಳಕೆಯಿಂದ ದೂರವಾಗಿದೆ. ಸಾಮಾನ್ಯ ಭಾರತೀಯ ಸಂಸ್ಕೃತಭಾಷೆಯಲ್ಲಿನ ಕಾವ್ಯಗಳನ್ನು ನೇರವಾಗಿ ಆಸ್ವಾದಿಸಲಾರ. ಸಂಸ್ಕೃತಭಾಷೆಯನ್ನೇ ಕಲಿತು ಮೂಲಕೃತಿಗಳನ್ನು ಓದಲು ಆಶಿಸಿದರೂ, ಎಷ್ಟೋ ಕೃತಿಗಳು ಈಗ ಅನುಪಲಬ್ಧವಾಗಿವೆ. ಆದುದರಿಂದ ಬಹುಜನಗಳಿಗೆ ಈಗ ಸಂಸ್ಕೃತಭಾಷೆಯಲ್ಲಿನ ಸಾಹಿತ್ಯದ ಸಂಪರ್ಕ ಪ್ರಾದೇಶಿಕ ಭಾಷೆಗಳಲ್ಲಿ ಇರುವ ಅವುಗಳ ಅನುವಾದಗಳಿಂದ ಮಾತ್ರ ಸಾಧ್ಯ. ವಾಲ್ಮೀಕಿ, ವ್ಯಾಸ, ಕಾಳಿದಾಸ, ಭಾಸ, ಭವಭೂತಿಗಳ ಕೃತಿಗಳ ರಸಾನುಭವ ನಮ್ಮಲ್ಲಿನ ಹೆಚ್ಚಿನವರಿಗೆ ಅವುಗಳ ಅನುವಾದಗಳ ಮೂಲಕ ಈ ದಿನಗಳಲ್ಲಿ ಸಂಸ್ಕೃತ ಭಾಷೆಯಲ್ಲಿರುವ ಅನರ್ಘ್ಯ ಸಾಹಿತ್ಯವನ್ನು ಜನಮನಕ್ಕೆ ಒಯ್ದು, ಹೃದಯವನ್ನು ಸಂಸ್ಕರಿಸುವ ಕೆಲಸವನ್ನು ಕನ್ನಡವೇ ಆದಿಯಾಗಿ ಉಳಿದ ಪ್ರಾದೇಶಿಕ ಭಾಷೆಗಳು ಮಾಡುತ್ತವೆ. ಕೆಲವರು ಸಂಸ್ಕೃತವನ್ನು ಮೃತಭಾಷೆ ಎಂದಿದ್ದಾರೆ — ವ್ಯವಹಾರದಲ್ಲಿ ಇಲ್ಲ ಎಂಬ ಕಾರಣಕ್ಕೆ. ಆದರೆ ಸಂಸ್ಕೃತ ಎಂದೆಂದಿಗೂ ಜೀವಂತ ಭಾಷೆ. ಅದು ಕನ್ನಡ ಮುಂತಾದ ಭಾಷೆಗಳಲ್ಲಿನ ಅನುವಾದಗಳ ರೂಪದಲ್ಲಿಯಾದರೂ ಚಿರಂಜೀವಿಯಾಗಿ ಉಳಿಯುತ್ತದೆ.

ಒಂದು ಕಾಲದಲ್ಲಿ ಸಂಸ್ಕೃತಭಾಷೆಯಿಂದ ಪಡೆದ ಋಣವನ್ನು ಬೇರೊಂದು ರೂಪದಲ್ಲಿ ಕನ್ನಡ. ಅನುವಾದಗಳ ಮೂಲಕ ತೀರಿಸುತ್ತಿದೆ. ಈ ನಿಟ್ಟಿನಿಂದ ಅನುವಾದಗಳ ಪಾತ್ರ ಮಹತ್ತ್ವದ್ದು.

ಶ್ರೇಷ್ಠ ಅನುವಾದಕರಾದ ಶ್ರೀ ಪರಮೇಶ್ವರ ಭಟ್ಟರ ಹೆಸರು ಕನ್ನಡದ ಇತಿಹಾಸದಲ್ಲಿ ಹಲವಾರು ಕಾರಣಗಳಿಂದ ಉಳಿಯುತ್ತದೆಯಾದರೂ ಅನುವಾದಕರಾಗಿ, ತಾಯ್ನುಡಿಯ ಋಣ ಪರಿಹಾರಕರಾಗಿ ಅವರ ಸ್ಥಾನ ಅತ್ಯಂತ ಮಹತ್ತ್ವದ್ದು.

೨

'ಕವಿ ಕೌಮುದಿ'ಯು ಕಲ್ಯ ಲಕ್ಷ್ಮೀನರಸಿಂಹ ಕವಿಯಿಂದ ರಚಿತವಾದ ಸಂಸ್ಕೃತ ಸುಭಾಷಿತಗಳ ಸಂಕಲನ ಗ್ರಂಥ. "ಪ್ರೇಮಾರಾಧನ", "ಗಾಥಾಸಪ್ತಶತಿ", "ಭರ್ತೃಹರಿಯ ನೀತಿ ಶತಕ"ಗಳ ಸಾಲಿನಲ್ಲಿ ಶ್ರೀ ಪರಮೇಶ್ವರ ಭಟ್ಟರಿಂದ ಸಂಸ್ಕೃತದಿಂದ ಕನ್ನಡಿಸಲ್ಪಟ್ಟಿದೆ ಈ ಸಂಕಲನ. ಕನ್ನಡಿಸುವಲ್ಲಿ ಡಾ. ಕೆ. ಕೃಷ್ಣಮೂರ್ತಿಯವರ ಇದೇ ಗ್ರಂಥದ ಇಂಗ್ಲಿಷ್ ಅನುವಾದದ ನೆರವು ಪಡೆದಿರುವುದನ್ನು ಶ್ರೀ ಭಟ್ಟರು ಸ್ಮರಿಸಿಕೊಂಡಿದ್ದಾರೆ.

ಸಂಸ್ಕೃತದಲ್ಲಿ ಮಹಾಕಾವ್ಯ, ನಾಟಕಗಳ ಯುಗ ಮುಗಿದ ಅನಂತರ ಸುಮಾರು ೧೭–೧೮ನೆಯ ಶತಮಾನದಲ್ಲಿ ಈ ಲಘುಕಾವ್ಯವನ್ನು ಬರೆಯಲಾಯಿತು. ಈ ಮುಕ್ತಕಗಳು ಅನ್ಯೋಕ್ತಿ ಅಥವಾ ಅನ್ಯಾಪದೇಶಗಳೆಂದು ಕರೆಯಲ್ಪಡುತ್ತವೆ. ಇಲ್ಲಿರುವ ೧೪೭ ಮುಕ್ತಕಗಳು ಕೋಗಿಲೆ, ಕಾಗೆ, ಗೂಗೆ, ನವಿಲು, ಹಂಸ, ಸಿಂಹ, ಶರಭ, ನಾಯಿ, ನರಿ, ಕತ್ತೆ, ಕೋಣ, ಚಿಟ್ಟೆ, ಕೊಳ, ಮೋಡ, ಗಾಳಿ, ಸೂರ್ಯ, ಚಂದ್ರ, ಮರ, ಹೂವು ಇತ್ಯಾದಿಯಾದ ಪ್ರಕೃತಿಯ ವಿವಿಧ ಅಂಗಗಳನ್ನು ಉದ್ದೇಶಿಸಿ ಕಟ್ಟಿದ ಕವಿತೆಗಳಾಗಿವೆ. ಆದರೆ ಆ ಪ್ರಾಣಿಗಳನ್ನು ಬಣ್ಣಿಸುತ್ತ ಮನುಷ್ಯನ ಸ್ವಭಾವವನ್ನು ಚಿತ್ರಿಸುವುದೇ ಈ ಅನ್ಯೋಕ್ತಿಗಳ ಮೂಲ ಉದ್ದೇಶ. ಅನ್ಯೋಕ್ತಿಗಳು ತಮ್ಮ ಮರೆಯಲ್ಲಿ ಇನ್ನೊಂದು ವಸ್ತುವನ್ನು ಸೂಚಿಸುವ, ಹೋಲುವ ವಸ್ತುವಿನ ವಿವರಣೆಗಳು ......"description of a subject under guise of some other subject of aptly suggestive resemblance." ಹೂವು ಹಣ್ಣುಗಳನ್ನು, ಹಂಸನವಿಲುಗಳನ್ನು, ಸಂಬೋಧಿಸುತ್ತಾ ಆ ಕಾಲದ ಸಮಾಜ ಜೀವನವನ್ನು ಧ್ವನಿಸುವುದೇ ಈ ಅನ್ಯೋಕ್ತಿಗಳ ಉದ್ದೇಶ.

ಈಕೆ ಕೋಕಿಲಕುಲನಾಯಿಕೆ ತನ್ನೊಳ–
ಕಾರಣ ಕರುಣಳಿಂದೇಕೆ
ಕಟುರವಗಳ ಕೇಳಿ ಉರಿದಿದ್ದ ಕಿವಿಗಳ
ನೋವಾರಿತಿವಳ ಇಂಚರಕೆ

ಎಂಬ ಈ ಅನ್ಯೋಕ್ತಿಯನ್ನು ಪರಿಶೀಲಿಸಬಹುದು. ಇಲ್ಲಿ ಮೇಲುನೋಟಕ್ಕೆ ಕೋಗಿಲೆಯೊಂದರ ಇಂಚರದಿಂದ ಕಟುರವಗಳನ್ನು ಕೇಳಿ ಉರಿದಿದ್ದ ಕಿವಿಯ ನೋವು ಮಾಯವಾಯಿತು ಎಂಬ ಉಕ್ತಿಯಿದೆ. ಈ ಉಕ್ತಿ ಒಂದು ನಿಟ್ಟಿನಿಂದ ಮಧುರಕಂಠದ ಕೋಗಿಲೆಯ ವರ್ಣನೆ. ಕೋಗಿಲೆಯ ಹಾಡು ಆನಂದವನ್ನು ನೀಡುತ್ತದೆ ಎಂಬುದನ್ನು ಸುತ್ತಿ ಬಳಸಿ ಹೇಳಲಾಗಿದೆ. ಆದರೆ ಇಲ್ಲಿನ ಮುಖ್ಯವಾದ ಭಾವ ಬೇರೆಯೇ ಇದೆ. ಕವಿ ಕೋಗಿಲೆಯನ್ನು ಸುಕವಿಗೆ ರೂಪಕವಾಗಿ ಉಪಯೋಗಿಸಿಕೊಂಡಿದ್ದಾನೆ. ಕವಿಗಳಂತೆ ನಟಿಸುವವರು, ಕೆಟ್ಟ ಕವಿಗಳು ಮುಂತಾದವರ ಆಕ್ರಮಣದಿಂದಾಗಿ (ಇವರನ್ನು ಕಾಗೆಯ ರೂಪಕದಿಂದ ಕವಿ ಚಿತ್ರಿಸುತ್ತಾನೆ) ಸುಕವಿಗಳು ಮರೆಗೆ ತಳ್ಳಲ್ಪಡುತ್ತಾರೆ. ಆದರೂ ಒಮ್ಮೊಮ್ಮೆ ಅನಿರೀಕ್ಷಿತವಾಗಿ ಒಳ್ಳೆಯ ಕವಿತೆಯನ್ನು ಕೇಳಿದಾಗ ಅಂದಿನ ವರೆಗೆ ಕೆಟ್ಟ ಕವಿತೆಗಳನ್ನು ಕೇಳಿ ಆದ ನೋವು ಮಾಯವಾಗುತ್ತದೆ. ಕಿರಿದರಲ್ಲಿ ಹಿರಿದರ್ಥವನ್ನು ಹೇಳುವ ಈ ಮುಕ್ತಕಗಳು ಕಾವ್ಯದಲ್ಲಿನ ಸಂಕ್ಷಿಪ್ತತೆಗೆ ಮಾದರಿಯಾಗಿ ನಿಲ್ಲುತ್ತವೆ.

'ಕವಿ ಕೌಮುದಿ'ಯಲ್ಲಿ ಇಂತಹ ಅನೇಕ ಮುಕ್ತಕಗಳಿವೆ. ಕವಿ ತಾನು ಕಂಡ, ಉಂಡ ಅನುಭವಗಳನ್ನು, ಸಮಾಜದ ಓರೆಕೋರೆಗಳನ್ನು ಈ ಅನ್ಯೋಕ್ತಿಗಳಲ್ಲಿ ಸೆರೆಹಿಡಿದಿದ್ದಾನೆ. ಅವುಗಳು ಹೊಸ ಬೆಳಕನ್ನು, ಹೊಸ ದೃಷ್ಟಿಯನ್ನು ನಮಗೆ ನೀಡುತ್ತವೆ. ಸಿಂಹದ ವ್ಯಾಜದಿಂದ ಅರಸನ್ನು, ಅಧಿಕಾರಿಗಳನ್ನು ಕವಿ ಹೀಗೆ ಚಿತ್ರಿಸುತ್ತಾನೆ.

'ಮೃಗಗಳೆ ಅಳಲೇಕೆ' 'ಮರಿಗಳ ನೀ ಕೊಂದೆ'
'ನನಗಾಗಿ ಹೀಗೆ ರೋದಿಪುದೆ'
'ದೇವರು ನಿನ್ನನೆ ದೊರೆಮಾಡಿ ಕಳುಹಿದು-
ದೇಕೆಂದು ಅಳುತಿಹೆವಿಂದು ?'

ಸಮಯಾಸಮಯವರಿಯದೆ ಪ್ರತಿಯೊಂದು ಕಾಲದಲ್ಲಿಯೂ ನಿಂದಿಸುತ್ತಿರುವ ವಿಮರ್ಶಕರನ್ನು ಕುರಿತು ಈ ರೀತಿಯ ಅನ್ಯೋಕ್ತಿಯಿದೆ.

ಹಂಸವು ದಿವಿಗೆ ಹೋಗುವವರೆಗಾದರು
ಕಾಗೆಯೆ ಬಾಯ್ದೆರೆಯದಿರು.

ಅಲ್ಲದೊಡಿಳೆಯೊಳು ಖಗರವ ಕಟುವೆಂದು
ಅಲ್ಲಿ ಹಂಸವು ಹೇಳಬಹುದು.

ನವಿಲು ಕುಣಿಯುತ್ತಿದ್ದು ಕೆಂಬೂತ ಪಕ್ಕ ಕೆದರುವ ಪ್ರವೃತ್ತಿಗೆ ಒಳಿತನ್ನು ಕಂಡು ಮತ್ಸರಿಸುವುದಕ್ಕೆ ಇಲ್ಲಿ ಒಂದು ಅನ್ಯೋಕ್ತಿಯಿದೆ.

ನದಿ ನಿಮಿರುವ ತೆರನಿಸಿದನಿದೋರುತೆ
ಅರಸಂಚೆಯುಲಿವುದ ಕೇಳಿ
ಗೆಲ್ಲುವೆನಿದನೆಂದು ಗೂಗೆ ಗೂಗುಟ್ಟುತೆ
ಬರೆ ಕಲಿ ದೂರವೆ ಹೇಳಿ.

ನಾವು ಈ ಮುಕ್ತಕಗಳಲ್ಲಿ ಗಮನಿಸಬೇಕಾದ ಅಂಶ ಇಲ್ಲಿರುವ ಕವಿಹೃದಯವನ್ನು ವ್ಯಂಗ್ಯವನ್ನು ಕೂಡಾ ಕಾವ್ಯದ ಹೊರಲೇಪದಲ್ಲಿ ಹೆಚ್ಚು ಕಟುವಾಗದಂತೆ ಕವಿ ಹೇಳಿದ್ದಾನೆ. ಆ ನುಡಿಗಳು ನವಿರಾಗಿದ್ದರೂ, ಸಂಸ್ಕರಿಸಲ್ಪಟ್ಟಿದ್ದರೂ ನೇರವಾಗಿ ಗುರಿಮುಟ್ಟುವುದು ಸ್ಪಷ್ಟ ನೈಜವಾದ ವಿವರಗಳು, ವರ್ಣನೆಗಳು, ಮಾತಿನಲ್ಲಿ ಹಾಸ್ಯದ ಲೇಪ ಈ ಮುಕ್ತಕಗಳನ್ನು ಬಹಳಷ್ಟು ಸುಂದರಗೊಳಿಸಿದೆ. ಇಲ್ಲಿನ ಅಲಂಕಾರಗಳು ಸಹಜವಾಗಿದ್ದು ನಮ್ಮ ಭಾವನೆಗಳನ್ನು ತಟ್ಟುವುದರಿಂದ ಕೇವಲ ಅಲಂಕಾರಕ್ಕಾಗಿ ಬಂದ ಅಲಂಕಾರವಾಗಿ ಉಳಿಯುವುದಿಲ್ಲ. ಮಹಾಕಾವ್ಯಗಳಂತೆ ಗಂಭೀರವಾದ ವಸ್ತುವನ್ನು ಆಯ್ದುಕೊಳ್ಳದೆ ಸರಳ ವಿಚಾರಗಳನ್ನು ನಿರೂಪಿಸುವ ಈ ಅನ್ಯೋಕ್ತಿಗಳು ಸಹೃದಯನನ್ನು ಸುಲಭವಾಗಿ ಮುಟ್ಟುತ್ತವೆ.

ಇಲ್ಲಿನ ಮುಕ್ತಕಗಳು ಹಂಸವನ್ನೂ, ಬಿದಿರನ್ನೂ, ಕಾಗೆಯನ್ನೂ. ವರ್ಣಿಸುವಂತೆ ಕಂಡರೂ ಇವುಗಳ ಅಂತರರ್ಥ ಬೇರೆ. ಈ ಮುಕ್ತಕಗಳ ಮತ್ತೊಂದು ವಿಶೇಷವೆಂದರೆ—ಈ ಮುಕ್ತಕಗಳು ಯಾವುದನ್ನು ಮೇಲುನೋಟಕ್ಕೆ ವರ್ಣಿಸುತ್ತಿರುವಂತೆ ಭಾಸವಾಗುತ್ತಿವೆಯೋ ಅದಕ್ಕೆ ಸರಿಯಾಗಿ ಹೊಂದಿಕೊಳ್ಳುವುದರ ಜೊತೆ ಜೊತೆಯಲ್ಲಿಯೇ ಅದು ಧ್ವನಿಸುವ ಮಾನವಗುಣಕ್ಕೂ ಸರಿಯಾಗಿ ತಾಳೆಯಾಗುವುದು.

ಹಸನಾದ ನಗೆಯಿಂದೆ ಮಿದುವಾದ ಉಲಿಯಿಂದೆ
ಕಡಲು ಸೊಂಪಾಗಿದೆ ಹೊರಗೆ
ಒಂದನೊಂದುರೆ ನುಂಗುವಂಥ ಜಲಚರದಿಂದೆ
ಒಡಲು ಬಿಸುಪೇರಿದೆ ಒಳಗೆ.

ಈ ಮುಕ್ತಕ ಕಡಲನ್ನು ವರ್ಣಿಸುತ್ತಿದೆ. ಇಲ್ಲಿ ಹೇಳಲ್ಪಡುವ ವಿವರಗಳು ಸಮುದ್ರದ ಗುಣಗಳೊಂದಿಗೆ ಸಮಾನಧರ್ಮಿಗಳಾಗಿದ್ದು ಕಡಲಿನ ಚಿತ್ರವನ್ನು ನೀಡುತ್ತವೆ. ಅದೇ ರೀತಿಯಲ್ಲಿ ಹೊರಗೆ ನಯವಾದ, ಆತ್ಮೀಯ ಮಾತುಗಳನ್ನು ಆಡಿ ಒಳಗೆ ಅಸೂಯೆಯ ಜ್ವಾಲಾಮುಖಿಗಳನ್ನು ಒಳಗೊಂಡಿರುವ ಮನುಷ್ಯರಿಗೂ ಅನ್ವಯಿಸುತ್ತದೆ.

ಸಂಸ್ಕೃತ ಸಾಹಿತ್ಯದಲ್ಲಿ ವಿಪುಲವಾಗಿರುವ ಈ ಮುಕ್ತಕಗಳನ್ನು ಕನ್ನಡಕ್ಕೆ ಅನುವಾದಿಸುವಾಗ ಸಾಂಗತ್ಯವನ್ನು ಸಮರ್ಥವಾಗಿ ಮತ್ತು ಸಾರ್ಥಕವಾಗಿ ಬಳಸಬಹುದು ಎಂಬುದನ್ನು ಶ್ರೀ ಭಟ್ಟರು ಇಷ್ಟರಲ್ಲೇ ಸಾಧಿಸಿ ತೋರಿಸಿದ್ದಾರೆ. 'ಕವಿ ಕೌಮುದಿ'ಯನ್ನು ಕನ್ನಡಿಸುವಾಗ ಬಳಸಿಕೊಂಡಿರುವುದು ಮಾತ್ರಾಗಣಕ್ಕೆ ತಿರುಗಿರುವ ಕನ್ನಡದ ಗೇಯ ಮಟ್ಟಾದ ಸಾಂಗತ್ಯವನ್ನು. ಸಂಸ್ಕೃತದ ಸಮವೃತ್ತಗಳಿಗೆ ಸಂವಾದಿಯಾಗಿ ಸಾಂಗತ್ಯವನ್ನು ಬಳಸುವಾಗ ಒಂದು ಅಂಶವನ್ನು ಗಮನಿಸಬೇಕಾಗುತ್ತದೆ. ಆ ದೊಡ್ಡ ಸಮವೃತ್ತಕ್ಕಿರುವ ಹರಹು ಈ ಪುಟ್ಟ ಸಾಂಗತ್ಯಕ್ಕೆ ಇರುವುದಿಲ್ಲ. ಅದರಿಂದ ಮೂಲದಲ್ಲಿರುವ ಎಲ್ಲ ವಿವರಗಳನ್ನು ಅನುವಾದದಲ್ಲಿ ಛಂದಸ್ಸಿನ ಚೌಕಟ್ಟಿನ ಒಳಗೆ ಮೂಡಿಸುವುದು ಕಷ್ಟಸಾಧ್ಯವಾಗುತ್ತದೆ.

ಖಿಣಿಯ ಸುಭಾಷಿತವನ್ನು ನಾವು ಒಂದು ಉದಾಹರಣೆಯಾಗಿ ಸ್ವೀಕರಿಸಬಹುದು. ಈ ಶರಭವನ್ನು ಕುರಿತ ಅನ್ಯೋಕ್ತಿಯನ್ನು ಡಾ. ಕೆ. ಕೃಷ್ಣಮೂರ್ತಿಯವರು ಕೆಳಗಿನಂತೆ ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ.

O small beasts, give up your flight.
Stop, I say, you pack off deer-killers;
Run, tigers, run, you cant face me;
Where is your king, the lion, and where his den
That is littered with sparkling pearls
Dropped from the cheeks of elephants killed,
With paws as strong as the thunder bolt.

ಅದೇ ಮುಕ್ತಕವು ಕನ್ನಡದಲ್ಲಿ ಹೀಗಾಗಿದೆ:

ಹುಲುಜೀವಿಗಳೆ ನಿಲ್ಲಿ, ಮೃಗರಾಜನಿಹನೆಲ್ಲಿ
ಶರಭನು ನಾ ಬಂದೆನಿಲ್ಲಿ.
ಮತ್ತೇಭಗಳ ಕೊಂದ ನಿಮ್ಮ ಕಂಠೀರವ
ಗವಿಯೊಳಗೆಲ್ಲವಿತಿರುವ ?

ಇದನ್ನು ಓದಿದಾಗ ಮೊದಲ ನೋಟಕ್ಕೆ ಹೊಳೆಯುವ ಅಂಶ ಅನುವಾದದಲ್ಲಿನ ಸಂಕ್ಷಿಪ್ತತೆ. ಅನಾವಶ್ಯಕವಾದ ಯಾವ ವಿವರವೂ ಇಲ್ಲಿಲ್ಲ. ಹಲವು ಪದಗಳು, ವಿವರಗಳ ಪದರ ಪದರಗಳು ಇಲ್ಲಿ ಇಲ್ಲವಾದರೂ ಮೂಲಭಾವವು ಯಾವ ಚ್ಯುತಿಯೂ ಇಲ್ಲದೆ ಸುಂದರವಾಗಿ ಮರು ಮೂಡಿದೆ. ಬಹುಪಾಲು ಎಲ್ಲ ಅನುವಾದಿತ ಮುಕ್ತಕಗಳಿಗೆ ಈ ಮಾತು ಸತ್ಯ. ನಾವು ಅನುವಾದದಲ್ಲಿ ಬಯಸುವುದು ಪದಶಃ ಅನುವಾದಕ್ಕಿಂತಲೂ ಮೂಲಭಾವವನ್ನು.

ಅನುವಾದಗಳನ್ನು ಮಾಡುವಾಗ ಸಹಜವಾಗಿ ಎದುರಿಸಬೇಕಾಗುವ ಕೆಲವು ಸಮಸ್ಯೆಗಳಿವೆ. ಮೂಲಭಾವವನ್ನು ಸುಂದರವಾಗಿ ಮೂಡಿಸಬಹುದಾದರೂ ಮೂಲರೂಪದಲ್ಲಿರುವ ನಾದವನ್ನು ಅನುವಾದಿತ ಕವನದಲ್ಲಿ ಬಯಸುವುದು ತಪ್ಪಾಗುತ್ತದೆ. ನಾಟಕ, ದೀರ್ಘಕಾವ್ಯ ಇತ್ಯಾದಿಗಳಲ್ಲಿ ಈ ನಾದಸಂಪತ್ತು, ಉಚಿತ, ವಿಶಿಷ್ಟಪದಸಂಪತ್ತು ಅಗತ್ಯವಾಗಿ ಅನುವಾದದಲ್ಲೂ ಇರಬೇಕಾಗುತ್ತದೆ. ಅನ್ಯೋಕ್ತಿ ಮತ್ತು ವಿಡಂಬನೆಗಳಂಥವುಗಳಲ್ಲಿ ಈ ನಾದಕ್ಕೆ ಹೆಚ್ಚಿನ ಸ್ಥಾನವಿಲ್ಲ. ಆದರೆ ಅವುಗಳೂ ಕವನವಾಗಿರುವುದರಿಂದ ಯಥೋಚಿತವಾಗಿ 'ನಾದ'ವನ್ನೂ ಉತ್ತಮ ಅನುವಾದಗಳಲ್ಲಿ ಕಾಣುತ್ತೇವೆ. ಅನುವಾದಗಳಲ್ಲಿ ಈ ರೀತಿಯ ನಾದವನ್ನು ತರುವುದರಲ್ಲಿಯೂ ಶ್ರೀ ಭಟ್ಟರು ಭಾಗಶಃ ಸಿದ್ಧಿಯನ್ನು ಪಡೆದಿದ್ದಾರೆ ಎಂಬುದು ಈ ಅನುವಾದದ ಶ್ರೇಷ್ಠತೆಗೆ ಜ್ವಲಂತ ಸಾಕ್ಷಿಯಾಗುತ್ತದೆ.

ಮಲಯಾಚಲನಿಲಯಾನಿಲ-
ವಿಲಯಂ ಕಲಯೆತ ನಾಮ ಪವನಾಶಃ ।
ಗರುಡಸ್ಯ ಕಥಂ ಗರುತಾಂ
ಮರುತಾಂ ಕುರುತಾಂ ಭಯಂ ಪ್ರಚಂಡರುತಾವ್ ॥

ಎಂಬ ಈ ೨೮ನೆಯ ಸುಭಾಷಿತವನ್ನು

ಆ ಮಲಯಾಚಲನಿಲಯದನಿಲನನು
ಕಬಳಿಸಬಹುದು ಉರಗನು
ಗರುಡಗೆರಂಕೆಯ ಚಂಡಮಾರುತನನು
ತವಿಸಲೆಂತಾರ್ಪನು ತಾನು

ಹೀಗೆ ಅನುವಾದಿಸಲಾಗಿದೆ. ಇಲ್ಲಿ ಮೂಲಭಾವದ ಜೊತೆಯಲ್ಲಿಯೇ ನಾದವೂ ಸ್ಪಷ್ಟವಾಗಿ ಮೂಡಿರುವುದನ್ನು ಗಮನಿಸಬಹುದು. ಒಂದೇ ಸಾಂಗತ್ಯದ ಒಳಗೆ ಅಡಕಗೊಳಿಸಲಾಗದ ಸುಭಾಷಿತಗಳನ್ನು ಎರಡಾಗಿ ಒಡೆದು ಎರಡು ಸಾಂಗತ್ಯವಾಗಿಸಿರುವುದಕ್ಕೂ ಉದಾಹರಣೆಗಳಿವೆ.

ಕನ್ನಡದ ದೇಸಿಯ ಮಟ್ಟಾದ ಸಾಂಗತ್ಯದ ಬಳಕೆ. ದೇಸಿ ಬೆರೆತ ಕನ್ನಡ ಭಾಷೆಯ ಬಳಕೆ ಅನುವಾದವನ್ನು ಹೆಚ್ಚು ಸಹಜವಾಗಿಸಿದೆ. ಕನ್ನಡದ ಮಣ್ಣಿನ ಗುಣಕ್ಕೆ ಸಮೀಪವರ್ತಿಯಾಗುವಂತೆ ಮಾಡಿದೆ. ಮೂಲದ ಭಾವಕ್ಕೆ ಚ್ಯುತಿಯಿಲ್ಲದೆ, ಮೂಲದ ಪಾಠದೊಂದಿಗೆ ಓದಿದಾಗ ಮೂಲವು ನೀಡುವ ಅನುಭವವನ್ನೇ ನೀಡುವ ಈ ಅನುವಾದ ಉತ್ತಮ ಅನುವಾದಕ್ಕೊಂದು ಮಾದರಿ. ಪ್ರತಿಭಾವಂತನಾದ ಸಹಜಕವಿಯೊಬ್ಬ ಅನುವಾದಕನಾದಲ್ಲಿ ಆಗಬಹುದಾದ ಉಪಯೋಗಗಳಿಗೆ, ಉಪಕಾರಕ್ಕೆ 'ಕವಿ ಕೌಮುದಿ' ಉದಾಹರಣೆ. 'ಕವಿ ಕೌಮುದಿ'ಯನ್ನು ಇಡಿಯಾಗಿ ಪರಿಶೀಲಿಸಿದಾಗ ನಾವು ಕಂಡುಕೊಳ್ಳುವ ಅಂಶ ಇದೊಂದು ಉತ್ತಮ ಅನುವಾದ ಎಂಬುದು.

# ೩೯. "ಪ್ರಬಂಧಗಳು" ಒಂದು ಸಮೀಕ್ಷೆ

ನಾಗಮ್ಮ

ಕನ್ನಡ ಸಾಹಿತ್ಯವನ್ನು ಸಂಪದ್ಭರಿತಗೊಳಿಸಲು ಅನೇಕಮಂದಿ ದುಡಿದಾರು ಹಗಲಿರುಳೂ ಶ್ರಮಿಸಿದ್ದಾರೆ. ಪ್ರತಿಭಾವಂತರನೇಕರು ಸ್ವತಂತ್ರವಾಗಿ ಕಥೆ, ಕಾದಂಬರಿ, ಕವನಗಳನ್ನು ಸೃಷ್ಟಿಸಿ ಕನ್ನಡಕ್ಕೆ ಧಾರೆ ಎರೆದಿದ್ದಾರೆ. ಮತ್ತೆ ಕೆಲವರು ಅನ್ಯಭಾಷೆಯ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದಿಸಿ ಕನ್ನಡ ಸಾಹಿತ್ಯವನ್ನು ಪುಷ್ಟಿಗೊಳಿಸಿದ್ದಾರೆ. ಇರುವ ಸಾಹಿತ್ಯವನ್ನು ವಿಮರ್ಶಿಸಿ ಯಾವುದು ಒಳ್ಳೆಯದು, ಯಾವುದು ಕೆಟ್ಟದು ಎಂಬುದನ್ನು ಸಹೃದಯರಿಗೆ ತೋರಿಸಿಕೊಟ್ಟು, ವಿಮರ್ಶೆಯ ಸಾಹಿತ್ಯವನ್ನು ಬೆಳೆಸಿದವರು ಅನೇಕಮಂದಿ ಇದ್ದಾರೆ. ಇಂತಹ ಮೂರು ರೀತಿಯಲ್ಲೂ ಸಾಹಿತ್ಯ ಸೇವೆಯನ್ನು ಸಲ್ಲಿಸಿದ ಕೆಲವೇ ಮಹನೀಯರಲ್ಲಿ ಶ್ರೀಯುತ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರೂ ಒಬ್ಬರು. ಅವರು ಕನ್ನಡ ವಾಙ್ಮಯದ ಕೊರಳಿಗೆ ಹಾಕಿದ ಪುಸ್ತಕಗಳ ಮಾಲೆಯಲ್ಲಿ ಒಂದು ಸುಂದರ ಸುಗಂಧಿತ ಪುಷ್ಪ "ಪ್ರಬಂಧಗಳು" ಎಂಬುದು. ಅದನ್ನು ಕುರಿತು ಈ ಲೇಖನದಲ್ಲಿ ನಾಲ್ಕು ಮಾತು ಹೇಳಿದೆ.

ಬೇರೆ ಕಡೆಗಳಲ್ಲಿ ಚೆದರಿಹೋಗಿದ್ದ ತಮ್ಮ ಐದು ಲೇಖನಗಳನ್ನು ಒಟ್ಟುಗೂಡಿಸಿ ಒಂದು ಪುಸ್ತಕ ರೂಪವಾಗಿ ಲೇಖಕರು ಇದನ್ನು ಕೊಟ್ಟಿದ್ದಾರೆ. 'ಪ್ರಬಂಧ' ಎಂಬ ಸಂಸ್ಕೃತ ಮಾತಿಗೆ, 'ವಿಶೇಷವಾಗಿ ಕಟ್ಟಲ್ಪಟ್ಟದ್ದು' ಎಂಬ ಅರ್ಥ. ಈ ಅರ್ಥದಲ್ಲಿ ಈ ಹೊತ್ತಿಗೆಯ ಎಲ್ಲಾ ಲೇಖನಗಳೂ ಪ್ರಬಂಧಗಳು. ಇವುಗಳಲ್ಲಿ ಮೊದಲನೆಯ ಪ್ರಬಂಧ "ಕುಮಾರ ಸಂಭವದಲ್ಲಿ ಪಾರ್ವತೀ ಪರಮೇಶ್ವರರ ಸಂವಾದ." ಪ್ರಬಂಧದ ಆರಂಭದಲ್ಲಿಯೇ ಲೇಖಕರು "ಪಾರ್ವತೀ ಪರಮೇಶ್ವರರ ಸಂವಾದದ ಸ್ವಾರಸ್ಯವನ್ನು ಕುರಿತು" ಪ್ರಬಂಧದಲ್ಲಿ ಪ್ರಸ್ತಾಪಿಸುವುದಾಗಿ ಹೇಳಿದ್ದಾರೆ. ಮಹಾಕವಿ ಕಾಳಿದಾಸನ ಹೆಸರು ಕೃತಿಗಳ ಬಗ್ಗೆ ಅರಿಯದವರು ವಿರಳ. ಅಂತಹ ಮಹಾಕವಿಯ ಎಲ್ಲ ಕೃತಿಗಳನ್ನು ಕನ್ನಡಿಸಿ ಎಲ್ಲ ಕನ್ನಡಿಗರ ಕೃತಜ್ಞತೆಗೆ ಲೇಖಕರು ಪಾತ್ರರಾಗಿದ್ದಾರೆ. ಆದ್ದರಿಂದ ಕಾಳಿದಾಸನ ಕೃತಿಗಳನ್ನು ಕುರಿತು, ಅಲ್ಲಿ ಬರುವ ಸನ್ನಿವೇಶಗಳನ್ನು ಕುರಿತು ಚರ್ಚಿಸಲು, ಈ ಕನ್ನಡದ ಕಾಳಿದಾಸರಿಗಿಂತ ಸಮರ್ಥರಾದವರು ಬೇರಾರು ? ಕಾಳಿದಾಸನಂತಹ ಮಹಾಕವಿಯ ಕೃತಿಗಳು ರಸಗಟ್ಟಿಗಳು. ಅವುಗಳಲ್ಲಿ ಬರುವ ಅಸಂಖ್ಯ ಸ್ವಾರಸ್ಯಗಳನ್ನು ಸರಿಯಾಗಿ ಸವಿಯಬೇಕಾದರೆ ಒಂದೊಂದು ಕೃತಿಯನ್ನು ಬೇರೆ ಬೇರೆ ದೃಷ್ಟಿಗಳಿಂದ ನೋಡಿ ಅಭ್ಯಾಸಿಸಬೇಕಾಗುತ್ತದೆ. ಈ ಪ್ರಬಂಧದಲ್ಲಿ ಲೇಖಕರು ಒಂದು ದೃಷ್ಟಿಯಿಂದ 'ಕುಮಾರಸಂಭವ'ವನ್ನು ನೋಡಿ, ಅದರಲ್ಲಿರುವ ಸ್ವಾರಸ್ಯವನ್ನು, ಓದುಗರಿಗೆ ಸ್ವಾರಸ್ಯವುಂಟಾಗುವ ರೀತಿಯಲ್ಲಿ ಹೇಳಿದ್ದಾರೆ.

ಪಾರ್ವತೀ ಪರಮೇಶ್ವರರ ನಡುವೆ ಆಗುವ ಸಂವಾದವನ್ನು ಕೊಟ್ಟಿದ್ದಾರೆ. ಕೇವಲ ಸಂವಾದವನ್ನೇ ಹೇಳಿದರೆ ಅದರಲ್ಲಿರುವ ಸ್ವಾರಸ್ಯವನ್ನು ಹೇಳಿದಂತಾಗುವುದಿಲ್ಲ. ಆ ಸಂವಾದದ ಸ್ವಾರಸ್ಯವನ್ನು ಹೇಳುವ ಅನೇಕ ಮಾತುಗಳು ಪ್ರಬಂಧದಲ್ಲಿವೆ. ಈಶ್ವರನ ಮೊದಲ ಮಾತಿನಲ್ಲಿರುವ ಸ್ವಾರಸ್ಯ, "ಪಾರ್ವತಿಯ ರೂಪವರ್ಣನೆ, ಶೀಲವರ್ಣನೆ, ಕುಲ, ಐಶ್ವರ್ಯ, ಯೌವನಗಳ ಮಾತು; ಇಷ್ಟೆಲ್ಲ ಇದ್ದು ಏಕೆ ತಪಸ್ಸು ಎಂಬ ಜಿಜ್ಞಾಸೆ, ತಪಸ್ಸಿಗೆ ತನ್ನದೇ ಆದ ಊಹೆಗಳು ಹೀಗೆ ಕ್ರಮ ಕ್ರಮವಾಗಿ ಮಾತು ಬೆಳೆಯಿಸಿ ವಟು 'ವರ'ನ ಪ್ರಸ್ತಾಪ ತೆಗೆದು ಆ ವರನ ಟೀಕೆ ಬೆಳೆಯಿಸಿ ತನ್ನ ತಪಸ್ಸಿನಿಂದ ಅವನನ್ನು ಪಡೆ ಎಂಬಲ್ಲಿಯವರೆಗೆ ಮಾತು ಬಂದುನಿಲ್ಲುತ್ತದೆ. 'ಉತ್ಪಲಾಕ್ಷಿ,' 'ಉದಾರ ದರ್ಶನೆ,' 'ಭಾಮಿನೀ,' 'ಸಂನತಗಾತ್ರೀ,' 'ಬಹುಕ್ಷಮೆ,' 'ತಪೋಧನೆ,' 'ಕೃಶೋದರಿ,' 'ಸುಭ್ರೂ,' 'ಗೌರಿ' ಎಂದು ಕ್ರಮವಾಗಿ ಮಾತಿನ ನಡುನಡುವೆ ಪಾರ್ವತಿಯನ್ನು ಸಂಬೋಧಿಸಿ ಕೊನೆಗೆ ಹೆಸರು ಹಿಡಿದು ಕರೆದು ಮಾತು ಮುಗಿಸುತ್ತಾನೆ ಈಶ್ವರ. ಪಾರ್ವತಿಯನ್ನು ಪರೋಕ್ಷವಾಗಿ ಹೊಗಳುವುದೂ ತನ್ನನ್ನು ನಿಂದಿಸುವುದೂ ಮಾತಿನ ಉದ್ದಕ್ಕೂ ನಡೆಯುತ್ತದೆ. ತನ್ನ ಇಂಗಿತವನ್ನು ತುಂಬ ಗೋಪ್ಯವಾಗಿ ಬಹಿರಂಗಪಡಿಸುವ ಚಮತ್ಕಾರ ಇಲ್ಲಿದೆ." ವಟುರೂಪಧಾರಿಯಾದ ಶಿವ, ಪಾರ್ವತೀಪರಮೇಶ್ವರರಿಗೆ ಇರುವ ರೂಪ, ಯೌವನ, ಅಂತಸ್ತು, ಕುಲ ಇವುಗಳ ಅಂತರವನ್ನು ಹೇಳಿದಾಗ ಪಾರ್ವತಿ ಒಂದು ಮಾತನಾಡುತ್ತಾಳೆ. "ನೀನು

ವರ್ಣಿಸಿದ ಆ ಪರನಲ್ಲಿಯೇ ನನ್ನ ಮನಸ್ಸು ಬೇರೂರಿದೆ. ಭಾವೈಕರಸದಿಂದ ನನ್ನ ಮನಸ್ಸು ಅವನಲ್ಲಿ ನೆಲಸಿದೆ. ಸ್ವೇಚ್ಛಾಚಾರಿಗಳು ಲೋಕದ ನಿಂದೆಯನ್ನು ಗಣಿಸುವುದಿಲ್ಲವಲ್ಲವೆ?" ಎಂದು ಈ ಮಾತಿನ ಸ್ವಾರಸ್ಯ: "ಪಾರ್ವತಿಯ ಈ ಮಾತು ಪ್ರೇಮದ ದೊಡ್ಡ ತತ್ತ್ವವನ್ನು ಮಂಡಿಸುತ್ತದೆ. ಭಾವೈಕರಸದಿಂದ ನನ್ನ ಮನಸ್ಸು ಅವನಲ್ಲಿ ನೆಲಸಿದೆ ಎನ್ನುವುದು ಇಲ್ಲಿ ಮುಖ್ಯ. ಸತಿಪತಿಗಳು ವಿದ್ಯೆ ಬುದ್ಧಿ ಶಕ್ತಿ ಸಾಮರ್ಥ್ಯ ಶ್ರೀಮಂತಿಕೆ ಪದವಿ ಪ್ರಶಸ್ತಿ ರೂಪಕುಲ ಇತ್ಯಾದಿಗಳನ್ನು ಗಮನಿಸಿ ಒಬ್ಬರನ್ನೊಬ್ಬರು ಪ್ರೀತಿಸುವುದಿಲ್ಲ. ನಿಜವಾದ ಪ್ರೀತಿ ಆತ್ಮ ಆತ್ಮಗಳ ಬೆಸುಗೆಗೆ ಸಂಬಂಧಪಟ್ಟದ್ದು. ಈ ಭಾವದ ಏಕಮನವೇ ಪ್ರೇಮದ ಒರೆ. ಕಾಳಿದಾಸ ಈ ಮಾತನ್ನು ಈ ಸಂದರ್ಭದಲ್ಲಿ ಆಡಿಸಿ ಪ್ರಣಯ ವಿಷಯಿಕವಾದ ರಹಸ್ಯಮಂತ್ರವೊಂದನ್ನು ಬಯಲುಗೈದಂತಾಗಿದೆ." ಈಶ್ವರನ ಮಾತುಗಳಿಗೆ ಉತ್ತರಿಸಿದ "ಪಾರ್ವತಿಯ ಮಾತುಗಳಿಂದ ತಿಳಿದು ಬರುವ ಸಂಗತಿ"ಯನ್ನು ಪ್ರಬಂಧದ ಕೊನೆಯಲ್ಲಿ ಈ ರೀತಿ ಹೇಳಿದ್ದಾರೆ. "ಪಾರ್ವತಿ ಶಿವನಲ್ಲಿ ಯಾವ ಲೋಪವನ್ನೂ ದೋಷವನ್ನೂ ಕಾಣಲಿಲ್ಲ. ಯಾವ ಅನನುಕೂಲಗಳೂ ಕಷ್ಟನಷ್ಟಗಳೂ ಅವಳಿಗೆ ಹರನ ಸಂಬಂಧದಲ್ಲಿ ಕಾಣಲಿಲ್ಲ. ಪದವಿ, ಹಣ, ರೂಪ, ಯೌವನ, ಕುಲ ಇವುಗಳನ್ನು ಗಣಿಸದೆ ಶುದ್ಧವಾದ ಏಕೋಭಾವದಿಂದ ಪಾರ್ವತಿ ಪರಮೇಶ್ವರನನ್ನು ಚಿಂತಿಸಿದಳು. ಹೀಗೆ ಭಾವದೃಷ್ಟಿಯಿಂದಷ್ಟೇ ನೋಡಿದಾಗ, ಪ್ರೇಮದ ದೃಷ್ಟಿಯಿಂದಷ್ಟೇ ನೋಡಿದಾಗ ಕುರೂಪದೈನ್ಯಅಭಾವ ಎಂದು ಇತರರು ಭಾವಿಸಬಹುದಾದ ಅಂಶಗಳು ಮರೆಯಾಗುತ್ತವೆ. ಪಾರ್ವತಿಯ ಪ್ರೇಮ ಸಂಪತ್ತಿನ ಶಕ್ತಿ ಅಪಾರವಾದದ್ದು. ಅದು ಹರನ ಆನೆಯ ತೊವಲನ್ನು ಪಟ್ಟೆಯ ತೊವಲನ್ನಾಗಿ ಭಾವಿಸಬಲ್ಲುದು. ಪ್ರೇತವನವನ್ನು ನಂದನವನವನ್ನಾಗಿ ಕಲ್ಪಿಸಬಲ್ಲುದು. ಪ್ರೇಮವಿಲ್ಲದಿದ್ದಲ್ಲಿ ನಂದನವನವಿಹಾರವೂ ಪ್ರೇತವನವಿಹಾರವೇ ಆದೀತಲ್ಲವೆ? ಪ್ರೇಮದ ಮುಂದೆ ಈಶ್ವರನು ಸುಂದರನಾಗುತ್ತಾನೆ. ಪ್ರೇಮದ ತಪಸ್ಸಿಗೆ ತನ್ನನ್ನೇ ಮಾರಿಕೊಳ್ಳುತ್ತಾನೆ. ಪ್ರೇಮಕ್ಕೆ ಅಡಿಯಾಳಾಗುತ್ತಾನೆ. ಈ ಸಂವಾದದಲ್ಲಿ ಬರುವ ಮಾತುಗಳು ಹೇಗೆ ಪಾತ್ರೋಚಿತವಾಗಿವೆ ಎಂಬುದನ್ನು ಲೇಖಕರು ಸ್ಪಷ್ಟಪಡಿಸಿದ್ದಾರೆ. "ಇಲ್ಲಿ ಪ್ರೇಮ ಭಾವನೆಯ ಚಿಂತನೆಯಿಂದ ಈಶ್ವರನನ್ನು ಕುರಿತು ಪರಿಭಾವಿಸಿದ ಈ ತಪಸ್ವಿನಿಯ ಅಮರವೂ ಅಚ್ಯುತವೂ ಅನಂತವೂ ಆತ್ಮೀಯವೂ ಅಕಳಂಕವೂ ಆದ ಭಕ್ತಿಗೆ, ಸ್ನೇಹಕ್ಕೆ, ದಾಕ್ಷಿಣ್ಯಕ್ಕೆ, ಶ್ರದ್ಧೆಗೆ, ಸಹನೆಗೆ, ಸೌಜನ್ಯಕ್ಕೆ ಪರಮೇಶ್ವರನು ಸೋಲೊಪ್ಪಿಕೊಂಡು ಒಲಿದುಬಂದುದರಲ್ಲಿ ಆಶ್ಚರ್ಯವೇನಿದೆ?" ಎಂಬ ಪ್ರಬಂಧದ ಮಾತಿನಲ್ಲಿ ಸಂಪೂರ್ಣವಾಗಿ ಪಾರ್ವತಿ ಪ್ರಕಟಗೊಂಡಿದ್ದಾಳೆ.

ಈ ಸಂಕಲನದ ಎರಡನೆಯ ಪ್ರಬಂಧ 'ಗಾಥಾಸಪ್ತಶತಿಯಲ್ಲಿ ಶೃಂಗಾರದ ಚಿತ್ರಗಳು.' ಈ ಲೇಖನವನ್ನು ಕುರಿತು ಲೇಖಕರು, ಈ ಲೇಖನ ಆ ಶೃಂಗಾರಕವನಗಳನ್ನು ಕುರಿತ ಪರಿಚಯಕ್ಕೆ ಒಂದು ಕೈಗಂಬ" ಎಂದಿದ್ದಾರೆ. ಆ ಶೃಂಗಾರ ಕವನಗಳು ಎಂದರೆ ಗಾಥಾಸಪ್ತಶತಿಯಲ್ಲಿರುವ ಶೃಂಗಾರದ ಕವನಗಳು. ಗಾಥಾಸಪ್ತಶತಿ ಏಳುನೂರು ಬಿಡಿ ಮುಕ್ತಕಗಳ ಸಂಕಲನ. "ಇವು ಒಂದೊಂದು ಬಿಡಿಮುತ್ತು. ಒಂದೊಂದು ಸರ್ವತಂತ್ರ ಸ್ವತಂತ್ರ ಭಾವಪ್ರಖರತೆ, ರಸಾರ್ದ್ರತೆ, ಧ್ವನಿರಮ್ಯತೆ ಇವುಗಳಿಗೆ ಈ ಮುಕ್ತಕಗಳು ಹೆಸರಾಗಿವೆ." ಈ ಸಂಕಲನದಲ್ಲಿ ಶೃಂಗಾರಕ್ಕೆ ಸಂಬಂಧಿಸಿರುವ ಪದ್ಯಗಳಲ್ಲಿ ಸುಂದರವಾದ ಐವತ್ತೈದು ಪದ್ಯಗಳನ್ನು ಆಯ್ದು ಅವುಗಳ ಸಂಸ್ಕೃತ ಕನ್ನಡ ಅನುವಾದವನ್ನು ಈ ಪ್ರಬಂಧದಲ್ಲಿ ಕೊಟ್ಟಿದ್ದಾರೆ. ಅವರು ಆಯ್ದ ಪದ್ಯಗಳು ಎಷ್ಟು ಸುಂದರವಾಗಿವೆ ಎಂಬುದಕ್ಕೆ ನಿದರ್ಶನವಾಗಿ ಇಲ್ಲಿ ಒಂದೆರಡನ್ನು ಕೊಟ್ಟಿದ್ದೇನೆ.

ನನ್ನೊಳು ನೀಹೇಳಿ ಕಳುಹಿದ ಮಾತನು
ಆಕೆಗೆ ಹೇಳಿದೆ ಹಲವು ಸಲ
ತಿಳಿಯಲಿಲ್ಲೆನಗೆಂದು ಮತ್ತೊಮ್ಮೆ ಹೇಳೆಂದು
ಕೇಳಿದಳಾಮಾತ ನೂರುಸಲ
ಹೂವಾಡಗಿತ್ತಿಯ ನಳಿತೋಳ ಚೆಲುವನು
ತರುಣ ನೋಡುವ ಚಪಲದೊಳು

ಪ್ರೇಮಕಾವ್ಯಸಮೂಹದಲ್ಲಿ ಇರುವ ಸ್ಥಾನವನ್ನು ಸೂಚಿಸುತ್ತದೆ. "ವಾಮನನಲ್ಲಿಯೇ ತ್ರಿವಿಕ್ರಮ ಅಡಗಿದ್ದಂತೆ ಈ ಕವಿತೆಗಳ ಚಿಕ್ಕ ಚಿಕ್ಕ ಚರಣಗಳಲ್ಲಿಯೆ ವಿಶ್ವವ್ಯಾಪಕವೂ ಚಿತ್ತಾಕರ್ಷಕವೂ ಆದ ಧ್ವನಿ ಅಡಗಿ ಕುಳಿತಿರುತ್ತದೆ" ಎಂಬುದು ಅಮರುಶತಕದ ಪದ್ಯಗಳ ಸ್ವಾರಸ್ಯ. "ಪ್ರಥಮ ಸಂದರ್ಶನ, ಪ್ರೇಮಾಂಕುರ, ಸಮಾಗಮ, ವಿಯೋಗ, ಮೆಚ್ಚು, ನೆಚ್ಚು, ಆಸೆ, ನಿರಾಸೆ, ನಿರೀಕ್ಷೆ, ಮಿಲನ, ತಿರಸ್ಕಾರ, ಅಗಲಿಕೆ, ಅಸೂಯೆ, ಸಮಾಧಾನ, ತೀಕ್ಷ್ಣ ಪರಿತಾಪ ಹೀಗೆ ಹಲವಾರು ತೆರನಾದ ಪ್ರಣಯಜೀವನದ ರೀತಿ ನೀತಿಗಳ ವಿವರಗಳನ್ನು ಕವಿ ಮುಕ್ತಕಗಳೆಂಬ ಈ ಬಿಡಿಕವನಗಳಲ್ಲಿ ಕೊಟ್ಟಿದ್ದಾನೆ" ಎಂಬ ಮಾತು ಅಮರುಶತಕದ ಪದ್ಯಗಳ ವಸ್ತುವಿನಲ್ಲಿರುವ ಸ್ವಾರಸ್ಯವನ್ನು ತಿಳಿಸುತ್ತದೆ. ಪದ್ಯಗಳಲ್ಲಿ ಬಳಕೆಗೊಂಡಿರುವ ಸಂಬೋಧನೆ ಮತ್ತು ಕರ್ತೃಪದಗಳು ಹೇಗೆ ಅರ್ಥಪುಷ್ಟಿಯನ್ನೂ, ಭಾವ ಪ್ರಕಾಶವನ್ನೂ ಒದಗಿಸುತ್ತವೆ ಎಂಬುದನ್ನು ಪ್ರಬಂಧದಲ್ಲಿ ಪ್ರಸ್ತಾಪಿಸಿದ್ದಾರೆ. ಅಮರುವಿನ ಪ್ರಣಯನಿರೂಪಣೆಯಲ್ಲಿ ಕಾಣುವ ವಿಶೇಷ ಲಕ್ಷಣಗಳನ್ನು ಗುರುತಿಸಿ, ಅವು ಯಾವುವು ಎಂದು ತಿಳಿಸಿದ್ದಾರೆ. "ಪ್ರೇಮಜೀವನದಲ್ಲಿ ಒದಗಬಹುದಾದ ವಿರಸಗಳಿಗೆ ಹೆಣ್ಣು ಕಾರಣವಲ್ಲ ಗಂಡು ಕಾರಣ ಎನ್ನುವುದು ಈ ಕೃತಿಯಲ್ಲಿ ಕಾಣುವ ಒಂದು ಹೊಸ ಅಂಶ." "ಈ ಇಪ್ಪತ್ತನೆಯ ಶತಮಾನದ "ನಾಗರಿಕ" ರುಚಿಗೂ ಅಮರು ಪ್ರಿಯನಾಗ ಬಲ್ಲನು" ಎಂಬುದನ್ನು ಈ ಪ್ರಬಂಧದಲ್ಲಿ ತೆರೆದು ತೋರಿದ್ದಾರೆ.

ನಾಲ್ಕನೆಯ ಪ್ರಬಂಧ, "ಮುದ್ದಣ ಕವಿಯ ಅದ್ಭುತರಾಮಾಯಣ ವಿಮರ್ಶೆ." ಒಂದು ಕೃತಿಯ ವಿಮರ್ಶೆ ಹೇಗಿರಬೇಕು ಎಂಬುದಕ್ಕೆ ಉತ್ತಮ ನಿದರ್ಶನವಾಗಿ ಈ ಲೇಖನ ನಿಲ್ಲುತ್ತದೆ. ಮುದ್ದಣ ಕವಿಯ ಅದ್ಭುತರಾಮಾಯಣಕ್ಕೆ ಮೂಲ ಸಂಸ್ಕೃತದ ಅದ್ಭುತರಾಮಾಯಣ. ಆದ್ದರಿಂದ ಲೇಖಿಕರು ಮೂಲ ಅದ್ಭುತರಾಮಾಯಣದ ಪರಿಚಯ ಮಾಡಿಕೊಟ್ಟು, ಅದರಿಂದ ಮುದ್ದಣ ಕವಿ ಮಾಡಿಕೊಂಡ ಬದಲಾವಣೆಗಳೇನು ಎಂಬುದನ್ನು ಪ್ರಬಂಧದ ಮೊದಲಲ್ಲೇ ತಿಳಿಸಿದ್ದಾರೆ. ಮೂಲದಲ್ಲಿ ಕಾಣಿಸಿದ ಇಪ್ಪತ್ತೇಳು ಸರ್ಗಗಳ ಕಥೆಯನ್ನು ಮುದ್ದಣ ಹದಿನಾರು ಆಶ್ವಾಸಗಳಿಗೆ ಇಳಿಸಿಕೊಳ್ಳುವಾಗ, ಯಾವ ಯಾವ ಕಥಾಭಾಗವನ್ನು ಕೈಬಿಟ್ಟಿದ್ದಾನೆ ಎಂದು ತಿಳಿಸಿ ಅದರಿಂದ ಮುದ್ದಣ ಸಾಧಿಸಿದ್ದೇನೆಂಬುದನ್ನು ಈ ರೀತಿ ಹೇಳುತ್ತಾರೆ. "ಹೀಗೆ ಮೂಲವನ್ನು ಅನುಸರಿಸುವಾಗ ಕಥೆಯ ಓಟಕ್ಕೆ ತಡೆಯಾಗಬಲ್ಲ ಎಲ್ಲ ವೃತ್ತಾಂತವನ್ನೂ ಮುದ್ದಣ ಕೈಬಿಟ್ಟಿದ್ದಾನೆ, ಇಲ್ಲವೆ ಒಂದು ಮಾತಿನಲ್ಲಿ ಹೇಳಿ ಮುಗಿಸಿದ್ದಾನೆ." ಉಳಿದ ಕಡೆಗಳಲ್ಲಿ ಮುದ್ದಣನ ಅನುವಾದ ಎಷ್ಟರಮಟ್ಟಿಗೆ ಯಥಾರ್ಥವಾಗಿದೆ ಎಂಬುದನ್ನು ತೋರಿಸುವ ಸಲುವಾಗಿ, ಬೇರೆ ಬೇರೆ ಮೂರು ಸಂದರ್ಭಗಳ ಮೂಲಸಂಸ್ಕೃತ ಶ್ಲೋಕವನ್ನು ಕೊಟ್ಟು ಅವುಗಳ ಕನ್ನಡ ಅನುವಾದವನ್ನೂ ಕೊಟ್ಟು ಹೋಲಿಸಿದ್ದಾರೆ. ಈ ಎಲ್ಲ ವಿವರಣೆಗಳ ಆಧಾರದ ಮೇಲೆ ಮುದ್ದಣನ ಕೃತಿಯನ್ನು "ಒಂದು ಸುಂದರವಾದ ವಚನಕಾವ್ಯ" ಎಂದಿದ್ದಾರೆ. ಅದ್ಭುತ ರಾಮಾಯಣದಲ್ಲಿ ಯಾವ ಕಥೆಗಳು ಬರುತ್ತವೆ ಎಂಬುದನ್ನು ಹೇಳಿ, "ಆಧುನಿಕ ಸಣ್ಣ ಕಥೆಗಳಲ್ಲಿರುವ ಸಂವಿಧಾನದ ಅಚ್ಚುಕಟ್ಟೂ ಸಂಭಾಷಣೆಯ ಸ್ವಾರಸ್ಯವೂ ವರ್ಣನೆಯ ಔಚಿತ್ಯಪರಿತ ಮಿತಿಯೂ ತಿಳಿಯಾಗಿಯೂ ಶಿಷ್ಟಜನಸಮ್ಮತವಾಗಿಯೂ ಬರುವ ಹಾಸ್ಯವೂ "ಅದ್ಭುತರಾಮಾಯಣದಲ್ಲಿ ಕಾಣಬರುತ್ತವೆ" ಎಂದಿದ್ದಾರೆ. ಕಥೆ, ವರ್ಣನೆ, ಶೈಲಿ, ಭಾಷೆ, ಮುದ್ದಣ ಸಾರಿದ ಜೀವನತತ್ತ್ವ ಇವುಗಳನ್ನೆಲ್ಲ ಬೇರೆಬೇರೆಯಾಗಿ ನೋಡಿ ವಿಮರ್ಶಿಸಿರುವುದು ವೈಶಿಷ್ಟ್ಯಪೂರ್ಣವೂ, ಔಚಿತ್ಯಪೂರ್ಣವೂ ಆಗಿದೆ. ಮುದ್ದಣನ ಪ್ರಕೃತಿವರ್ಣನೆಯನ್ನು ಕುರಿತು, "ಈಗಿನ ಸಣ್ಣ ಕಥೆಗಾರರ ಬರವಣಿಗೆಯಲ್ಲಿ ಪ್ರಕೃತಿ ವರ್ಣನೆ ಹೇಗೆ ಸಂದರ್ಭಕ್ಕೆ ತಕ್ಕಂತೆ ಸ್ವಾರಸ್ಯವಾಗಿಯೂ, ಸಂಗ್ರಹವಾಗಿಯೂ ಬರುತ್ತದೆಯೊ ಹಾಗೆ ಮುದ್ದಣನಲ್ಲಿ ಈ ವರ್ಣನೆ ಬರುತ್ತದೆ" ಎಂದು ಕಾವ್ಯದ ಪ್ರಾರಂಭದಲ್ಲಿ ಬರುವ ವಾಲ್ಮೀಕಿ ಮಹರ್ಷಿಗಳ ಆಶ್ರಮದ ವರ್ಣನೆಯನ್ನು ಕುರಿತು ಹೇಳಿದ್ದಾರೆ.

ಶ್ರೀಮತಿಯ ಸೌಂದರ್ಯವರ್ಣನೆಯಲ್ಲಿ ಮುದ್ದಣ ತೋರಿರುವ ಚಮತ್ಕಾರ, ಭಾವಪೂರ್ಣ ಸನ್ನಿವೇಶಗಳ ನಿರ್ಮಾಣದಲ್ಲಿ ಮುದ್ದಣನ ಕೌಶಲ ಹಾಗೆ ಯುದ್ಧ, ಪರಾಕ್ರಮ ಇವುಗಳ ವರ್ಣನೆಯಲ್ಲಿ ಮುದ್ದಣನ ಸ್ವೋಪಜ್ಞತೆ ಇವುಗಳನ್ನೆಲ್ಲಾ ತೆರೆದು ತೋರಿದ್ದಾರೆ. ಮುದ್ದಣನ ಶೈಲಿಯ ಬಗ್ಗೆ ಹೇಳುವಾಗ ಅವನು ಹಳಗನ್ನಡ ಗದ್ಯದಲ್ಲಿ ತೋರಿದ ವಾಕ್ಯವಿನ್ಯಾಸ, ಪ್ರಯೋಗಿಸಿದ ಶಬ್ದಾಲಂಕಾರ

ಗಳು, ತದ್ಭವಗಳನ್ನು ಬಳಸಿದ ರೀತಿ, ಸಂಸ್ಕೃತ ಸಮಾಸಪದಗಳಿಗೆ ಸಮಾನಾರ್ಥಕಗಳಾದ ಕನ್ನಡ ಪದಗಳನ್ನು ಬಳಸಿದ್ದು, ಅಂಕಿತನಾಮ, ಸಂಸ್ಕೃತಪದಗಳು ಲೋಕೋಕ್ತಿಗಳನ್ನು ಉಪಯೋಗಿಸಿದ ರೀತಿ ಇವುಗಳನ್ನೆಲ್ಲಾ ಕುರಿತು ಬೇರೆ ಬೇರೆಯಾಗಿ ಚರ್ಚಿಸಿರುವುದು ವಿಷಯಸ್ಪಷ್ಟತೆಗೆ ಸಹಾಯಕ ವಾಗಿದೆ. ಇವುಗಳ ಬಳಕೆ ಎಲ್ಲಿ ಯುಕ್ತವಾಗಿದೆ ಎಂಬುದರ ಜೊತೆಗೆ, ತದ್ಭವಗಳ ಬಳಕೆ ಕೆಲವು ಕಡೆ ಸರಿಯಾಗಿಲ್ಲದಿರುವುದನ್ನೂ ಹಾಗೆ ಅಂಕಿತನಾಮಗಳಿಂದ ಕೆಲವು ಕಡೆ ಅರ್ಥವ್ಯತ್ಯಯವಾಗುತ್ತಿರು ವುದನ್ನೂ ಹೇಳಿರುವುದು ವಿಮರ್ಶೆಯ ಲಕ್ಷಣಕ್ಕನುಗುಣವಾಗಿದೆ. "ಇಂತಹ ಸಂದರ್ಭದಲ್ಲಿ ಗೀತಾ ಮಾಹಾತ್ಮ್ಯೆಯ ಮಾಧುರ್ಯದಿಂದ ಪರಿಪೂರ್ಣವಾದ ಮುದ್ದಣನ ಅದ್ಭುತರಾಮಾಯಣ ಜನತೆಯನ್ನು ಅಸುರೀಶಕ್ತಿಗಳಿಂದ ಬಿಡಿಸಿ ದೈವೀಶಕ್ತಿಗಳ ಕಡೆಗೆ ಕರೆದೊಯ್ಯುವ ಕೈದೀಪವಾಗಿ ಬೆಳಗಲೆಂದು ಹಾರೈಸೋಣ" ಎಂಬ ಲೇಖಕರ ಮಾತಿನಲ್ಲಿ ಅದ್ಭುತರಾಮಾಯಣದ ಅದ್ಭುತಶಕ್ತಿ ಏನು ಎಂಬುದು ತಿಳಿದುಬರುತ್ತದೆ. ಈ ಲೇಖನದ ಶೈಲಿಯಲ್ಲಿ ವಿಮರ್ಶೆಗೆ ಬೇಕಾದ ಸರಳತೆ ನಿಖರತೆ ಇದೆ. ಹೇಳಬೇಕಾಗಿರುವುದನ್ನು ಸ್ಪಷ್ಟವಾಗಿ, ನಿರ್ದಿಷ್ಟವಾಗಿ ಹೇಳಿ ಓದುಗರನ್ನು ಗೊಂದಲದಿಂದ ಪಾರು ಮಾಡಿದ್ದಾರೆ.

ಈ ಸಂಕಲನದ ಐದನೆಯ ಹಾಗೂ ಕೊನೆಯ ಪ್ರಬಂಧ "ವಿನಾಯಕರ ಬಾಳದೇಗುಲದಲ್ಲಿ." ಈ ಪ್ರಬಂಧದಲ್ಲಿ ಲೇಖಕರು, "ಬಾಳ ದೇಗುಲದಲ್ಲಿ" ಎಂಬ 'ವಿನಾಯಕ ಕಾವ್ಯ'ದ ವಿಮರ್ಶೆಯನ್ನು ಒದಗಿಸಿದ್ದಾರೆ. "ಬಾಳ ದೇಗುಲದಲ್ಲಿ" ಬಿಡಿ ಕಾವ್ಯಗಳ ಸಂಕಲನ. ಈ ಸಂಕಲನದ ಪದ್ಯಗಳನ್ನು ಕವಿ ಏಳು ಗುಂಪುಗಳಾಗಿ ಮಾಡಿದ್ದಾರೆ. ವಿಮರ್ಶೆಯಲ್ಲಿ ಲೇಖಕರು ಎಲ್ಲ ಗುಂಪುಗಳ ಎಲ್ಲ ಪದ್ಯಗಳನ್ನೂ ವಿಮರ್ಶಿಸಿದ್ದಾರೆ. ಕಾವ್ಯ ಸಂಕಲನವನ್ನು ಒಟ್ಟಾಗಿ ನೋಡಿ ಅದನ್ನು "ಕನ್ನಡದ ಸಮಕಾಲೀನ ಸಾಹಿತ್ಯದ ಒಂದು ಅಪೂರ್ವ ಅದ್ವಿತೀಯ 'ನಾಯಕಕಾವ್ಯ' ಎಂದು ಕರೆದಿದ್ದಾರೆ." ಒಮ್ಮೆ ಓದಿ ಎತ್ತಿಡುವ ಕೃತಿಯಲ್ಲ ಇದು. ಮತ್ತೆ ಮತ್ತೆ ಓದಿ ಓದಿದಷ್ಟನ್ನು ರೋಮಂಥನಕ್ರಿಯೆಯಿಂದ ರೋಚಕಗೊಂಡು ತನ್ನ ಜೀವನಕ್ಕೆ ಸಂಸ್ಕಾರವನ್ನು ತಂದುಕೊಳ್ಳುವಂತಹ ಜೀವಾತು ತುಂಬಿದ ಕಾವ್ಯದ ಜೇಂಗೊಡ ಇದು" ಎಂಬ ಮಾತು ಸಂಪೂರ್ಣ ಸತ್ಯ. "ರಸಭಾವಗಳ ಅತಿಶಯವಷ್ಟೇ ಕಾವ್ಯದ ಹೆಚ್ಚುಗಾರಿಕೆಯಾದರೆ ಅದು ಪಣ್ಯವನಿತೆಯಂತಾದೀತು. ರಸವೂ ಭಾವವೂ ಇದ್ದು ಧಾರ್ಮಿಕವಾದ ಗಂಭೀರವಾದ ತಾತ್ತ್ವಿಕವಾದ ವಿಚಾರಪ್ರಚೋದನೆಯ ವಿವೇಕಪ್ರಬೋಧನೆಯ ತಾರಕಾಂಶಗಳಿಂದ ನಿಬಿಡವಾಗಿರುವ ಕಾವ್ಯವಾದರೆ ಆಗ ಅದು ಪುಣ್ಯಮಾತೆಯಂತೆ ಮೋಕ್ಷಪ್ರದಾಯಿನಿಯ ಸ್ಥಾನದಲ್ಲಿ ನಿಲ್ಲುತ್ತದೆ. ಅಂತಹ ಸತ್ಪ್ರೇರಣೆಯ ಸತ್ಕಾವ್ಯಮಾಲಿಕೆಯಲ್ಲಿ ನಿಲ್ಲಬಲ್ಲ ಬೆರಳೆಣಿಕೆಯ ಆಧುನಿಕ ಕಾವ್ಯಗಳಲ್ಲಿ, 'ಬಾಳ ದೇಗುಲದಲ್ಲಿ' ಎಂಬುದು ಮುಮ್ಮೊದಲಿನ ಸ್ಥಾನಕ್ಕೆ ಅರ್ಹವಾಗಿದೆ" ಎಂದು ಅವರು ಕಾವ್ಯವನ್ನು ಪ್ರಶಂಸಿಸಿರುವುದು ಔಚಿತ್ಯಪೂರ್ಣವಾಗಿದೆ. "ಬಾಳ ದೇಗುಲದಲ್ಲಿ"ಯ ದೃಷ್ಟಿಯಾವುದು ಎಂಬುದನ್ನು, "ಒಟ್ಟಿನಲ್ಲಿ ಈ ಕೃತಿಸಮುಚ್ಚಯದಲ್ಲಿ ಕಾಣುವ ದೃಷ್ಟಿ ಬಾಳನ್ನು ನೋಡುವ ದೃಷ್ಟಿ...... ಒಂದೊಂದು ವ್ಯಕ್ತಿಯ ಒಂದೊಂದು ವಿಶಿಷ್ಟವಾದ ವಿಕಾಸಕ್ರಮದ ಚರಿತ್ರೆ ಕಟ್ಟಕಡೆಯಲ್ಲಿ ಒಂದೇ ದೃಷ್ಟಿಯ ನಿಲುವಿಗೆ ಬಂದು ನಿಲ್ಲುವ ಚರಿತ್ರೆಯನ್ನೇ ಇಲ್ಲಿ ನಾವು ಕಾಣುತ್ತೇವೆ," ಎಂಬ ಮಾತು ತಿಳಿಸುತ್ತದೆ. ಅಭಿವ್ಯಕ್ತಿ ಸ್ವಾರಸ್ಯ, ಶೈಲಿ, ಛಂದಸ್ಸು ಇವುಗಳನ್ನು ಕುರಿತು, "ಒಮ್ಮೆ ನಿರೂಪಣೆಯಾಗಿ ಒಮ್ಮೆ ಸಂಭಾಷಣೆಯಾಗಿ, ಒಮ್ಮೆ ಕಾಲ್ಪನಿಕ ಸನ್ನಿವೇಶದ ರಚನೆಯಾಗಿ, ಒಮ್ಮೆ ಸ್ವಗತ ವೃತ್ತ ಪರಿಷ್ಕೃತವಾಗಿ ಈ ಆದರ್ಶಗಳ, ಈ ವ್ಯಕ್ತಿಗಳ, ಈ ಶಕ್ತಿಗಳ ತತ್ತ್ವವಿವೇಚನೆ ಸಾಗಿದೆ. ಸುಸಂಸ್ಕೃತ ಕನ್ನಡಿಗರು ಆಡುತ್ತಿರುವ ವಸ್ತುವಿಗನುಗುಣವಾಗಿ ಒಂದು ಶೈಲಿ ರೂಪುಗೊಂಡು ಭಾವಕ್ಕೆ ತಕ್ಕ ಛಂದದಲ್ಲಿ ಈ ಕೃತಿ ಅರಳಿದೆ ಎಂದಿದ್ದಾರೆ. ಅನೇಕ ಕಾರಣಗಳನ್ನು ಕೊಟ್ಟು, "ಈ ಎಲ್ಲ ಕಾರಣಗಳಿಂದ ವಿನೂತನವಾಗಿದೆ. ಈ ವಿನಾಯಕ ಕಾವ್ಯಸೃಷ್ಟಿ 'ಬಾಳದೇಗುಲದಲ್ಲಿ!'" ಎಂದಿದ್ದಾರೆ.

ವಿಮರ್ಶೆಯ ಕಾರ್ಯವನ್ನು ಹೇಳುವಾಗ, ಟಿ. ಎಸ್. ಎಲಿಯಟ್, "Criticism must always profess an end in view which roughly speaking appears to be the elucidation

of the works of art and the correction of taste" ಎಂಬ ಮಾತನ್ನು ಹೇಳುತ್ತಾನೆ. ಅಂದರೆ ಒಂದು ಕೃತಿಯ ಸರಿಯಾದ ವ್ಯಾಖ್ಯಾನವನ್ನೊದಗಿಸುವುದು ವಿಮರ್ಶಕನ ಕಾರ್ಯವೇ. ಆದ್ದರಿಂದ 'ಪ್ರಬಂಧಗಳು' ಸಂಕಲನದ ಎಲ್ಲ ಲೇಖನಗಳು ವಿಮರ್ಶಾತ್ಮಕ ಲೇಖನಗಳು. ಸಾಮಾನ್ಯ ಓದುಗರನ್ನು ಸಹೃದಯರಾಗಿಸಲು ಇಂತಹ ವಿಮರ್ಶೆಗಳ ಅಗತ್ಯ ಬಹಳ. ಈ ಉದ್ದೇಶ ಸಾಧಿತವಾಗಬೇಕಾಗಿದ್ದರೆ ವಿಮರ್ಶೆಯ ಭಾಷೆ ಸರಳವಾಗಿದ್ದು, ಎಲ್ಲರಿಗೂ ಅರ್ಥವಾಗುವಂತಿರಬೇಕು. ಇದರ ಜೊತೆಗೆ ಸ್ಪಷ್ಟತೆಯೂ ಬೇಕು. ಎಲ್ಲಾ ಲೇಖನಗಳೂ ತುಂಬ ಅಪ್ಯಾಯಮಾನವಾಗಿವೆ. ಇಂತಹ ಒಂದು ಸಂಕಲನವನ್ನೊದಗಿಸಿದ ಲೇಖಕರು ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಇಂತಹ ಇನ್ನೂ ಅನೇಕ ಕೃತಿಗಳು ಇವರಿಂದ ಓದುಗರಿಗೆ ಒದಗಲಿ ಎಂಬ ಹಾರೈಕೆಯೊಂದಿಗೆ ಈ ಲೇಖನಕ್ಕೆ ಮಂಗಳ.

# ೪೦. "ಅಕ್ಕಮಹಾದೇವಿ" – ಒಂದು ವಿವೇಚನೆ

ಕೆ. ಎನ್. ಅನಂತರಾಮು

ಶಿವಶರಣೆಯರಲ್ಲಿ ಅಗ್ರಗಣ್ಯಳಾದವಳು ಅಕ್ಕಮಹಾದೇವಿ. ಅವಳು ಚೆನ್ನಮಲ್ಲಿಕಾರ್ಜುನನ ಕೌಸ್ತುಭ ರತ್ನ. ಮೀರಾರಾಧೆಯರ ರೀತಿಯಂತೆ ಅವಳದೊಂದು ಮುಗ್ಧಭಕ್ತಿ. ರಾಧೆಯ ಭಕ್ತಿ ಪ್ರೀತಿಯಿಂದ ಕೂಡಿದ್ದಾದರೆ ಅಕ್ಕನದೊಂದು ತುಂಬು ಹೃದಯದ ಭಕ್ತಿ. ತನ್ನ ಬಾಲ್ಯದಿಂದಲೇ ಶಿವನನ್ನು ಸಾಕ್ಷಾತ್ಕರಿಸಿಕೊಳ್ಳಲು ಹೊರಟವಳವಳು. ಹೆಸರಿಗೆ ತಕ್ಕಂತೆ ಈ ಮಹಾದೇವಿ ಬರಬರುತ್ತಾ ಈ ಲೋಕದ ಜನತೆಗೆ ಅಕ್ಕನಾದಳು. ಅವಳು ಹೆಣ್ಣಾಗಿ ಹುಟ್ಟಿ ಹೆಣ್ಣಿಗೆ ಬೇಕಾದ ಸಕಲ ಸೌಂದರ್ಯಗಳಿದ್ದರೂ, ಅವೆಲ್ಲವೂ ಹೊರಗಿನ ವಸ್ತುಗಳೇ ವಿನಾ ಮನಸ್ಸಿನಲ್ಲಿ ಯಾವ ಕಾಮನೆಗಳೂ ಇಲ್ಲದವಳವಳು. ಸಮಾಜದ ಎದುರಿನಲ್ಲಿ ಅವಳೊಬ್ಬ ರಾಜನ ಹೆಂಡತಿ ಎನಿಸಿದರೂ, ಇಹಲೋಕದ ಆಡಂಬರದ ಯಾವ ಸುಖದ ಸುಪ್ಪತ್ತಿಗೆಗೂ, ಎಂದೂ ಆಸೆಪಟ್ಟವಳಲ್ಲ. ಭಕ್ತಿಯ ಪಂಥದವರಲ್ಲಿ ಅಕ್ಕನದೂ ಒಂದು ಪಾಲು. ಇಂತಹ ಮಾರ್ಗದರ್ಶಕಳಾದ ಅಕ್ಕನನ್ನು ಹಿಂದಿನ ಕೆಲವಾರು ಕವಿಗಳು ಬರೆದ ಆಧಾರಗಳನ್ನು ಕ್ರೋಢೀಕರಿಸಿ ಆಚಾರ್ಯರಾದ ಶ್ರೀ ಎಸ್. ವಿ. ಪಿ. ಅವರು ಸುಂದರವಾಗಿ ತಮ್ಮ ಕಿರುಹೊತ್ತಿಗೆಯಲ್ಲಿ ಚಿತ್ರಿಸಿದ್ದಾರೆ. ಅಕ್ಕನ ಜೀವನ ಚಿತ್ರಣಗಳನ್ನು ಐದು ಘಟ್ಟಗಳಾಗಿ ವಿಂಗಡಿಸಿಕೊಂಡಿದ್ದಾರೆ.

ಈ ಪುಸ್ತಕವನ್ನು ಓದುತ್ತಿದ್ದರೆ ಅಕ್ಕನ ಆಧ್ಯಾತ್ಮಿಕ ಜೀವನದಲ್ಲಿ ನಾವೂ ತೇಲುತ್ತಿರುವಂತೆಯೇ ಭಾಸವಾಗಿ ನಮ್ಮ ಪ್ರಯತ್ನವಿಲ್ಲದೆಯೇ ನಾವು ಈ ಹೊತ್ತಿಗೆಯ ಕೊನೆಯ ಪುಟವನ್ನು ತಲುಪುತ್ತೇವೆ. ಕವಿಗೆ ಹಲವು ಸನ್ನಿವೇಶಗಳನ್ನು ಮನೋರಂಜಕವಾಗಿ ಚಿತ್ರಿಸುವ ಹಕ್ಕು ಮತ್ತು ಸ್ವಾತಂತ್ರ್ಯವುಂಟು. ಕವಿಯ ಶೈಲಿ ಸೊಗಸಾಗಿದ್ದರೆ ವಾಚಕರ ಮನಸ್ಸನ್ನು ತಣಿಸಬಹುದು. ಅಕ್ಕಮಹಾದೇವಿ ತನ್ನದೇ ವಿಶಿಷ್ಟ ಶೈಲಿಯಿಂದ ಕೂಡಿ ಮನಸ್ಸಿಗೆ ಆನಂದ ತರುವುದರಲ್ಲಿ ಸಂಶಯವಿಲ್ಲ.

ಪೂರ್ವಜನ್ಮದ ವಾಸನಾಬಲದಿಂದ ಸುಮತಿ ನಿರ್ಮಲರಿಗೆ ಜನಿಸಿದ ಅಕ್ಕ ಮಗುವಾಗಿ ಬೆಳೆದು ಬೆಳೆಯುತ್ತ ಅಕ್ಕನಾಗಿ, ಕೊನೆಗೆ ಮಹಾದೇವಿಯಾಗುತ್ತಾಳೆ. ಆಚಾರ್ಯರು ಅವಳ ಸೌಂದರ್ಯವನ್ನು ವರ್ಣಿಸುತ್ತಾ ಮದುವೆಯಾಗುವ ವಯಸ್ಸು ಅಕ್ಕನಿಗೆ ಬಂದಾಗ ಮದುವೆಮಾಡುವ ಯೋಚನೆ ಹೆಣ್ಣು ಹಡೆದ ಎಲ್ಲ ತಂದೆತಾಯಿಗಳಿಗೂ ಬರಬಹುದಾದ ಯೋಚನೆಯೆನ್ನುತ್ತಾರೆ. ರಾಜನಾದ ಕೌಶಿಕನು ಪ್ರಥಮದರ್ಶನದಲ್ಲಿಯೇ ಸೆರೆಹಿಡಿದ ಅಕ್ಕನನ್ನು ತನ್ನ ಬಾಳಿನ ಸಂಗಾತಿಯನ್ನಾಗಿ ಮಾಡಿಕೊಳ್ಳಲು ಹಾತೊರೆಯುತ್ತಾನೆ. ಶಿವನ ಸಂಗವನ್ನೇ ತನ್ನ ಧ್ಯೇಯವಾಗಿ ನಿರ್ಧರಿಸಿಕೊಂಡಿದ್ದ ಅಕ್ಕ ಕೌಶಿಕನಿಗೆ ತತ್ಕಾಲಕ್ಕೆ ಮಾತ್ರ ದೊರೆಯುತ್ತಾಳೆ. ಅಕ್ಕನನ್ನು ವರಿಸುವ ಆಲೋಚನೆ ಕೌಶಿಕನಲ್ಲಿ ಮನೆ ಮಾಡಿತ್ತೇ ವಿನಾ ಅಕ್ಕನಿಗಲ್ಲ. ಅವಳನ್ನೇ ನೋಡುತ್ತಿದ್ದು ಅವಳ ಮನಸ್ಸಿನಲ್ಲಿಯೇ ನೆಟ್ಟ ಕೌಶಿಕನು ತನ್ನ ವ್ಯವಹಾರವು ಫಲಿಸಲು ಮುನ್ನುಗ್ಗುತ್ತಾನೆ. ಬೀದಿಯಲ್ಲೊಂದು ದಿವಸ ಕೌಶಿಕನನ್ನು ಎಲ್ಲರಂತೆಯೇ ನೋಡುತ್ತಿದ್ದ ಅಕ್ಕ ತನ್ನ ವಯಸ್ಸಿಗೆ ತಕ್ಕ ಸಹಜವಾದ ಮುಗ್ಧತನವನ್ನು ಮೆರೆದು ಮನೆಗೆ ತೆರಳುತ್ತಾಳೆ. ಇಹಲೋಕದ ಈ ವ್ಯಾಪಾರದಿಂದ ನಿರ್ಗಮನಹೊಂದಲು ಹೋಗುತ್ತಿರುವ ಅಕ್ಕನಿಗೆ ಕೌಶಿಕನ ವ್ಯವಹಾರವು ಒಂದು ವ್ಯಾಪಾರವೇ ವಿನಾ ಜೀವನದ ಧ್ಯೇಯವಲ್ಲ. ಸುಖವಾಗಿ ಶಿವಾನುಭವದಲ್ಲಿದ್ದ ಅಕ್ಕನಿಗೆ ಈ ವಿಷಯ ಸುಖವನ್ನು ನುಂಗಿನೊಣೆಯುವ ವಿಶೇಷ ತೊಂದರೆಯೊಂದು ಪ್ರಾಪ್ತವಾಯಿತು ಎಂದು ಅಭಿಪ್ರಾಯಪಡುತ್ತಾರೆ. ಕೌಶಿಕನ ಬಲವಂತದಿಂದ ಒಲ್ಲದ ಮನಸ್ಸಿನಿಂದ ತನ್ನ ತಂದೆತಾಯಿಗಳಿಗೆ ತೊಂದರೆಯಾಗುವುದೆಂದು ಹೆದರಿ ತನ್ನ ಕೆಲವು ಶರತ್ತುಗಳೊಡನೆ ಮದುವೆಯಾಗಲು ಒಪ್ಪುತ್ತಾಳೆ. ತನ್ನವರು "ಕಾರಿಕಾಲಮ್ಮ," "ಮಾಂಗಾಯಕ್ಕ" ಮುಂತಾದವರನ್ನು ಉದಾಹರಿಸಿದ ಮೇಲೆ ಅಕ್ಕ ತನ್ನ ಹೃದಯಮಂದಿರದ ದೇವತೆಯಾದ ಚೆನ್ನಮಲ್ಲಿಕಾರ್ಜುನನನ್ನು ಬಿಟ್ಟು ಕೌಶಿಕನನ್ನು ವರಿಸುವುದೆಂಬ ಪ್ರಶ್ನೆ ಇದ್ದರೂ, ಬಲವಂತದಿಂದ ಮದುವೆಗೆ ಒಪ್ಪುತ್ತಾಳೆ. ಕೌಶಿಕನನ್ನು ಹೇಗಾದರೂ ಪರಿವರ್ತಿಸಿ ತನ್ನ ನಿರ್ಮಲ ಚಾರಿತ್ರ್ಯಕ್ಕೆ ಕಳಂಕ ತರಬಾರದೆಂದು ನಿಶ್ಚಯಿಸಿ ಮದುವೆಯಾಗುತ್ತಾಳೆ.

ತನ್ನ ಊಹೆಯಾಕೆ ಒಂದುಪಕ್ಷ ಕೌಶಿಕ ತನ್ನನ್ನು ಕೈಹಿಡಿಯದಿರಲೂಬಹುದು ಎಂಬ ಕಿಂಚಿತ್ತಾದ ಆಸೆ ಇದ್ದರೂ ಇರಬಹುದು ಎಂದು ತಿಳಿಯಪಡಿಸುತ್ತಾರೆ. ಕೌಶಿಕನೊಡನೆ ಅರಮನೆಯನ್ನು ಸೇರಿದ ಮೇಲೆ "ತನ್ನ ನೂಲು ತನ್ನನ್ನೇ ಸುತ್ತಿ ಸಾವತರುವ ತೆರಣೆಯ ಹುಳುವಿನಂತೆ ಕೌಶಿಕನ ಬಲೆಗೊಳಗಾಗುತ್ತಾಳೆ."

ಈ ಹೊತ್ತಿಗೆಯ ಎರಡನೆಯ ಘಟ್ಟದಲ್ಲಿ ಅಕ್ಕನ ಸಂಪೂರ್ಣ ಮನಸ್ಸಿನ ಚಿತ್ರಣವಿದೆ. ಹೃದಯದಲ್ಲಿ ದುಃಖ ತುಂಬಿಬಂದಾಗ ರೋದನದಿಂದ ಅದು ಪರಿಹಾರವಾಗುವುದಂತೆ. ಇದು ಬಹುಶಃ ಹೆಚ್ಚಿನವರಿಗೆ ಅರಿವಾಗಿರುವ ವಿಷಯ. ಅವರೆ ಹೃದಯ ದುಃಖದಿಂದ ತುಂಬಿ ಭಾರವಾದಾಗ ಆ ದುಃಖ ಕಣ್ಣೀರ ಬದಲಾಗಿ ಮನದ ಮಾತಾಗಿ ಹರಿದು ಪರದೈವದಲ್ಲಿ ಅದನ್ನು ಬಿಡಿಸೆಂದು ಬೇಡಿಕೊಳ್ಳುವ ಮೊರೆಗೆ ಪ್ರಬುದ್ಧಚೇತಸ ಎನ್ನುತ್ತಾರೆ. ಅಕ್ಕ ಇಂತಹ ಪ್ರಬುದ್ಧಚೇತಸಳಾಗುತ್ತಾಳೆ. ಅಕ್ಕನ ಚಿತ್ರಣದ ಜೊತೆಗೆ ರಾಜನಾದ ಕೌಶಿಕನ ವ್ಯಕ್ತಿತ್ವವು ತಿಳಿಯುತ್ತದೆ. ಕೌಶಿಕನು ಕಾಮುಕನಾದರೂ, ಅಕ್ಕನ ಆಧ್ಯಾತ್ಮಿಕ ವ್ಯಕ್ತಿತ್ವ ಸರಿಬೀಳದಿದ್ದರೂ, ಹಾಗೆಂದು ಬಲಾತ್ಕಾರಮಾಡುವ ಅರಸಿಕ ಕೌಶಿಕನಲ್ಲ. ರೂಪವತಿಯಾದ ಈ ಮಹಾದೇವಿ ಒಲಿದುಬರಬೇಕೆಂಬುದೇ ಅವನ ಇಚ್ಛೆ ಎಂದು ನಿರ್ಧಾರವಾಗಿ ನುಡಿಯುತ್ತಾರೆ. ತನ್ನ ಇಚ್ಛೆಗಾಗಿ ಅಕ್ಕನ ಮನಸ್ಸನ್ನು ಹಲವಾರು ಪ್ರಯತ್ನಗಳಿಂದ ತಿದ್ದಲು ಪ್ರಯತ್ನಿಸಿ ಕೌಶಿಕ ವಿಫಲನಾಗುತ್ತಾನೆ. ಕೌಶಿಕನು ಕೊಡುತ್ತಿದ್ದ ಕೀಟಲೆಗಳಿಗೆ ಅಕ್ಕ ಕಣ್ಣೀರು ಸುರಿಸಿ ಹುಯ್ಯಲಿಡುವಳು. ಇಲ್ಲಿ ಬರುವ ವಚನ 'ಬಂಜೆ ಬೇನೆಯರಿಯಳು. ಬಲತಾಯಿ ಮುದ್ದುಬಲ್ಲಳೇ.' ಈ ವಚನ ಅಕ್ಕನ ನಿರ್ವ್ಯಾಜಪ್ರೇಮವನ್ನು ತೋರಿಸುತ್ತದೆ. ತನ್ನನ್ನು ಅರ್ಥಮಾಡಿಕೊಳ್ಳದ ಅಂದಿನ ಸಮಾಜವನ್ನು ಕುರಿತು ಅಕ್ಕ ಹುಯ್ಯಲಿಡುತ್ತಾಳೆ. ಇಲ್ಲಿ ಅವಳ ಅವ್ಯಾಜಪ್ರೇಮ ಹೊರಗೆಡಹುತ್ತದೆ.

ಕೌಶಿಕನನ್ನು ಮದುವೆಯಾದ ಮೇಲೆಯೇ ಅಕ್ಕನ ಭಕ್ತಿ ಇನ್ನೂ ವಿಶೇಷವಾಗಿ ಬೆಳೆಯುತ್ತದೆ. ಇಲ್ಲಿ ಉದ್ಧೃತವಾದ ಕೆಲವು ಹರಿಹರನ ವಚನಗಳು ರಸಿಕರಿಗೆ ಇನ್ನಷ್ಟು ರಂಜಿಸಿ ಕೃತಿಗೆ ಮೆರುಗುಕೊಟ್ಟಿವೆ. ಅಕ್ಕನ ವೈರಾಗ್ಯ ಇಲ್ಲಿಂದ ಬಲಿಯಲು ಕೌಶಿಕನೇ ಕಾರಣನಾಗುತ್ತಾನೆ. ಶಿವಭಕ್ತಿ ಹಿಂದಿಗಿಂತಲೂ ಅಧಿಕವಾಗುತ್ತದೆ. ಈ ಸನ್ನಿವೇಶದಲ್ಲಿ ಅಕ್ಕನ ಭಕ್ತಿಯ ದಾಸೋಹದ ಮತ್ತು ಶಿವಭಕ್ತಿಯ ಸಂಪೂರ್ಣ ಚಿತ್ರಣವಿದೆ. ಇಲ್ಲಿಂದ ಅಕ್ಕ ತನ್ನ ಶರತ್ತಿನಂತೆ ನಡೆಯದ ಕೌಶಿಕನನ್ನು ಪ್ರೂಜಿಸಿ ಹೊರಡುತ್ತಾಳೆ. ಅವಳ ನಿಶ್ಚಲ ಮನೋಧರ್ಮ ವೀರ ವೈರಾಗ್ಯವೆನ್ನುವುದರಲ್ಲಿ ಸಂಶಯವಿಲ್ಲ. ಕ್ಷಣಿಕ ಸುಖಕ್ಕೆ ಮತ್ತು ಶಾಶ್ವತವಾದ ದಾಸ್ಯಕ್ಕೆ ಮರುಳಾಗದೆ ತನ್ನ ಧ್ಯೇಯಸಾಧನೆಗಾಗಿ ಹೊರಡುತ್ತಾಳೆ. ಹೆಣ್ಣಿನ ಸ್ವಗುಣಗಳಾದ ರಾಗಭೋಗಗಳು ಎಲ್ಲ ಹೆಣ್ಣಿನಂತೆ ಅಕ್ಕನಿಗಿದ್ದರೂ ಮಿಗಿಲಾದ ತ್ಯಾಗಭೋಗಗಳು ಅವಳಲ್ಲಿದ್ದುದು ಒಂದು ವಿಶೇಷ. ಶಿವನನ್ನೇ ಕಾಣಲು ಹೊರಟ ಅಕ್ಕನಲ್ಲಿ ರಾಗಭೋಗದ ತಕ್ಕಡಿಗಿಂತ ತ್ಯಾಗಭೋಗದ ತಕ್ಕಡಿ ಅಕ್ಕನಲ್ಲಿ ಅಧಿಕವಾಗಿದ್ದಿತು.

ಪುಸ್ತಕದ ಮೂರನೆಯ ಘಟ್ಟದಲ್ಲಿ ನಾದಾತೀತನೂ, ಮತಿಗತೀತನೂ. ಆದ ಶಿವನನ್ನು ಒಲಿಸಿಕೊಳ್ಳಲು ಅಕ್ಕ ಪಟ್ಟ ಶ್ರಮವು ಹೇಳಲಸಾಧ್ಯವಾದುದು. ಭಕ್ತಿಯನ್ನು ಒರೆಹಚ್ಚಿ ನೋಡುವ ಶಿವನ ಪರೀಕ್ಷೆಗಳಿಗೆ ಎಣೆಯುಂಟೇ? ಅವನನ್ನು ಎಷ್ಟು ಅರ್ಚಿಸಿದರೂ, ಹೊಗಳಿದರೂ, ಅವನು ಭಕ್ತ ಪರಾಧೀನನಾಗುವುದು ವಿಳಂಬವೇ ಸರಿ. ಕೊನೆಗೂ ತನ್ನ ಸಂಕಲ್ಪದಂತೆ ತನ್ನನ್ನು ಒಲಿಸಿಕೊಂಡ ಅಕ್ಕನ ಒಲುಮೆಯ ಪತ್ರಕ್ಕೆ ಚೆನ್ನನು ರುಜು ಹಾಕಿದನಂತೆ. ಇಲ್ಲಿಗೆ ಅಕ್ಕನ ಸಂಕಲ್ಪ ಸಾಧನೆ ಸಾರ್ಥಕವಾಯಿತು. ಈ ಘಟ್ಟವು ಮುಗಿಯುವುದರೊಳಗೆ ಅವಳ ಜೀವನದ ಘಟ್ಟವೂ ಪರಿಸಮಾಪ್ತಿಯಾಗುತ್ತದೆ.

ಮುಂದೆ ಅಕ್ಕನಿಗೂ "ಅಲ್ಲಮ," "ಬಸವಣ್ಣ," ಮುಂತಾದವರಿಗಾದ ಸಂವಾದ ಸೊಗಸಾಗಿ ಚಿತ್ರಿತವಾಗಿದೆ. ಅವರಲ್ಲಿ ನಡೆದ ಜ್ಞಾನ ಸಂಪಾದದ ಅರಿವನ್ನು ತಿಳಿದ ಅಕ್ಕ ಅಲ್ಲಿಂದ ಬೀಳ್ಕೊಂಡು ಶ್ರೀಶೈಲದ ಕಡೆಗೆ ಬರುತ್ತಾಳೆ.

ಅಕ್ಕನ ಜೀವನದ ಕೊನೆಯ ಘಟ್ಟ ಚೆನ್ನನನ್ನು ಕಾಣುವುದು. ಶ್ರೀಶೈಲದ ಮಲ್ಲಿಕಾರ್ಜುನನನ್ನು ಕಂಡು ಅವನ ಭಾವಸಮಾಧಿಯಲ್ಲಿ ಬಯಲಾಗುತ್ತಾಳೆ.

ತನ್ನ ಸಾಕಾರಮೂರ್ತಿಯಾದ ಚೆನ್ನನನ್ನು ಕಂಡಾಗ "ಹೊಳೆವ ಕೆಂಜಡೆಗಳ ಮಣಿಮಕುಟ ಒಪ್ಪುವ

# ೪೧. ಮುನ್ನುಡಿಗಳ ಬಗೆಗೆ ಎರಡು ನುಡಿಗಳು

ಬ. ನಂ. ರಾಮಸ್ವಾಮಿ

ಮಾತು ಮುತ್ತಿನಂತಿರಬೇಕು. ನುಡಿದರೆ ಮಾಣಿಕದ ದೀಪ್ತಿಯಂತಿರಬೇಕು ಎಂದು ಬಸವಣ್ಣನವರು ಸಾರ್ಥಕವಾದ ಮಾತನ್ನೇ ಆಡಿದ್ದಾರೆ. ಮಾತು ಆಡಿದರೆ ಹೋಯಿತು. ಮುತ್ತು ಒಡೆದರೆ ಹೋಯಿತು ಎಂಬ ನಾಣ್ನುಡಿಯೂ ಉಂಟು. ಆಡುವ ಮಾತು ಮತ್ತೊಬ್ಬರ ಮನಸ್ಸನ್ನೋಯಿಸದೆ, ನಮ್ಮ ಘನತೆಗೆ ಕುಂದುತಾರದೆ, ಮತ್ತೊಬ್ಬರಿಗೆ ಪ್ರೋತ್ಸಾಹಕವಾಗಿದ್ದರೆ ಮಾತ್ರ ಆ ಮಾತಿಗೂ ಬೆಲೆ, ಅದನ್ನು ಹೇಳಿದುದಕ್ಕೂ ಸಾರ್ಥಕ. ಇಂತಹ ಮಾತುಗಳನ್ನು ಶ್ರೀ ಪರಮೇಶ್ವರ ಭಟ್ಟರ "ಮುನ್ನುಡಿಗಳು" ಎಂಬ ಕೃತಿಯಲ್ಲಿ ನೋಡಬಹುದು.

ಮುನ್ನುಡಿಯ ಉದ್ದೇಶವೇನು ಎಂಬ ಪ್ರಶ್ನೆ ನಮ್ಮ ಮುಂದೆ ಬಂದಾಗ ಬಿ. ಎಂ. ಶ್ರೀ. ಡಿ. ಎಲ್. ಎನ್. ಮೊದಲಾದ ಮಹನೀಯರು ಕಿರಿಯ ಸಾಹಿತಿಗಳಿಗೆ ಪ್ರೋತ್ಸಾಹ ತೋರಲು ದೀರ್ಘವಾದ ಮುನ್ನುಡಿಗಳನ್ನು ಬರೆದು ಮಾರ್ಗದೀಪಕರಾಗಿದ್ದಾರೆ. ಇದೇ ಪರಂಪರೆ ಮುಂದೆಯೂ ಬೆಳೆದುಬಂದಿತು. ಇಂದಿಗೂ ಅನೇಕ ಕೃತಿಗಳಲ್ಲಿ ಮುನ್ನುಡಿಯೇ ಅತ್ಯಂತ ಉಪಯುಕ್ತ ಲೇಖನಗಳಾಗಿವೆ.

ನಾವು ಹೇಳುವ ಮಾತು ಅನೇಕವೇಳೆ ಸ್ವಾರಸ್ಯವಾಗಿದ್ದರೂ, ಕೆಲವೊಮ್ಮೆ ಜಿಗುಟಾಗಿಯೂ, ತೊಡಕಾಗಿಯೂ ಇರುವುದುಂಟು. ಪರಮೇಶ್ವರ ಭಟ್ಟರೇ ಹೇಳುವಂತೆ "ಆಡುವ ಮಾತು ಹಲಸಿನ ಹಣ್ಣಿನಂತಾಗಬಾರದು" ಎಂಬ ಮಾತು ಸತ್ಯ. ಹಲಸಿನ ಹಣ್ಣು ರುಚಿಯೇನೋ ಸರಿ; ಆದರೆ ಸುತ್ತಲೂ ತೊಡಕು ಮತ್ತು ಅಂಟು. ಅದಕ್ಕೆಂದೇ ಆಡುವ ಮಾತು ಹದವಾಗಿದ್ದು ಪಂಪ ಹೇಳಿದಂತೆ "ಹಿತಮಿತ ಮೃದುವಚನ"ದಿಂದ ಕೂಡಿದ್ದರೇ ಅದರ ಸೊಗಸು.

ಸಾಮಾನ್ಯವಾಗಿ ಕಿರಿಯ ಲೇಖಕರು ಉತ್ಸಾಹದ ಚಿಲುಮೆಯಲ್ಲಿ ಉಬ್ಬಿ ತಮ್ಮ ಕಾವ್ಯಲತೆಯನ್ನು ಹಬ್ಬಿಸಲು ಇಚ್ಛಿಸುತ್ತಾರೆ. ಅದಕ್ಕೆ ಹಿರಿಯರು ಬಿಸಿನೀರೆರೆಯಬಾರದು. ಅವರ ಆಸೆಯ ಬಳ್ಳಿ ಹಬ್ಬುವಂತೆ ತಮ್ಮ ಹಾರೈಕೆಯ ತನಿವೆರೆದಾಗ ಮಾತ್ರ ಅದು ಹಿರಿದಾಗಿ ಹಬ್ಬಿ ಹೂವುಬಿಟ್ಟೀತು. ಆ ಬಳ್ಳಿಗೆ ಆಸರೆ ಈ ಮುನ್ನುಡಿಯ ಹಿರಿಯ ಮರ.

ಕೃತಿಯೆಂಬ ಕೋಟೆಗೆ ಈ ಮುನ್ನುಡಿಯು, ಕೋಟೆಯ ಬಾಗಿಲಲ್ಲಿರುವ ಆಂಜನೇಯ ದೇವಸ್ಥಾನವೋ, ಗಣಪತಿಯ ಗುಡಿಯೋ ಇದ್ದಂತೆ. ಇದರಿಂದ ಕೃತಿಯ ರಕ್ಷೆಯೂ ಹೌದು, ಕವಿಗೆ ಕೀರ್ತಿಯೂ ಹೌದು.

ಕ್ಷಿಪಣಿಯುಗದ ಈ ಕಾಲದಲ್ಲಿ ಹೆಚ್ಚಿನ ಸಹೃದಯರು ಸ್ವಾರಸ್ಯ ಭಾಗವನ್ನಷ್ಟೇ ನೋಡುವ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದಿದ್ದಾರೆ. ಅದಕ್ಕೆಂದೇ ಮುನ್ನುಡಿಯನ್ನು ಅರಸುವ ಸಂಭವವೂ ಉಂಟು. ಅಂದಮೇಲೆ ಮುನ್ನುಡಿಯು ಕೃತಿಯ ಸಾರವನ್ನು ಹೀರಿ ರಸವತ್ತಾದ ಭಾಗವನ್ನು ತೋರುವಂತಿರಬೇಕು. ಕೃತಿಗಳಿಗೆ ಮುನ್ನುಡಿಯನ್ನು ಬರೆಯುವುದು ಒಂದು ಜವಾಬ್ದಾರಿಯುತ ಜಾಣ್ಮೆಯ ಕೆಲಸವೂ ಹೌದು. ಕಿರಿಯರಿಗೆ ಪ್ರೋತ್ಸಾಹದಾಯಕವಾಗಿಯೂ, ಸಮಾನರಿಗೆ ನಮ್ರಮಾರ್ಗದರ್ಶಕರಾಗಿಯೂ, ವಿಮರ್ಶಕರ ದೂರಿಗೆ ಹೆಗಲು ಕೊಡಬೇಕಾಗುವ ಈ ಕಾರ್ಯವನ್ನು ಬಹುಜಾಣ್ಮೆಯಿಂದ, ಜಾಗರೂಕತೆಯಿಂದ ನಡೆಸಬೇಕಾಗುತ್ತದೆ. ಶ್ರೀ ಪರಮೇಶ್ವರ ಭಟ್ಟರ ಈ ಮುನ್ನುಡಿಗಳ ಸಂಕಲನ ಇಂತಹ ಹಿರಿಯ ಹೊರೆ ಹೊತ್ತ ಒಬ್ಬ ದಾರ್ಶನಿಕ, ಮಾರ್ಗದೀಪಕನ ರೀತಿಯಲ್ಲಿ ತೋರುವುದರಲ್ಲಿ ಸಂಶಯವಿಲ್ಲ.

ಕೆಲವೊಮ್ಮೆ ಈ ಮುನ್ನುಡಿಗಳಿಂದಲೇ ಕೃತಿಯ ಘನತೆಯೂ ಹೆಚ್ಚಿರುವ ಸಂಭವವೂ ಉಂಟು. ಕೊಳೆತುಂಬಿದ ಈ ಸಾಹಿತ್ಯಸುವರ್ಣ ಮುನ್ನುಡಿಯೆಂಬ ಮೂಸೆಯಲ್ಲಿ ಪರಿಶುದ್ಧಗೊಳ್ಳುವ ಸಂಭವವೂ ಬರುತ್ತದೆ.

"ಈ ಜೀವನವೆಂಬ ಸಾಗರವನ್ನು ಮಥಿಸಿದಾಗ ಹಾಲಾಹಲ ಹುಟ್ಟಿಬಂದು ಅನಂತರ ಅಮೃತಬಂದಂತೆ "ಹಾಲಾಹಲ"ವೆಂಬ ಈ ಕಥೆಯೂ ಸಾಹಿತ್ಯದ ಅಮೃತದ ಕೃತಿಯಾಗಿ ಮೂಡಿಬಂದಿದೆ. ಇದನ್ನು ಆಸ್ವಾದಿಸುವ ಕನ್ನಡಜನ ರಸಾನುಭವಿಗಳಾಗಬೇಕು" ಎಂದು ೧೯೪೭ರಲ್ಲಿ 'ಹಿರೇ ಮಲ್ಲೂರ್ ಈಶ್ವರನ್'

ರವರ ಕೃತಿಯೊಂದಕ್ಕೆ ಬರೆದ ಈ ಮುನ್ನುಡಿಯಲ್ಲೇ ಅವರ ಆಕಾಂಕ್ಷೆಗಳನ್ನು ಈ ಬಗೆಯ ಮಾತುಗಳಿಂದ ನೀಡಿರುವುದನ್ನು. ಅಂದಿನಿಂದ ಇಂದಿನವರೆಗೂ ಈ ಪ್ರೋತ್ಸಾಹಕೊಡುವ ಹವ್ಯಾಸವನ್ನು ಅವ್ಯಾಹತವಾಗಿ ನಡೆಸಿಕೊಂಡು ಬಂದಿರುವುದನ್ನು ಕಾಣಬಹುದು.

ತಾಯಿ ಮಗುವನ್ನು ಮಮತೆಯಿಂದ ಬೆರಳುಹಿಡಿದು ಹೆಜ್ಜೆಹೆಜ್ಜೆಗೂ ನಡೆಯಿಸುವುದನ್ನು ಕಲಿಸುವಂತೆ ಕನ್ನಡಮ್ಮನ ಈ ದೇಗುಲಕ್ಕೆ ಅನೇಕ ಕಿರಿಯರನ್ನು ತಮ್ಮ ಸಲಹೆಗಳಿಂದ ಸಂತೈಸಿ ಕೈಹಿಡಿದು ಕರೆತಂದು, ರಸಿಕರಿಗೆ ಪರಿಚಯಮಾಡಿಸಿ ತನ್ಮೂಲಕ ಆ ಕವಿ ಬೆಳಕಿಗೆ ಬರಲು ಈ ಕವಿ ಸಹಾಯಕರಾಗಿದ್ದಾರೆ.

ದೀಪ ತನಗೆತಾನೇ ಉರಿದು ಜಗಕ್ಕೆ ಬೆಳಕು ಕೊಡುವಂತೆ, ಮುಗಿಲ ಕಡಲಲ್ಲಿ ಮಿಂದು 'ಮೇಘದೂತ'ನಂತೆ ಸುರಿದು 'ಇಂದ್ರಚಾಪ'ದಂತೆ ಮರೆಯಾದರೂ ಚಿಂತೆಯಿಲ್ಲ, ಇರುವ ನಾಲ್ಕಾರು ದಿನಗಳಲ್ಲಿ 'ಸುರಗಿ'ಯಂತೆ ಬಾಳಿ 'ಇಂದ್ರಗೋಪ'ದಂತೆ ಬೆಳಗುವ ಆಶಯದಿಂದಲೇ ಬಾಳುವ ಈ ಕವಿ ತನ್ನದೇ ಭಾವನೆ ಮತ್ತೊಬ್ಬರಲ್ಲೂ ಬೆಳೆಯಲಿ ಎಂದು ಇಚ್ಛಿಸುತ್ತಾರೆ. "ಗಿಡದಲ್ಲಿ ಹೂವು ಅರಳಿದರೆ ತಾನೇ. ಸ್ವೀಕರಿಸುವುದು, ಮುಡಿಯುವುದು, ಆನಂದಿಸುವುದು. ಆದರೆ ಸಹೃದಯ ಈ ಗಿಡ ಅರಳಲೂ ಹೆಚ್ಚುಹೆಚ್ಚು ಹೂಬಿಡಲೂ ಪ್ರೋತ್ಸಾಹಿಸಬೇಕು" ಎನ್ನುತ್ತಾರೆ.

ಕೆಲವೊಮ್ಮೆ ಇವರ ಮುನ್ನುಡಿಗಳನ್ನು ಓದಿದರೆ ಸಾಹಿತ್ಯದ ಸಾರಸ್ವತ ಲೋಕದಲ್ಲಿ ಸಂಚರಿಸಿದಂತೆ ಅನುಭವವಾಗುತ್ತದೆ. ಅಲ್ಲಿ ಕಾವ್ಯಮೀಮಾಂಸೆ, ವಿಮರ್ಶನ ಕಾರ್ಯಗಳೂ ಬೆಸೆದುಕೊಂಡು ಕರ್ತೃವಿನ ಆಶಯಕ್ಕೆ ಕೊಡಲಿಪೆಟ್ಟು ಕೊಡದೆ ಬರೆದುಕೊಂಡು ಹೋಗುವುದೇ ಇವರ ವೈಶಿಷ್ಟ್ಯ.

"ಕವಿ ಸಮಾಜವನ್ನೂ ಪ್ರಕೃತಿಯನ್ನೂ ನೋಡಿ ನಲಿಯಬೇಕು. ನಲಿದು ಒಲಿಯಬೇಕು ಒಲಿದು ಆನಂದಿಸಬೇಕು. ಶಿವ ಹೇಗೆ ಅರಿವನ್ನೋ ಹಾಗೆಯೇ ಸುಖ ಹೇಗೆ ದುಃಖವನ್ನೋ ಹಾಗೆಯೇ ಕವಿಯ ಉಲ್ಲಾಸಕ್ಕೆ ವಿಷಯವಾದಾಗ ಅದು ಲೌಕಿಕ ರೀತಿಯಲ್ಲಿ ಅತೀಂದ್ರಿಯಾಸ್ವಾದದ ವಸ್ತುವಾಗಿ ನಮಗೆ ಆನಂದವನ್ನೇ ಕೊಡುತ್ತದೆ. ಆ ಆನಂದ ಎಷ್ಟರಮಟ್ಟಿಗೆ ದೊರಕುತ್ತದೆ ಅಷ್ಟರ ಮಟ್ಟಿಗೆ ಕವಿ ಚತುರನಾಗುತ್ತಾನೆ. ಒಂದೇ ಹಕ್ಕಿಯಹಾಡು, ಒಂದೇ ನಕ್ಷತ್ರದ ಹೊಳಪು, ಒಂದೇ ಹೂವಿನಚೆಲುವು. ಒಬ್ಬೊಬ್ಬ ಕವಿಗೆ ಒಂದೊಂದು ರೀತಿಯಲ್ಲಿ ಅನುಭವಕ್ಕೆ ಬರುತ್ತದೆ. ಅನುಭವ ಬೇರೆಬೇರೆ ಅಭಿವ್ಯಕ್ತಿ ಬೇರೆಬೇರೆ ಎಂದು "ಕಾಣ್ಕೆ"ಯ ಮುನ್ನುಡಿಯಲ್ಲಿ ಹೇಳಿದ್ದಾರೆ. ಆದರೆ ಇಂದು ರಸಾನಂದಕೊಡುವ ಈ ಅನುಭವಗಳನ್ನು ಆಹ್ವಾನಿಸುವ ಅಭಿವ್ಯಕ್ತಿಗಳನ್ನು ಮೆಚ್ಚಿ ಪ್ರೋತ್ಸಾಹಿಸುವ ರಸಿಕ ಸಹೃದಯರ ಅಗತ್ಯ ತುಂಬಾ ಬೇಕಾಗಿದೆ ಎಂದು ಪದೇಪದೇ ಒತ್ತಿ ಹೇಳುತ್ತಾರೆ.

ಸಾ. ಶಿ. ಮರುಳಯ್ಯ, ಹೆಚ್. ಜೆ. ಮಹದೇವಯ್ಯ ಮುಂತಾದವರ ಕೃತಿಗಳಿಗೆ ಮುನ್ನುಡಿ ಬರೆಯುತ್ತಾ ಹೇಳುವ ಅವರ ಮಾತುಗಳಲ್ಲಿ ಮಮತೆ, ವಾತ್ಸಲ್ಯಗಳು ಮಡುಗಟ್ಟಿ ನಿಂತಿವೆ. "ಸಾಹಿತ್ಯಪ್ರಪಂಚಕ್ಕೆ ಪದಾರ್ಪಣ ಮಾಡುತ್ತಿರಲು ಬರುತ್ತಿರುವ ಹೊಸಬರನ್ನು ಕೈಹಿಡಿದ ನಡೆಸಿಕೊಂಡು ಬರುವುದೂ. ಪರಿಚಯದ ನಾಲ್ಕುಮಾತು ಹೇಳಿ ಧೈರ್ಯೋತ್ಸಾಹಗಳನ್ನು ನೀಡಿ ಅವರಿಂದ ಇತೋಪ್ಯತಿಶಯವಾಗಿ ನಾಡು ನುಡಿಗಳ ಸೇವೆ ನಡೆಯುವಂತೆ ನೋಡಿಕೊಳ್ಳುವುದೂ ಉಪಾಧ್ಯಾಯ ಗೋತ್ರದವರಿಗೆ ಪವಿತ್ರ ಕಾರ್ಯವಾಗಿದೆ" ಎಂದು ಅಧ್ಯಾಪಕರಾಗಿ ಬರೆದ ಮಾತುಗಳು ಅನೇಕರ ಅರಿವಿಗೆ ಬೆಳಕು ನೀಡುವುದರಲ್ಲಿ ಸಂಶಯವಿಲ್ಲ. "ಕವಿಗೆ ಕವಿ ಮುನಿವಂ" ಎಂಬ ಇಂದಿನ ಈರ್ಷ್ಯಾಮಯ ಜಗತ್ತಿನಲ್ಲಿ ಇಷ್ಟು ಮಮತೆಯ ಮಾತನಾಡಿ ತಾನು ಕನ್ನಡಮ್ಮನ ಗುಡಿಗೆ ಪೂಜಾರಿಯಾಗಿ ನಿಂತು ಇತರರನ್ನೂ ಆಹ್ವಾನಿಸಿ, ಆದರಿಸುವ ಇವರ ಮನೋಭಾವ ಬಹು ವಿರಳ ಎನ್ನಬಹುದು.

ಸಾಹಿತ್ಯ ಜೇನಿನಂತೆ. ಕವಿಯೆಂಬ ಭ್ರಮರ ವಸ್ತುವಿನ್ಯಾಸಗಳೆಂಬ ಹೂವಿಂದ ಹೂವಿಗೆ ಹಾರಿ. ರಸ. ಧ್ವನಿ. ಔಚಿತ್ಯಗಳೆಂಬ ಪರಾಗಗಳಿಂದ ಈ ಜೇನನ್ನು ಸಂಗ್ರಹಿಸುತ್ತಾನೆ. ಇದನ್ನು ಹದಹದವಾಗಿ ಸವಿದಂತೆ ರಸಿಕರಿಗೆ ಸ್ವಾದ ಹೆಚ್ಚುತ್ತದೆಯೆಂಬುದರಲ್ಲಿ ಸಂಶಯವಿಲ್ಲ. ಆದರೆ ಈ ಜೇನನ್ನು ಧೈರ್ಯದಿಂದ ಪಡೆದು ಹಂಚುವ ಎದೆಗಾರಿಕೆ ಕೆಲವರಿಗೆ ಮಾತ್ರ ಇರುತ್ತದೆ. ಅಂತಹವರಲ್ಲಿ ಭಟ್ಟರೂ ಒಬ್ಬರು.

"ಜೀವನ ಗೀತ"ಕ್ಕೆ ಮುನ್ನುಡಿ ಬರೆಯುತ್ತಾ ಅವರು ನೀಡುವ ಸಾಂತ್ವನದ ಮಾತು ಇದಕ್ಕೆ ನಿದರ್ಶನ. "ಹೆಜ್ಜೆ ಹೆಜ್ಜೆಗೆ ಹೆಜ್ಜೇನಿನಂತಹ ಇನಿದಾದ ಹಾಡು ನಿಮ್ಮ ಎದೆಯಿಂದ ಜಿನುಗಿಬರಲಿ, ಹಾರ್ದಿಕವಾಗಿ

ಊರುಗೋಲಾಗಿ ಮುಂದೆ ಮುಂದೆ ಹೋಗಿರುವ ಹಿರಿಯ ಯಾತ್ರಿಕರ ಉತ್ತಮ ಕೃತಿಗಳು ನಿಮ್ಮ ನೆರವಿಗೆ ಬರಲಿ" ಎಂದು ಹಾರೈಸುತ್ತಾರೆ.

"ದೀಪದಿಂದ ಹಲವು ಸಣ್ಣ ಹಣತೆಗಳನ್ನು ಹಚ್ಚಿಕೊಂಡ ಹಾಗೆ ಎಲ್ಲಿಯೂ ಒಂದೇ ಬೆಳಕು, ಆದರೆ ಹಣತೆ ಬೇರೆ ಬೇರೆ" ಎಂದು 'ಕರ್ಮಜೀವಿ' ಕೃತಿಯ ಮುನ್ನುಡಿಯಲ್ಲಿ ತಿಳಿಸಿ ಸ್ವತಃ ತಾವು ದೀಪಕರಾಗಿದ್ದಾರೆ. 'ತರಂಗ'ದ ಪುಟಗಳಲ್ಲಿ ಚಿಮ್ಮಿ ಹೊಳೆದ ಆಣಿಮುತ್ತುಗಳನ್ನು ನೋಡಿ ನಾನು ಬೆರಗಾಗಿ ಹೋದೆ ಎಂದು ಕಿರಿಯರಾದ ರಾಜಶೇಖರಪ್ಪನವರನ್ನು ಬೆನ್ನುತಟ್ಟುವಾಗಲೇ ಆಗಲಿ. ಸಾಹಿತ್ಯ ಯಾತ್ರೆಗೆ ಮುಂದುವರಿಯುತ್ತಿರುವ ಇವರನ್ನು ದೂರದಿಂದ ನೋಡಿ ಭಕ್ತಿಯಿಂದ ಕೈಮುಗಿಯುವುದು ನನ್ನ ಕರ್ತವ್ಯವೆಂದು ಭಾವಿಸುತ್ತೇನೆ ಎಂದು ಅಚ್ಯುತ ಭಟ್ಟರಿಗೆ ಹೇಳುವ ಮಾತಿನಲ್ಲಿ ಇವರ ಸಮರಸ ಭಾವವನ್ನು ಕಾಣಬಹುದು.

"ಒಬ್ಬ ಸಾಹಿತಿ ಮತ್ತೊಬ್ಬನ ಸಾಹಿತ್ಯವನ್ನು ಗುರುತಿಸುವಾಗ, ನಿರ್ಮತ್ಸರನಾಗಿ, ನಿಷ್ಪಾಕ್ಷಿಕವಾಗಿ ಪೂರ್ವಗ್ರಹಗ್ರಸ್ತನಾಗದೆ ಸಹಜ, ಸುಂದರ ಸಜ್ಜನಿಕೆಯಿಂದ ಗುರುತಿಸಬೇಕು, ಗೌರವಿಸಬೇಕು ಎಂದು ಪಿ. ಹೊಸಬೆಟ್ಟುರವರ ಕೃತಿಗೆ ಮುನ್ನುಡಿ ಬರೆಯುತ್ತಾ ತಮ್ಮ ನಿಲುವನ್ನು ಸಾರಿದ್ದಾರೆ. ವಿಜ್ಞಾನಿ ಇಂದು ಕೃತಕ ಹೃದಯವನ್ನೇ ಸೃಜಿಸಬಹುದು. ಆದರೆ ಸಾಹಿತಿ ಹೃದಯಪರಿವರ್ತನೆಮಾಡಬಲ್ಲ ಎಂದು ಹೇಳಿ 'ಒಳಗೆ ಹದವಿದ್ದರೆ ಪದ ಹೊರಗೆ ಬರುತ್ತದೆ' ಈ ಪದಗಳಿಂದ ಇದು ಸಾಧ್ಯ ಎಂದು ಹೇಳುತ್ತಾರೆ.

ಇನ್ನು ಒಂದು ಭಾಷೆಯ ಬೆಳವಣಿಗೆಗೆ ಏನೆಲ್ಲಾ ಬೇಕು ಎಂಬುದನ್ನು ಅವರು ಇತರರಿಗೆ ಬರೆದ ಮುನ್ನುಡಿಗಳಿಂದಲೇ ಒಕ್ಕಣಿಸಿದರೆ ಸ್ವಾರಸ್ಯಪೂರ್ಣವಾಗಿರುತ್ತದೆ.

ವಿನಯಶೀಲನೂ, ವಿಚಾರವಂತನೂ ಆದ ಕವಿ ಸತತಾಭ್ಯಾಸ, ಸಹಜ ಪ್ರತಿಭೆಗಳಿಂದ ಕಾವ್ಯ ರಚಿಸಬಹುದಾದರೂ ಇಂದು ಅದಕ್ಕೆ ಜಾಹೀರಾತು ಬೇಕೇ ಬೇಕು. ಇದು ಜಾಹೀರಾತು ಯುಗ. ಮುನ್ನುಡಿಗಳನ್ನು ಓದಿ ವಿಮರ್ಶೆಮಾಡುವ ಜನಗಳ ಮಧ್ಯದಲ್ಲಿ ನುಸುಳಿಕೊಂಡು ಹೋಗಬೇಕಾಗಿರುವ ಪರಿಸ್ಥಿತಿ ಒದಗಿರುವಾಗ ಈ ಜಾಹೀರಾತಿನ ಅವಶ್ಯಕತೆ ಉಂಟೆಂದು ಹೇಳುತ್ತಾರೆ. ಆದರೆ ಈ ಜಾಹೀರಾತಾದರೂ ಎಂತಹುದು ? ಒಬ್ಬ ಓದುಗ ಕೃತಿಯನ್ನು ಆಸ್ವಾದಿಸಿ ಆನಂದಪಟ್ಟು ಮತ್ತೊಬ್ಬನಿಗೆ ಕೊಂಡು ಓದಲು ಹೇಳುವುದೇ ಇಂದಿನ ಜಾಹೀರಾತು. ಕಾವ್ಯದಲ್ಲಿ ಅನುಭವ ಪ್ರಾಮಾಣಿಕತೆ ಮುಖ್ಯ; ಅದರ ರಮ್ಯವಾದ ಅಭಿವ್ಯಕ್ತಿ ಮುಖ್ಯ. ಈ ಅಭಿವ್ಯಕ್ತಿ ಹೊಸದಾಗಿದ್ದು ಮುದ್ರಣದ ಅಚ್ಚುಮೆಚ್ಚುವಂತಿದ್ದರೆ ಕಾವ್ಯದ ಸೊಗಸು ಹೆಚ್ಚೀತು ಎನ್ನುತ್ತಾರೆ.

ರಾಮನಿಲ್ಲದ ಅಯೋಧ್ಯೆಯಂತೆ ಬಿಕೋ ಎಂದು ಹಾಳುಸುರಿಯುತ್ತಿರುವ ನಮ್ಮ ಜನದ ಮನೋಮಂದಿರವನ್ನು ಬೆಳಗುವುದಕ್ಕೆ ಈ ಹೊತ್ತು ಆಧ್ಯಾತ್ಮಿಕ ಜ್ಞಾನಸಂಪತ್ತು ಬೇಕಾಗಿದೆ ಎಂದು 'ಕನ್ನಡದ ಕುವರ'ರ 'ಅರಿವು' ಪುಸ್ತಕದಲ್ಲಿ ಅರಿವುಮಾಡಿಕೊಟ್ಟಿದ್ದಾರೆ. ಅಂತೆಯೇ "ಶ್ರೀಮಂಜುನಾಥೇಶ್ವರ ಶತಕಂ"ನಲ್ಲಿ ಭಕ್ತಿಜ್ಞಾನ ವೈರಾಗ್ಯದ ವಸ್ತು ವಿಶೇಷವನ್ನು ಕಾಣಬಹುದೆಂದು ಸದ್ವಿಚಾರಗಳನ್ನು ನಾ ಬಲ್ಲಂತೆ ಹೇಳ್ವೆ ಎಂದು ಹೇಳಿದ ತಿರುಮಲೇಶ ಭಟ್ಟರನ್ನು ಹೊಗಳುವುದರಲ್ಲಾಗಲೀ, ದೇಹವೆಂಬ ದೇವಾಲಯದಲ್ಲಿ ಶ್ರೀದೇವರು ನೆಲೆನಿಲ್ಲಿಸಲು 'ಶ್ರೀಶಾಸ್ತ್ರಿ'ಯವರ ಸಂಧ್ಯಾವಂದನೆ ಪುಸ್ತಕ ನೆರವಾದೀತು ಎಂದು ಹೇಳುವಾಗ ಇವರ ಆಧ್ಯಾತ್ಮದೃಷ್ಟಿ ಗೋಚರವಾಗದೆ ಇರದು.

"ವಾತ್ಸಲ್ಯಸಂಹಿತೆ" ಎಂದು ನವೀನವಾದ ವಚನಶಾರದೆಯ ಅರ್ಜಾವತಾರ. ಉಪಾಸಕರು ಕಂಡುಂಡ ತಾಯಿಯ ಸಕ್ಕರೆಯ ಸವಿಯ ಕಟ್ಟಕ್ಕರೆಯ ಮುದ್ದು ಇಲ್ಲಿ ಕನ್ನಡಿಸಿದ ರೀತಿ ಹೊಚ್ಚಹೊಸದಾಗಿದೆ. ಅಚ್ಚುಮೆಚ್ಚಾಗಿದೆ ಎಂದು ಬಿಚ್ಚುಮನಸ್ಸಿನಿಂದ "ಚಂದ್ರಶೇಖರ ಐತಾಳ"ರನ್ನು ಕಾವ್ಯಜಗತ್ತಿಗೆ ಪರಿಚಯಿಸಿದ್ದಾರೆ. ತಾಯಿಯ ವಿರಾಡ್‌ದರ್ಶನದ ಎಳೆಎಳೆಗಳನ್ನು ಬಿಡಿಸಿ ಮುನ್ನುಡಿಯಲ್ಲಿ ವಿಸ್ತರಿಸಿದ್ದಾರೆ. ಇಷ್ಟು ಒಪ್ಪವಾಗಿ ಇಷ್ಟು ವಿವರವಾಗಿ ವಾತ್ಸಲ್ಯಭಾವವನ್ನು ಹಾಡಿದ ಕವಿ ಐತಾಳರೊಬ್ಬರೇ ಎಂದು ನನ್ನ ತಿಳಿವಳಿಕೆ ಎಂದು ಹೇಳಿ ಆ ಮಹಿಮೆಯನ್ನು ಗುರುತಿಸಲು ನಮ್ಮನ್ನು ಆಕರ್ಷಿಸಿದ್ದಾರೆ.

ಉಚಿತಕ್ಕೆ ತಕ್ಕಷ್ಟು ಹೇಳಿದಾಗ ಮಾತು ಕಿರಿದಾಗಿ ಅರ್ಥ ಹಿರಿದಾಗಿ ಒಂದು ಧ್ವನಿ ರಮ್ಯಕ್ಕೆ ಬರಬೇಕು” ಎಂದು ಭಾವನೆಯು ಎಂಜಿನ್‌ನ್ನು ಮುಂದೆ ನೂಕುತ್ತಿರುವಂತೆಯೇ ಬುದ್ಧಿಯು ಸ್ಟೀರಿಂಗ್ ಸರಿಯಾದ ದಾರಿಯಲ್ಲಿ ನಡೆಯಬೇಕು. ವಿವೇಕದ ಬ್ರೇಕೂ ಬೇಕು” ಎನ್ನುತ್ತಾರೆ. ಕಾವ್ಯಜಗತ್ತಿನಲ್ಲಿ ವಿಹರಿಸುವ ಓದುಗ ಪರಿಮಳದ ಪರಿಕರದ ಅಂಗಡಿಯಲ್ಲಿ ಓಡಾಡಿದಂತೆ ಆಗಬೇಕು. ಕೆಲವು ಪುಸ್ತಕಗಳನ್ನು ಓದಿದರೆ ಸುವಾಸನೆಯುಳ್ಳ ಹೂವಿನ ತೋಟದ ಮಧ್ಯೆ ಸಂಚರಿಸಿದಂತೆ ಆಗಬೇಕು ಎಂದು “ವಾಗ್ರೂಢಿ”ಯ ಮುನ್ನುಡಿಯಲ್ಲಿ ಹೇಳಿದ್ದಾರೆ.

ಮೂಗಿಗಿಂತ ಮೂಗುತಿಭಾರ ಎನ್ನುವಂತೆ ಮುನ್ನುಡಿಗಳಾಗಬಾರದು ಎಂಬ ಅಭಿಪ್ರಾಯವುಳ್ಳ ಇವರನ್ನೇ ಕುರಿತು ಕೆಲವು ವಿಮರ್ಶಕರು ಟೀಕಿಸಿದ್ದೂ ಉಂಟು. ಆದರೆ ಇದು ಉದಯೋನ್ಮುಖ ಕವಿಯ ಆಸೆಯ ಬಳ್ಳಿಯು ಬೆಳೆಯಲು ಎರೆದ ನಲ್ನುಡಿಯೇ ಹೊರತು ಆತನನ್ನು ಹೊಗಳಲು, ಹಬ್ಬದ ಪ್ರಚಾರವಾಗಲಿ, ಚುಚ್ಚಿತೋರುವ ವಿಮರ್ಶೆಯೂ ಅಲ್ಲ ಎಂಬುದನ್ನು ಇಂದಿನ ಮುನ್ನುಡಿಗಳನ್ನೇ ಕುರಿತು ವಿಚಾರಮಾಡುವ ವಿಮರ್ಶಕರು ಗ್ರಹಿಸಬೇಕು. ವಿಮರ್ಶೆ ಎಂಬುದು ಬಾಲಭರತ ಸಿಂಹವನ್ನು ಹಿಡಿದು ಬಾಯಿ ಅಗಲಿಸಿ ಹಲ್ಲು ಎಣಿಸಿದಂತೆ ಧೈರ್ಯದಿಂದ ಪ್ರಸಿದ್ಧ ಕೃತಿಗಳನ್ನು ಎತ್ತಿ ಸ್ವಾರಸ್ಯ ಭಾಗವನ್ನು ಬಿತ್ತರಿಸಬೇಕು. ತಮ್ಮದೇ ಆದ ತೊಂದರೆಗಳಿಂದ ತಾಕಲಾಡುತ್ತಿರುವ ಇಂದಿನ ಜನಾಂಗಕ್ಕೆ ನಾವು 'ಪಿನ್ ಕುಶನ್' ಆಗಬಾರದು. ಅಂದರೆ ನಮ್ಮ ವಿಚಾರಗಳನ್ನು ಇನ್ನೊಬ್ಬರ ತಲೆಗೆ ತುಂಬಲು ಪ್ರಯತ್ನಿಸಬಾರದು ಎಂದು ಹೇಳುವಾಗ ಕವಿಯ ಕರ್ತವ್ಯದ ಹಿರಿಮೆ ಎಷ್ಟು ದೊಡ್ಡದು ಎಂದು ಅರಿವಾಗುತ್ತದೆ.

ಈ ಪ್ರತಿಭೆಯೆಂಬ ಟಂಕಸಾಲೆಯಿಂದ ಅಚ್ಚೊತ್ತಿ ಬಂದ ಈ ಕಾವ್ಯನಾಣ್ಯಗಳು ನಿತ್ಯನೂತನವೂ. ಚಿರಂತನ ಮೌಲ್ಯವುಳ್ಳವೂ ಆಗಿರಬೇಕು. ಇನ್ನು ಈ ಮುನ್ನುಡಿಗಳ ಪುಸ್ತಕದ ಬಗ್ಗೆ ಹೇಳುವುದಾದರೆ 'ಓದುಗರ ಹೃದಯಕ್ಕೆ ತೆರೆದ ಗವಾಕ್ಷದಂತಿರುವ' ಈ ಪ್ರಕಾರ ಹೊಸದು. ಪ್ರೊ. ದೇಜಗೌರವರ ಮುನ್ನುಡಿಗಳ ಸಂಕಲನದ ಅನಂತರ ಬಂದ ಈ ಕೃತಿ ಮುಂದಿನ ಪೀಳಿಗೆಗೆ ಮಾರ್ಗದರ್ಶನವಾಗುವುದರಲ್ಲಿ ಸಂಶಯವಿಲ್ಲ.

ಈ ಪ್ರಕಾರಕ್ಕೆ ತಮ್ಮ ಶಿಷ್ಯರಾದ ಲಕ್ಕಪ್ಪಗೌಡರಿಂದಲೇ ಮುನ್ನುಡಿಗೆ ಮುನ್ನುಡಿ ಬರೆಯಿಸಿರುವುದು ಮತ್ತೊಂದು ವೈಶಿಷ್ಟ್ಯ ಮತ್ತು ಅವರ ಸೌಜನ್ಯದ ಪ್ರತೀಕ. ತಮಗಿಂತಲೂ ಕಿರಿಯರಿಂದಲೇ ಮುನ್ನುಡಿ ಬರೆಯಿಸಬೇಕೆಂಬುವರಿಗೆ ಒಂದು ದಿಕ್ಸೂಚಿ.

ಈ ಮುನ್ನುಡಿಗಳಲ್ಲಿ ನಲ್ನುಡಿಗಳ ರತ್ನ ಬಹಳಷ್ಟಿದೆ. ಹುಡುಕಿ ತೆಗೆದಷ್ಟೂ ಲಭ್ಯ ಹಾಗೂ ಲಾಭದಾಯಕ. ಕಿರಿಯರು ಹಿರಿಯಾಸೆಯಿಂದ ಹಾರೈಸುವ ಇಂತಹ ಕೃತಿಗಳು ನಮ್ಮ ಬಾಳಿಗೆ ದಾರಿದೀಪವಾಗಲಿ ಎಂದು ಆಶಿಸೋಣ.

# ೪೨. 'ಜಹನಾರ'

ಎನ್. ಲಲಿತಾ

ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಪ್ರತಿಭಾಬೀಜವನ್ನು ಬಿತ್ತಿ ಹುಲುಸಾದ ಕಾವ್ಯದ ಬೆಳೆಯನ್ನು ಬೆಳೆಸುವಲ್ಲಿ ಕಾರಣಕರ್ತರಾದ ಸಾಹಿತ್ಯಕೃಷಿಕರಲ್ಲಿ ಪ್ರೊ. ಪರಮೇಶ್ವರ ಭಟ್ಟರು ಒಬ್ಬರು. ಅವರು ಸಂಸ್ಕೃತದ ಕಾಳಿದಾಸನನ್ನು ಅವನ ಎಲ್ಲಾ ಕೃತಿಗಳೊಡನೆ ಕನ್ನಡಕ್ಕೆ ಕೊಟ್ಟು ಪ್ರಸಿದ್ಧರಾಗಿದ್ದಾರೆ. ಹಲವು ಕಾವ್ಯ ಮಾಧ್ಯಮಗಳಾದ ಸಾಂಗತ್ಯ, ತ್ರಿಪದಿ, [illegible], ವಚನ ಮಾತ್ರವಲ್ಲ ಭಾವಗೀತೆಗಳು, ಕವನಗಳು — ಇತ್ಯಾದಿ ಹಲವಾರು ಬಗೆಗಳ ಸೂತ್ರದಿಂದ ತಮ್ಮ ಪ್ರತಿಭಾಕುಸುಮಗಳನ್ನು ಪೋಣಿಸಿ ಕನ್ನಡಮ್ಮನ ಕೊರಳಿಗೆ ಹಾಕಿ ಸೇವಿಸಿದ ಭಕ್ತರಲ್ಲೊಬ್ಬರೆನಿಸಿದ್ದಾರೆ. ಇಂತಹ ಭಕ್ತನ ಸೇವೆ ನಿರಂತರವಾಗಿ ಶ್ರದ್ಧೆಯಿಂದ ನಡೆಯುತ್ತಿದೆ.

ಹೊಸಗನ್ನಡ ಯುಗದ ಆರಂಭದಲ್ಲಿ ಭಾವಗೀತೆಗಳಿಗೆ ಹೆಚ್ಚು ಪ್ರಾಶಸ್ತ್ಯವಿತ್ತು. ಭಾವಗೀತೆಗಳ ಬೆಳೆ ಹುಲುಸಾಗಿ ಬೆಳೆದಂತೆ ಕಥನ ಕವಿತೆಗಳ ಕೃಷಿಯೂ ಅಲ್ಲಲ್ಲಿ ಬೆಳೆದು ಬಂತು. ಭಾವಗೀತೆಯು ಬರು ತನ್ನಿಂದ ತಾನಾಗಿಯೇ ಸ್ವಲ್ಪ ಇಳಿಮುಖವಾಗುತ್ತಿರುವಾಗ ಕಾವ್ಯದ ತೋಟದಲ್ಲಿ ಕೇವಲ ಕಥೆಯ ನಿರೂಪಣಾರೀತಿಯು ನಿರಪೇಕ್ಷೆಯಿಂದ ಕೂಡಿತ್ತು. ಈ ಸ್ಥಿತಿಯಲ್ಲಿ ಭಾವಗೀತೆಗಳನ್ನು ಬೆಸಗೊಂಡ ಕಥನಕವನಗಳ ರಚನೆ ಆರಂಭವಾಯಿತು. ಇಂತಹ ಮಾರ್ಗದಲ್ಲಿ ನಡೆದವರಲ್ಲಿ ಕವಿ ಪರಮೇಶ್ವರ ಭಟ್ಟರು ಒಬ್ಬರು.

ಪ್ರೊ. ಭಟ್ಟರ 'ಜಹನಾರ' ಎಂಬುದು ಒಂದು ಕಥನಗೀತೆ. ಮೊತ್ತಮೊದಲ ಬಾರಿಗೆ [illegible]ರಲ್ಲಿ ಪ್ರಕಟವಾಯಿತು. ಇಲ್ಲಿನ ವಸ್ತು ಮೂರು ಶತಮಾನಗಳಷ್ಟು ಹಿಂದಿನ ಚಾರಿತ್ರಿಕ ವಸ್ತು. ಅಲ್ಲಿನ ಬಿಂದುಪ್ರಮಾಣ ವಿಷಯವು ಇಲ್ಲಿ ಸಿಂಧುವಾಗಿ ಹರಿದಿದೆ. ಬಾಬರನಿಂದ ಆರಂಭವಾದ ಮೊಗಲ ಸಾಮ್ರಾಜ್ಯ, ಅಕ್ಬರನ, ಷಹಜಹಾನನ ಆಳ್ವಿಕೆಯಲ್ಲಿ ಹೊನ್ನನ್ನೇ ಬಿತ್ತಿ ಬೆಳೆದಂತಿತ್ತು. ಅಂತಹ ನಾಡಿನಲ್ಲಿ ಔರಂಗಜೇಬನಿಂದ ಅಧಿಕಾರಕ್ಕಾಗಿ ನಡೆದ ಕ್ರೌರ್ಯದ ರಕ್ತಮಯ ವಾತಾವರಣದಲ್ಲಿ ಮುನ್ನಡೆಯುತ್ತಿರುವ ಘಟನಾವಳಿಗಳು ಜಹನಾರಳ ಆತ್ಮಕಥನದ ರೂಪದಲ್ಲಿ ಇಲ್ಲಿ ರಸವಾಗಿ ಹರಿದಿದೆ.

ಮೊಗಲ ಚಕ್ರವರ್ತಿ ಷಹಜಹಾನ ಮತ್ತು ಅವನ ಪ್ರಿಯಪತ್ನಿ ಮಮ್ತಾಜ್—ಇವರ ಸುಪುತ್ರಿಯೇ ಜಹನಾರ. ದೆಹಲಿಯ ಸಿಂಹಾಸನವನ್ನೇರಬೇಕೆಂಬ ತನ್ನ ಸ್ವಾರ್ಥಪರ ಆಕಾಂಕ್ಷೆಯಿಂದ ಔರಂಗಜೇಬನು ತಂದೆಯಾದ ಷಹಜಹಾನನನ್ನು ಸೆರೆಯಲ್ಲಿರಿಸಿದನು. ಹಿರಿಯಣ್ಣ ದಾರನನ್ನು ಮೋಸದಿಂದ ವಿಷವುಣಿಸಿ ಕೊಲ್ಲಿಸಿದನು. ತಂದೆ ಹಾಗೂ ದಾರನಿಗೆ ಸಹಕರಿಸುತ್ತಿದ್ದ ಸಹೋದರಿ ಜಹನಾರಳನ್ನು ಸೆರೆಯಲ್ಲಿರಿಸಿದನು. ಸಹೋದರರಾದ ಷುಜಾ, ಮುರಾದರನ್ನು ಕೈತವದಿಂದ ಕೊಲ್ಲಿಸಿದನು. ಇಂತಹ ದಾರುಣ ಕತೆಯು ಇತಿಹಾಸದ ವಿಷಯಕ್ಕೆ ಒಳಪಟ್ಟಿದೆ. ಔರಂಗಜೇಬನ ಕ್ರೌರ್ಯ, ಅನ್ಯಾಯಗಳಿಂದ ಕೂಡಿದ ಆಡಳಿತಕ್ಕೆ ಬೇಸತ್ತ ರಜಪೂತರು ದಂಗೆಯೆದ್ದು ಅವನ ಬೀಳುಗಾಲಕ್ಕೆ ಕಾರಣರಾದರು ಎಂಬ ಅಂಶವೂ ಚರಿತ್ರೆಯಲ್ಲಿ ಬರುತ್ತದೆ. ಚರಿತ್ರೆಯ ಈ ಬಿಂದು ವಿಷಯವನ್ನಾರಿಸಿಕೊಂಡು ಕವಿಗಳು ಇಲ್ಲಿ ತಮ್ಮ ಪಾಂಡಿತ್ಯಪೂರ್ಣ ಪ್ರತಿಭೆಯಿಂದಲೂ, ಕಲ್ಪನಾ ವೈಭವದಿಂದಲೂ, ದೀರ್ಘ ಚಿಂತನದಿಂದಲೂ ಸುಮಾರು [illegible] ಸಾಲುಗಳ ಕಾವ್ಯವನ್ನು ಐದು ಗತಿಗಳಲ್ಲಿ ಸುಂದರವಾಗಿ ಬೆಳೆಸಿಕೊಂಡಿದ್ದಾರೆ.

ಜಹನಾರಳ ಆತ್ಮಕಥನವೇ ಈ ಕಾವ್ಯದ ಕಥಾರೀತಿ. ಆ ಮೊಗಲ ರಾಜಕನ್ಯೆ ತನ್ನ ಜೀವಿತದ ಕೊನೆಯ ದಿನಗಳನ್ನು ಸೆರೆಮನೆಯಲ್ಲಿ ಕಳೆಯುತ್ತಿರುವಾಗ ತನ್ನ ಕಳೆದ ಬಾಳಿನ ಸವಿ ಕಹಿ ನೆನಪುಗಳೆಲ್ಲಾ ಒಂದೊಂದಾಗಿ ಆಕೆಯ ಚಿತ್ತಭಿತ್ತಿಯಲ್ಲಿ ಮೂಡುತ್ತಿರುತ್ತವೆ. ಆಕೆಯ ಪ್ರೌಢತೆಯ ತತ್ತ್ವಚಿಂತನಾ ರೂಪದ ಅನುಭವಗಳೆಲ್ಲವೂ ಒಂದೊಂದಾಗಿ ಇಲ್ಲಿ ಚಿತ್ರಿತವಾಗುವಂತೆ ಮಾಡಿದ ಕವಿಯ ಪ್ರಯತ್ನವು ಸಫಲವಾಗಿದೆ.

ಗತಿ ಒಂದರಲ್ಲಿ ಜಹನಾರಳ ಆತ್ಮಕಥೆಯು ಶೋಕಭಾವಗಳಿಂದ ತಪ್ತವಾಗಿ ಮುನ್ನಡೆಯುತ್ತದೆ.

“ . . . . ಲಕ್ಷೋಪಲಕ್ಷ ಜೀವಿಗಳ ಬಲಿ
ಬೀಳುತಿದೆ, ಬೀಳುತಿವೆ ರಣಯಜ್ಞಕುಂಡದಲಿ
ಮೃತ್ಯುಮುಖ ದೇಹಿಗಳಸಂಖ್ಯಾತ ಸಂಖ್ಯೆಯಲಿ”

ಎಂದು ತನ್ನ ಕಣ್ಣೆದುರಿನ ರಾಜಕೀಯ ಸ್ಥಿತಿಯನ್ನು ಹೇಳುತ್ತಾ, ಧರ್ಮಬಾಹಿರನಾಗಿ ಕ್ರೌರ್ಯದಲ್ಲಿ ನೆಲೆನಿಂತು ಮಣಿಮಯ ಸಿಂಹಾಸನದ ಲೋಭದಿಂದ ಔರಂಗಜೇಬನು ತನ್ನವರನ್ನೆಲ್ಲಾ ಇಲ್ಲವಾಗಿಸಿ ರಾಜನಾದ ರುದ್ರರೀತಿಯನ್ನು ಹೇಳಲಾಗಿದೆ. ಗತಿ ಎರಡು ಜಹನಾರಳ ಕಳೆದುಹೋದ ಪ್ರೇಮಜೀವನದ ಪ್ರಮುಖ ಘಟನೆಯ ಸವಿನೆನಪು ಅವಳ ಮನಸ್ಸಿನಲ್ಲಿ ಸುಂದರಜಾಲವಾಗಿ ಮೂಡಿ ಬಂದಿರುವ ರಮ್ಯ ಚಿತ್ರವನ್ನು ಪ್ರದರ್ಶಿಸುತ್ತದೆ. ತಾನು ಹಿಂದೆ ಅಂಗುಲೀ ಬಾಗಿನಲ್ಲಿ ತನ್ನ ರಕ್ಷಾಬಂಧಿ ಪ್ರಿಯತಮನೊಡನೆ ಕಳೆದ ಸಂಜೆಯ ರಾಗವು ಆಕೆಯ ಮನೋರಾಗದೊಂದಿಗೆ ಮಿಳಿತವಾಗಿ ಬಂದಿರುವ ಚಿತ್ರವು ಸುಂದರವಾಗಿ ವ್ಯಕ್ತವಾಗಿದೆ. ಇದ್ದಕ್ಕಿದ್ದಂತೆ ಅವಳ ಮನಸ್ಸು ತೆರೆದು ರಜಪೂತಯೋಧನಾದ ತನ್ನಿನಿಯನ ಗುಣಗಾನವು ನಡೆಯುವುದು. ಪ್ರಿಯತಮ ಜಹನಾರಳಿಗಾಗಿ, ಔರಂಗಜೇಬನ ಹುಟ್ಟಡಗಿಸುವ ಉದ್ದೇಶವನ್ನಿಟ್ಟ ‘ಪೌರುಷ ಪ್ರಣಯಿ’ಯಾದ ಆಕೆಯ ಪ್ರಿಯತಮನು ದಾರ, ಷಹಜಹಾನರ ಪಕ್ಷವಹಿಸಿ ಔರಂಗಜೇಬನೆದುರಾಳಾಗಿ, ‘ಬಿಲ್ಲು ಬಾಣ ಗುರಾಣಿ ಬತ್ತಳಿಕೆಗಳ ಕೊಂಡು, ಮಾರಣದ ಯಜ್ಞದ-ಧ್ವರ್ಯು’ವಾಗಿ ನಡೆಯುವ ಚಿತ್ರ ಅವಳ ಕಣ್ಣಿಗೆ ಯಾವ ಮಸುಕೂ ಹರಿಯದೆ ಕಟ್ಟುತ್ತಿದೆ. ಗತಿ ಮೂರರಲ್ಲಿ ಹಿಂದೊಮ್ಮೆ ವಿದ್ರೋಹಿಗಳ ಸಂಗ್ರಾಮ ಸಮಯದಲ್ಲಿ ಜಹನಾರಳು ಸಿಕ್ರಿಯ ಅರಮನೆಯಲ್ಲಿ ಬಿಸಿಲುರಿ ಸೆಖೆಗೆ ಮಲಗಿದ್ದಾಗ ಕಂಡ ಕನಸಿನ ಭಯಂಕರ ದೃಶ್ಯದ ನಿರೂಪಣೆಯಾಗಿದೆ. ಕನಸಿನರ್ಥವನ್ನು ತಿಳಿಯದೆ ಇದ್ದಕ್ಕಿದ್ದಂತೆಯೇ ಸಂಧಿಸಿದ ಪ್ರಿಯತಮನಲ್ಲಿ ಅದನ್ನು ಹೇಳಿಕೊಂಡಾಗ ಅವನು ಅವಳ ಮನಸ್ಸಿಗೆ ಧೈರ್ಯವನ್ನುಂಟುಮಾಡುವಂತೆ ಅರ್ಥವಿವರಣೆ ನೀಡಿ ಸಂತೈಸಿದ ರೀತಿ ಹಾಗೂ ಆಕೆಯಿಂದಲೇ ತನ್ನ ಬಲಗೈಗೆ ಕಂಕಣವನ್ನು ಕಟ್ಟಿಸಿಕೊಂಡು ಕರ್ತವ್ಯಮುಖನಾಗಿ ಹೊರಟ ಸುದಿನದ ಸವಿನೆನಪು ತತ್ತ್ವಪೂರ್ಣವಾಗಿ ನಿವೇದಿತವಾಗಿದೆ. ಗತಿ ನಾಲ್ಕು, ಜಹನಾರಳು ಯುದ್ಧಭೂಮಿಯಿಂದ ಮರಳಿ ಬಂದ ತನ್ನ ಪ್ರಿಯ ರಕ್ಷಾಬಂಧಿಯೊಡನೆ ಕಳೆದ ಹುಣ್ಣಿಮೆಯ ರಾತ್ರಿಯ ಭವ್ಯ ನೆನಪು ಪ್ರಕಟಿಸುತ್ತದೆ. ಅದೇ ಅವರಿಬ್ಬರ ಕೊನೆಯ ಭೇಟಿಯೂ ಹೌದು. ತನಗೆ ಯುದ್ಧದಲ್ಲಿ ಜಯವು ಅನಿಶ್ಚಿತ. ಒಂದಲ್ಲ ಒಂದು ದಿನವಾದರೂ ತಮ್ಮಿಬ್ಬರ ಗುರಿ ಒಂದೇ ಆದುದರಿಂದ ಒಟ್ಟಿಗೆ ಸೇರಲಿರುವೆವೆಂಬ ಸಾಂತ್ವನದ ತಾತ್ತ್ವಿಕ, ಕ್ಷತ್ರಿಯ ಧರ್ಮೋಚಿತವಾದ ಯೋಧ ಪ್ರಣಯಿಯ ಮಾತುಗಳು ಜಹನಾರಳ ಮನದಲ್ಲಿ ಅನುರಣನಗೊಂಡು ಇಲ್ಲಿ ಪ್ರಕಟವಾಗಿವೆ. ಗತಿ ಐದರಲ್ಲಿ ಜಹನಾರಳ ಬಾಲ್ಯದಲ್ಲಿನ ಆಟದ ಸೋಲು ಗೆಲುವಿನ ಅನುಭವಗಳು ಅನುಭವಗಳೊಂದಿಗೆ ಪ್ರೇಮಮೂರ್ತಿ ತಾಯಿಯ ನೆನಪು ಮಾತ್ರವಲ್ಲ ತನ್ನ ಬಾಳಿನ ರೂಪಧಾರಕರಾದ ಷಹಜಹಾನ, ಸಲೀಮ, ದಾರ, ರಕ್ಷಾಬಂಧಿ ಇವರಿಗೆಲ್ಲಾ ತನ್ನ ಕೃತಜ್ಞತೆಯನ್ನು ಅರ್ಪಿಸುವ ರೀತಿ ಸತ್ತ್ವಪೂರ್ಣವಾಗಿ ಬಂದಿದೆ. ಇಲ್ಲಿ ಅವಳ ಪ್ರೌಢ ಮನಸ್ಸಿನ ಪರಿಪಕ್ವ ಜ್ಞಾನ, ಸತ್ತ್ವಶೀಲಗುಣ, ಶಾಂತಿ, ಭಕ್ತಿಗಳು ತಮ್ಮ ಬೆಳಕನ್ನು ಚೆಲ್ಲಿರುವ ನಾನಾ ರೀತಿಗಳು ವ್ಯಕ್ತವಾಗಿವೆ. ಈ ಗತಿಯ ಕೊನೆಯಲ್ಲಿ ತನ್ನಾತ್ಮಕಥೆಗೆ ಮಂಗಳವನ್ನು ಹಾಡಿಕೊಂಡು ಆ ಮೊಗಲ ರಾಜಕುಮಾರಿ ತನ್ನಾತ್ಮಬಲದಿಂದ ತನ್ನ ಇಹಪರ ಸೌಖ್ಯವನ್ನು ಸಾಧಿಸುವುದಕ್ಕಾಗಿ ಮೌನಧ್ಯಾನದಿಂದ ಆತ್ಮವನ್ನು ಸಾಧಿಸುತ್ತಾ ತ್ಯಾಗಮಯಿ ಶುಭ್ರತೇಜೋಮೂರ್ತಿಯಾಗಿ ಬೆಳಗುತ್ತಿರುತ್ತಾಳೆ.

ಜಹನಾರಳೇ ಇಲ್ಲಿನ ಮುಖ್ಯ ಪಾತ್ರ. ತನ್ನ ದೇಶದ ಉನ್ನತಿಗಾಗಿ ಜನ್ಮಭೂಮಿಯನ್ನು ಬೇಡಿಕೊಳ್ಳುವ ಆರ್ತತೆಯಲ್ಲಿ ಅವಳ ದೇಶಪ್ರೇಮ ಉಕ್ಕಿ ಹರಿಯುತ್ತದೆ. ಜಹನಾರಳಂತಹ ಎಷ್ಟೋ ತಪ್ತ ಹೃದಯಗಳು ಅನೇಕ ರೀತಿಯಲ್ಲಿ ದೈವಹತವಾದ ಭಾರತವನ್ನು ಕಂಡು ಮರುಗಿವೆ. ಆದರೂ ಜಹನಾರಳಲ್ಲಿ ವ್ಯಕ್ತವಾದ ತ್ಯಾಗಮಯ ತತ್ತ್ವಚಿಂತನೆಯು ‘ಕ್ಷಾತ್ರರಕ್ತವು ಹರಿಯುವ’ ಮೊಗಲ ನಾರಿಯ ಮನದಿಂದ ಮೂಡಿಬಂದುದು.

"ಅಂತಪುರದೊಳಗಿರುವ ತೆರೆಮರೆಯ ಜೀವನಕೆ
ಬಲಿಯಾಗಲೊಲ್ಲದೆಯೆ, ಎನ್ನಮನವೆಳಸುತಿದೆ
ಇರ್ಬಾಯ ಖಡ್ಗಮಂ ತುಡುಕಿ ಧುರಮುಖಕೋಡಿ
ಯೋಧನಿವಹದ ನಡುವೆ ಉಸಿರೆಳೆಯಬೇಕೆಂದು"

ಮಾನವ ಸಹಜ ಪ್ರೇಮವನ್ನವಳು ಬಯಸಿದಳು. ತನ್ನ ಪ್ರೇಮಕ್ಕೆ ಪ್ರತಿಯಾದ ಪ್ರೇಮವನ್ನು ಪ್ರಕಟವಾಗದಾಗ 'ಹೆಣ್ಣಾಗಿ ಹುಟ್ಟುವುದೆ ತಪ್ಪೆಂದು ಹೋಯೆಂದು ಸುಯ್ಯು'ವಳು ಅವಳು. ಯಾರಿಗೂ ತಿಳಿಯದಂತೆ ಪ್ರೇಮಿಸಿದ ಯೋಧಪುರದ ರಜಪೂತ ಯೋಧನಿಗೆ ತನ್ನ ನಿರ್ಮಲ ಹೃದಯದ ಪ್ರೇಮವನ್ನು ಪ್ರಕಟಿಸಿದಳು. ತನ್ನ ಜೀವನವನ್ನವನ ಜೀವನದಲ್ಲಿ ಒಂದಾಗಿ ಬೆಸೆದು ಬಾಳಿದಳು. ಅವರೆ ಯೋಧನೊಬ್ಬನ ಬಾಳ್ವೆ ಕ್ಷಣಿಕವೆಂದು ತಿಳಿದು ಅದಕ್ಕವಳು ತನ್ನಾತ್ಮವನ್ನು ತಾನೆ ಸಜ್ಜುಗೊಳಿಸಿಕೊಳ್ಳುವ ಯೋಗಿನಿಯಾಗುತ್ತಾಳೆ. ಪರಮ ಪತಿವ್ರತೆ ಸಾವಿತ್ರಿಯಂತೆ "ನಾನುಮೆನ್ನಾತ್ಮ ಸತಿತ್ವೋನ್ನತಿಯ ಮೃತ್ಯುವಿಂ ತಣಿಯಿಂದನಂತತೆಯೊಳೊಂದಾಗಿ ಅಮೃತೋದಗೊಳಿಪೆಂ" ಎಂದು ಸಂಕಲ್ಪಿಸುತ್ತಾಳೆ.

ಜವಹಾರಳ ಪ್ರೇಮವೆಷ್ಟು ಗಾಢವೋ ತ್ಯಾಗವೂ ಅಷ್ಟೇ ದೃಢವಾದುದೆಂದು ತೋರಿಸುತ್ತಾಳೆ. ತನ್ನ ಬಾಳಿನಲ್ಲಿ ನಡೆದ ಅನೇಕ ರಸಪೂರ್ಣ ವಿಷಯಗಳು ಅನುಭವದೂರವಾದಾಗ. ಅನುಭವದಲ್ಲಿ ದೊಡ್ಡವಳಾಗಿಯೇ ಅದಕ್ಕೆ ಕಾರಣಗಳನ್ನು ಅರಿತುಕೊಳ್ಳುತ್ತಾಳೆ. ಆದುದರಿಂದಲೇ ಅತ್ಯಂತ ಸತ್ವಪೂರ್ಣ ವೇದಾಂತ ತತ್ತ್ವವೂ ಅವಳಿಂದ ಪ್ರಕಟವಾಗಿದೆ.

"ನಾವೆಲ್ಲ ದೇವದೇವನ ಕೈಯ ಗೊಂಬೆಗಳು
ಅವನಿಟ್ಟ ಗತಿಯಲ್ಲಿ ಅವನೆಳೆದ ಗೆರೆಯಲ್ಲಿ
ನಡೆಯುವೆವು ನಿಲ್ಲುವೆವು, ಕಾದುವೆವು ಹೋರುವೆವು
ಕೆಳಗುರುಳಿ ಬೀಳುವೆವು; ಮೇಲೆದ್ದು ಅಳುವೆವು
ಅವನ ಲೀಲೆಯೊಳಿಂತು ನಟವರ್ಗ ನಾವಾಗಿ
ನಾಟ್ಯದಭಿಲಾಷೆಯಲಿ ಮೈಮನಂ ಮರೆತುಬಿಡೆ
ಸೋಲು ಗೆಲುವುಗಳಿಲ್ಲ ಏಳು ಬೀಳುಗಳಿಲ್ಲ
ನಿರ್ಲಿಪ್ತ ಜೀವನದ ಲೀಲಾ ವಿನೋದದಲಿ
ಪೂರ್ಣನಾಗುವನಾತ್ಮ ರಸಮಯಂ ತಾನಾಗಿ"

ಈ ತತ್ತ್ವನಿರೂಪಣೆ ಕವಿಮನದ ಬೆಳಗಿನಿಂದ ಜವಹಾರಳ ಬಾಳಿನ ಜ್ಯೋತಿಯಾಗಿ ಲೋಕಕ್ಕೆ ನೀಡಿದ ಅವಿನಾಶೀ ಮಂತ್ರಶಕ್ತಿಯಾಗಿದೆ. ಜಗದ ಬಾಳಿಗೆ ಉಸುರಿದ ಸೂತ್ರವಾಗಿದೆ.

ಹೀಗೆ ಮೊಗಲ ರಾಜಕುಮಾರಿ ಜವಹಾರಳು ತನ್ನ ಬಾಳಿನ ಎಲ್ಲಾ ಆಕರಗಳಿಂದಲೂ, ಜೊತೆ ಬಾಳಿದ ವ್ಯಕ್ತಿಗಳ ನಿಕಟ ಸಂಪರ್ಕದಿಂದಲೂ ಪಡೆದ ಶಾಂತಿಯನ್ನು ತಾನಾಗಿಯೇ ಬೆಳೆಸಿಕೊಂಡ ಆತ್ಮದ ಅಂತಸ್ಸತ್ತ್ವದ ತತ್ತ್ವವನ್ನು ಆದರ್ಶ ಹಿಂದೂ ನಾರೀಮಣಿಯಂತೆ ಲೋಕಕ್ಕೆ ಅರುಹುತ್ತಿರುವ ಕಥನ ರೀತಿಯನ್ನು ಕವಿ ಚೆನ್ನಾಗಿ ಚಿತ್ರಿಸಿದ್ದಾರೆ.

ಗೌಣಪಾತ್ರಗಳಾಗಿ ಬಂದ ದಾರ ಮತ್ತು ಔರಂಗಜೇಬನ ಗುಣಗಳು ಪ್ರಜೆಗಳ ದೃಷ್ಟಿಯಲ್ಲಿ ಚಿತ್ರಿಸಿದುದು ಸಹಜವಾಗಿದೆ. ದಾರನ ಗುಣ ಪ್ರಶಂಸೆಯನ್ನು ಮಾಡಿದ ಜನ ಔರಂಗಜೇಬನ ದೌರ್ಜನ್ಯವನ್ನು ಒತ್ತಿ ಹಾಡಿರುವಂತೆ ಚಿತ್ರಿತವಾಗಿದೆ. ಹೀಗೆ ಈ ಎರಡು ಪಾತ್ರಚಿತ್ರಣದಲ್ಲಿ ಒಂದು ಇನ್ನೊಂದಕ್ಕೆ ಮಸಿಬಳಿಯುವಂತಿದ್ದರೆ, ಒಂದು ಇನ್ನೊಂದಕ್ಕೆ ಕಳೆಕಟ್ಟುವಂತೆ ಬಂದಿದೆ. ರಕ್ಷಾಬಂಧಿಯ ಪಾತ್ರವು ಆದರ್ಶ ರಜಪೂತ ಯೋಧನೊಬ್ಬನ ಪಾತ್ರವಾಗಿ ಚಿತ್ರಿತವಾಗಿದೆ.

'ಜವಹಾರ' ಕಥನಕಾವ್ಯದ ಕಥೆಯ ನಿರೂಪಣಾತಂತ್ರವು ಸಮರ್ಥ ಕವಿಯ ಹೊಸ ದೃಷ್ಟಿ ಸೃಷ್ಟಿ. ಕಥನದ ಹಿನ್ನೆಲೆಯಲ್ಲಿ ಕಥಾಸತ್ತ್ವಕ್ಕೆ ಯಾವ ಚ್ಯುತಿಯೂ ಬಾರದಂತೆ ತಮ್ಮ ಕಲ್ಪನಾವೈಖರಿಯನ್ನು, ಪ್ರಕೃತಿ ರಮ್ಯ ವರ್ಣನೆಗಳನ್ನು ಪಾತ್ರಗಳ ಸುಂದರ ಚಿತ್ರವನ್ನು, ಬಂಧುರವಾದ ಭಾಷೆ, ಪ್ರೌಢ ಶೈಲಿಯಲ್ಲಿ

ತಂದು. ಜಹನಾರಳ ಅಂತಸ್ಸತ್ತ್ವವು ಶಾಶ್ವತವಾಗಿ ಉಳಿಯುವಂತೆ, ಕಾವ್ಯಸತ್ತ್ವವೂ ಅಬಾಧಿತವಾಗಿ ಉಳಿಯುವಂತೆ 'ಜಹನಾರ'ದ ರಚನೆಯನ್ನು ಕವಿ ಮಾಡಿದ್ದಾರೆ.

ಇಲ್ಲಿನ ವರ್ಣನೆಗಳಲ್ಲಿ ಕವಿಯ ಕವಿತಾಶಕ್ತಿ ಚೆನ್ನಾಗಿ ಪಡಿಮೂಡಿದೆ. ಯಮುನಾನದಿಯ ವರ್ಣನೆಯು ಅತ್ಯಂತ ಚೇತೋಹಾರಿಯಾಗಿ ಬಂದಿದೆ. ರುಧಿರಮಯ ಕೋಟೆಯನ್ನು ಸ್ಪರ್ಶಿಸಿ ಹರಿಯುತ್ತಿರುವ ಯಮುನೆಯು ಕಣ್ಣೀರ ಹೊಳೆಯಾಗಿ ಹರಿಯುತ್ತಿದೆ. "ಪಾಪಿಗಳ ಪಾಪಮಂ ಘಾತುಕರ ಹತ್ಯಮಂ ದ್ವೇಷಿಸುವಳೆಂಬಂತೆ ಓಡೋಡಿ ಹೋಗಿ ಕಡಲಾಣ್ಮನಿಗೆ ನರನ ರಾಕ್ಷಸ ಬುದ್ಧಿಯಿಂದಾಗಿ ಕೆಂಗೊಳೆಯ ಚಿಹ್ನಮಂ ತೊಳೆವುದಸದಳಮೆಂದು ಮೊರೆಯಿಡುವಳೆಂಬಂತೆ" ಯಮುನೆಯ ವರ್ಣನೆ ಬಂದಿರುವಲ್ಲಿ ಉತ್ಪ್ರೇಕ್ಷೆಯಾಗಿ ತೋರಿದರೂ ಅದು ಕೊಲೆಯ ಭೀಕರತೆಯನ್ನು ಎತ್ತಿ ತೋರಿಸುತ್ತಿದೆ. "ಮಾನವಂ ಗೈದಿರುವ ಪಾಪದ ಕಳಂಕಮಂ ತೊಳೆದು ಪಾವನಗೈಯೆ ಧರ್ಮಪುರುಷಂ ನಿಯೋಜಿಸಿದ ಯೋಗಿನಿಯಂತೆ" ವಿರಾಗಿಣಿ ಜಹನಾರಳಿಗೆ ಕಾಣುವಂತೆ ವರ್ಣಿಸಿರುವಲ್ಲಿ ಬಂದಿರುವ ಮತ್ತು ಇತರ ಕಡೆಗಳಲ್ಲಿ ಬಂದಿರುವ ಉಪಮೆಗಳೆಲ್ಲಾ ಕವಿಮನದ ಸ್ಫೂರ್ತಿ, ಕಲ್ಪನೆಯ ಸೆಲೆಗಳಿಂದ ಒಸರಿಬಂದ ರಸದಮಡುಗಳಾಗಿವೆ.

ಚೈತ್ರ ಗ್ರೀಷ್ಮ ಋತುಗಳ ವರ್ಣನೆ ಸ್ವಭಾವೋಕ್ತಿಗಳಿಂದಲೇ ಬಂದು ಕಥನಗತಿಗೆ ನೇರವಾಗಿ ಸಹಕರಿಸಿವೆ. ಅನೇಕ ಕಡೆಗಳಲ್ಲಿ ಚಿಕ್ಕ ಚಿಕ್ಕ ಉಪಮೆಗಳು ಬಂದಿವೆ. ಹಲವಾರು ಉಪಮೆಗಳು ಒಟ್ಟಿಗೆ ಒಂದು ರೂಪಕವಾಗಿ ಹಬ್ಬಿರುವುದನ್ನೂ ಕಾಣಬಹುದು.

> "ತೈಲವಿಂಗಿದ ಮೇಲೆ ಆರುವುವು ಕೆಲದೀಪ
> ಬತ್ತಿಕಳಚಿದ ಮೇಲೆ ಆರುವುವು ಹಲಕೆಲವು
> ಹಣತೆಯೊಡೆದೆಣ್ಣೆ ಸುರಿದಾರುವುವು ಹಲಕೆಲವು
> ಇನ್ನು ಕೆಲವಾರುವುವು ಬಿರುಗಾಳಿ ಬೀಸಿದರೆ
> ಮತ್ತೆ ಕೆಲದೀಪಗಳು ಚಿಟ್ಟೆಗಾಹುತಿಯಾಗಿ
> ನಂದುವುವು ಬಣ್ಣಬಣ್ಣದ ಚಿಟ್ಟೆ, ದೀಪವನೆ
> ಹಣ್ಣೆಂದು ಬಳಿಸಾರಿ ಕುಣಿದಾಡಿ ಮುದ್ದಾಡಿ
> ಮೈಸುಟ್ಟು, ಮನಸುಟ್ಟು ಸುಡುವ ದೀಪಕೆ ಬಿದ್ದು
> ಸಾಯುವುದು, ದೀಪವೂ ನಂದುವುದು."

ಸರಳ ರಗಳೆಯ ಛಂದೋರೂಪದಿಂದ ಬಂಧಿತವಾಗಿದೆ ಈ ಕಥನ ಕವಿತೆ. ಹಾಗಿದ್ದರೂ ಅಲ್ಲಲ್ಲಿ ಕಾವ್ಯ ಸೌಂದರ್ಯದ ಕಲಾಮಯ ತೊಡವುಗಳಾದ ಪ್ರಾಸಾನುಪ್ರಾಸಗಳು ಬಂದಿರುವುದನ್ನು ಕಾಣಬಹುದು.

> 'ಅಡಿಯ ಮುಂದಿಡು ನುಗ್ಗು ಅಡಿಗಶ್ವಮೇಧಫಲ.
> ಅರಿಯ ಮುಂಗಡೆ ನುಗ್ಗು ಮತ್ತಶ್ವಮೇಧಫಲ.
> ಅಸಿಯ ಹಿರಿದರಿಯನಿರಿ ಮತ್ತಮರಲೋಕಫಲ.'

ಸೆರೆಯಲ್ಲಿ ಸಿಕ್ಕಿದ ಜಹನಾರಳು ಔರಂಗಜೇಬನ ದೌರ್ಜನ್ಯದಿಂದ ಜನನಿ ಭಾರತಿಯೂ, ಅವಳ ಮಕ್ಕಳೂ ಎಂದು ಮುಕ್ತರಾಗುವರೆಂಬ ಹಂಬಲವನ್ನು ಆತ್ಮಕಥೆಯ ನಾಂದೀಪದ್ಯರೂಪದಲ್ಲಿ ತೋಡಿಕೊಳ್ಳುತ್ತಾಳೆ.

> "ಸತ್ಯಮಂ ಧರ್ಮಮಂ ಜನದ ಕಲ್ಯಾಣಮಂ
> ಶಾಂತಿಯಂ ದಾಂತಿಯಂ ದೇಶದೌನ್ನತ್ಯಮಂ
> ಎಂದು ನೀಂ ಸಾಧಿಸುವೆ ! ಜನಕೆ ಸದ್ಗತಿಯೀವೆ?"

ಇದು ನೇರವಾಗಿ ಕವಿಯ ಭಾವಾಭಿವ್ಯಕ್ತಿಯೇ ಆಗಿದೆ ಎಂದು ಯಾರಿಗೂ ಅನ್ನಿಸದಿರದು. ಕವಿಯು ತನ್ನ ಪರಿಸರದ ಪ್ರಜ್ಞೆಯಿಂದ ಎಂದೂ ಮುಕ್ತನಾಗಲಾರನು ಎಂಬುದಕ್ಕೆ ಇದನ್ನು ಉತ್ತಮ ನಿದರ್ಶನವನ್ನಾಗಿ ಕೊಡಬಹುದು. ತನ್ನ ಕಾಲದಲ್ಲಿ ಕಂಡುಕೊಂಡ ಜಾಗತಿಕ ಹಾಗೂ ದೇಶದ ಅವ್ಯವಸ್ಥೆಯನ್ನೂ

ಕಟುಮಧುರಾನುಭವಗಳನ್ನು ಜಹನಾರಳ ಮನಸ್ಸಿನ ತೊಳಲಾಟಕ್ಕೆ ಸಿಲುಕಿಸಿ ನಿರೂಪಿಸಿದ ಈ ರೀತಿಯು ಕನ್ನಡ ಕಾವ್ಯದ ಪ್ರಗತಿಪರವಾದ ಏಳಿಗೆಗೆ ನಿದರ್ಶನವಾಗಿದೆ.

ಆತ್ಮಕಥನದ ಮಧ್ಯೆ ಸಂಭಾಷಣೆಯ ಸನ್ನಿವೇಶಗಳನ್ನು ತಂದು ನಾಟಕದ ಸುಗತಿಯನ್ನೂ ಸೌಂದರ್ಯವನ್ನು ಇಲ್ಲಿ ಸೇರಿಸಿದ್ದಾರೆ. ಜಹನಾರಳು ತನ್ನೊಳಗಿನ ಸಂದರ್ಶನವನ್ನು ಮನಸ್ಸು ಕನಸಾಗಿ ಕಂಡಾಗ ಕೂಡಲೇ ಅದು ನನಸಾಗುವಂತಹ ಸಂದರ್ಭಗಳು ನಾಟಕೀಯವಾಗಿ ಬಂದಿವೆ.

ಹೊಸಗನ್ನಡ ಕವಿತೆಯಾದರೂ ಹಳಗನ್ನಡದ ರೂಪಗಳು ಇಲ್ಲಿ ಬಂದಿರುವುದರಿಂದ ವಸ್ತುವಿನ ಹಳಮೆಯೊಂದಿಗೆ ಅವು ಹೊಂದಿಕೊಂಡು ಹೊಸ ಚಿಗುರಿನ ಹಳೆಬೇರಿನ ಕೂಡುವಿಕೆಯ ಸೊಬಗನ್ನು 'ಜಹನಾರ'ವು ನೀಡುತ್ತದೆ.

ಸೃಷ್ಟಿಪರೀಕ್ಷಣಶಕ್ತಿ, ಸೌಂದರ್ಯಮುಗ್ಧವಾದ ಕವಿಹೃದಯ, ಸಮರ್ಥವಾದ ಭಾವ ಭಾಷೆ, ಪ್ರಕೃತಿ ವರ್ಣನೆ, ನೂತನ ಕಲ್ಪನೆ, ವಿರಾಗಿಣಿಯ ವೃತ್ತಿಯ ಸ್ಥಾಯಿ — ಇವೆಲ್ಲವುಗಳ ಸಂಗಮದಿಂದ ರಚನೆಯಾದ 'ಜಹನಾರ' ಕಥನಗೀತವು ಉತ್ತಮ ಕವಿತೆಯ ಸೌಂದರ್ಯವನ್ನೊಳಗೊಂಡಿದೆ. ಹೀಗೆ ಪ್ರೊ. ಪರಮೇಶ್ವರ ಭಟ್ಟರು ತಮ್ಮ ಸಹಜ ಪ್ರತಿಭೆ, ವ್ಯುತ್ಪತ್ತಿ, ಆಳವಾದ ಚಾರಿತ್ರಿಕ ಜ್ಞಾನ, ದೇಶಭಕ್ತಿ, ಕವಿತಾಶಕ್ತಿ, ಸರಸನಿರೂಪಣಾಶಕ್ತಿ ಇವುಗಳಿಂದ 'ಜಹನಾರ' ಕಥನಕವನವನ್ನು ಬರೆದು ಸಫಲರಾಗಿದ್ದಾರೆ. ಇದರ ಹೊರತೊಡವಿಗೆ ಕಥನರೂಪವನ್ನು ಕೊಟ್ಟು, ಅದಕ್ಕೆ ಭಾವಗೀತೆಯ ಅಂತಸ್ಸತ್ತ್ವವನ್ನು ಸೇರಿಸಿ, ತನ್ನ ಮನದ ಚಿಂತನ ಮಂಥನದ ತಿರುಳನ್ನು ಜಹನಾರಳ ಪಾತ್ರದ ಮೂಲಕ ವ್ಯಕ್ತಪಡಿಸಿರುವ ರೀತಿಯು ಉತ್ತಮವಾಗಿದೆ. ಅವರು ಬರೆದಿರುವ ಕಾವ್ಯಗ್ರಂಥಗಳಲ್ಲಿ ಎರಡನೆಯದಾಗಿ ಪ್ರಕಟಿತವಾದರೂ ಅದು ತನ್ನದೇ ಆದ ಪ್ರಭೆಯಿಂದ ಬೆಳಗುತ್ತಿದೆ.

# ೪೩. "ಇಂದ್ರಗೋಪ"– ಒಂದು ವಿವೇಚನೆ

**ಮುರಳೀಧರ ಉಪಾಧ್ಯ, ಹಿರಿಯಡಕ**

'ರಾಗಿಣಿ,' 'ಗಗನಚುಕ್ಕಿ,' 'ಅಂಚೆಯ ಪೆಟ್ಟಿಗೆ' ಸಂಕಲನಗಳ ಅನಂತರ ಕವಿ ಎಸ್. ವಿ. ಪರಮೇಶ್ವರ ಭಟ್ಟರು ಬಹಳ ಸಮಯದ ವರೆಗೆ ಭಾವಗೀತಗಳ ಸಂಕಲನವೊಂದನ್ನು ನೀಡಲಿಲ್ಲ. ಬದಲಾಗಿ ತ್ರಿಪದಿ. ಸಾಂಗತ್ಯ, ಏಳೆ, ವಚನಗಳ ರೂಪದಲ್ಲಿರುವ ಮುಕ್ತಕಗಳನ್ನು ಮಾತ್ರ ನೀಡಿದರು. 'ತಿಳಿಮುಗಿಲ ತೊಟ್ಟಿಲಲಿ . . .' ನಂಥ ಸುಂದರ ಭಾವಗೀತಗಳನ್ನು ಬರೆದ ಕವಿಯಿಂದ ಹೊಸ ಭಾವಗೀತಗಳ ಸಂಕಲನ ವೊಂದನ್ನು ಸಹೃದಯರು ಕುತೂಹಲದಿಂದ ನಿರೀಕ್ಷಿಸುತ್ತಿದ್ದರು. ಕವಿ ಭಟ್ಟರ ನಾಲ್ಕನೆಯ ಕವನ ಸಂಕಲನ 'ಇಂದ್ರಗೋಪ' ಇತ್ತೀಚೆಗೆ (೧೯೭೦) ಪ್ರಕಟವಾಗಿರುವುದು ಸಂತೋಷದ ಸಂಗತಿ. ಎಸ್. ವಿ. ಪರಮೇಶ್ವರ ಭಟ್ಟರ 'ಇಂದ್ರಗೋಪ'ದ ಒಂದು ಸ್ಥೂಲ ವಿವೇಚನೆ ಈ ಪ್ರಬಂಧದ ಉದ್ದೇಶ.

'ಇಂದ್ರಗೋಪ'ದ ಹತ್ತೊಂಬತ್ತು ಕವನಗಳಲ್ಲಿ ನಿಸರ್ಗದ ವಿವಿಧ ಮುಖಗಳ ಚಿತ್ರವಿದೆ. ಕವಿ ಪರಮೇಶ್ವರ ಭಟ್ಟರಿಗೆ ನಿಸರ್ಗ ಬಹು ಪ್ರಿಯವಾದುದು. ಅವರ 'ಗಗನಚುಕ್ಕಿ' ಸಂಕಲನವೂ ಪ್ರಕೃತಿ ಗೀತಗಳಿಂದ ತುಂಬಿದೆ. 'ಇಂದ್ರಗೋಪ'ದ ಪ್ರಕೃತಿಗೀತಗಳ ಪೈಕಿ 'ಬಾರಬಾರ ಭಾಸ್ಕರ,' 'ಇಂದ್ರಚಾಪ,' 'ಬಾನಿಗೆ ಬೇನೆ,' 'ಉದಯವಾದಾಗ,' ನಮ್ಮ ಗಮನ ಸೆಳೆಯುತ್ತವೆ. ಉಳಿದ ಇತರ ನಿಸರ್ಗಗೀತ ಗಳಲ್ಲಿ ಯಾವ ವಿಶೇಷತೆಯೂ ಕಾಣಿಸುವುದಿಲ್ಲ. "ನಿನ್ನೆಯಂತೆ ಈ ದಿನ, ನೋಡು ಚಿರವಿನೂತನ, ನಾಳೆಯಿಂತೆ ನೂತನ." ಎಂಬ ಕೊನೆಯ ಸಾಲುಗಳು 'ಬಾರಬಾರ ಭಾಸ್ಕರ' ಕವನವನ್ನು ಸಾರ್ವಕಾಲಿಕ ವಾಗಿಸಿವೆ. 'ಇಂದ್ರಚಾಪ' ಕವಿ ಭಟ್ಟರ ಅದ್ಭುತ ಕಲ್ಪನಾಶಕ್ತಿಗೆ ಸಾಕ್ಷ್ಯ ನೀಡುತ್ತದೆ:

> "ನೋಡಿ ಇಹವನು ಪರವು ನಗುವವೊ-
> ಲಿಂದ್ರಚಾಪವು ಮೂಡಿದೆ.
> . . . . . . . . . . . . . . . .
> ನಾಕಲೋಕಕೆ ಕಿಟಿಕಿ ತೆರೆದವೊ-
> ಲಿಂದ್ರಚಾಪವು ಮೂಡಿದೆ.
> ನಾವು ಮೇಲಕೆ ಏರುವೇಣಿವೊ-
> ಲಿಂದ್ರಚಾಪವು ಮೂಡಿದೆ."

'ಬಾನಿಗೆ ಬೇನೆ' ಕವಿ ಭಟ್ಟರ ಯಶಸ್ವಿ ಕವನಗಳಲ್ಲೊಂದಾಗಿದೆ. ಕರಿಯ ಮೋಡ, ಗುಡುಗು ಸಿಡಿಲುಗಳಿಂದ ತುಂಬಿದ ಬಾನನ್ನು ಕಂಡು ಕವಿ ಬಾನಿಗೆ ಬೇನೆ ಹಿಡಿದಿದೆಯೆಂದು ಕಲ್ಪಿಸುವುದರಲ್ಲಿಯೇ ಹೊಸತನವಿದೆ:

> "ನಮ್ಮ ಬಾನಿಗೆ ಆವುದೋ ಹೊಸ ಬೇನೆಯುಂಟಿದೆ ಕಾಣಿರಿ,
> ನಿಮ್ಮ ಹೊತ್ತಗೆ ತೆರೆದುನೋಡಿರೆ, ಇದ್ದರೌಷಧ ಹೇಳಿರೆ."

ಕವಿ ಪರಮೇಶ್ವರ ಭಟ್ಟರ ಹಾಸ್ಯಪ್ರಿಯತೆಯನ್ನೂ ಈ ಕವನದಲ್ಲಿ ಕಾಣಬಹುದು. "ಪೂರ್ವಗಿರಿ ಯಂಚಿನೊಳು ರವಿಯುದಿಸಿ ಬಂದಾಗ ಕಂಡುಕೊಂಡೆನು ನೆಲೆಯ ನಾನೆ ಕೊನೆಗೆ" ಎಂದು ಆರಂಭ ವಾಗುವ "ಉದಯವಾದಾಗ" ಕವನದಲ್ಲಿ ಕವಿ ದಿನದಿಂದ ದಿನಕ್ಕೆ ಹೊಸಬರಾಗುವುದನ್ನು, ದಿನ ದಿನದ ಅನುಭವದಿಂದ ಶ್ರೀಮಂತರಾಗುವುದನ್ನು ನೋಡುತ್ತೇವೆ:

> "ನಿನ್ನೆ ಎಡವಿದ ಎಡೆಯನರಿತುಕೊಂಡೆನು ನಾನು
> ನಿನ್ನೆ ನಿದ್ರಿಸಿದೆಡೆಯ ಕುರುಹು ಕಂಡೆ
> ನಿನ್ನೆ ನೆರವಿತ್ತವರ ಬೀಳ್ಕೊಂಡು ನಡೆವುದಕೆ
> ಗಂಟುಮೂಟೆಯ ಮತ್ತೆ ಕಟ್ಟಿಕೊಂಡೆ."

ಇಂದ್ರಗೋಪದ ಹಲವು ಕವನಗಳಲ್ಲಿ ದೇಶಭಕ್ತಿಯೇ ವಸ್ತುವಾಗಿದೆ. ದಾಂಪತ್ಯಜೀವನದ ಕವನ ಗಳಲ್ಲಿ 'ಭಾಗ್ಯೋದಯ,' 'ಪರದೈವದ ನಿಲವು,' 'ನೀನು ದಯೆತೋರದಿದ್ದರೆ' ಸಾಕಷ್ಟು ಮುಖ್ಯ ವಾಗಿವೆ. 'ಭಾಗ್ಯೋದಯ' ಒಂದು ಕುತೂಹಲಕಾರಿ ಕವನ. "ಈವೂರ ಬಿಟ್ಟಿದ್ದ ದೇವರನ್ನು ಮನೆಯಲ್ಲಿ ಇಟ್ಟು ಬಿನ್ನವ, ನಿನಗಾಗಿ ನಾವಿಲ್ಲಿ ಕಾದಿದ್ದೆವು" ಎಂಬ ಆರಂಭದ ಸಾಲುಗಳಲ್ಲಿ ಪಲ್ಲವಿಸಿ ಮೊಳಗಿರುವ ತಮ್ಮವನೊಬ್ಬನ ಬರವಿಗಾಗಿ ಹಂಬಲಿಸುತ್ತಿರುವ ಕುಟುಂಬದವರ ಚಿತ್ರ ಸೊಗಸಾಗಿ ಮೂಡಿ ಬಂದಿದೆ. "ಯುಗಕೊಮ್ಮೆ ಬರುವಂತೆ ಈಗೊಮ್ಮೆ ನೀ ಬಂದೆ ಬಾರಯ್ಯ ಬಾರೆಮ್ಮ ದೊರೆಯೆ" ಎಂಬ ಕೊನೆಯ ಸಾಲುಗಳು ಕವನಕ್ಕೆ ಹೊಸ ತಿರುವು ಕೊಟ್ಟಿವೆ. ಅರ್ಥಪರಂಪರೆಯೊಂದನ್ನು ಸೃಷ್ಟಿಸಿವೆ. 'ಪರದೈವದ ನಿಲವು.' 'ನೀನು ದಯೆತೋರದಿಲ್ಲದಿದ್ದರೆ,' ಈ ಕವನಗಳು ಸಂಕ್ಷಿಪ್ತವಾಗಿದ್ದರೂ ಸತ್ವಯುತವಾಗಿವೆ. 'ವಿರಹಿಣಿ' ಮತ್ತು 'ಹೇ ಸಖಿ ನಾ ಸುಖಿ' ಕವನಗಳಲ್ಲಿ ದಾಂಪತ್ಯದ ಎರಡು ಮುಖಗಳ ಚಿತ್ರ ಸೊಗ ಸಾಗಿ ಮೂಡಿ ಬಂದಿದೆ.

ಕವಿ ಎಸ್. ವಿ. ಪರಮೇಶ್ವರ ಭಟ್ಟರ ಜೀವನ ದೃಷ್ಟಿಯನ್ನು 'ಇಂದ್ರಗೋಪ'ದ ಹೆಚ್ಚಿನ ಕವನಗಳಲ್ಲಿ ಕಾಣಬಹುದು. 'ಶಾಂತಿಮಂತ್ರ' ಕವನದಲ್ಲಿ ಕವಿ. "ನೀ ಬದುಕೆ ನಾ ಬದುಕೆ ನಾವಿಬ್ಬರೂ ಕೂಡಿ ಸುಖ ವಾಗಿ ಬಾಳುವುದೆ ನಮ್ಮ ಗುರಿ ಕೇಳು" ಎಂದು ಸಹಬಾಳುವೆಯ ಸಂದೇಶ ನೀಡುತ್ತಾರೆ. ಕವಿ ಪ್ರೊ. ಭಟ್ಟರು ತಮ್ಮ ಪರಿಸರದ ವಸ್ತುಗಳನ್ನೆಲ್ಲ ಉಪಮೆ ರೂಪಕಗಳಲ್ಲಿ ಸೆರೆ ಹಿಡಿಯುವುದನ್ನು 'ಸೋಮ ವಾರದ ಹಾಡು' ಕವನದಲ್ಲಿ ಕಾಣಬಹುದು:

"ಮನದ ಬೋರ್ಡಿನ ಮೇಲೆ ಬರೆದೆಲ್ಲ ತಪ್ಪುಗಳ
ಉಜ್ಜಿ ಕಳೆವರೆ ತಾರ ಹೊಸ ಡಸ್ಟರು
ತಂದು ಕೊಡು ಬರೆವುದಕೆ ಹೊಸ ಸೀಮೆ ಸುಣ್ಣಗಳ
ಆಗು ಹೊಸ ಪಾಠಗಳ ಹೆಡ್ಮಾಸ್ಟರು."

ಶಬ್ದಶಿಲ್ಪಿಯಾದ ಕವಿ ಪದಗಳ ಆಯ್ಕೆ ಸಂಯೋಜನೆಗಳ ಮೂಲಕ ನಡೆಸುವ ಕುಸುರಿಗೆಲಸಕ್ಕೆ 'ಸಂಸ್ಕಾರ' 'ಬಾಳೆಲ್ಲ ಸಿಹಿಯಾಯಿತು' ಕವನಗಳು ನಿದರ್ಶನವಾಗ ಬಲ್ಲವು. ಈ ಪುಟ್ಟ ಕವನಗಳು 'ಹಿಡಿದರೆ ಹಿಡಿತುಂಬ, ಬಿಟ್ಟರೆ ಜಗವೆಲ್ಲ' ಎಂಬಂತಿವೆ. ವ್ಯಾಖ್ಯಾನ ನಿರಪೇಕ್ಷಣೀಯವಾದ ಈ ಕವನಗಳ ಸೊಗಸನ್ನು ಗದ್ಯದಲ್ಲಿ ಬಣ್ಣಿಸುವುದು ಸುಲಭ ಸಾಧ್ಯವಲ್ಲ. 'ಬಾಳೆಲ್ಲ ಸಿಹಿಯಾಯಿತು' ಕವನದ ಸಾಲು ಗಳು ಎಷ್ಟು ಚೀಪಿದರೂ ಮತ್ತೂ ಮುಗಿಯದ ಪೆಪ್ಪರಮಿಂಟಿನಂತೆ ನಮ್ಮ ಮನಸ್ಸಿನಲ್ಲಿ ಸದಾ ಹಸಿರಾಗಿ ಉಳಿಯುತ್ತವೆ:

"ಕಸವೆಲ್ಲ ರಸವಾಗಿ 'ರಸ'ವೆಲ್ಲ 'ಧ್ವನಿ'ಯಾಗಿ
ಕೃತಿಯೆಲ್ಲ ಸಿಹಿಯಾಯಿತು
ನುಡಿಯೆಲ್ಲ ಒಲವಾಗಿ, ನಡೆಯೆಲ್ಲ ಚೆಲುವಾಗಿ
ಬಾಳೆಲ್ಲ ಸಿಹಿಯಾಯಿತು."

ಕವಿ ಪರಮೇಶ್ವರ ಭಟ್ಟರು ಆಶಾವಾದಿ ಎಂಬುದನ್ನು 'ಹಾರಾಟದ ಹಾಡು' 'ಹೋರಾಟದ ಹಾಡು' 'ನನ್ನ ಗುರು ಕಲ್ಪತರು' – ಈ ಕವನಗಳಲ್ಲಿ ಕಾಣುತ್ತೇವೆ. 'ಸಂಸಾರ ಸಾಗರದಲ್ಲಿ' ಕವನದಲ್ಲೂ ಇದೇ ಆಶಾವಾದವಿದೆ. 'ತುಸು ಕಸುವು ಅಸುವಿನೊಳಗಿರುವನಕ ಹೋರುವೆನು. ಅಷ್ಟರೊಳು ಬಂದೀತು ಹೆಲಿಕಾಪ್ಟರೊಂದು' ಎನ್ನುತ್ತಾರೆ ಕವಿ. 'ಕೊರಗು' ಕವನದಲ್ಲಿ ಕವಿ ನೀಡುವ ಚಿತ್ರ ಹೃದಯಸ್ಪರ್ಶಿ ಯಾಗಿದೆ:

"ಹೂವಿನ ಸುಖ ಬೇಕು, ಅದರ ದುಃಖವು ಬೇಡ
ಏನಿದನ್ಯಾಯವು ನೋಡ,
ಕವಿಯ ಕಾವ್ಯವು ಬೇಕು, ಅವನ ದುಃಖವು ಬೇಡ
ಸಲ್ಲದಿಂತೆಂಬುದು ಕೂಡ"

'ಹೂವೊಂದರ ಕಥೆ,' ಮತ್ತು 'ಅತಿಥಿಗೆ,' ಇಂದ್ರಗೋಪ ಸಂಕಲನದ ಅತ್ಯುತ್ತಮ ಕವನಗಳು. 'ಹೂವೊಂದರ ಕಥೆ' ಒಂದು ಹೃದಯಂಗಮ ಕವಿತೆ:

"ಹೂವೊಂದು ಇತ್ತಂತೆ ದೇವ ಸುಮದಂತೆ
ದೇವ ಸುಮದಂತೆ
ಅದರ ಕಥೆ ಹೇಳುವೆನು ನಾ ಕೇಳಿದಂತೆ
ನಾ ಕೇಳಿದಂತೆ."

ಎಂಬ ಆರಂಭದ ಸಾಲುಗಳಲ್ಲೇ ಮುಂದಿನ ದುರಂತ ಕತೆಯ ಛಾಯೆಯನ್ನು ಗುರುತಿಸಬಹುದು. ಸಂಗಾತಿ ಇರದಿದ್ದರೂ, ನಕ್ಕಾಗ ನಗಲು ಜೊತೆಗಿರದಿದ್ದರೂ, ಅತ್ತಾಗ ಅಳಲು ಜೊತೆಗಿರದಿದ್ದರೂ ಹೂವಿಗೆ 'ವ್ಯಥೆ ಇರಲಿಲ್ಲವಂತೆ':

"ತಾನೆ ಜೊತೆ ತನಗೆಂದು ಸುಮ್ಮನಿತ್ತಂತೆ
ಸುಮ್ಮನಿತ್ತಂತೆ
ಕಡೆಗೊಮ್ಮೆ ತಾನಿಳೆಗೆ ಬಾಡಿ ಬಿತ್ತಂತೆ."

ಸುಂದರ ಕಥನ ಕವನವೊಂದರಷ್ಟೇ ಪರಿಣಾಮಕಾರಿಯಾಗಿದೆ ಈ ಭಾವಗೀತ. 'ಹೂವೊಂದರ ಕಥೆ' ಎಸ್. ವಿ. ಪರಮೇಶ್ವರ ಭಟ್ಟರ 'ಒಂದು ರಾತ್ರಿ' ಕವನದಷ್ಟೇ ಸತ್ತ್ವಯುತವಾಗಿದೆ. "ಯಾವ ಕವಿತೆಯಲ್ಲಿ ಕವಿ ತನ್ನ ಮನೋಧರ್ಮ, ತನ್ನ ಒಲವು, ತನ್ನ ನಿಲವು, ತನ್ನ ಪ್ರವೃತ್ತಿ, ತನ್ನ ಉದ್ವೇಗ, ತನ್ನ ಸುಖ, ತನ್ನ ದುಃಖ, ತನ್ನ ಕಾತರ ಕಳವಳ ಇತ್ಯಾದಿಗಳನ್ನು ಪ್ರಕಟಿಸಿರುತ್ತಾನೆಯೋ, ಆ ಕವಿತೆಯೇ ಭಾವಗೀತೆ" (ಎಸ್. ವಿ. ಪರಮೇಶ್ವರ ಭಟ್ಟ—'ಭಾವಗೀತೆ' ಪು. ೪೯) ಎಂಬ ವ್ಯಾಖ್ಯಾನಕ್ಕೆ 'ಹೂವೊಂದರ ಕಥೆ'ಗಿಂತ ಸುಂದರ ಉದಾಹರಣೆ ಬೇರೆ ಸಿಗಲಿಕ್ಕಿಲ್ಲ.

'ಅತಿಥಿಗೆ' ಎಸ್. ವಿ. ಪರಮೇಶ್ವರ ಭಟ್ಟರ ಉತ್ತಮ ಕವನಗಳಲ್ಲೊಂದಾಗಿದೆ. ಕವಿಭಟ್ಟರ ರಸಿಕತೆ, ಹಾಸ್ಯಪ್ರಿಯತೆಗಳಿಗೆ ಈ ಕವನ ಕನ್ನಡಿ ಹಿಡಿಯುತ್ತದೆ. ಕಸ ಗುಡಿಸಿಲ್ಲ, ರಂಗೋಲಿ ಹಾಕಿಲ್ಲ, ನಾಯಿ ಕಟ್ಟಿಲ್ಲ, ಎಮ್ಮೆ ಕರೆದಿಲ್ಲ, ಬಿಸಿನೀರು ಕಾಯಿಸಿಲ್ಲ:

"ಮನೆಯಾಳು ಬಂದಿಲ್ಲ ಸಾಮಾನು ತಂದಿಲ್ಲ
ಬ್ರೆಡ್ಡಿನವನೈತರಲು ಬಹುಹೊತ್ತು ಕಾಯಬೇಕು
ಮುಸುರೆಯನು ಉಜ್ಜಿಲ್ಲ, ಉಪಕರಣ ಬೆಳಗಿಲ್ಲ
ಮನೆಯಾಕೆ ರೇಡಿಯೊ ಕೇಳಿಯೇ ಏಳಬೇಕು."

ಇಂಥ ಪರಿಸ್ಥಿತಿ ಇರುವುದರಿಂದಲೇ ಕವಿ ಪ್ರಶ್ನಿಸುತ್ತಾರೆ:

"ಹೀಗೆ ಹೇಳದೆ ಬರುವಿರೆಂದೆಮಗೆ ಗೊತ್ತೆ
ಎರಡು ದಿನ ತಡವಾಗಿ ಬರಬಾರದಿತ್ತೆ."

ಮೇಲುನೋಟಕ್ಕೆ ಇದೊಂದು ಹಾಸ್ಯಗೀತೆಯಂತೆ ಕಾಣಿಸುವುದಾದರೂ ಅತಿಥಿಗಳು ಬಂದಾಗ ಅನನುಕೂಲಗಳಿಂದ, ತಾಪತ್ರಯದಿಂದ ಪೇಚಾಡುವ ನೂರಾರು ದಂಪತಿಗಳನ್ನು ನೆನೆಸಿಕೊಂಡಾಗ ಈ ಕವನ ಬೇರೆಯೇ ಅರ್ಥ ಪಡೆಯಬಲ್ಲುದು.

'ಇಂದ್ರಗೋಪ'ದ ಮುನ್ನುಡಿಯಲ್ಲಿ ಕವಿ ಎಸ್. ವಿ. ಪರಮೇಶ್ವರ ಭಟ್ಟರು "ಉದ್ದೇಶಪೂರ್ವಕವಾಗಿ ಇವುಗಳನ್ನು 'ಹಾಡುಗಳು' ಎಂದೇ ಕರೆದಿದ್ದೇನೆ. ಇವು ಹಾಡುಗಳಾಗಿ ಮೂಡಿದಂಥವು. ಇದರ ಮೇಲೆ ಇವುಗಳಲ್ಲಿರಬಹುದಾದ ಅಷ್ಟೋ ಇಷ್ಟೋ ಕಾವ್ಯದ ಸೊಬಗು ಸ್ವಾರಸ್ಯಗಳು ಹಾಡಿ ತೋರಿಸಿದಾಗ ಇನ್ನಷ್ಟು ಸ್ಪಷ್ಟವಾದಾವು!" ಎಂದಿರುವುದು ಗಮನಾರ್ಹವಾಗಿದೆ. ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರು ಬೇರೊಂದೆಡೆಯಲ್ಲಿ, "ಹೀಗೆ ತಲೆಗಳಲ್ಲೆಲ್ಲಾ ಸಂಗೀತವೇ ತೀವ್ರವಾದ ಭಾವನೆಗಳ

ಪ್ರಾಣವಕ್ಕೆ ಯೋಗ್ಯವಾದ ಪಾತ್ರೆಯೊಂದಾಗಿ ಒಪ್ಪುವುದು ಭಾವಗೀತೆಯ ವೈಶಿಷ್ಟ್ಯ. ಭಾವಗೀತೆ ಎಷ್ಟೆಷ್ಟು ಸಂಗೀತದ ಕರಾಮತ್ತೊಳಗಾಗುವುದೋ ಅಷ್ಟು ಅದು ಅದರ ಭಾವ ಕೆಲವಾರು ದಿಕ್ಕಿನ ವಿಚಾರವನ್ನು ಸುಲಭವಾಗಿ ಶೀಘ್ರವಾಗಿ ಮಾಡುತ್ತದೆ ಎನ್ನುವುದೂ ಅನುಭವ ಒಪ್ಪತಕ್ಕ ಮಾತಾಗಿದೆ." ಎಂದು ಭಾವಗೀತದಲ್ಲಿ ಗೇಯತೆಯ ಮಹತ್ತ್ವವನ್ನು ವಿವರಿಸಿದ್ದಾರೆ.

"ಇಂದ್ರಗೋಪಗಳಂತೆಯೇ ಇವೂ ಪುಟ್ಟಪುಟ್ಟ. ಅವುಗಳಂತೆಯೇ ಇವುಗಳ ಬಿನುಗು, ಇವುಗಳ ಮಿನುಕು. ಈಗ ಮೂಡಿದು ಈಗ ಅಳಿದು, ಇಲ್ಲಿ ಹೊಳೆದು ಅಲ್ಲಿ ಅಳಿದು, ಇಂದ್ರಗೋಪಗಳು ತಣ್ಣನೆಯ ಸುಣ್ಣನೆಯ ಹಸುರು ನೀಲಿಯು, ಬಿಳಿಯ ನೀಲಿಯ ತಿಳಿಯ ಬೆಳಕು ಮೂಡುವ ಕಾಡಿನ ನಮ್ಮ ಮನಸ್ಸನ್ನು ಸೆಳೆಯುತ್ತವಷ್ಟೆ ! ಇಲ್ಲಿಯ ಹಾಡುಗಳೂ ಹಾಗೆ ಮಾಡಿಯಾವು" ಎಂಬ ಕವಿಯ ಮಾತುಗಳನ್ನು ಒಪ್ಪಬಹುದು.

ಭಾವಗೀತದ ಲಕ್ಷಣಗಳಾದ ಗೇಯತೆ, ಸಂಕ್ಷಿಪ್ತತೆ, ಸ್ವಾಂತತೆ, ಭಾವದೀಪ್ತತೆಗಳನ್ನು ಮೈಗೂಡಿಸಿಕೊಂಡಿರುವುದರಿಂದ 'ಇಂದ್ರಗೋಪ'ದ ಕವನಗಳ ಮಹತ್ತ್ವ ಇಮ್ಮಡಿಯಾಗಿದೆ. ಇಂದ್ರಗೋಪದ ಕವಿ "ಒಮ್ಮೆ ರಸಋಷಿಯಾಗಿ ಒಮ್ಮೆ ಕಲೋಪಾಸಕನಾಗಿ, ಒಮ್ಮೆ ಮುಕ್ಕಣ್ಣನಾಗಿ ಒಂದು ಕಡೆ ಪ್ರಕೃತಿಯನ್ನೂ ಇನ್ನೊಂದು ಕಡೆ ಜನಜೀವನವನ್ನೂ ಉಪಾಸಿಸುತ್ತಿರುತ್ತಾನೆ." (ಭಾವಗೀತೆ—ಪು. ೧೧ ಎಸ್. ವಿ. ಪಿ.)

"ತನ್ನ ಮುಂದೆ ತನ್ನ ಹಿಂದೆ ತನ್ನ ಸುತ್ತಮುತ್ತ ಮೊತ್ತಮೊತ್ತವಾಗಿ ಕತ್ತಲು ಮುತ್ತಿರುವಾಗ 'ಈ ಹುಳು (ಇಂದ್ರಗೋಪ) ಮಿನುಕಿ ಮಿಣುಕಿ ಹಾರುತ್ತದೆ, ಹರಿಯುತ್ತದೆ." ಈ ಸಂಕಲನಕ್ಕೆ 'ಇಂದ್ರಗೋಪ' ಎಂಬ ಹೆಸರು ಸಾರ್ಥಕವಾಗಿದೆ. ಕನ್ನಡ ಕಾವ್ಯಕ್ಕೆ, ಪ್ರಪಂಚಕ್ಕೆ 'ಇಂದ್ರಚಾಪ' 'ಉಪ್ಪುಕಡಲಿ'ನಂಥ ಮಹಾಕೃತಿಗಳನ್ನು ನೀಡಿರುವ ಕವಿ ಎಸ್. ವಿ. ಪರಮೇಶ್ವರ ಭಟ್ಟರ ಇನ್ನೊಂದು ವಿಶಿಷ್ಟ ಕಾಣಿಕೆ—"ಇಂದ್ರಗೋಪ."

# ೪೪. "ಸಿರಿಗನ್ನಡಿಗರ ಡಿಂಗರಿಗ"*

**ಮುರಳೀಧರ ಉಪಾಧ್ಯ, ಹಿರಿಯಡಕ**

ನಲವತ್ತೊಂದು ವರ್ಷಗಳ ಹಿಂದಿನ ಸಂಗತಿ. ೧೯೩೧ರ ಒಂದು ದಿನ. ಬೆಂಗಳೂರಲ್ಲಿ ದಿ। ಸುಬೋಧರಾಮರಾಯರ ಪತ್ರಿಕೆಯ ಕಾರ್ಯಾಲಯವಿದ್ದ ಬೀದಿ. ಪತ್ರಿಕೆಯ ಕಾರ್ಯಾಲಯದ ಸಮೀಪದ ಅಶ್ವತ್ಥಕಟ್ಟೆಯ ಬಳಿ ಹದಿನೇಳರ ಯುವಕ – ಇಂಟರ್‌ಮೀಡಿಯೆಟ್ ವಿದ್ಯಾರ್ಥಿಯೊಬ್ಬ ಕುಳಿತಿದ್ದ. ಆಗ ತಾನೇ ಪತ್ರಿಕೆಯ ಕಾರ್ಯಾಲಯದಿಂದ ತಂದ 'ಬಿಸಿ ಬಿಸಿ' ಹೊಸ ಸಂಚಿಕೆಯನ್ನು ಕಣ್ಣರಳಿಸಿ ಓದುತ್ತಿದ್ದ. ಮತ್ತೇನಿಲ್ಲ, ಪತ್ರಿಕೆಯಲ್ಲಿ ಅವನ ಕವನವೊಂದು ಪ್ರಕಟವಾಗಿತ್ತು. ಅಷ್ಟರಲ್ಲಿ ಅಲ್ಲಿಗೆ ಬಂದ ಇಪ್ಪತ್ತೆರಡರ ತುಂಬು ಹರೆಯದ ಯುವಕನೊಬ್ಬ ಅವನೊಡನೆ ಮಾತನಾಡಿದ. ಅವನ ಕೈಯಲ್ಲಿದ್ದ ಪತ್ರಿಕೆ ನೋಡಿ, ಕವನ ಓದಿ, "ಏನ್ರೀ ಭಟ್ಟರೇ, ನಿಮ್ಮ ಕವನಕ್ಕಿಂತ ನಿಮ್ಮ ಕಾವ್ಯನಾಮದ ಅಬ್ಬರವೇ ಹೆಚ್ಚಾಗಿದೆಯಲ್ಲಾ" ಎಂದು ತಮಾಷೆ ಮಾಡಿದ. 'ಸಿರಿಗನ್ನಡಿಗರ ಡಿಂಗರಿಗ' ಕಾವ್ಯನಾಮದ ಯುವಕನಿಗೆ ತನ್ನ ಗೆಳೆಯನ ಮಾತು ಸರಿ ಅನ್ನಿಸಿತು. ಮುಂದೆ ಆ ಕಾವ್ಯನಾಮವನ್ನು ಬಿಟ್ಟು ತನ್ನ ನಿಜವಾದ ಹೆಸರನ್ನೇ ಬರೆಯತೊಡಗಿದ. ಆ 'ಸಿರಿಗನ್ನಡಿಗರ ಡಿಂಗರಿಗ' ಯಾರು ಗೊತ್ತೇ? – ಇಂದಿನ ಪ್ರಸಿದ್ಧ ಕವಿ 'ಮಂಗಳ ಗಂಗೋತ್ರಿ'ಯ ನಿರ್ದೇಶಕ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರು. ಅವರನ್ನು ತಮಾಷೆ ಮಾಡಿ ಕಾವ್ಯನಾಮ ಕತ್ತರಿಸಿದವರು ದಿ। ಅ. ನ. ಕೃಷ್ಣರಾಯರು.

"ಅ. ನ. ಕೃ. ಇನ್ನಿಲ್ಲ" ಎಂಬ ಸುದ್ದಿ ಕೇಳಿ ಮರುಗಿದ ಪ್ರೊ. ಪರಮೇಶ್ವರ ಭಟ್ಟರು ಹೀಗೆ ನುಡಿದರು – "ನನ್ನ ಇಂಟರ್‌ಮೀಡಿಯೆಟ್ ದಿನಗಳಲ್ಲಿ ನನ್ನ ಬರಹಗಳನ್ನು ಓದಿ ಪ್ರೋತ್ಸಾಹಿಸಿದವರು ಅ. ನ. ಕೃ. ನನ್ನಂತಹ ಬರಹಗಾರರನ್ನು ಬೆಳಕಿಗೆ ತರುವುದೇ ಅವರ ಕಾಯಕ". ಕನ್ನಡಿಗರನ್ನು ಮುಖ್ಯವಾಗಿ ಎಳೆಯರನ್ನು ಒಂದುಗೂಡಿಸಿ ಮುಂದೆ ಮಾಡಿ ಅವರಲ್ಲಿ ಸುಪ್ತವಾಗಿ ಗುಪ್ತವಾಗಿ ಇದ್ದ ಪ್ರತಿಭೆಯ ಕಿಡಿ ಬೇಗ ಪ್ರಜ್ವಲಿಸುವಂತೆ ನೋಡಿಕೊಂಡ ಮಹಾನುಭಾವರು ಅವರು.

"ಅ. ನ. ಕೃ. ಒಬ್ಬ ಕಾರಣ ಪುರುಷ. ಅವರು ಹುಟ್ಟು ಸಾಹಿತಿ. ಹುಟ್ಟು ಹೋರಾಟಗಾರ. ಸಾಹಿತ್ಯ ಪ್ರಚಾರಕ್ಕೆ ಎತ್ತಿದ ಕೈ ಅವರದು." ಏಕೀಕರಣದ ಕನಸು ನನಸಾಗಿದ್ದು ಅವರಿಂದ. ಎಷ್ಟೊಂದು ಜನಕ್ಕೆ ಅವರ ಬರಹ ಅಚ್ಚಾಗುವುದಕ್ಕೆ ಏರ್ಪಾಡು ಮಾಡಿದರೋ, ಎಷ್ಟೊಂದು ಜನಕ್ಕೆ ಅವರು ಭಾಷಣಕ್ಕೆ ಒಂದು ವೇದಿಕೆಯನ್ನು ಒದಗಿಸಿ ಕೊಟ್ಟರೋ, ಎಷ್ಟೊಂದು ಜನಕ್ಕೆ ಅವರು ಕೃತಿಗೆ ಮುನ್ನುಡಿ ಬರೆದು ಹರಸಿದರೋ ಹೇಳುವುದು ಅಸಾಧ್ಯ. ಬಹುಶಃ ೧೯೩೦ರ ಈಚೆಗೆ ಕನ್ನಡದಲ್ಲಿ ಓದಿ, ಬರೆದು ಕೆಲಸ ಮಾಡುತ್ತಿರುವವರಲ್ಲಿ ಅ. ನ. ಕೃ. ಅವರ ಬರಹ ಮಾತುಗಾರಿಕೆ ವ್ಯಕ್ತಿತ್ವ ನಿಕಟ ಪರಿಚಯ ಇವುಗಳಿಂದ ಪ್ರಭಾವಿತರಾಗದ ಬರಹಗಾರ ಇಲ್ಲವೆಂದೇ ತೋರುತ್ತದೆ."

---

* ಮಂಗಳೂರಿನ 'ಕಲಾದರ್ಶನ' ಮಾಸಪತ್ರಿಕೆಯ 'ಆಗಸ್ಟ್, ೧೯೭೧'ರ ಸಂಚಿಕೆಯಿಂದ ಪುನರ್ ಮುದ್ರಣ.

# ೪೫. "ಭಾವಗೀತೆ" – ಒಂದು ಪರಿಚಯ

ಎಡ್ವರ್ಡ್ ನೊರೋನ್ಹಾ, ಎಸ್. ಜೆ.

"ಈ ಪ್ರಯತ್ನ ಊರಿಗೆ ದಾರಿ ಹೇಳುವ ಪ್ರಯತ್ನವಲ್ಲ, ಊರಿಗೆ ದಿಕ್ಸೂಚಿಯಾಗಿರುವ ಕೈಗಂಬಕ್ಕೆ ದಾರಿ ಹೇಳುವ ಪ್ರಯತ್ನ ಮಾತ್ರ. ಭಾವಗೀತೆಯ ಪರಿಚಯಕ್ಕೆ ಇದು ಬಾಲಬೋಧೆ ಆಗಬಹುದು." ಎಂದು ಹೇಳಿದುದರಲ್ಲಿ ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ ವಿನಯಶೀಲತೆ, ನಿರಾಡಂಬರ ಸ್ವಭಾವ ಕಾಣುತ್ತದೆಯಾದರೂ. "ಭಾವಗೀತೆ" – ಈ ಪುಸ್ತಿಕೆಯನ್ನು ಓದಿದ ಮೇಲೆ. ಇದು ಕೈಗಂಬವೂ ಹೌದು ದಾರಿಯೂ ಹೌದು. ಊರೂ ಹೌದು ಎನಿಸದಿರದು. ಅಷ್ಟರಮಟ್ಟಿಗೆ ಸಮಗ್ರವಾಗಿ ಭಾವಗೀತೆಯ "ಸಾಮುದ್ರಿಕ ಲಕ್ಷಣ"ವನ್ನು ಇಲ್ಲಿ ನಿರೂಪಿಸಿದೆ.

ಈ ಪುಸ್ತಿಕೆಯು ಹಿನ್ನೆಲೆ ಮೈಸೂರು ವಿಶ್ವವಿದ್ಯಾನಿಲಯದವರ ಪ್ರಚಾರೋಪನ್ಯಾಸಗಳು. ಜನಸಾಮಾನ್ಯರ ಜ್ಞಾನದಿಗಂತವನ್ನು ವಿಸ್ತರಿಸುವುದು ಇಂಥ ಉಪನ್ಯಾಸಗಳ ಗುರಿ. ಈ ತೆರನಾದ ಉಪನ್ಯಾಸಗಳಲ್ಲಿ, ಮತ್ತು ಅವುಗಳನ್ನು ಅಚ್ಚು ಹಾಕಿಸಿದಾಗ ಪುಸ್ತಿಕೆಗಳಲ್ಲಿ, ಕಾಣಸಿಗುವ ತಿಳಿಯಾದ, ಸರಳವಾದ ವಿಚಾರಧಾರೆ, ವಿಷಯಕ್ಕೆ ಸಂಬಂಧಪಟ್ಟ ಶಾಸ್ತ್ರದ ಸಮಗ್ರನೋಟ ಹಾಗೂ ಪರಿಭಾಷೆಯನ್ನು ದೂರವಿರಿಸಿದ ಮಾತಿನ ಶೈಲಿ ಬೇರೆ ಉಪನ್ಯಾಸಗಳಲ್ಲಿ ಕಾಣಸಿಗುವುದು ಕಷ್ಟ. ಇತರ ಭಾಷಣ, ಗ್ರಂಥಗಳಿಗೆಂದು ಇರುವ ವಿಶಿಷ್ಟ ಶ್ರೋತೃ, ಓದುಗ ವರ್ಗವೇ ಇದಕ್ಕೆ ಕಾರಣ. ಪ್ರತಿಪಾದಿತ ವಿಷಯವು ಒಂದೇ ಆ ವಿಷಯದಲ್ಲಿ ಪ್ರವೇಶವಿಲ್ಲದವರಿಗೆ ತಿಳಿಯದೆ ಹೋಗಬಹುದು. ಇಲ್ಲವೇ ಏನೂ ತಿಳಿಯದಿದ್ದವರಿಗೆ ಪ್ರವೇಶವನ್ನು ಕೊಡುವಾಗ ವಿಷಯದ ಸೂಕ್ಷ್ಮಾತಿಸೂಕ್ಷ್ಮ ಶಾಖೋಪಶಾಖೆಗಳ ನಿರೂಪಣೆಯಿಂದ ಭಾರವಾಗಬಹುದು. ಈ ಎರಡೂ ವಿವರಣೆಯಿಂದ ಜನಸಾಮಾನ್ಯರಿಗೆ ಉಪಯೋಗ ಇಲ್ಲ. ಶಾಸ್ತ್ರದ ಬವಣೆಯಿಲ್ಲದೆ, ರಸವತ್ತಾದ ಅಂಶಗಳನ್ನು ಅರಿತುಕೊಂಡರೆ ಸಾಕು, ಅವನಿಗೆ. ಇದಕ್ಕೆ ಎಷ್ಟು ಬೇಕೋ ಅಷ್ಟು ಶಾಸ್ತ್ರವಿಚಾರವನ್ನು ಸ್ಥೂಲವಾಗಿ ಹೇಳಿದರೆ ಧಾರಾಳವಾಗುತ್ತದೆ.

ಇಷ್ಟೆಲ್ಲವನ್ನು ಮಾಡಬೇಕಾದರೆ ವಿಷಯದ ಮೇಲೆ ಪ್ರಭುತ್ವವಿರಬೇಕಲ್ಲದೆ, ಜನಸಾಮಾನ್ಯರ ಮನಸ್ಸನ್ನು ಅರ್ಥಮಾಡಿಕೊಂಡು ಗಹನವಾದುದನ್ನು ಸುಲಭವಾಗಿ ಅರ್ಥವಾಗುವಂತೆ ಹೇಳುವ ಕಲೆಯೂ ಉಪನ್ಯಾಸಕಾರನಿಗೆ ಬೇಕಾಗುತ್ತದೆ. ಕನ್ನಡ ನಾಡಿನ ಇಂದಿನ ವಾಗ್ಮಿಗಳಲ್ಲಿ ಮೊದಲ ಪಂಕ್ತಿಯವರು ಎನಿಸಿದ ಪ್ರೊ. ಭಟ್ಟರಿಗೆ ಇದು ಎಂದೋ ಸಿದ್ಧಿಸಿದೆ. ಮೂವತ್ತು ವರ್ಷಗಳಿಗೂ ಮೀರಿದ ಅವಧಿಯಲ್ಲಿ ತಮ್ಮ ವ್ಯಾಸಂಗದಿಂದಾಗಿ, ಅನುವಾದದಲ್ಲಿರುವ ಪರಿಶ್ರಮದಿಂದಾಗಿ ಇಂಗ್ಲಿಷ್, ಸಂಸ್ಕೃತ, ಕನ್ನಡ ಭಾಷೆಗಳ ಮೇಲೆ ಮತ್ತು ವಿಶೇಷವಾಗಿ ಕನ್ನಡ, ಸಂಸ್ಕೃತ ಸಾಹಿತ್ಯಗಳ ಮೇಲೆ ಇವರಿಗಿರುವ ಪಾಂಡಿತ್ಯ ಅನ್ಯಾದೃಶ. ಸ್ನಾತಕಪೂರ್ವ, ಸ್ನಾತಕ, ಸ್ನಾತಕೋತ್ತರ ತರಗತಿಗಳಲ್ಲಿ ಪಾಠ ಹೇಳಿದುದರಿಂದಲೂ, ನಾಡಿನ ನಾಲ್ಕು ದಿಕ್ಕುಗಳಿಗೂ, ಪ್ರವಾಸಮಾಡಿ ಅಸಂಖ್ಯಾತ ಮಿತ್ರರ ಬಳಗ ಕಟ್ಟಿಕೊಂಡಿದ್ದುದರಿಂದಲೂ ಜನಗಳ ಮನಸ್ಸನ್ನು, ಅವರ ವಿಚಾರಗ್ರಹಣಶಕ್ತಿಯ ಏರುತಗ್ಗುಗಳನ್ನು ಅವರು ಎಂದೋ ಅರ್ಥಮಾಡಿಕೊಂಡಿದ್ದಾರೆ. ಈ ಸಾಧನೆಗಳಿಂದಾಗಿ ಪ್ರಚಾರೋಪನ್ಯಾಸಕನಲ್ಲಿರಬೇಕಾದ ಆವಶ್ಯಕ ಗುಣಗಳು ಅವರಲ್ಲಿವೆ. ಎಂದ ಮೇಲೆ ಆದರ್ಶ ಪ್ರಚಾರೋಪನ್ಯಾಸವು ಇವರಿಂದ ಬಂತು ಎನ್ನುವುದರಲ್ಲಿ ಆಶ್ಚರ್ಯವಿಲ್ಲ.

ಭಾವಗೀತೆ ಸುಮಾರು ಅರ್ಧಶತಮಾನದ ಈಚೆಗೆ ನಮ್ಮಲ್ಲಿ ಪ್ರಚಾರಕ್ಕೆ ಬಂದ ಸಾಹಿತ್ಯ ಪ್ರಕಾರ ಭಾವಗೀತೆಯ ಉಗಮ, ಪದದ ವಿಶಿಷ್ಟತೆ, ಅರ್ಥವ್ಯಾಪ್ತಿ: ಭಾವಗೀತೆ ಮತ್ತು ಇತರ ಸಾಹಿತ್ಯ ಪ್ರಕಾರಗಳು; ಭಾವಗೀತೆಯ ವಿವಿಧ ಗುಣಗಳು ಗೇಯತೆ, ಸಂಕ್ಷಿಪ್ತತೆ, ಸ್ವಾಂತತೆ, ಭಾವದೀಪ್ತತೆ: ಭಾವಗೀತೆಯ ಉದ್ಗಮ; ಕೆಲವು ವಿಚಾರಗಳು – ಇದು ಪುಸ್ತಿಕೆಯ ಸಂಕ್ಷಿಪ್ತ ಒಳಸೂಚಿ

ಸಾಹಿತ್ಯದ ಗಂಧಗಾಳಿಯೂ ಇಲ್ಲದವನಿಗೆ ಈ ಪುಸ್ತಿಕೆಯಿಂದ ಭಾವಗೀತೆ ಎಂದರೆ ಏನೆಂಬುದು ತಿಳಿಯುತ್ತದೆ. ಪ್ರಾಚೀನ ಪುರಾಣ, ನಾಟಕ ಕಾವ್ಯಗಳಲ್ಲಿ ಭಾವಗೀತೆಯ ಸ್ಥಾನವನ್ನು ವಿವೇಚಿಸು

ವಾಗ, ಪ್ರಾಚೀನ ಪ್ರಕಾರಗಳ ಸ್ಥೂಲ ವರ್ಣನೆ: ಅರ್ವಾಚೀನ ಪುರಾಣ, ನಾಟಕ ಇತ್ಯಾದಿಗಳ ಪರಿಚಯ ವಾಗುತ್ತದೆ. ಇಲ್ಲಿಯ ಉದಾಹರಣೆಗಳ ಸೊಂಪು ಮನೋಹರವಾದುದು. ಶ್ರೀ ಅವರ "ಇಂಗ್ಲಿಷ್ ಗೀತ"ಗಳಿಂದ ಹಿಡಿದು ಇಂದಿನ ವರೆಗಿನ ಭಾವಗೀತಕಾರರ ಕೃತಿಗಳನ್ನು ಉದಾಹರಿಸಿದುದರ ಮೂಲಕ ಭಾವಗೀತೆಯ ಸಂಕ್ಷಿಪ್ತ ಚರಿತ್ರೆ ಹೇಳಿದಂತಾಯಿತಲ್ಲದೆ, ಶ್ರೀ ಗೋವಿಂದ ಪೈ ಅಂಥ ಧುರೀಣರು ಎಂಥ ಕ್ರಾಂತಿಕಾರಿ ಹೆಜ್ಜೆಗಳನ್ನಿಟ್ಟರು ಎಂಬುದಕ್ಕೆ ಅವರ ಗೀತಗಳೇ ಸಾಕ್ಷಿಯಾಗಿ ನಿಂತಿವೆ. ಭಾವದೀಪ್ತತೆಗೆ "ಕುರುಡು ಕಾಂಚಾಣಾ," ಸ್ವಾಂತತೆಗೆ "ಕರುಣಾಳು ಬಾ ಬೆಳಕೆ" – ಈ ಗೀತಗಳು ಆಯಾ ಗುಣಗಳಿಗೆ ಉದಾಹರಣೆಗಳೂ ಹೌದು, ಭಾವಗೀತೆಗೆ ಉತ್ತಮ ನಿದರ್ಶನಗಳೂ ಹೌದು. ಓದಿದಾಗಲೇ ಭಾವ ಗೀತೆ ಹೇಗಿರಬೇಕೆಂಬುದು ತನ್ನಿಂದ ತಾನೆ ಹೊಳೆಯುವಷ್ಟು ಕವಿತಾಗುಣ ಇರುವ ನಿದರ್ಶನಗಳನ್ನೇ ಉದ್ದಕ್ಕೆ ನಾವು ಕಾಣುತ್ತೇವೆ. ರಸಿಕರೂ ಸಹೃದಯರೂ ಆಗಿರುವ ಕೃತಿಕಾರರು ಇಂಥ ಭಾವಪ್ರಖರ ವಾದ ಭಾಗಗಳನ್ನೆ ಆಸ್ವಾದಿಸಿ, ಆಯ್ದು ನಮಗೆ ಕೊಟ್ಟಿದ್ದಾರೆ.

ಎಲ್ಲವನ್ನು ಉದಾಹರಣೆಗಳ ಮೂಲಕ ಮಾತ್ರ ಹೇಳಿದೆ, ವಿವರಣೆ ಇಲ್ಲವೆಂದು ತಿಳಿದುಕೊಳ್ಳ ಬಾರದು. ಉದಾಹರಣೆಗಳಿಗೆ ಪೂರ್ವಭಾವಿಯಾಗಿ ಬರುವ ಸೂತ್ರಪ್ರಾಯ ಮಂಡನೆಯ ನಿಸ್ಸಂದಿಗ್ಧತೆ, ಬಿಗಿ, ಸ್ಪಷ್ಟತೆಗಳು ಆದರ್ಶ ಗದ್ಯ ಹೇಗಿರಬೇಕೆಂಬುದಕ್ಕೆ ಲಕ್ಷ್ಯವಾಗಬಲ್ಲುವು. "ದೇವರ ಸ್ತೋತ್ರ, ಜಯಘೋಷ, ಕಳ್ವಾಡು, ಮಸಣವಾಡು, ಪ್ರೇಮಗೀತೆ ಮುಂತಾದವು ಪ್ರಾಚೀನ ಗ್ರೀಕರಲ್ಲಿ ಹೇಗೆ ಪ್ರಚುರಗೊಂಡವು ಎಂಬುದನ್ನೂ ಖಚಿತವಾದ ಉದ್ದೇಶಕ್ಕಾಗಿ, ನಿರ್ದಿಷ್ಟವಾದ ಸಂದರ್ಭಕ್ಕಾಗಿ ಹೇಗೆ ಗ್ರೀಕರ ಇಂತಹ ಗೀತಗಳು ರಚಿತವಾದವು ಎಂಬುದನ್ನೂ ಅರಿತವರು ಈ ಭಾವಗೀತೆ ಪ್ರಾಚೀನ ಕಾಲ ದಲ್ಲಿ ಶುದ್ಧಾಂಗವಾಗಿ ಸಂಗೀತಕ್ಕೆ ಅಳವಟ್ಟ, ಕೆಲವು ವೇಳೆ ಕುಣಿತಕ್ಕೂ ಅಳವಟ್ಟ ಗೀತವಾಗಿ ಪ್ರಕಟ ಗೊಂಡಿತೆಂಬ ಸಂಗತಿಯನ್ನು ನೆನೆದಾಗ ಮೂಲತಃ ಭಾವಗೀತೆ ಗೇಯರೂಪವನ್ನು ಪಡೆದಿತ್ತು ಎಂಬು ದನ್ನು ಸುಲಭವಾಗಿ ಗ್ರಹಿಸುತ್ತಾರೆ. "ಭಾವಪೂರ್ಣ ಮಾತು ಸಹಜವಾಗಿ ಗೇಯಮಯವಾಗಿರುವು ದನ್ನು ಹೀಗೆ ಹೇಳದೆ, ಇದು ಪ್ರಕೃತಿಸಿದ್ಧವಾದ ಒಂದು ಋತ." ಈ ಎರಡು ವಾಕ್ಯಗಳ ದೀರ್ಘತೆ ಅಥವಾ ಹ್ರಸ್ವತೆ ಗದ್ಯದ ಸಾರ್ಥಕ್ಯದ ಅಳತೆಗೋಲಲ್ಲ. ಒಂದೊಂದು ವಾಕ್ಯದಲ್ಲಿ ಎಷ್ಟು ವಿಚಾರಗಳು ಹೇಳಲ್ಪಟ್ಟಿವೆ, ಗೊಂದಲಮಯವಾಗಿರುವ ಒಂದೇ ಒಂದು ನುಡಿಗಟ್ಟು ಇರದಿರುವುದು, ಒಂದು ಪದ ವನ್ನೂ ಅಳಿಸಿದರೆ, ಸ್ಥಾನಾಂತರಗೊಳಿಸಿದರೆ ಉಂಟಾಗುವ ಅರ್ಥಹಾನಿ, ಅರ್ಥ ಸಂಕುಚಿತತೆ – ಇವು ಗಳನ್ನು ಪರ್ಯಾಲೋಚಿಸಿದರೆ ಪ್ರೊ. ಭಟ್ಟರ ಗದ್ಯರಚನಾಶಕ್ತಿಯನ್ನು ನಾವು ಮೆಚ್ಚಲೇ ಬೇಕು. ಸ್ವಾಂತತೆಯ ನಿರೂಪಣೆಯಲ್ಲಿ, "ಒಂದಾನೊಂದು ವಸ್ತುವಿನ ಅಥವಾ ಸಂದರ್ಭದ ವಾಸ್ತವ ಸ್ಥಿತಿಯನ್ನು ಅವಲಂಬಿಸದೆ ಅವನವನ ಮನೋಧರ್ಮಕ್ಕೆ ಅನುಸಾರಿಯಾಗಿ ಆಗುವ ಅನುಭವವಿಶೇಷಗಳನ್ನು ಕುರಿಯುವುದೇ ಭಾವಗೀತೆಯ ಮೂಲಸತ್ತ್ವ" ಎಂದಾಗ, ಸ್ವಾಂತತೆಯ ನಿಷ್ಕೃಷ್ಟ ವ್ಯಾಖ್ಯೆ ಕೊಟ್ಟಂತೆ ಆಯಿತು. ಬೇಂದ್ರೆಯವರ "ಭಾವಗೀತೆ" ಕವನವು ಜಟಿಲವೆಂದು ತೋರಿದರೂ, ಇಲ್ಲಿರುವ ವ್ಯಾಖ್ಯಾನವು, ಇದನ್ನು ಓದುವುದು ಸುಗಮವೆಂದು ತೋರಿಸಿದೆ.

ಎಲ್ಲ ಕಡೆಗಳಲ್ಲೂ ಸರಳವಾದುದನ್ನೇ ಹೇಳಿದರೂ ಹೆಚ್ಚು ಬೇಕೆನ್ನುವವರಿಗೆ ಅವರ ಪಾಲಿನ ಕಡಲೆ ಕಾಯಿಯನ್ನೂ ಪ್ರೊ. ಭಟ್ಟರು ಕೊಟ್ಟಿದ್ದಾರೆ. ಭಾವಗೀತೆ ಎಂಬ ಪ್ರತ್ಯೇಕ ಪ್ರಕಾರ ಬೇಕೆ, ಬೇಡವೆ ಎಂಬ ಚರ್ಚೆಯನ್ನು ಇಂಥವರಿಗೆಂದು ಪುಸ್ತಿಕೆಯ ಕೊನೆಯಲ್ಲಿ ಇರಿಸಿದಂತೆ ಕಾಣುತ್ತದೆ.

ಒಟ್ಟಿನಲ್ಲಿ ಈ ಪುಸ್ತಿಕೆಯನ್ನು ಪೂರ್ವಗ್ರಹ ಪೀಡೆ ಇಲ್ಲದೆ ಓದಿದವರು, ಕನ್ನಡದ ಭಾವಗೀತೆಗಳ ಸೊಗಸನ್ನು ಅಷ್ಟರಲ್ಲೇ ಅನುಭವಿಸದೆ ಇರುವುದು ಕಷ್ಟ. ತುಣುಕು ತುಣುಕಾಗಿ ಹಂಚಿಕೊಟ್ಟ ಅಮೃತ ಬಿಂದುಗಳ ಮೂಲವಾರಿಧಿಯನ್ನು ಅರಸಿ, ಕನ್ನಡ ಭಾವಗೀತೆಗಳನ್ನು ಸಂಪೂರ್ಣವಾಗಿ ಓದಲು ಈ ಹೊತ್ತಿಗೆಯನ್ನು ಓದಿದ ಯಾವ ಸಹೃದಯನಲ್ಲಿಯೂ ಬಲವಾದ ಆಸೆ ಹುಟ್ಟುವುದು ಅನಿವಾರ್ಯ. ಇದೇ ಪ್ರೊ. ಭಟ್ಟರ ಕೃತಿಯ ಸಾರ್ಥಕತೆ.

ಅನುಬಂಧ — ೧

## ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ ಕೃತಿಗಳು

### ಕವನ ಸಂಕಲನ

೧. ರಾಗಿಣಿ
೨. ಗಗನ ಚುಕ್ಕಿ
೩. ಅಂಚೆಯ ಪೆಟ್ಟಿಗೆ
೪. ಜಹನಾರ
೫. ಇಂದ್ರಚಾಪ
೬. ಇಂದ್ರಗೋಪ
೭. ಉಪ್ಪುಕಡಲು
೮. ಕೃಷ್ಣಮೇಘ
೯. ಸುರಗಿ ಸುರಹೊನ್ನೆ
೧೦. ತುಂಬೆ ಹೂವು
೧೧. ಚಂದ್ರವೀಧಿ

### ಅನುವಾದ ಕೃತಿಗಳು

೧೨. ಗಾಥಾ ಸಪ್ತಶತಿ
೧೩. ಪ್ರೇಮಾರಾಧನ
೧೪. ಕವಿ ಕೌಮುದಿ
೧೫. ಭರ್ತೃಹರಿಯ ಶತಕತ್ರಯ
೧೬. ಭೂಮಿ ಮತ್ತು ಧೂಮಕೇತು
೧೭. ಕೆಲವು ಇಂಗ್ಲಿಷ್ ಪ್ರಬಂಧಗಳು
೧೮. ಮಾಚಯ್ಯ
೧೯. ಸ್ವರಾಜ್ಯದೆಡೆಗೆ
೨೦. ಗೀತಗೋವಿಂದ
೨೧. ಕನ್ನಡ ಋತುಸಂಹಾರ
೨೨. ಕನ್ನಡ ಮೇಘದೂತ
೨೩. ಕನ್ನಡ ರಘುವಂಶ
೨೪. ಕನ್ನಡ ಕುಮಾರಸಂಭವ
೨೫. ಕನ್ನಡ ಅಭಿಜ್ಞಾನ ಶಾಕುಂತಳ
೨೬. ಕನ್ನಡ ಮಾಳವಿಕಾಗ್ನಿಮಿತ್ರ
೨೭. ಕನ್ನಡ ವಿಕ್ರಮೋರ್ವಶೀಯ
೨೮. ಕನ್ನಡ ಕಾಳಿದಾಸ ಮಹಾಸಂಪುಟ

### ಸಂಪಾದಿತ ಕೃತಿಗಳು

೨೯. ಮುದ್ದಣಕವಿಯ ಅದ್ಭುತ ರಾಮಾಯಣ
೩೦. ಮುದ್ದಣಕವಿಯ ಶ್ರೀರಾಮಪಟ್ಟಾಭಿಷೇಕ

### ವಿಮರ್ಶೆ

೩೧. ಅಕ್ಕಮಹಾದೇವಿ
೩೨. ಭಾವಗೀತೆ
೩೩. ಸೀಳುನೋಟ
೩೪. ಅದ್ಭುತ ರಾಮಾಯಣದ ಕಥೆ
೩೫. ಲೇಖನಗಳು
೩೬. ಭಾಷಣಗಳು
೩೭. ಪ್ರಬಂಧಗಳು
೩೮. ಮುನ್ನುಡಿಗಳು

### ಸ್ವತಂತ್ರ ಗಾದೆಗಳ ಸಂಕಲನ

೩೯. ಮಂಥಾನ

ಅನುಬಂಧ — ೨

## ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ ಜೀವನದ ಕೆಲವು ಮುಖ್ಯ ವರ್ಷಗಳು

| | |
|---|---|
| ಜನನ | ೮ ನೆಯ ಫೆಬ್ರವರಿ, ೧೯೧೪ |
| ಬಿ. ಎ., (ಆನರ್ಸ್) ಪದವಿ | ೧೯೩೭ |
| ಶ್ರೀ ಬಿ. ಎಂ. ಶ್ರೀ. ಯವರ ಬಂಗಾರದ ಪದಕ ಪಡೆದುದು | ೧೯೩೭ |
| ಎಂ. ಎ., ಪದವಿ | ೧೯೩೮ |
| ಶ್ರೀ ಕೇಣಿ ಸಿದ್ದಪ್ಪನವರ ಬಂಗಾರದ ಪದಕ ಪಡೆದುದು | ೧೯೩೮ |
| ಮೈಸೂರು ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು | ೧೯೩೯ |
| ಮದುವೆ | ೧೯೪೦ |
| ತುಮಕೂರು ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯರು | ೧೯೪೦ |
| ಮೊತ್ತಮೊದಲ ಕೃತಿ 'ರಾಗಿಣಿ'ಯ ಪ್ರಕಟಣೆ | ೧೯೪೦ |
| ಶಿವಮೊಗ್ಗ ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಕನ್ನಡ ವಿಭಾಗದ ಮುಖ್ಯರು | ೧೯೪೩ |
| ಮೈಸೂರು ಮಹಾರಾಜರವರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು | ೧೯೫೦ |
| ಮಾನಸಗಂಗೋತ್ರಿಯಲ್ಲಿ ಕನ್ನಡ ಅಧ್ಯಾಪಕರು | ೧೯೬೦ |
| ಸರಸ ಸಾಹಿತ್ಯ ಪ್ರಕಾಶನದ ಸ್ಥಾಪನೆ | ೧೯೬೦ |
| ಕನ್ನಡ ಕಾಳಿದಾಸ ಮಹಾಸಂಪುಟದ ಪ್ರಕಟಣೆ | ೧೯೬೩ |
| ಮಾನಸಗಂಗೋತ್ರಿಯಲ್ಲಿ ಕನ್ನಡ ರೀಡರ್ | ೧೯೬೫ |
| ಹಾಸನದ ಮಿತ್ರವೃಂದದವರು ಸಲ್ಲಿಸಿದ ಸನ್ಮಾನ | ೧೯೬೭ |
| ಶ್ರವಣಬೆಳಗೊಳದಲ್ಲಿ ನಡೆದ ೪೬ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷತೆ | ೧೯೬೭ |
| ಮಂಗಳಗಂಗೋತ್ರಿಯ ಕನ್ನಡ ಪ್ರಾಧ್ಯಾಪಕರು ಹಾಗೂ ಅದರ ನಿರ್ದೇಶಕರು | ೧೯೬೮ |
| ಮೈಸೂರು ವಿಶ್ವವಿದ್ಯಾನಿಲಯದ ಚಿನ್ನದ ಹಬ್ಬದ ಅಂಗವಾಗಿ ನಡೆದ ಕವಿಗೋಷ್ಠಿಯ ಅಧ್ಯಕ್ಷತೆ | ೧೯೬೮ |
| ಕೋಟೆಕಾರು ಸಾಹಿತ್ಯ ಸಂಘದವರು ಸಲ್ಲಿಸಿದ ಸನ್ಮಾನ | ೧೯೬೮ |
| ರಾಜ್ಯಸಾಹಿತ್ಯ ಅಕಾಡೆಮಿಯಿಂದ 'ಚಂದ್ರವೀಥಿ' ಕೃತಿಗೆ ಪ್ರಥಮ ಬಹುಮಾನ ದೊರೆತುದು | ೧೯೬೯ |
| ಕನ್ನಡ ಸಾಹಿತ್ಯ ಪರಿಷತ್ತಿನ ಚಿನ್ನದ ಹಬ್ಬದ ಅಂಗವಾಗಿ ನಡೆದ ಸಾಹಿತ್ಯ ಸನ್ಮಾನ | ೧೯೭೦ |
| ಮೈಸೂರಿನ ಎಲ್ಲ ಕನ್ನಡ ಸಂಘಗಳ ಕನ್ನಡ ರಾಜ್ಯೋತ್ಸವ ಸನ್ಮಾನ | ೧೯೭೦ |
| ಹೊಸನಗರ ತಾಲ್ಲೂಕಿನ ಕನ್ನಡ ಸಂಘದ ಸದಸ್ಯರು ಸಲ್ಲಿಸಿದ ಸನ್ಮಾನ | ೧೯೭೦ |

## ಅನುಬಂಧ — ೩

# 'ಪೂರ್ಣಕುಂಭ'ದ ಲೇಖಕರ ಪರಿಚಯ

**ಗುಂಡ್ಮಿ, ಚಂದ್ರಶೇಖರ ಐತಾಳ:** ಮಾನಸಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಮಂಗಳ ಗಂಗೋತ್ರಿಯಲ್ಲಿ ಕನ್ನಡ ಅಧ್ಯಾಪಕರು. 'ಪೂರ್ಣಕುಂಭ'ದ ಸಂಪಾದಕರು.

**ಎಂ. ಮಂಜುನಾಥ ಭಟ್ಟ:** ಎಂ. ಎ., ಪದವೀಧರರು. ಸೈಂಟ್ ಅಲೋಶಿಯಸ್ ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕರು. ಮಂಗಳಗಂಗೋತ್ರಿಯಲ್ಲಿಯೂ ಸಂಸ್ಕೃತ ಅಧ್ಯಾಪಕರು.

**ಶಾರದಾ ಮಾಣಾಯ್:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರೆಯಾದರು. ಈಗ ಬಜ್ಪೆಯ ಹೋಲಿ ಫೆಮಿಲಿ ಹೈಸ್ಕೂಲಿನಲ್ಲಿ ಕನ್ನಡ ಅಧ್ಯಾಪಿಕೆ.

**ಕೆ. ಗಣೇಶರಾವ್:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು.

**ಹರಿನಾರಾಯಣ ಮಾಡಾವು:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು.

**ಎಚ್. ಜೆ. ಲಕ್ಕಪ್ಪ ಗೌಡ:** ಮಾನಸಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಮಂಗಳಗಂಗೋತ್ರಿಯಲ್ಲಿ ಕನ್ನಡ ಅಧ್ಯಾಪಕರು. 'ಪೂರ್ಣಕುಂಭ'ದ ಸಲಹಾಮಂಡಳಿಯ ಸದಸ್ಯರು.

**ಕುಂಜಿಬೆಟ್ಟು ಸುಬ್ರಹ್ಮಣ್ಯ ಕೆದ್ಲಾಯ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಕಲ್ಯಾಣಪುರದ ಮಿಲಾಗ್ರಿಸ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು. 'ಪೂರ್ಣಕುಂಭ'ದ ಕಾರ್ಯದರ್ಶಿಗಳು.

**ರೆ. ಫಾ. ಮಾರ್ಕ್ ವಾಲ್ಡರ್:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಲಿಲಿಲದ ಪ್ರೈಯರ್ ಸೆಕೆಂಡರಿ ಶಾಲೆಯಲ್ಲಿ ಕನ್ನಡ ಅಧ್ಯಾಪಕರು.

**ಎಂ. ರಾಮಕೃಷ್ಣ, ಮೈಸೂರು:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಮೈಸೂರಿನ ಮಹಾರಾಜಾರವರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಎನ್. ಕೆ. ಚೆನ್ನಕೇಶವ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಮೂಡಬಿದಿರೆಯ ಮಹಾವೀರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಯು. ಶಂಕರನಾರಾಯಣ ಭಟ್ಟ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಕಾಸರಗೋಡಿನ ಸರಕಾರೀ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಕೆ. ಬಿ. ಶ್ರೀಕಾಂತ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಕನಕಪುರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ರಾ. ಲಕ್ಷ್ಮೀನಾರಾಯಣ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ತುಮಕೂರು ಸರ್ಕಾರಿ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಗು. ರಾ. ಪ್ರಭು:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು.

**ಎಂ. ಲಕ್ಷ್ಮೀನಾರಾಯಣ ರಾವ್:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು ಈಗ ಅದಮಾರು ಪ್ರೈಯರ್ ಸೆಕೆಂಡರಿ ಶಾಲೆಯಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

**ಶೀಲಾವತಿ ಕೋಳಂಬೆ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರೆಯಾದರು.

**ಕೆ. ಎಂ. ಅಚ್ಯುತ ಕುಮಾರ್:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಮುಳಬಾಗಿಲಿನ ಹೈಯರ್ ಸೆಕೆಂಡರಿ ಶಾಲೆಯಲ್ಲಿ ಕನ್ನಡ ಅಧ್ಯಾಪಕರು.

**ಎಸ್. ಕೇಶವ ಭಟ್, ಅಟ್ಲೂರು:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಕುಶಾಲನಗರದ ಫಾತಿಮಾ ಗರ್ಲ್ಸ್ ಹೈಸ್ಕೂಲಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

**ಎಸ್. ರಾಮಭಟ್ಟ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಪೆರ್ಲದ ಸತ್ಯನಾರಾಯಣ ಹೈಯರ್ ಸೆಕೆಂಡರಿ ಶಾಲೆಯಲ್ಲಿ ಕನ್ನಡ ಅಧ್ಯಾಪಕರು.

**ಪಚ್ಚನಾಡಿ, ಕೇಶವ ರಾವ್:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಮಂಗಳೂರಿನ ಕರ್ಣಾಟಕ ಜೂನಿಯರ್ ಪಾಲಿಟೆಕ್ನಿಕ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಎನ್. ಜಿ. ಪಟವರ್ಧನ್:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಧರ್ಮಸ್ಥಳದ ಶ್ರೀ ಮಂಜುನಾಥೇಶ್ವರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಎಂ. ತಾರಿಣೀ ದೇವಿ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರೆಯಾದರು. ಈಗ ಬೆಂಗಳೂರಿನ ಮಹಾರಾಣಿಯವರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಿಕೆ.

**ಎಂ. ಸಿ. ವಸಂತ ಕುಮಾರ್:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಮೈಸೂರು ವಿಶ್ವವಿದ್ಯಾನಿಲಯದ ಸಂಜೆ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಕೆ. ಸುಬ್ರಹ್ಮಣ್ಯ ಭಟ್ಟ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಮಂಗಳೂರಿನ ಸೈಂಟ್ ಅಲೋಶಿಯಸ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಎಸ್. ಶ್ರೀಧರ ಭಟ್ಟ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಉಡುಪಿಯ ಶ್ರೀ ಪೂರ್ಣಪ್ರಜ್ಞ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಎಸ್. ಎನ್. ರಂಗೇಗೌಡ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು.

**ಎಲಿಜಬೆತ್ ನ್ಯಾನ್ಸಿ:** ಮಂಗಳಗಂಗೋತ್ರಿಯಲ್ಲಿ ಎಂ. ಎ.. ಪದವೀಧರೆಯಾದರು.

**ಅನಂತಕೃಷ್ಣ ಹೆಬ್ಬಾರ್, ಮಣಿಯ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ವಿಟ್ಲದ ಹೈಯರ್ ಸೆಕೆಂಡರಿ ಶಾಲೆಯಲ್ಲಿ ಕನ್ನಡ ಅಧ್ಯಾಪಕರು.

**ಸಂ. ಶಿವಾಜಿ ಜೋಯಿಸ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಮೈಸೂರಿನ ಬನುಮಯ್ಯನವರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ನೊಸಂತಿ:** ಮಂಗಳ ಗಂಗೋತ್ರಿಯಲ್ಲಿ ಎಂ. ಎಂ.. ಪದವೀಧರರಾದ ಎನ್. ಎಸ್. ತಿಮ್ಮೇಗೌಡ. ಈಗ ತುಮಕೂರು ಸರಕಾರೀ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಎ. ವಿ. ನಾವಡ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಕುಂದಾಪುರದ ಭಂಡಾರ್ಕರ್ಸ್ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರು.

**ಬಿ. ಎ. ವಿವೇಕ ರೈ:** ಮಂಗಳಗಂಗೋತ್ರಿಯಲ್ಲಿ ಎಂ. ಎ., ಪದವೀಧರರಾದರು. ಈಗ ಅಲ್ಲಿಯೇ ಕನ್ನಡ ಅಧ್ಯಾಪಕರು.

**ಎ. ಎಸ್. ಕಾಳೇಗೌಡ:** ಮಂಗಳಗಂಗೋತ್ರಿಯ ಎರಡನೆಯ ವರ್ಷದ ಕನ್ನಡ ಎಂ. ಎ., ವಿದ್ಯಾರ್ಥಿ.

**ಬಿ. ಎಂ. ಶ್ರೀನಿವಾಸ:** ಮಂಗಳಗಂಗೋತ್ರಿಯ ಎರಡನೆಯ ವರ್ಷದ ಕನ್ನಡ ಎಂ. ಎ., ವಿದ್ಯಾರ್ಥಿ.

ಯಸ್. ಜಯರಾಮ ರೈ: ಮಂಗಳಗಂಗೋತ್ರಿಯ ಎರಡನೆಯ ವರ್ಷದ ಕನ್ನಡ ಎಂ. ಎ. ವಿದ್ಯಾರ್ಥಿ.

ಬಪ್ಪನಾಡು ಪ್ರೇಮಾನಂದ ಕಿಶೋರ್: ಮಂಗಳಗಂಗೋತ್ರಿಯ ಎರಡನೆಯ ವರ್ಷದ ಕನ್ನಡ ಎಂ. ಎ., ವಿದ್ಯಾರ್ಥಿ.

ನಾಗಮ್ಮ: ಮಂಗಳಗಂಗೋತ್ರಿಯ ಎರಡನೆಯ ವರ್ಷದ ಕನ್ನಡ ಎಂ. ಎ., ವಿದ್ಯಾರ್ಥಿ.

ಕೆ. ಎಸ್. ಅನಂತರಾಮು: ಮಂಗಳಗಂಗೋತ್ರಿಯ ಎರಡನೆಯ ವರ್ಷದ ಕನ್ನಡ ಎಂ. ಎ. ವಿದ್ಯಾರ್ಥಿ.

ಬ. ನಂ. ರಾಮಸ್ವಾಮಿ: ಮಂಗಳಗಂಗೋತ್ರಿಯ ಎರಡನೆಯ ವರ್ಷದ ಕನ್ನಡ ಎಂ. ಎ. ವಿದ್ಯಾರ್ಥಿ.

ಎಸ್. ಲಲಿತಾ: ಮಂಗಳಗಂಗೋತ್ರಿಯ ಎರಡನೆಯ ವರ್ಷದ ಕನ್ನಡ ಎಂ. ಎ., ವಿದ್ಯಾರ್ಥಿ.

ಪ. ಮುರಳೀಧರ ಉಪಾಧ್ಯ: ಮಂಗಳಗಂಗೋತ್ರಿಯ ಎರಡನೆಯ ವರ್ಷದ ಕನ್ನಡ ಎಂ. ಎ. ವಿದ್ಯಾರ್ಥಿ.

ಎಡ್ವರ್ಡ್ ನೊರೋನ್ಹಾ: ಮಂಗಳಗಂಗೋತ್ರಿಯ ಎರಡನೆಯ ವರ್ಷದ ಕನ್ನಡ ಎಂ. ಎ. ವಿದ್ಯಾರ್ಥಿ.

## 'ಪೂರ್ಣಕುಂಭ'ಕ್ಕೆ ಧನಸಹಾಯ ಮಾಡಿದ ಮಹನೀಯರು

ಶ್ರೀ ಡಿ. ವೀರೇಂದ್ರ ಹೆಗ್ಗಡೆ, ಧರ್ಮಸ್ಥಳ
ಡಾ. ಟಿ. ಎಂ. ಎ. ಪೈ, ಮಣಿಪಾಲ
ಪ್ರೊ. ದೇ. ಜವರೇಗೌಡ, ಕುಲಪತಿ, ಮೈ. ವಿ. ನಿಲಯ
ಡಾ. ಎಂ. ಪಿ. ಪೈ, ಮಂಗಳೂರು
ಶ್ರೀ ಮಂಜುನಾಥ ಪೈ, ಕಾರ್ಕಳ
ಶ್ರೀ ಮಧುಸೂದನ ಡಿ. ಕುಶೆ, ಮಂಗಳೂರು
ಮಾಲಿಕರು, ಶಾರದಾ ಪ್ರೆಸ್, ಮಂಗಳೂರು
ಶ್ರೀ ಪೈಲೂರು ಲಕ್ಷ್ಮೀನಾರಾಯಣ ರಾವ್, ಮಂಗಳೂರು
ಶ್ರೀ ಯೆಲ್ಲೂರು ಉಮೇಶ ರಾವ್, ಮಂಗಳೂರು
ಶ್ರೀ ಏರ್ಯ ಲಕ್ಷ್ಮೀನಾರಾಯಣ ಆಳ್ವ, ಬಂಟ್ವಾಳ
ಶ್ರೀ ಯು. ರಾಜಾರಾಮ ಮಲ್ಯ, ಮಂಗಳೂರು
ಶ್ರೀ ಎಂ. ಮಧ್ವರಾಜ್, ಮಲ್ಪೆ
ಪ್ರೊ. ಎಂ. ಮರಿಯಪ್ಪ ಭಟ್ಟ, ಮದ್ರಾಸ್
ಶ್ರೀ ಗುಂಡ್ಮಿ, ರಾಮಕೃಷ್ಣ ಐತಾಳ, ಬೆಂಗಳೂರು
ಶ್ರೀ ಕೆ. ಆರ್. ಆಚಾರ್, ಮಂಗಳೂರು
ಶ್ರೀ ಕೆ. ಬಾಲಕೃಷ್ಣ ರಾವ್, ಮಂಗಳೂರು
ಶ್ರೀ ಕಯ್ಯಾರ ಕಿಞ್ಞಣ್ಣ ರೈ, ಮಂಗಳೂರು
ಶ್ರೀ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ, ಮಂಗಳೂರು
ಶ್ರೀ ಅ. ರಾ. ಮಿತ್ರ, ಬೆಂಗಳೂರು
ಶ್ರೀ ಎಚ್. ಜೆ. ಲಕ್ಕಪ್ಪಗೌಡ, ಮಂಗಳೂರು
ಶ್ರೀ ಬಿ. ಎ. ವಿವೇಕ ರೈ, ಮಂಗಳೂರು
ಶ್ರೀಮತಿ ಲೀಲಾಭಟ್, ಉಡುಪಿ
ಶ್ರೀ ಎಸ್. ಎಂ. ರಮಾನಂದ ಶೆಟ್ಟಿ, ಮೈಸೂರು
ಶ್ರೀ ಬಾಲಗೋಪಾಲ್. ಬಾಲ್ಕೊ ಸ್ಟುಡಿಯೋ, ಮಂಗಳೂರು
ಮಾಲಿಕರು, ಕೋಮಲ ಬೇಕರಿ, ಮಂಗಳೂರು
ಶ್ರೀ ಬಿ. ಎಸ್. ಭಂಡಾರಿ, ಕಾರ್ಕಳ
ಶ್ರೀ ಎಂ. ರಾಮಚಂದ್ರ, ಕಾರ್ಕಳ
ಶ್ರೀ ಎಂ. ರಾಜಗೋಪಾಲಾಚಾರ್ಯ, ಉಡುಪಿ
ಶ್ರೀ ಅಮೃತ ಸೋಮೇಶ್ವರ, ಪುತ್ತೂರು
ಶ್ರೀಮತಿ ಮಾಲಿನೀ ಭಟ್ಟ
ಶ್ರೀ ಪಿ. ಸದಾಶಿವ ರಾವ್, ಮಂಗಳೂರು
ಶ್ರೀ ಜೆ. ಸಿ. ಸಮರ್ಥ, ಉಷಾ ಸ್ಟುಡಿಯೋ, ಮಂಗಳೂರು
ಕುಮಾರಿ ಮಹಾಲಕ್ಷ್ಮೀ ಕಾರಂತ, ಕಲ್ಯಾಣಪುರ
ಕುಮಾರಿ ತಾರಿಣೀದೇವಿ
ಕುಮಾರಿ ಶೀಲಾವತಿ, ಕೊಳಂಬೆ
ಶ್ರೀ ಶಂಕರ ಶೆಟ್ಟಿ
ಶ್ರೀ ಕೇಶವ ಉಚ್ಚಿಲ್
ಶ್ರೀ ಶ್ರೀಧರ ಭಟ್ಟ
ಶ್ರೀ ಶಂಕರನಾರಾಯಣ ಭಟ್ಟ
ಶ್ರೀ ಎನ್. ಜಿ. ಪಟವರ್ಧನ್
ಶ್ರೀ ಎನ್. ಕೆ. ಚೆನ್ನಕೇಶವ
ಶ್ರೀ ಎಂ. ಸಿ. ವಸಂತಕುಮಾರ್
ಶ್ರೀ ಎ. ವಿ. ನಾವಡ
ಶ್ರೀ ಸೋಮಶೇಖರಪ್ಪ
ರೆ. ಫಾ. ಮಾರ್ಕ್ ವಾಲ್ಡಾರ್
ಶ್ರೀ ಬಿ. ರಾಜಶೇಖರಪ್ಪ
ಶ್ರೀ ಎಂ. ಲಕ್ಷ್ಮೀನಾರಾಯಣ ರಾವ್
ಶ್ರೀ ಡಿ. ರಾಮಭಟ್ಟ
ಶ್ರೀ ಸುಬ್ರಹ್ಮಣ್ಯ ಭಟ್ಟ
ಶ್ರೀ ಅನಂತಕೃಷ್ಣ ಹೆಬ್ಬಾರ
ಶ್ರೀ ಕೇಶವ ಭಟ್ಟ
ಶ್ರೀ ಜಿ. ಆರ್. ಪ್ರಭು
ಶ್ರೀ ಗಣೇಶ ರಾವ್
ಶ್ರೀ ಹರಿನಾರಾಯಣ, ಮಾಡಾವು
ಶ್ರೀ ಕೇಶವ ರಾವ್
ಶ್ರೀ ಶಿವಾಜಿ ಜೋಯಿಸ
ಶ್ರೀ ಶ್ರೀಕಾಂತ
ಶ್ರೀ ಎನ್. ಎಸ್. ತಿಮ್ಮೇಗೌಡ
ಶ್ರೀಮತಿ ಸುಜಾತಾ
ಕುಮಾರಿ ಎಲಿಜಬೆತ್ ನ್ಯಾನ್ಸಿ
ಶ್ರೀಮತಿ ಜಯಲಕ್ಷ್ಮೀ
ಶ್ರೀಮತಿ ಸರಸ್ವತೀ

ಕುಮಾರಿ ಮಮತಾ
ಕುಮಾರಿ ರತ್ನಾವತೀ
ಕುಮಾರಿ ವಸುಂಧರಾ
ಕುಮಾರಿ ಶಾರದಾ ಮಾಣಾಯ್
ಶ್ರೀ ಪ. ಮುರಳೀಧರ ಉಪಾಧ್ಯ
ಡಾ. ಎಂ. ಆರ್. ರಾಘವಾಚಾರ್
ಶ್ರೀ ಸಂಪತ್ಕುಮಾರ್
ಶ್ರೀ ಬಿ. ಗೋಕುಲದಾಸ ಶೆಣೈ
ಶ್ರೀಮತಿ ಎಚ್. ಉಷಾದೇವಿ
ಡಾ. ಎನ್. ಲಿಂಗಪ್ಪ
ಶ್ರೀ ಜಯಗೋಪಾಲ್ ಉಚ್ಚಿಲ್
ಶ್ರೀ ಬಿ. ಎಸ್. ನರಸಿಂಹ ಪ್ರಸಾದ್
ಶ್ರೀ ದಾಮೋದರ ದಾಸ್
ಡಾ. ಎಂ. ಅಬ್ದುಲ್ ರೆಹಮಾನ್
ಶ್ರೀ ಎ. ನಾಗಭೂಷಣರಾವ್ ಸಿಂಧೆ
ಡಾ. ಎಂ. ಎನ್. ಮಧ್ಯಸ್ಥ
ಶ್ರೀ ಎ. ಪಿ. ಮಣಿ
ಶ್ರೀ ಕೆ. ಎಂ. ಕಾವೇರಿಯಪ್ಪ
ಶ್ರೀ ಡಿ. ಕೆ. ಪೊದುವಾಳ್
ಶ್ರೀ ಬಿ. ಆರ್. ಅನಂತನ್
ಶ್ರೀ ವಿ. ಬಿ. ಹೊಸಮನೆ
ಶ್ರೀ ಗುಂಡ್ಮಿ, ಚಂದ್ರಶೇಖರ ಐತಾಳ
ಶ್ರೀ ಕೆ. ಸುಬ್ರಹ್ಮಣ್ಯ ಕೆದ್ಲಾಯ

## ಅನುಬಂಧ — ೫

# ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರ ಲೇಖನಸೂಚಿ

**ಸಂಕಲನ: ಶ್ರೀಮತಿ ಲೀಲಾ ಸುಬ್ರಹ್ಮಣ್ಯಂ**
ಮತ್ತು
**ಮುರಳೀಧರ ಉಪಾಧ್ಯ, ಹಿರಿಯಡಕ**

## I ಲೇಖನಗಳು: ಪುಸ್ತಕರೂಪದಲ್ಲಿ ಪ್ರಕಟವಾದುವು

೧. ಪಂಪನು ಬೆಳಗಿದ ಲೌಕಿಕದ ಒಂದು ಚಿತ್ರ:
ಉಪಾಯನ: ಡಿ. ಎಲ್. ನರಸಿಂಹಾಚಾರ್ಯರ ಸಂಭಾವನಾ ಗ್ರಂಥ ಪು. ೧೬೬–೧೭೬.
ಸೀಳುನೋಟ: ಎಸ್. ವಿ. ಪರಮೇಶ್ವರ ಭಟ್ಟ, ೧೯೬೩.

೨. ಅಕ್ಕನವರ ವಚನಗಳಲ್ಲಿ ಕಾವ್ಯಗುಣ: ಸೀಳುನೋಟ: ಪು. ೨೩–೪೫.

೩. ಬಸವಣ್ಣನವರು ಕಂಡ ಲೋಕದ ಡೊಂಕು: ಸೀಳುನೋಟ, ಪು. ೪೬–೪೯.

೪. ಕುವೆಂಪು ಅವರ ಭಾವಗೀತಗಳಲ್ಲಿ ಪ್ರಕೃತಿದರ್ಶನ ದೃಷ್ಟಿ ಮತ್ತು ವಿಕಾಸ:
ಕವಿದರ್ಶನ: ಕುವೆಂಪು ಅಭಿನಂದನ ಗ್ರಂಥ: ಪು. ೨೧–೯೦; ಸೀಳುನೋಟ ೭೦–೧೨೩.

೫. ವಿ. ಸೀ. ಅವರ ಕವಿತೆಗಳಲ್ಲಿ ಶುಚಿಜೀವನ ದರ್ಶನ:
ರೂಪಾರಾಧಕ: ವಿ. ಸೀ. ಅಭಿನಂದನ ಗ್ರಂಥ: ಪು. ೬೩–೯೪; ಸೀಳುನೋಟ: ಪು. ೧೨೪–೧೫೪.

೬. ಶಾಸ್ತ್ರಶ್ರೀರೋಹಣಾರೋಹಣಕ್ಕೆ ಕರೆ:
ಭಾಷಣಗಳು: ಎಸ್. ವಿ. ಪರಮೇಶ್ವರ ಭಟ್ಟ ೧೯೭೦. ಪು. ೧–೧೯.

೭. ಶ್ರೀರಾಮಾಶ್ವಮೇಧದ ಗದ್ಯ: ಭಾಷಣಗಳು: ಪು. ೨೦–೩೯.

೮. ಶಾಕುಂತಲ ನಾಟಕ ನವೀನ ಟೀಕೆ: ಭಾಷಣಗಳು: ಪು. ೪೦–೫೩.

೯. ಬಸವಣ್ಣನವರ ವಚನಗಳಲ್ಲಿ ರೂಪಾಂಶ: ಭಾಷಣಗಳು: ಪು. ೫೪–೭೨.

೧೦. ಮುದ್ದಣ ಕವಿಯನ್ನು ಕುರಿತು: ಭಾಷಣಗಳು: ಪು. ೭೩–೭೯.

೧೧. ಏಳೆ-ತ್ರಿಪದಿ–ಗಾದೆ ಇವುಗಳ ರೂಪಸಾಮ್ಯ: ಭಾಷಣಗಳು: ಪು. ೮೦–೯೧.

೧೨. ಲಲಿತಕಲೆಗಳೂ ಜನತೆಯ ಏಳಿಗೆಯೂ:
ಲೇಖನಗಳು: ಎಸ್. ವಿ. ಪರಮೇಶ್ವರ ಭಟ್ಟ ೧೯೭೧. ಪು. ೧–೯.

೧೩. ಕಾವ್ಯಸತ್ಯ: ಸಂಭಾವನೆ: ಬಿ. ಎಂ. ಶ್ರೀ. ಅಭಿನಂದನ ಗ್ರಂಥ.
ಲೇಖನಗಳು: ಪು. ೧೦–೧೭.

೧೪. ಗೋವಿನ ಹಾಡು:
ತರೀಕೆರೆ ಮೊದಲನೆಯ ಕನ್ನಡ ಜನಪದ ಸಾಹಿತ್ಯ ಸಮ್ಮೇಳನದ ಸಂಸ್ಮರಣ ಗ್ರಂಥ: "ಹೊನ್ನ ಬಿತ್ತೇವು ಹೊಲಕೆಲ್ಲ" ಲೇಖನಗಳು: ಪು. ೧೮–೩೩.

೧೫. ಶ್ರೀ ಕುವೆಂಪು ಅವರ ಸೂರ್ಯೋದಯ ಗೀತಗಳು:
ಗಂಗೋತ್ರಿ: ಕುವೆಂಪು ಅಭಿನಂದನ ಗ್ರಂಥ; ಲೇಖನಗಳು: ಪು. ೩೪–೪೭.

೧೬. ಕನ್ನಡದಲ್ಲಿ ಜೀವನ ಚರಿತ್ರೆಗಳು:
ಪ್ರಬುದ್ಧ ಕರ್ಣಾಟಕ: ಬೆಳ್ಳಿಹಬ್ಬದ ಸಂಚಿಕೆ; ಲೇಖನಗಳು: ಪು. ೪೮–೬೦.

೧೭. ರಂಗಣ್ಣನವರ ಕೃತಿಗಳು:
ಬಾಗಿನ: ಎಸ್. ವಿ. ರಂಗಣ್ಣ ಅಭಿನಂದನ ಗ್ರಂಥ; ಪು. ೪೫–೬೭. ಲೇಖನಗಳು: ಪು. ೬೧–೮೫.

೧೮. ಸಂನ್ಯಾಸಿ ಮತ್ತು ಇತರ ಕತೆಗಳು:
ಉಡುಗೊರೆ: ಕುವೆಂಪು ಅಭಿನಂದನ ಗ್ರಂಥ: ಪು. ೧೭೯–೧೯೪ ಲೇಖನಗಳು: ಪು. ೮೬–೧೦೫.

೧೯. ಶಾಸ್ತ್ರಿಗಳವರ ಭಾಷಣಗಳು:
ಜೀವನ: ಎ. ಆರ್. ಕೃ. ವಿಶೇಷ ಸಂಚಿಕೆ: ಲೇಖನಗಳು: ಪು. ೧೦೬–೧೧೪.

೨೦. ಕುಮಾರ ಸಂಭವದಲ್ಲಿ ಪಾರ್ವತೀಪರಮೇಶ್ವರರ ಸಂವಾದ:
ಜನಮನ-ವಾರಪತ್ರಿಕೆ-ಡಿಸೆಂಬರ್ ೨೦. ೧೯೫೭: ದೇವಗಂಗೆ: ಜಿ. ಶಿವಮೂರ್ತಿ ಶಾಸ್ತ್ರಿಗಳ ಅಭಿನಂದನ ಗ್ರಂಥ: ಪ್ರಬಂಧಗಳು: ಎಸ್. ವಿ. ಪರಮೇಶ್ವರ ಭಟ್ಟ ೧೯೬೧. ಪು. ೧–೨೧.

೨೧. ಗಾಥಾಸಪ್ತಶತಿಯಲ್ಲಿ ಶೃಂಗಾರದ ಚಿತ್ರಗಳು:
ಪ್ರಜಾವಾಣಿ: ದೀಪಾವಳಿ ಸಂಚಿಕೆ ೧೯೬೯; ಪ್ರಬಂಧಗಳು: ಪು. ೨೨–೩೮

೨೨. ಅಮರುಕ ಕವಿಯ ಚಿತ್ರಶಾಲೆ:
ಕನ್ನಡ ಅಮರು ಶತಕ: ಎಸ್. ವಿ. ಪರಮೇಶ್ವರ ಭಟ್ಟ; ಪ್ರಬಂಧಗಳು: ಪು. ೩೯–೬೨.

೨೩. ಮುದ್ದಣ ಕವಿಯ ಅದ್ಭುತ ರಾಮಾಯಣದ ವಿಮರ್ಶೆ:
ಅದ್ಭುತ ರಾಮಾಯಣ: ಸಂ: ಎಸ್. ವಿ. ಪರಮೇಶ್ವರ ಭಟ್ಟ. ಪ್ರಬಂಧಗಳು: ಪು. ೬೩–೯೨.

೨೪. ವಿನಾಯಕರ 'ಬಾಳದೇಗುಲದಲ್ಲಿ'
ವಿನಾಯಕ ವಾಙ್ಮಯ: ವಿ. ಕೃ. ಗೋಕಾಕರ ಅಭಿನಂದನ ಗ್ರಂಥ; ಪ್ರಬಂಧಗಳು: ೯೩–೧೧೯.

## II ಬಿಡಿ ಬರಹಗಳು

೧. ಪ್ರೊ. ತೀ. ನಂ. ಶ್ರೀ.
ಪುಸ್ತಕ ಪ್ರಪಂಚ: ಮಾಸಪತ್ರಿಕೆ: ಅಕ್ಟೋಬರ ೧೯೬೬.

೨. ಯುಗಾದಿಯನ್ನು ಕುರಿತು ಕನ್ನಡ ಕವಿಗಳು ಕಟ್ಟಿದ ಹಾಡುಗಳು:
ನಿರ್ಮಲಾ-ಮಾಸಪತ್ರಿಕೆ: ಎಪ್ರಿಲ್ ೧೯೬೫.

೩. ಕುಮಾರ ಸಂಭವದಲ್ಲಿ ಕಾಮದಹನದ ಚಿತ್ರ: ನಿರ್ಮಲಾ-ಮಾರ್ಚ್ ೧೯೬೫.

೪. ಶ್ರೀರಂಗಣ್ಣನವರ 'ರಂಗಬಿನ್ನಪ': ನಿರ್ಮಲಾ-ಮಾರ್ಚ್ ೧೯೬೬.

೫. ಪ್ರಾಚೀನ ಭಾರತ ಸಾಹಿತ್ಯ ಮತ್ತು ಅದರ ವೈಭವ: ಪುಸ್ತಕ ಪ್ರಪಂಚ?

೬. ಕವಿ ಕಾವ್ಯ ಪರಿಚಯ: ವಿಶ್ವವಾಣಿ-ಮಾಸಪತ್ರಿಕೆ.

೭. ಶಬ್ದಸೃಷ್ಟಿಯಲ್ಲಿ ಕವಿಕೌಶಲ: ಸುಬೋಧ-ಮಾಸಪತ್ರಿಕೆ?

೮. ಕುಮಾರ ಸಂಭವದಲ್ಲಿ ಹಿಮಾಲಯದ ವರ್ಣನೆ:
ಜನಮನ-ವಾರಪತ್ರಿಕೆ-ಡಿಸೆಂಬರ ೧೯೫೭.

೯. ಕುಮಾರ ಸಂಭವದಲ್ಲಿ ಪಾರ್ವತಿಯ ತಪಸ್ಸು: ಜನಮನ-ಡಿಸೆಂಬರ್ ೧೭. ೧೯೫೭.

೧೦. ಕುಮಾರ ಸಂಭವದಲ್ಲಿ ಕಾಮದಹನದ ಚಿತ್ರ!
ಜನಮನ ೬–೧–೧೯೫೮, ೧೩–೧–೧೯೫೮, ೧೭–೧–೧೯೫೮.

೧೧. ಕಡೆಂಗೋಡ್ಲು ಶಂಕರಭಟ್ಟರ 'ನಲ್ಮೆ': ಪ್ರಜಾವಾಣಿ?

೧೨. ಪು. ತಿ. ನ. ಅವರ ಗಣೇಶದರ್ಶನ: ಪ್ರಜಾವಾಣಿ?

೧೩. ಇಬ್ಬರು ಕನ್ನಡ ಸಾಹಿತಿಗಳ ಜೀವನ ಚಿತ್ರಣ:
ದೇ. ಜ. ಗೌ. ಅಭಿನಂದನ ಗ್ರಂಥ: ಪು. ೧೭೪–೨೦೧.

೧೪. ಎ. ಆರ್. ಕೃ. ಅವರ ಕಾವ್ಯಮೀಮಾಂಸೆ:
ಪ್ರಬುದ್ಧ ಕರ್ಣಾಟಕ ೫೦ (೧) ೬೮. ಪು. ೪೬೫–೪೭೯.

೧೫. ಸಂಸ್ಕೃತ ನಾಟಕ: ಪ್ರ. ಕ. ೫೦. ೧. ೬೮. ಪು. ೪೬೩–೪೭೯.

೧೬. ಡಿ. ಎಲ್. ನರಸಿಂಹಾಚಾರ್:
ಜ್ಞಾನೋಪಾಸಕ: ಡಿ. ಎಲ್. ಎನ್. ಅಭಿನಂದನ ಗ್ರಂಥ ಪು. ೧೭–೨೫.

೧೭. ನಲವತ್ತೊಂದನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾದ
ಪ್ರೊ. ಡಿ. ಎಲ್. ನರಸಿಂಹಾಚಾರ್ಯರು: ಕನ್ನಡ ನುಡಿ ಸಂ. ೨೩–೨: ೧೯೬೦ ಪು. ೨೫–೨೯.

೧೮. ಶ್ರೀಪತಿಯ ಕಥೆಗಳು:
ಅಭಿವಂದನೆ: ಎ. ಆರ್. ಕೃ. ಅಭಿನಂದನ ಗ್ರಂಥ ಪು. ೩೭–೫೧.

೧೯. ಹರಿಹರನ ಗಿರಿಜೆ: ಜಯ ಕರ್ನಾಟಕ ಸಂ. ೧೪ ಪು. (?).

೨೦. ಗುರುವರೇಣ್ಯರನ್ನು ಕುರಿತು: ಸವಿನೆನಪು: ಟಿ. ಎಸ್. ವೆಂಕಣ್ಣಯ್ಯನವರ ಸ್ಮಾರಕ ಗ್ರಂಥ:
ಪು. ೧೦೦–೧೦೨.

## III ಇತರ ಲೇಖನಗಳು

೧. ಶಿಕ್ಷೆ, ರಕ್ಷೆ, ಶಿಕ್ಷಣಗಳನ್ನು ಕುರಿತು ನಾಲ್ಕು ಮಾತುಗಳು:
ನವಭಾರತ ೧೦–೧೦–೧೯೭೧.

೨. ಸಾಹಿತ್ಯ ಸಮಾಜದ ಉದಾತ್ತ ಕಲ್ಪನೆ: ಕಲಾದರ್ಶನ, ಸಪ್ಟಂಬರ ೧೯೭೧.

೩. ಕಲಾದರ್ಶನದ ಸಮೃದ್ಧಿಯ ಕೋರಿಕೆ: ಕಲಾದರ್ಶನ; ನವಂಬರ ೧೯೭೧.

## IV ಪುಸ್ತಕ ವಿಮರ್ಶೆ:

ಪು. ಪ್ರ. = ಪುಸ್ತಕ ಪ್ರಪಂಚ ಪ್ರ. ಕ. = ಪ್ರಬುದ್ಧ ಕರ್ನಾಟಕ.

೧. ಪುನರ್ಜನ್ಮ: ಗೊರೂರು ರಾಮಸ್ವಾಮಿ ಅಯ್ಯಂಗಾರ್:
ಪುಸ್ತಕ ಪ್ರಪಂಚ-ಮಾಸಪತ್ರಿಕೆ ಸಂ. ಸಂಚಿಕೆ?.

೨. ಹರಿಹರನ ಗಿರಿಜಾಕಲ್ಯಾಣ ಮಹಾಪ್ರಬಂಧ: ಸಂ. ಎಚ್. ದೇವೀರಪ್ಪ, ದೇಜಗೌ—
ಪು. ಪ್ರ.: ಜನವರಿ ೧೯೫೨.

೩. ಬಸವಣ್ಣನವರ ಷಟ್‌ಸ್ಥಲದ ವಚನಗಳು: ಪ್ರೊ. ಬಸವನಾಳ್
ಪು. ಪ್ರ.: ಜುಲೈ ೧೯೫೨.

೪. ಸಾಮಗಾನ: ಜಿ. ಎಸ್. ಶಿವರುದ್ರಪ್ಪ: ಪು. ಪ್ರ. ?

೫. ಮಹಾಯುದ್ಧ ಖಂಡಕಾವ್ಯ: ಕೆ. ಎ. ಎನ್. ರಾವ್: ಪು. ಪ್ರ. ?

೬. ನಂದನ: ಕವನ ಸಂಕಲನ ಎಚ್. ಎಸ್. ಬಿಳಿಗಿರಿ: ಪು. ಪ್ರ. ?

೭. ಅಕ್ಕತಂಗಿ: ನಾರಾಯಣ ಸಂಗಮ: ಪ್ರ. ಕ. ಸಂ. ೨೫ ಪು. ೪.

೮. ದೇವದಾಸ: ಅನು. ಗುರುನಾಥ ಜೋಶಿ: ಪ್ರ. ಕ. ಸಂ. ೨೧ ಸಂ. ೪.

೯. ನನ್ನ ದೇವರು ಮತ್ತು ಇತರ ಕತೆಗಳು: ಪ್ರ. ಕ. ಸಂ. ೨೨. ಸಂ. ೨.

೧೧. ಪತ್ತು ವರುಷ: ಜಿ. ಪಿ. ರಾಜರತ್ನಂ: ಪ್ರ. ಕ. ಸಂ. ೨೧. ಸಂ. ೩.
ಪ್ರೊ. ಎಸ್. ವಿ. ಪಿ. ಅವರು ಪುಸ್ತಕ ಪ್ರಪಂಚದಲ್ಲಿ ಬರೆದಿದ್ದ ಅನೇಕ ಸಂಪಾದಕ ಲೇಖನಗಳನ್ನೂ, ೧೯೫೫-೫೬ರಲ್ಲಿ ಪ್ರಬುದ್ಧ ಕರ್ನಾಟಕದ ಸಂಪಾದಕರಾಗಿದ್ದಾಗ ಬರೆದಿದ್ದ ಸಂಪಾದಕೀಯಗಳನ್ನೂ ಇಲ್ಲಿ ಉಲ್ಲೇಖಿಸಲು ಸಾಧ್ಯವಾಗಲಿಲ್ಲ.

## V ಮುನ್ನುಡಿಗಳು

೧. ಶ್ರೀ ಹಿರೇಮಲ್ಲೂರ್ ಈಶ್ವರನ್ ಅವರ 'ವಿಷಮಿಂಚುಗಳು': ಡಿಸೆಂಬರ್ ೧೯೪೬.
೨. ಶ್ರೀ ಶ್ರೀಕಂಠಯ್ಯನವರ 'ಅರಿವು': ಸೆಪ್ಟೆಂಬರ್ ೧೯೪೯.
೩. ಶ್ರೀ ಸಾ. ಶಿ. ಮರುಳಯ್ಯನವರ 'ಶಿವ-ತಾಂಡವ': ಡಿಸೆಂಬರ ೧೯೫೪.
೪. ಶ್ರೀ ಜೀ. ಶಂ. ಪರಮಶಿವಯ್ಯನವರ 'ಜೀವನಗೀತ': ಡಿಸೆಂಬರ ೧೯೫೫.
೫. ಶ್ರೀ ಎಚ್. ಜಿ. ಮಹದೇವಯ್ಯನವರ 'ಅಳಿವು-ಉಳಿವು' ೧೯೬೩
೬. ಶ್ರೀ ಕ. ರಾ. ಕೃಷ್ಣಸ್ವಾಮಿಯವರ 'ಪಕ್ಷಿ ಹೊಂಬಾಳೆ ಕೂಗಿದಾವೆ': ಫೆಬ್ರವರಿ ೧೯೬೩.
೭. ಶ್ರೀ ಎಚ್. ಎಲ್. ನಾಗೇಗೌಡರ: 'ನಾನಾಗುವೆ ಗೀಜಗನ ಹಕ್ಕಿ': ಏಪ್ರಿಲ್ ೧೯೬೩.
೮. ಶ್ರೀ ಸಚ್ಚಿದಾನಂದಯ್ಯನವರ 'ಕರ್ಮಜೀವಿ': ಜೂನ್ ೧೯೬೬.
೯. ಶ್ರೀ ರಾಮೇಗೌಡರ 'ಯಾತ್ರೆ': ಜುಲೈ ೧೯೬೬.
೧೦. ಶ್ರೀ ಉಪ್ಪಂಗಳ ಚಂದ್ರಶೇಖರ ಹೊಳ್ಳ ಅವರ 'ಉದಯರವಿ': ಮಾರ್ಚ್ ೧೯೬೮.
೧೧. ಶ್ರೀ ಎಸ್. ತಿರುಮಲೇಶ್ವರ ಭಟ್ಟರ 'ಶ್ರೀ ಮಂಜುನಾಥೇಶ್ವರ ಶತಕ'.
ಅಕ್ಟೋಬರ ೧೯೬೯.
೧೨. ಶ್ರೀ ಗುಂಡ್ಮಿ, ಚಂದ್ರಶೇಖರ ಐತಾಳರ 'ಪಾತ್ರಸಂಹಿತೆ': ಜನವರಿ ೧೯೭೦.
೧೩. ಶ್ರೀ ಎಂ. ರಾಜಗೋಪಾಲಾಚಾರ್ಯರ 'ಕನ್ನಡದ ವಾಗ್ರೂಢಿಗಳು': ಜನವರಿ ೧೯೭೦.
೧೪. ಶ್ರೀ ಗಣಪತಿ ಮೊಳೆಯಾರರ 'ಮಹಾವೀರ ಚರಿತಮ್': ಮಾರ್ಚ್ ೧೯೭೦.
೧೫. ಶ್ರೀ ಎಂ. ಕೆ. ಸೀತಾರಾಮ ಕುಲಾಲರ 'ಮಣ್ಣಿನ ಮಗಳು ಅಬ್ಬಕ್ಕ' ಸೆಪ್ಟಂಬರ್ ೧೯೭೦.
೧೬. ಶ್ರೀ ಸೀ. ಹೊಸಬೆಟ್ಟು ಅವರ 'ಮನನ': ಡಿಸೆಂಬರ ೧೯೭೦.
೧೭. ಶ್ರೀ ಗುಂಡ್ಮಿ, ಚಂದ್ರಶೇಖರ ಐತಾಳರ 'ಸಮಾರಾಧನ': ಡಿಸೆಂಬರ್ ೧೯೭೦.
೧೮. ಶ್ರೀ ದಾಮೋದರ ಶಾಸ್ತ್ರಿಗಳ 'ಕನ್ನಡ ಸಂಧ್ಯಾವಂದನೆ': ಡಿಸೆಂಬರ ೧೯೭೦.
೧೯. ಶ್ರೀ 'ಅಂಬಾತನಯ'ರ 'ದರ್ಶನಧ್ವನಿ': ನವಂಬರ್ ೧೯೭೦.
೨೦. ಶ್ರೀ ಮು. ಸು. ಅಚ್ಯುತಶರ್ಮರ 'ಉಡುಪಿ ಕೃಷ್ಣಮಹಾತ್ಮೆ': ಡಿಸೆಂಬರ ೧೯೭೦.
೨೧. ಶ್ರೀ ಎಚ್. ಜೆ. ಲಕ್ಕಪ್ಪಗೌಡರ 'ಹೊನ್ನಾರು': ಡಿಸೆಂಬರ್: ೧೯೭೦.
೨೨. ಶ್ರೀ ಬಿ. ರಾಜಶೇಖರಪ್ಪನವರ 'ತರಂಗ': ಜನವರಿ ೧೯೭೧.
೨೩ ಶ್ರೀ ಬಿ. ಎ. ವಿವೇಕ ರೈ ಅವರ 'ತುಳುಗಾದೆಗಳು': ಮಾರ್ಚ್ ೧೯೭೧.
೨೪. ಶ್ರೀ ಪಾಲೆಪ್ಪಾಡಿ ಗೋಪಾಲಕೃಷ್ಣ ಭಟ್ಟರ 'ಮೇಘಸಂದೇಶ': ಫೆಬ್ರವರಿ ೧೯೭೧.
೨೫. ಶ್ರೀ ಎಸ್. ಆರ್. ಪಾಡಿ 'ಮುಂಬೆಳಗು': ಜುಲೈ ೧೯೭೧.
೨೬. ಶ್ರೀ ಪರ್ಯ ಲಕ್ಷ್ಮೀನಾರಾಯಣ ಆಳ್ವರ 'ಸ್ನೇಹಸೇತು': ಅಕ್ಟೋಬರ್ ೧೯೭೧.
೨೭. 'ದಿಬ್ಬಣ': ಕಾರ್ಕಳ ದ. ಕ. ಜಿಲ್ಲಾ ಸಾಹಿತ್ಯ ಸಮ್ಮೇಳನದ ಸಂಸ್ಮರಣ ಗ್ರಂಥ. ೧೯೭೧.

## VI ಶ್ರೀ ಎಸ್. ವಿ. ಪರಮೇಶ್ವರ ಭಟ್ಟರ ಕುರಿತು

೧. ಕುಲಕರ್ಣಿ. ದ. ಬಾ. 'ನಾ ಕಂಡ ಹೊಸ ಕವಿಗಳು: ಪರಮೇಶ್ವರ ಭಟ್ಟರು'.
ಸೀಮಾಪುರುಷರು: ಪು. ೧೧೦-೧೧೧-೧೯೬೨.
೨. ನಾಯಕ ಹಾ. ಮಾ.: 'ಪ್ರಾಧ್ಯಾಪಕ ಕವಿ': ಕನ್ನಡ ಪ್ರಭ: ಜುಲೈ ೨೨. ೧೯೬೮.

೩. ನಾವಡ, ಎ. ವಿ.: ಮಧುರ ಕವಿ ಎಸ್. ವಿ. ಪರಮೇಶ್ವರ ಭಟ್ಟರು: ವಾಣೀ: ರನ್ನ ಮಹೋತ್ಸವ ಸ್ಮರಣ ಸಂಚಿಕೆ, ವಾಣೀ ಮಂದಿರ ಜೋಡುಮಾರ್ಗದ. ಕ. ೧೯೬೯.

೪. ನಾವಡ ಎ. ವಿ : ಪ್ರೊ. ಎಸ್. ವಿ. ಪರಮೇಶ್ವರ ಭಟ್ಟರು: ಕನ್ನಡಪ್ರಭ ೧೯೬೮.

೫. ನಾಗರಾಜ ಎನ್. ಎಚ್ : ಉಪ್ಪುಕಡಲು: ಉದಯವಾಣಿ ೧೯೭೧.

೬. ಪಾಟೀಲ, ಎಸ್. ವಿ.: 'ಪ್ರಯೋಗಶೀಲ ಕವಿ ಎಸ್. ವಿ. ಪರಮೇಶ್ವರ ಭಟ್ಟರು: ಕರ್ಮವೀರ ೫-೯-೧೯೭೧.

೭. ಮುರಳೀಧರ ಉಪಾಧ್ಯ, ಹಿರಿಯಡಕ: 'ಸಿರಿಗನ್ನಡಿಗರ ಡಿಂಗರಿಗ ಮತ್ತು ಅ.ನ.ಕೃ.' ಕಲಾದರ್ಶನ: ಅಗಸ್ಟ್ ೧೯೭೧.

೮. ಲಕ್ಕಪ್ಪಗೌಡ ಎಚ್. ಜೆ.: ಪರಮೇಶ್ವರ ಭಟ್ಟರು ಮತ್ತು ಅವರ ಕೃತಿಗಳು: ಪ್ರಬುದ್ಧ ಕರ್ಣಾಟಕ: ಸಂ. ೪೯. ಸಂ. ೨. ೧೯೬೮.

೯. ಲಕ್ಕಪ್ಪಗೌಡ ಎಚ್. ಜೆ.: ಮಂಗಳಗಂಗೋತ್ರಿಯ ಮಹೋಪಾಧ್ಯಾಯ: ಉದಯವಾಣಿ ೧೪-೮-೧೯೭೧.

೧೦. ಶಾರಿ: ಮಂಗಳಗಂಗೆಯ ಹರಿಕಾರರು: ಕಲಾದರ್ಶನ: ನವಂಬರ ೧೯೭೧.

೧೧ ಹರಿದಾಸ ಭಟ್ಟ ಕು. ಶಿ.: ಮೈಸೂರು ನಾಣ್ಯ: ಲೋಕಾಭಿರಾಮ: ಉದಯವಾಣಿ ೧೯೭೧

೧೨. ಚೆನ್ನಕೇಶವ ಎನ್. ಕೆ.: ಸರಸ ಮಾತುಗಾರ ಪ್ರೊ. ಪರಮೇಶ್ವರ ಭಟ್ಟರು: ಉದಯವಾಣಿ ೧೯೭೧.

